ಶ್ರೀರಸ್ತು



ಉಭಯ ಕವಿತಾವಿಶಾರದನಪ್ಪ

ಎಳಂದೂರು ಷಡಕ್ಷರದೇವನಿಂ ರಚಿತವಾದ

# ರಾಜಶೇಖರವಿಳಾಸವೆಂಬ

**ಕರ್ಣಾಟ ಚಂಪೂಪ್ರಬಂಧವು**

---

**ಆಸ್ಥಾನ ಮಹಾವಿದ್ವಾನ್ ಕರ್ಣಾಟಕ ಭಾಷಾರತ್ನಂ**

ಮೈಸೂರು ಮಹಾರಾಜಾ ಕಾಲೇಜ್ ರಿಟೈರ್ಡ್

**ಪಂಡಿತರಾದ ವೇ|| ಸಿ. ಆರ್. ಕರಿಬಸವಶಾಸ್ತ್ರಿಗಳಿಂದ**

ಪರಿಶೋಧಿಸಲ್ಪಟ್ಟು

ಮೈಸೂರಲ್ಲಿರುವ ಕೋದಂಡರಾಮ್ ಬುಕ್ ಡಿಪೊ ಪ್ರೊಪ್ರೈಟರ್

**ಬಿ. ಎ. ಕೋದಂಡರಾಮಶೆಟ್ಟರಿಂದ**

ಪ್ರಕಟಿಸಲ್ಪಟ್ಟಿತು.

---

1930



ಕ್ರಯ ೨—8—0

ಶ್ರೀರಸ್ತು

ಉಭಯ ಕವಿತಾವಿಶಾರದನಪ್ಪ

ಎಳಂದೂರು ಷಡಕ್ಷರದೇವನಿಂ ರಚಿತವಾದ

# ರಾಜಶೇಖರವಿಳಾಸವೆಂಬ

## ಕರ್ಣಾಟ ಚಂಪೂಪ್ರಬಂಧವು

**ಆಸ್ಥಾನ ಮಹಾವಿದ್ವಾನ್ ಕರ್ಣಾಟಕ ಭಾಷಾರತ್ನಂ**

ಮೈಸೂರು ಮಹಾರಾಜಾ ಕಾಲೇಜ್ ರಿಟೈರ್ಡ್

**ಪಂಡಿತರಾದ ವೇ|| ಪಿ. ಆರ್. ಕರಿಬಸವಶಾಸ್ತ್ರಿಗಳಿಂದ**

ಪರಿಶೋಧಿಸಲ್ಪಟ್ಟು

ಮೈಸೂರಲ್ಲಿರುವ ಕೋದಂಡರಾಮ್ ಬುಕ್ ಡಿಪೊ ಪ್ರೊಪ್ರೈಟರ್

**ಬಿ. ಎ. ಕೋದಂಡರಾಮಶೆಟ್ಟರಿಂದ**

ಪ್ರಕಟಿಸಲ್ಪಟ್ಟಿತು.

**1930**



ಕ್ರಯ 2—8—0





ಪಂಡಿತರುದ್ರದೇವತನಯಂ ಗಿರಿಜಾಪತಿಪಾದಪೂಜನೋ |
ದ್ದಂಡತರ ಪ್ರಭಾವಪರಿಲಬ್ಧಲಸತ್ಕವಿತಾ ವಿಲಾಸನಾ ||
ಖಂಡಲ ಸಾಮ್ಯ ಕೃಷ್ಣವಸುಧಾಪತಿ ದಿವ್ಯಸಭಾಮನೀಷಿ ಕೈ |
ಕೊಂಡು ಸಮುಂತಿದಂ ಕರಿವೃಷಾಂಕನೆ ತಿದ್ದುರ್ತೆ ಮುದ್ರೆಗೈಸಿದಂ || ೩

# ಉಪೋದ್ಘಾತವು

ರಾಜಶೇಖರ ವಿಳಾಸವನ್ನು ರಚಿಸಿದ ಷಡಕ್ಷರದೇವನು ಮುಮ್ಮಡಿಕೃಷ್ಣರಾಜೊಡೆಯರ ದಿವಾನರಾಗಿದ್ದ ಪೂರ್ಣಯ್ಯನವರ ಸರ್ವಮಾನ್ಯಮಂಡಲಕ್ಕೆ ಸೇರಿದ ಎಳಂದೂರುಗ್ರಾಮದಲ್ಲಿ ವಾಸಿಸುತಿದ್ದನು, ಈತನ ಮಠದನಿವೇಶನವನ್ನು ಈಗಲೂ, ಅಲ್ಲಿನ ಜನರು ತೋರಿಸುತ್ತಾರೆ ಸ್ವಾಮಿ ಷಡಕ್ಷರದೇವಕವಿಯು ತಾನು ರೇಣುಕಾಚಾರ್ಯ ಸಾಂಪ್ರದಾಯಿಕನೆಂದೂ, ದನುಗೂರುಮಠಪತಿಯಾದ ಚಿಕವೀರದೇಶಿಕನ ಶಿಷ್ಯನೆಂದೂ, ಪ್ರಥಮಾಶ್ವಾಸದಲ್ಲಿ ೫೩ನೆಯದಾದ ಶಿವವಕ್ತ್ರೋಭಸ್ಮರೇಣುಪ್ರಭವನೆನಿಸಿಯುಂ ಎಂಬ ಪದ್ಯವೊದಲ್ಗೊಂಡು ಚಿಕವೀರದೇವನ........ಕರಕಂಜಾತಸುಜಾತಂ....ಎಂಬ ೬೭, ೬೮ ನೆಯ ಪದ್ಯಗಳವರಿಗೆ ತಿಳಿಸುತ್ತಾನೆ· ಮತ್ತು ಅದೇ ೬೮ ನೆಯ ಪದ್ಯದಲ್ಲಿ '' ಸಾಂಬಶಂಕರಪಾದಾಬ್ಜ ಮಧುವ್ರತಂ ಎಂದು ತನಗೆ ವಿಶೇಷಣವಂ, ಕೊಟ್ಟಿರುವುದರಿಂದಲೂ ಪ್ರಥಮಾಶ್ವಾಸದ ೭೨ ನೆಯ ಪದ್ಯದಲ್ಲಿ ನಿನಗೆ ನಿಸರ್ಗಮಲ್ತೆ........ಶಿವಯೋಗಮಾಗಮವಿಚಾರತೆ........ಷಟ್ಸ್ಥಲಾಂಕಶಾಸ್ತ್ರನಿಚಯಸಾರದರ್ಶನಂ '' ಎಂದು ಹೇಳಿರುವುದರಿಂದಲೂ, ಈಕವಿಯು ಲಿಂಗಾಂಗಸಾಮರಸ್ಯರೂಪಮುಕ್ತಿ ಪ್ರತಿಪಾದಕ ವೀರಶೈವಶಕ್ತಿವಿಶಿಷ್ಟಾದ್ವೈತಸಿದ್ಧಾಂತಿಯೆಂದೂ ಗುರಸ್ಥಲದ ಪಟ್ಟಾಧಿಕಾರಿಯೆಂಬ ಬ್ರಹ್ಮಚಾರಿ ಮಾಹೇಶ್ವರನೆಂದೂ ಸ್ಪಷ್ಟವಾಗಿ ತಿಳಿಯಬರುತ್ತದೆ. ೧೪ ನೆಯ ಆಶ್ವಾಸದ ೧೮೪ ನೆಯ ಪದ್ಯದಲ್ಲಿ '' ಸುರುಚಿರಶಾಲಿವಾಹನಶಕಾನ್ವಿತರತ್ನ ಸಮುದ್ರಬಾಣಭೂಪರಿಗಣನಾಂಕ ಬಂಧುರ ಜಯಾಬ್ದದ '' ಎಂದು........ಗ್ರಂಥಸಮಾಪ್ತಿಕಾಲವನ್ನು ಹೇಳಿರುವುದರಿಂದ ಶಾಲಿವಾಹನಶಕ ೧೫೭೫ ನೆಯ ಜಯಸಂವತ್ಸರದಲ್ಲಿ (ಕ್ರಿಸ್ತಶಕ ೧೬೫೩ರಲ್ಲಿ) ಈಕವಿಯು ಜೀವಿಸುತ್ತಿದ್ದನೆಂದುನಿರ್ಣಯವಾಗುತ್ತದೆ, ದನುಗೂರುಮಠದ ಸ್ವಾಮಿಯ ಶಿಷ್ಯನಾದ ಷಡಕ್ಷರದೇವನು ಎಳಂದೂರಲ್ಲಿ ವಾಸಿಸುವುದಕ್ಕೆ ಕಾರಣವೇನೆಂದರೆ:—ಆಕಾಲದಲ್ಲಿ ಹದಿನಾಡೆಂಬ ದೇಶವನ್ನು ಪಾಲನಮಾಡುತ್ತಿದ್ದ ಮುದ್ದುರಾಜನು ತನ್ನ ಹೆಂಡತಿಯ ತೌರೂರಾದ ಎಳಂದೂರಿನಲ್ಲಿಯೇ ಒಂದುಮಠವನ್ನು ಕಟ್ಟಿಸಿ, ಅನುಕೂಲತೆಪಡಿಸಿದ್ದನು,

ಈ ಕವಿಯ ಕಾಲದಲ್ಲಿ ಒಂದಾನೊಂದು ದಿನ ಜೈನಮತಸ್ಥರು ನೇಮಿಚಂದ್ರನಿಂ ಮಾಡಲ್ಪಟ್ಟ ಲೀಲಾವತಿ ಎಂಬ ಕರ್ಣಾಟಕ ಚಂಪೂಗ್ರಂಥವನ್ನು ಆನೆಯ ಮೇಲೆ ಅಂಬಾರಿಯಲ್ಲಿರಿಸಿ ಆನೆಯಹೊಟ್ಟೆಗೆ ಒಂದು ಬೆಳ್ಳಿಯತೊಟ್ಟಿಲನ್ನು ಕಟ್ಟಿ ಬೀದಿಯಲ್ಲಿ ಮೆರೆವಣಿಗೆಮಾಡಿಕೊಂಡು ಬರುತ್ತಾ ಷಡಕ್ಷರ ದೇವನ ಮಠದ ಮುಂದೆ ನಿಲ್ಲಿಸಲು, ಆತನ ಶಿಷ್ಯರು ನೋಡಿ, ಆ ಗುಂಪಿನಲ್ಲಿ ಮುಖ್ಯರಾದವರನ್ನು, ಇದೇನು ಮೆರವಣಿಗೆ ಎಂದುಕೇಳಲಾಗಿ ಇದು ಕರ್ಣಾಟಕಗ್ರಂಥ ಶಿರೋಮಣಿಯಾದ ಕವಿಕುಂಜರ ಲೀಲಾವತಿಯ ಮೆರವಣಿಗೆ ಎಂದುಹೇಳಿದರು. ಅದುಸರಿ. ಈಆನೆಯ ಹೊಟ್ಟೆಗೆ ತೊಟ್ಟಿಲನ್ನು ಕಟ್ಟಿರುವುದಕ್ಕೆ ಕಾರಣವೇನೆಂದು ಪ್ರಶ್ನೆಮಾಡಲು,—ನಗುತ್ತಾ ಓಹೋ ನಿಮಗೆ ಗೊತ್ತಾಗಲಿಲ್ಲವೋ ' ಈ ಗ್ರಂಥವು ರಸಭರಿತವಾದುದು. ಆ ರಸವು ಸ್ರವಿಸಿ

ನೆಲದಲ್ಲಿ ಬಿದ್ದೀತೆಂದು ಊಹಿಸಿ ತೊಟ್ಟಲನ್ನು ಕಟ್ಟಿದ್ದೇವೆ ಎಂದು ಕುಚೇಷ್ಟೆಯ ಮಾತುಗಳನ್ನಾಡಿದರು. ಶಿಷ್ಯರು, ಒಳಗೆಹೋಗಿ ಆಸಂಗತಿಯನ್ನು ಷಡಕ್ಷರದೇವನಿಗೆ ತಿಳಿಸಿದರು, ಆತನು ಕೇಳಿ—ಇದಕ್ಕಿಂತಲೂ ರಸಭರಿತವಾದ ಗ್ರಂಥವಿರುವಲ್ಲಿ ಈ ಗ್ರಂಥಕ್ಕೆ ಇಷ್ಟು ಬಹುಮಾನವು ಸಲ್ಲುವುದಿಲ್ಲ. ಆದುದರಿಂದ ಮೆರವಣಿಗೆಯನ್ನು ಹಿಂತಿರುಗಿಸಬೇಕೆಂದು ಶಿಷ್ಯರೊಡನೆ ಹೇಳಿ ಕಳುಹಿಸಿ ಮುಂದಕ್ಕೆ ಹೋಗದಹಾಗೆ ತಡೆಸಿದನು. ಈ ಸಂಗತಿಯನ್ನು ಅವರು ಅರಮನೆಯ ಆಸ್ಥಾನದಲ್ಲಿ ದೂರಲಾಗಿ ಅಧಿಕಾರಿಗಳು ವಿಚಾರಮಾಡುವ ಸಂದರ್ಭದಲ್ಲಿ ಷಡಕ್ಷರದೇವನು ಇನ್ನೊಂದು ವರ್ಷದೊಳಗಾಗಿ ರಸಭರಿತವಾದ ಗ್ರಂಥವನ್ನು ಕಾಶಿಯಿಂದ ತರಿಸುತ್ತೇನೆ. ಅದಕ್ಕಿಂತ ಲೀಲಾವತಿಯು ರಸಭರಿತವಾದುದೆಂದು ವಿದ್ವಾಂಸರಿಗೆ ತೋರಿದರೆ, ಆಗ ಮೆರವಣಿಗೆ ಮಾಡಬಹುದೆಂದು ಹೇಳಿದುದಕ್ಕೆ ವಾದಿಗಳೆಲ್ಲರೂ ಒಪ್ಪಿಕೊಂಡರು. ಅನಂತರ ಷಡಕ್ಷರದೇವನು ರಾಜಶೇಖರವಿಳಾಸವೆಂಬ ಗ್ರಂಥವನ್ನು ರಚಿಸುವುದಕ್ಕೆ ಪ್ರಾರಂಭಿಸಿ, ಒಂದು ವರ್ಷದೊಳಗಾಗಿ ಪೂರ್ಣಮಾಡಿ ವಿದ್ವಾಂಸರನ್ನು ಕೂಡಿಸಿ ಸಭೆಯಲ್ಲಿ ಮೊದಲು ಕವಿಕುಂಜರಲೀಲಾವತಿಯ ಮುಖ್ಯ ಭಾಗಗಳನ್ನು ಓದಿಸಿದಮೇಲೆ ರಾಜಶೇಖರದಲ್ಲಿ ಆಯಾ ವರ್ಣನಾಂಶಗಳನ್ನು ಓದಿ ತಾನೇ ಅರ್ಥವನ್ನು ಹೇಳಿ—ಎರಡರಲ್ಲಿ ಯಾವದು ರಸಭರಿತವಾದುದೆಂದು ಕೇಳಲು, ವಿದ್ವಾಂಸರೆಲ್ಲರೂ ಲೀಲಾವತಿಯು ಕನ್ನಡದಲ್ಲಿ ಪ್ರೌಢವಾದಾಗ್ಯೂ ರಾಜಶೇಖರವಿಳಾಸದಷ್ಟು ರಸಪುಷ್ಟಿಯುಳ್ಳುದಲ್ಲವೆಂದು ಹೇಳಿ, ಒಟ್ಟಾಗಿ ಷಡಕ್ಷರ ದೇವನ ಕವಿತಾ ವಿಷಯವಾಗಿ—

ಜಿಹ್ವಾಂತರ್ನಟದಂಬುಜಾಸನವಧೂಪಾದಪ್ರವಾಳಸ್ಫುರ |
ನ್ಮಂಜೀರದ್ವಯಮಂಜುನಾದವಿಭವ ಶ್ರೀಗರ್ವಸರ್ವಂಕಷಾಃ ||
ಜೀಯಾಸು ರ್ಭಗವತ ಷ್ಷಡಕ್ಷರವಿಭೋ ಕುಂದಾರವಿಂದಾವಳೀ |
ಮಂದಾರದ್ರುಮಮಂಜರೀ ಮಧುಝುರೀ ಮಾಧುರ್ಯಧುರ್ಯಾಗಿರಃ ||

ಎಂದು ಯೋಗ್ಯತಾ ಪತ್ರವಂ ಕೊಟ್ಟರೆಂದು ಬಹು ಕಾಲದಿಂದಲೂ ಒಂದು ಐತಿಹ್ಯವು ಜನಜನಿತವಾಗಿ ಬಂದಿರುವುದು. ಇದಕ್ಕನುಗುಣವಾಗಿ ರಾಜಶೇಖರವಿಳಾಸ ಗ್ರಂಥದ ೧೪ ನೆಯ ಆಶ್ವಾಸದ ೧೭೨ ನೆಯ ಪದ್ಯವಿದೆ.—

ಇಂತೀಕಾವ್ಯಮನೊಲ್ದು ಕೇಳ್ದ ವಿಬುಧರ್ಮೆಚ್ಚಿ ಕೊಂಡಾಡೆಪೇ |
ಳ್ದಂ ತಾನೊರ್ವನೆ ಸಾಂಬಶಂಭುಕೃಪೆಯಿಂದೇಕಾಬ್ದದೊಳ್ಪೂರ್ಣಮ ||
ಪ್ಪಂತೋರಂತೆ ಷಡಕ್ಷರಾರ್ಯನನಘಂ ಸಾಹಿತ್ಯ ಶಾಸ್ತ್ರಜ್ಞನ |
ಶ್ರಾಂತಶ್ರೀಶಿವಲಿಂಗ ಸಂಗತಮಹಾಮಾಹೇಶ್ವರಂ ಭಕ್ತಿಯಿಂ ||

ಷಡಕ್ಷರದೇವನ ಕಾಲದಲ್ಲಿ ಮುದ್ದುರಾಜನು ಹದಿನಾಡಿನಲ್ಲಿ ರಾಜ್ಯವನ್ನಾಳುತ್ತಿದ್ದನೆಂಬ ವಿಷಯವನ್ನು ಯಳಂದೂರಿನ ಗೌರೀಶ್ವರದೇವಾಲಯದ ಶಾಸನವು ಸ್ಪಷ್ಟವಾಗಿ ತಿಳಿಸುತ್ತದೆ.—

ಶಾಸನದ ೩೨ ನೆಯ ಪಙ್ಕ್ತಿಯಿಂದ ೪೮ನೆಯ ಪಙ್ಕ್ತಿಯವರೆಗೆ—

ಕಂ|| ಶ್ರೀ ಪತಿವಿಭವಂ ಮನಸಿಜ |
ರೂಪಂ ದೇವೇಂದ್ರಸೂನು ರಾಮನೃಪಾಲಂ ||
ಭೂಪಕುಲತಿಲಕ ನಖಿಳಕ |
ಳಾಪರಿಣತ ನಾಳುತಿರ್ದ್ದ ಪದಿನಾಡುಗಳಂ ||

ಶಾಲಿವಾಹನಶಕವರ್ಷ, ೧೪೯೦ ಸಂದ ವಿಭವ ಸಂವತ್ಸರದಲ್ಲಿ—

ಕಂ|| ಅಣಿಯರದಿಂ ಗೌರೀಶನ |
ಗುಣನಿಧಿ ಪೂಜಾರ್ಥವಾಗಿ ತದ್ಭೂಪಾಲಂ ||
ಗಣಗನೂರಾಖ್ಯನಗರಮ |
ನೆಣಿಕೆಯನುಳಿದಿತ್ತನೇಂ ಕೃತಾರ್ಥನೊ ಜಗದೊಳ್ ||

ಆತನನುಜಾತ ನಿಖಿಳೋ |
ರ್ವೀತಳಸುತ ನಮಳಕೀರ್ತಿ ಚೆನ್ನನೃಪಾಲಂ ||
ನೂತನಮದನಂಗೆಸೆವ ಖ್ಯಾರ್ತ |
ಸುತರ್ನಂಜರಾಜ ತಿರುಮಲರಾಜರ್ ||

ಮತ್ತಮಾನಂಜರಾಜಾಗ್ರಜಂ ತಿರುಮಲರಾಜಂ—

ಕಂ|| ಇತ್ತಂವಡಿಯರಪುರಮಂ |
ಬಿತ್ತರವೆತ್ತೆಸೆವ ಸೀನಗೂಡಲಮಂ ಭೂ ||
ಪೋತ್ತಮ ನತಿಮುದದಿಂದೇ |
ವೋತ್ತಮ ಗೌರೀಶ್ವರಂಗೆ ಚಿಂತನಪುರಮಂ ||

ವೃ|| ಎಸೆವಾ ಭೂಪನಸೂನು ಸತ್ಯನಿಧಿ ಸದ್ಧರ್ಮಾನ್ವಿತಂ |
ಕುಶಲಂಬೆಳ್ಳುರೆ ಯಾಳುತಿರ್ದಹದಿನಾಡಾಖ್ಯಾತ ಭೂಭಾಗಮಂ ||
ಕುಸುಮಾಸ್ತ್ರಾರಿಪದಾಂಬುಜಾತನವಭೃಂಗಂ ಯಾಚಕಾಧಾರನೇಂ |
ವಸುಧಾಚಕ್ರದೊಳೊಲ್ದುರಾಜಿಸಿದನೋ ಮುದ್ದೇಂದ್ರ ಭೂಪಾಲಕಂ||

ಶಾಲಿವಾಹನಶಕವರ್ಷ ೧೫೭೬ ಸಂದಜಯಸಂವತ್ಸರದಲ್ಲಿ—

ಕಂ|| ಅಂತಪ್ಪಮುದ್ದುಭೂಪತಿ |
ಸಂತಸದಿಂ ತೋಟಗದ್ದೆ ಕೊಂಡಂಗೆರೆಗಳ ||
ಕಂತುಗಿರಿಕುಲಿಶಗೌರೀ |
ಕಾಂತಂಗೊಲಿದಿತ್ತನೇನುದಾತ್ತನೊಜಗದೊಳ್ ||

ಈ ಸಂದರ್ಭಗಳನ್ನು ಪರ್ಯ್ಯಾಲೋಚಿಸಿದರೆ ಚಿಕ್ಕದೇವರಾಜೊಡೆಯರು ಸಿಂಹಾಸನಾರೂಢರಾಗುವುದಕ್ಕಿಂತ ೨೫ ವರ್ಷಗಳ ಹಿಂದೆ ಷಡಕ್ಷರದೇವನು ಈ ಗ್ರಂಥವನ್ನು ಬರೆದನೆಂದು ತಿಳುದುಬರುತ್ತದೆ. ಷಡಕ್ಷರಕವಿಯು ತನ್ನಗ್ರಂಥಗಳಲ್ಲಿ ಮುದ್ದುರಾಜನ ಹೆಸರನ್ನಾದರೂ ಚಿಕ್ಕದೇವರಾಜನ ಹೆಸರನ್ನಾದರೂ ಎತ್ತದಿದ್ದಾಗ್ಯೂ ಪೂರ್ವ್ವೋಕ್ತಶಾಸನವನ್ನು ಕುರಿತು ವಿಚಾರಮಾಡಿದರೆ ಷಡಕ್ಷರದೇವನು ರಾಜಶೇಖರವಿಳಾಸವನ್ನು ಪೂರ್ತಿಮಾಡಿದ ವರ್ಷದಲ್ಲಿಯೇ ಮುದ್ದುರಾಜನು ಗೌರೀಶ್ವರನಿಗೆ ತೋಟಗದ್ದೆ, ಕೊಂಡಂಗೆರೆ ಎಂಬ ಗ್ರಾಮಂಗಳನ್ನು ಒಪ್ಪಿಸಿರುವುದರಿಂದ ಷಡಕ್ಷರದೇವನು ಮುದ್ದುರಾಜನಾಶ್ರಯದಲ್ಲಿದ್ದನೆಂಬುವುದರಲ್ಲಿ ಯಾವಸಂದೇಹವೂ ಇಲ್ಲ. ಮತ್ತು ಷಡಕ್ಷರದೇವನು ವೃಷಭೇಂದ್ರವಿಜಯ, ಶಬರಶಂಕರವಿಲಾಸ ಎಂಬ ಬೇರೆ ಎರಡು ಕರ್ಣಾಟಚಂಪೂಗ್ರಂಥಗಳನ್ನೂ ಕವಿಕರ್ಣರಸಾಯನ, ಭಕ್ತಾಧಿಕ್ಯ, ಶಿವಾಧಿಕ್ಯ, ಎಂಬ ಮೂರು ಸಂಸ್ಕೃತ ಗ್ರಂಥಗಳನ್ನೂ ರಚಿಸಿದ್ದಾನೆ. ರಾಜಶೇಖರವಿಳಾಸದಲ್ಲಿನ ಕೆಲವು ಪದ್ಯಗಳು ಪ್ರಾಚೀನಗಳಾದ ಉದ್ದಾಮಗ್ರಂಥಗಳ ಪದ್ಯಗಳಿಗೆ ಸಮಾನವಾದ ಶೈಲಿಯುಳ್ಳವುಗಳಾಗಿಯೂ ಕೆಲವು ಪದ್ಯಗಳು ಪೂರ್ವಗ್ರಂಥಗಳ ಶೈಲಿಗಿಂತ ರಮಣೀಯವಾದ ಶೈಲಿಯುಳ್ಳವುಗಳಾಗಿಯೂ ಇವೆ. ಈ ಗ್ರಂಥದಲ್ಲಿ ಸಂಸ್ಕೃತಶಬ್ದಗಳೂ ಕರ್ಣಾಟಶಬ್ದಗಳೂ ಪ್ರಾಯಶಃಸಮಾನವಾಗಿಯೇ ಪ್ರಯೋಗಿಸಲ್ಪಟ್ಟಿವೆ. ಕವಿತಾಪಾಕಗಳಲ್ಲಿ ಕದಳೀಪಾಕವೆಂದು ಹೇಳಬಹುದು ಈಕಾಲದಲ್ಲಿ ಚಂಪೂಪ್ರಬಂಧವನ್ನಾಗಲಿ ಪದ್ಯ ಪ್ರಬಂಧವನ್ನಾಗಲಿ, ಗದ್ಯಪ್ರಬಂಧವನ್ನಾಗಲಿ ರಚಿಸಲಪೇಕ್ಷೆಯುಳ್ಳವರು ರಾಜಶೇಖರವಿಳಾಸದ ಸರಣಿಯಂಹಿಡಿದು ರಚಿಸಿದರೆ ಗ್ರಂಥವು ಶ್ಲಾಘನೀಯವಾಗುವುದು. ಮತ್ತು ಕರ್ಣಾಟ ಭಾಷಾಭ್ಯಾಸಿಗಳು ಈಗ್ರಂಥವನ್ನು ಅರ್ಥವತ್ತಾಗಿ ಓದಿದರೆ ವ್ಯುತ್ಪತ್ತಿ ಯುಂಟಾಗುವುದು. ಪಾಠಕರಿಗೆ ಸುಲಭವಾಗಿರುವಂತೆ ಪಾದಪಾದಗಳನ್ನು ವಿಂಗಡಿಸಿ ಪ್ರಾಜ್ಞರಿಗೆ ಕವಿಯಅಭಿಪ್ರಾಯವು ವ್ಯಕ್ತವಾಗುವಂತೆ ಲೇಖಕಪಾಠಕದೋಷಗಳನ್ನೆಲ್ಲಾ ಶೋಧಿಸಿ ಮುದ್ರಣಗೊಳಿಸಲ್ಪಟ್ಟಿರುವ ಈ ನೂತನ ಪುಸ್ತಕವನ್ನು ಗುಣಜ್ಞರಾದವರು ಓದಿಸಂತೋಷಗೊಂಡು ನನ್ನ ಉದ್ದೇಶವನ್ನು ಸಾಫಲ್ಯಗೊಳಿಸದಿರಲಾರರೆಂದು ನಂಬಿದ್ದೇನೆ.

ಪಿ. ಆರ್. ಕರಿಬಸವಶಾಸ್ತ್ರಿ.

# ವಿಷಯಾನುಕ್ರಮಣಿಕೆ.

---



---

☞ ಈ ಎರಡನೆಯ ಮುದ್ರಣ ಸಮಯದಲ್ಲಿ ಈ ಗ್ರಂಥವನ್ನು ಪರಿಶೋಧಿಸಿಕೊಟ್ಟ ಆಸ್ಥಾನ ವಿದ್ವಾನ್, ವೇ|| ಸಿಂಸಿ ಗುರುಶಾಂತಶಾಸ್ತ್ರಿಗಳಿಗೆ ಚಿರ ಕೃತಜ್ಞನಾಗಿರುವೆನು.

ಬಿ. ಎ. ಕೋದಂಡರಾಮಶೆಟ್ಟಿ, ಮೈಸೂರು.

# ಶುದ್ಧಾಶುದ್ಧ ಪತ್ರಿಕೆ.

| ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ |
|---|---|---|---|
| ೩ | ೨೫ | ಕಠುಬ್ಬಂ | ಕರ್ಬ್ಬಂ |
| ೪ | ೯ | ಮಹಿತೆ | ಮಹಿತ |
| ೬ | ೨ | ಯೋ ತೆಂಬು | ಯೋದೆಂಬು |
| ೬ | ೧೪ | ಕ್ಷಿತೀಪ | ಕ್ಷಿತಿಪ |
| ೮ | ೧೪ | ಸೀಯ್ಕನೆ | ಸೀಯ್ಯನೆ |
| ೧೧ | ೨೦ | ಯೆಂದೆ | ಯೆಂದೆಂ \| |
| ,, | ೨೮ | ಮದದಿಂ | ಮುದದಿಂ |
| ೧೨ | ೨೯ | ಸಸತ್ಕೃತಿ | ಸತ್ಕೃತಿ ಸ |
| ೧೩ | ೫ | ತೆಂಬೆಲ | ತಂಬೆಲ |
| ೧೪ | ೮ | ನಿಧಾನಂ | ನಿದಾನಂ |
| ,, | ೮ | ತೋಳಸಿ | ತೋಳಂ |
| ,, | ೧೩ | ಕರೋಟೆ | ಕರೋಟಿ |
| ,, | ೨೨ | ಪಶಾಕ | ಪತಾಕ |
| ೨೦ | ೬ | ಚ್ಚಮರೀ | ಚ್ಚಮರಿ |
| ೨೧ | ೧ | ತೆರು | ತರು |
| ,, | ೨೪ | ತೆನ್ಮ್ರನಿ | ತನ್ಮ್ರನಿ |
| ೨೫ | ೮ | ಶಿವೆ | ಶಿವಕ |
| ೩೧ | ೫ | ಮುಮ | ಮಮು |
| ,, | ೧೬ | ವೋಲಾ \|\| | ವೊಲಾ \|\| |
| ೩೨ | ೨೬ | ಬೋಲದೇಂ | ಬೊಲದೇಂ |
| ೩೫ | ೧೨ | ಕುಮ್ರಟ | ಕಂಮಟ |
| ೩೮ | ೨ | ನಿರೊ | ನೀರೊ |
| ,, | ೧೨ | ಚತ್ರಂಚ | ಚತ್ಪಂಚ |
| ,, | | ಬಂಚದರಂತೆಮುಂಚಿ | ಬಂಚರದಂತೆಮುಂಚೆ |
| ,, | ೨೦ | ಗಲ್ವೀ | ಗಲ್ಪೀ |
| ,, | ೨೧ | ಳ್ತೊಸುವ | ಳ್ತೊಗುವ |
| ,, | ೨೯ | ಳ್ಮಂಡಿಳಿಸಿ | ಳ್ಮಂಡಿಸಿ |
| ೩೯ | ೩ | ಕಾದಲದರ | ಕಾದಲರ |
| ೪೨ | ೨ | ದಾರರಗು | ದಾರಗುಣ |
| ,, | ೬ | ಮಹದಿಂ | ವಹದಿಂ |
| ೪೩ | ೧೧ | ಪುದೆನೆದಸುಂ | ಪುದೆನೆ ಸುಂ \| |
| ೪೪ | ೮ | ನೊಚ್ಚರ್ರಂ | ನೊಚ್ಚರಂ |
| ೪೬ | ೬ | ದಚ್ಚರಿ | ದಚ್ಚರಿ |
| ೪೭ | ೧೦ | ನಾತನ | ನಾತ್ಥನ |
| ,, | ೨೩ | ನಚ್ಬದ | ನಚದೆದ |
| ೫೦ | ೧೧ | ಸೊಡೆಗೆತ್ತು | ಸೊಗೆತ್ತು |
| ,, | ೨೨ | ನೆಂಡಿರ | ವೆಂಡಿರ |
| ,, | ೨೫ | ಕಂಗೂಳಿಸಿ | ಕಂಗೊಳಿಸಿ |
| ,, | ೨೬ | ದಿದ್ವಾ | ಮಿಂದ್ವಾ |
| ೫೧ | ೧೭ | ಕ್ಕಮತರ | ಕ್ಕಮರರ |
| ,, | ೧೮ | ತನ್ಮ್ರಕು\| ತೆ | ತನ್ಮ್ರಕು\| ರ |
| ೫೩ | ೧೯ | ದ್ರುಮಂ\|\| | ಧ್ರುವಂ \|\| |
| ,, | ೨೫ | ವಿಭುಧಪತಿ | ವಿಬುಧಪತಿ |
| ೫೪ | ೩ | ವೀತ್ರಹೋ | ವೀತಿಹೋ |
| ,, | ೪ | ಕೇಜನ | ಕುಜನ |
| ,, | ೫ | ಸವ್ರು | ಸವು |
| ,, | ೮ | ಯಾದಿಪ | ಯಾಧಿಪ |
| ,, | ೧೪ | ತ್ಕಮಲೂ | ತ್ಕಮಲಾ |
| ೫೬ | ೬ | ಶಿರೋ | ಶಿರೋ |
| ,, | ೨೭ | ಯುಘ್ರಂ | ಘ್ರಯಂ |
| ೫೮ | ೨೯ | ಲಗ್ನಿ | ಲಾಗ್ನಿ |
| ೬೦ | ೭ | ವೊಗಳ್ದು | ಪೊಗಳ್ದು |
| ೬೩ | ೧೫ | ರುಚಿಚಿರಾಂ | ರುಚಿರುಚಿರಾಂ |
| ,, | ೨೮ | ನಿನಗೆ | ನಿನಿಗೆ |
| ೬೬ | ೪ | ಸುಧಾಬ್ದಿ | ಶುಧಾಬ್ಧಿ |
| ,, | ೧೩ | ಗೆಯ್ವ | ಗೆಯ್ವೆ |
| ೬೮ | ೪ | ಪ್ರಾತನ | ಪ್ರಾರ್ತನ |
| ೬೯ | ೧೪ | ಣ್ಣರಪಿ | ಣ್ಣರಪೆ |
| ೭೨ | ೧೪ | ಪೋದನ್ | ಪೋದಳ್ |
| ೭೫ | ೫ | ಳೊಭ್ಯಪಾ | ಳೊಭ್ಯಪಾ |
| ,, | ೨೪ | ಳ್ಚಂಚ್ರನಂ | ಳ್ಚಂದ್ರನಂ |
| ೭೬ | ೭ | ಕೇಶ | ಕೇಶ |
| ೭೭ | ೧ | ತ್ತೆಳ್ದರೆ | ತ್ತೇಳ್ದರೆ |
| ,, | ೭ | ಮನೆದೇ | ಮನದೆ |
| ,, | ೨೦ | ತೂಲಂ | ತೊಲಂಗು |
| ೮೦ | ೨೬ | ನಳಿಸಖ | ನಳಿನಸಖ |

| ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ |
|---|---|---|---|---|---|---|---|
| ,, | ೨೯ | ಗರ್ಗರಿಪಿ | ಗರ್ಗರುಪಿ | ೧೦೨ | ೧೮ | ಬೂಡಿಯ | ಬೂದಿಯ |
| ೮೧ | ೮ | ಸರಿತುತ್ತ | ಸರಿಸುತ್ತಿರೆ | ,, | ೧೭ | ತದ್ವಿ | ತದ್ವ |
| ,, | ೧೪ | ಮನದೆಳ್ದ | ಮನನೇಳ್ದ | ೧೦೫ | ೮ | ನುಡಿಯಲ್ಲಿ | ನುಡಿಗಳಲ್ಲಿ |
| ೮೩ | ೧೯ | ಪೋಲ್ವಾ | ಪೋಲ್ಪಾ | ೦೦೭ | ೪ | ಪಟೇರ | ಪಟೀರ |
| ೮೬ | ೧೨ | ಯಶರ್ಸು | ಯಶಸ್ಸು | ೧೦೮ | ೧೪ | ಲೊಟ್ಟಿ | ಲೊಟ್ಟ |
| ,, | ೧೭ | ದಿಂವೆ | ದಿಂದೆ | ,, | ೧೬ | ಜುಗಳಗತಿ | ಜುಳಗ |
| ೮೭ | ೧೬ | ಗವ್ಯುತ | ಗವ್ಯೂತ | ,, | ೧೮ | ವಾಃಕಣೌ | ವಾಷ್ಕಣೌ |
| ೯೧ | ೨೨ | ಸೆಳೆಯು | ಸೆಳೆಯೆ | ,, | ೨೬ | ಪ್ವದ | ಪ್ವರ್ದ |
| ೯೪ | ೪ | ವಿಳಸದ್ಭೊ\|\|-ವಿಳಸ\|\| | | ೧೦೯ | ೧ | ಸುರಚಿರ | ಸುರುಚಿರ |
| ,, | ೫ | ಗೀಂದ್ರ | ದ್ಭೊೀಗೀಂದ್ರ | ,, | ೧೧ | ಪಲ್ಲಮರಿ | ಪಲ್ಲಿಮರಿ |
| ,, | ೧೩ | ಸೀಮಂಶ | ಸೀಮಂತ | ,, | ೨೯ | ತಮಂ | ತಮುಂ |
| ,, | ೧೪ | ಚರಣ | ಚಣ | ೧೧೦ | ೩ | ತತ್ತಾಪಸ | ತತತಾಪಸ |
| ,, | ೧೮ | ನಥ್ಯಾ | ನದ್ಯಾ | ,, | ೬ | ತ್ಪುಂಡರೀ | ತ್ಪುಂಡರೀ |
| ,, | ೧೭ | ಸಾಕುಮಾರ್ಯ | ಸೌಕುಮಾರ್ಯ | ೧೧೩ | ೨೩ | ಮೊರ್ವ್ವಂ | ವೊರ್ವ್ವಂ |
| ೯೫ | ೨ | ತಿಖಾವದ್ಭಾ | ಶಿಖಾವದ್ಭಾ | ೧೧೪ | ೧ | ಮೂರ್ಲವು | ಮೂರ್ಲವುಂ |
| ,, | ೪ | ಬುಧಿ | ಬುಧಿ | ೧೧೫ | ೨೯ | ಲ್ಪಳಿಸಿದ | ಲ್ಛಳಿಸಿದ |
| ೯೬ | ೬ | ಕೇಳಿ | ಕೇಕಿ | ೧೨೦ | ೧೫ | ಮಹಿನೀಯ | ಮಹನೀಯ |
| ,, | ೧೭ | ವೃಪ | ನೃಪ | ೧೨೧ | ೭ | ಬಪ್ಪರ್ತೆ | ಬಪ್ಪರ್ಂತೆ |
| ,, | ೧೮ | ತೆಳ್ವ | ತೇಳ್ವ | ,, | ೧೮ | ನಗೆಗೆಡಿ | ನಗೆಗೆಡೆ |
| ,, | ೨೦ | ತಲ್ಲಳಿಸಿ | ತಲ್ಲಣಿಸಿ | ೧೨೨ | ೨೭ | ಭಗಣವಿ | ಭಗಣಂ |
| ೯೭ | ೩ | ಚ್ಚಂಬಿಲಾ | ಚ್ಚಂಚಲಾ | ೧೨೩ | ೧೭ | ಬಡೆಡು | ಬಡೆದು |
| ,, | ೪ | ದೃತ್ಣ | ದೃತ್ನ | ,, | ೨೭ | ಬಿಂಬಕ | ಬಿಂಕವು |
| ,, | ೭ | ಗೃವನಂತ | ಗೈದನಂತರಂ | ೧೨೪ | ೧೦ | ರೇರಿವಪಡ್ಡಂ | ರೇರಿಪಡ್ಡಂ |
| ,, | ೨೬ | ನುುಡಿ | ಮುಡಿ | ,, | ೨೦ | ಜೋನೆಳಿಯ | ಜೋನೆಗವಳಿಯ |
| ,, | ೨೭ | ಮಾರೆಯ | ಮಾಲೆಯ | ೧೨೫ | ೧೧ | ಬಾವುಳಿಯ | ಬಾವುಲಿಯ |
| ೯೮ | ೨ | ಪೂರವಾಡ | ಪೂರವಾದ | ೧೨೬ | ೮ | ದ್ಬೃಹಿತಂ | ದ್ಬೃಂಹಿತಂ |
| ,, | ೧೧ | ದೊಶ್ತುವತಾಳ | ದೊಶ್ತುವತಾಳದೆ | ೧೨೭ | ೨೦ | ಪೊಚ್ಕಂ | ಪೊಚ್ಚಂ |
| ,, | ೧೬ | ವಾಳ್ತ | ವಾಳ್ತೆ | ೧೨೮ | ೫ | ಧೊತ್ತರಿಸಿ | ದೊತ್ತರಿಸಿ |
| ,, | ೧೭ | ಕೆಡದ್ದುರ್ಗ | ಕೆವದ್ದುರ್ಗ | ೧೨೯ | ೨೪ | ಕೇಳ್ದ | ಕೇಳ್ದಾ |
| ,, | ೨೦ | ತಫರ | ಶಫರ | ೧೩೦ | ೧೦ | ಬರೀತ | ಪರೀತ |
| ,, | ೨೫ | ಶುದ್ದ | ಶುದ್ಧ | ೧೩೨ | ೩ | ಗಾಂತ | ಗಾಂತು |
| ೯೯ | ೫ | ವೇಧಾಂತಾ | ವೇದಾಂತಾ | ೧೩೩ | ೨೪ | ಮುಷ್ಟೀ | ಮುರ್ಷ್ಟೀ |
| ೧೦೦ | ೫ | ಚೇರೆ | ಬೇರೆ | ೧೩೫ | ೧೯ | ಚೇತ್ಕ್ಕೃತಿ | ಚೇತ್ಕೃತಿ |
| ೧೦೧ | ೧೩ | ರೊಗ್ಗನಿಂ | ರೊಗ್ಗರ್ನಿಂ | ,, | ೨೦ | ಚೇತ್ಕೃತಿ | ಚೇತ್ಕೃತಿ |

| ಪುಟಂ | ಪಙ್ಕ್ತಿ | ಅಶುದ್ಧಂ | ಶುದ್ಧಂ |
|---|---|---|---|
| ೧೩೭ | ೧೬ | ವಾಂಹಕೋ | ವಾಹಕೋ |
| ,, | ೧೭ | ಕೀಟಂಕೌಘ | ಕೀಟಕೌಘ |
| ,, | ೨೮ | ಶರೋತ್ಕರ್ಷ | ಶರೋತ್ಕರ್ಷ |
| ೧೩೮ | ೧೮ | ತೊಳ್ದುದು | ತೊಳ್ದುದು |
| ,, | ೨೮ | ಆಗಳ್ಪಚಂಡ | ಆಗಳ್ಪ್ರಚಂಡ |
| ೧೪೨ | ೧೩ | ದಂತೆದರಂಶರ | ದಂಶದರಂಶರ |
| ,, | ೧೭ | ಧಿಧಾಗಿ | ಧಿಧಿರಾಗಿ |
| ೧೪೩ | ೧ | ಮೌಕ್ದಿಕ | ಮೌಕ್ತಿಕ |
| ೧೪೫ | ೨೦ | ನುಷಾ | ನುಪಾ |
| ೧೪೯ | ೩ | ಶ್ರೀರಮಣೀ | ಶ್ರೀಧರಣೀ |
| ,, | ೮ | ಮೇರಿಂ | ಮೇಲಿಂ |
| ,, | ೨೨ | ಮಜ್ಜಗುಣಾಂ | ಮಬ್ಜಗುಣಾಂ |
| ೧೫೦ | ೬ | ತ್ರೋಡನೆ | ಕ್ರೊಡನೆ |
| ,, | ೧೪ | ಸಗತಾರು | ಸಗರ್ವತಾರು |
| ,, | ೨೦ | ಕಾದ್ದರಪ | ಕಾರ್ದ್ದರಪ |
| ೧೫೧ | ೨೨ | ನೈತರತು | ನೈತರುತು |
| ,, | ೨೫ | ಹರ್ಮದ | ಹರ್ಮ್ಯದ |
| ,, | ೩೨ | ಕೊಂಡು | ಕೊಂಡ |
| ೧೫೩ | ೧೧ | ದೊಳ್ತನ್ನ | ದೊಳ್ತ |
| ೧೫೭ | ೧೮ | ಸಳನ | ನಳಿನ |
| ೧೫೮ | ೧೮ | ಮೆನ್ನೆ | ಮೆನ್ನ |
| ,, | ೨೦ | ವೆರಯೆನೆ | ವೆರೆಯೆನೆ |
| ,, | ೨೦ | ಪರನೊ | ಪೆರೆನೊ |
| ,, | ೨೧ | ಮೂಗದಾ | ಮೊಗದಾ |
| ೧೫೯ | ೨೯ | ತೆಸೆತಿರ್ದಳ್ | ದೆಸೆದಿರ್ದಳ್ |
| ೧೬೦ | ೮ | ಭಾಪ್ರತಿ | ಭಾಗಪ್ರಭವ |
| ,, | ೧೦ | ಪಾಯುತ್ತರ್ವ | ಸಾಯುತ್ತರ್ಪ |
| ,, | ೨೦ | ತಡೆಗೆಟ್ದು | ತಡೆಗೆಟ್ಟು |
| ,, | ೨೯ | ಸೌದರ್ಯ | ಸೌಂದರ್ಯ |
| ೧೬೪ | ೧೯ | ಕಳೆದಂತ | ಕಳೆದಂತೆ |
| ,, | ೨೦ | ಬಿಜ್ಬಣೆ | ಬಿಜ್ಜಣೆ |
| ,, | ೨೮ | ಶಿರಕ್ಕಾಂಗೆ | ಶಿರಕ್ಕಾಂಕೆ |
| ೧೬೭ | ೨೦ | ದತಿತಯ | ದತಿಶಯ |
| ೧೬೮ | ೧ | ಅಸ್ತಮ | ಅಷ್ಟಮ |
| ,, | ೪ | ಶ್ರವ | ಶ್ತವ |
| ,, | ೬ | ಪಶ್ರಾಂಬಕೆ | ಪತ್ರಾಂಬಿಕೆ |
| ,, | ೧೭ | ಅಷ್ಠ | ಅಷ್ಟ |
| ,, | ೧೫ | ವೊಂಬಟ್ಟೆಯ | ಪೊಂಬಟ್ಟೆಯ |
| ೧೭೦ | ೧ | ಅಸ್ತಮ | ಅಷ್ಟಮ |
| ,, | ೩ | ಪೊರಗ | ಪೊರಗೆ |
| ೧೭೧ | ೨ | ಮುಗಿಳೊ | ಮುಗಿಲೊ |
| ೧೭೨ | ೧ | ಅಸ್ತಮ | ಅಷ್ಟಮ |
| ,, | ೧೮ | ನಿಶಂಬ | ನಿತಂಬ |
| ,, | ೨೨ | ತೊಡಿಸವೋ | ತೊಡಿಸವೋ |
| ೧೭೩ | ೨೪ | ಕಟ್ಟ್ದ | ಕಟ್ಟದ |
| ೧೭೪ | ೧ | ಅಷ್ಠಮ | ಅಷ್ಟಮ |
| ,, | ೨೭ | ಮಧುರಶ | ಮಾಧುರತೆ |
| ೧೭೫ | ೨೭ | ವೊಗಳುತ್ತಿರೆ | ಪೊಗಳುತ್ತಿರೆ |
| ೧೭೬ | ೧ | ಅಷ್ಠಮ | ಅಷ್ಟಮ |
| ,, | ೬ | ನಿರ್ಪ್ಪನವಿ | ನಿರ್ಪ್ಪನವಿು |
| ,, | ೮ | ಕಜೌಘಕೆ | ಕಚೌಘಳೆ |
| ೧೭೮ | ೪ | ತತ್ರೀನ | ತತ್ಪೀನ |
| ,, | ೨೬ | ನಿಳೆಗೆ | ನಿಳೆಗವ |
| ೧೮೦ | ೧ | ಅಷ್ಠಮ | ಅಷ್ಟಮ |
| ೧೮೧ | ೬೧ | ಮುಗುಳೆ | ಮುಗುಳ |
| ೧೮೨ | ೮ | ದೊಲನಂ | ದೊಲವಿಂ |
| ,, | ೯ | ದೊಖಿಳ | ದೊಳಖಿಳ |
| ,, | ೮ | ಕರುಣಂ | ಕರಣಂ |
| ೧೮೫ | ೨೮ | ಯ್ವಿಂದಿರ | ಯ್ವಂದಿಂದಿರ |
| ೧೮೬ | ೧ | ಅಸ್ತಮ | ಅಷ್ಟಮ |
| ,, | ೨೭ | ಪುಷ್ಪರ | ಪುಷ್ಕರ |
| ,, | ,, | ಬಗ | ಬಗೆ |
| ,, | ೨೯ | ಮರುತ್ಕ್ರ | ಮರುಳ್ಕ್ರ |
| ೧೮೭ | ೧೭ | ವೋಲ್ವ | ವೊಳ್ಪ |
| ,, | ೨೩ | ತರಂಗಿಣೀ | ತರಂಗಿಣೀ |
| ೧೮೮ | ೧ | ಅಸ್ತಮ | ಅಷ್ಟಮ |
| ,, | ೨೫ | ದೊರ್ಡಳೆ | ದೊರ್ಡಿಳೆ |
| ೧೮೧ | ೧೩ | ತಿಖಾವ | ಶಿಖಾವ |

| ಪುಟಂ | ಪಜ್ತಿ | ಅಶುದ್ಧಂ | ಶುದ್ಧಂ |
|---|---|---|---|
| 192 | 11 | ಪಗೆಯ | ಪಗೆಯ |
| 195 | 1 | ಪಲ್ಲಭ | ವಲ್ಲಭ |
| 197 | ೨೮ | ತಣ್ಪೆ | ತಣ್ಬೆ |
| ,, | ೨೯ | ಗಟಾದ | ಕಟಾಕ್ಷದ |
| ೧೯೮ | ೯ | ವೊಡಮಟ್ಟು | ಪೊಡಮಟ್ಟು |
| ೨೦೦ | ೭ | ನರ್ತಶಾಲೆ | ನರ್ತನಶಾಲೆ |
| ೦ ,, | ೨೯ | ಲತಾನಟೆ | ಲತಾನಟಿ |
| ೨೦೪ | ೨೨ | ನಿವೇಧಿತ | ನಿವೇದಿತ |
| ೨೧೧ | ೯ | ಲೆಳನಸಿ | ಲ್ಬೈಸಸಿ |
| ೨೨೦ | ೨೦ | ಸ್ಪುಗುರಿ \|\| | ಸುಗುಂ \|\| |
| ೨೨೨ | ೨೧ | ನಡ | ನಡೆ |
| ೨೨೪ | ೧೫ | ತಾನಮರಸಿ | ತಾನುಮರಸಿ |
| ೨೨೮ | ೧೭ | ಸಂದ್ಯಾ | ಸಂಧ್ಯಾ |
| ೨೨೯ | ೨೩ | ವೊದಳ್ದ | ಪೊದಳ್ಧ |
| ೨೩೧ | ೭ | ಜಣ್ಮ ಗುಃತುಪತಿ | ಜಾಣ್ಮ ಗುತುಪಪತಿ |
| ,, | ೧೭ | ನಮುದ್ದರ್* | ನಮುದರ್* |
| ೨೩೨ | ೨೫ | ಕೃಷ್ಬ | ಕೃಷ್ಣ |
| ೨೨೫ | ೧ | ಪರಿದಗ್ದ | ಪಂದಗ್ಧ |
| ೨೩೬ | ೭ | ಬಂಬರೌಪ್ಯ | ಬಿಂಬರೌಪ್ಯ |
| ,, | ೧೨ | ಸಂವದ | ಸಂಪದ |
| ,, | ೨೧ | ವರಿಮಳ | ಪರಿಮಳ |
| ,, | ೨೩ | ಭಾಸುರೆ | ಭಾಸುರ |
| ,, | ೨೪ | ನಜ್ರಮಣಿ | ವಜ್ರಮಣಿ |
| ,, | ೨೫ | ಧೂಷಣ | ಭೂಷಣ |
| ,, | ೨೬ | ಕದಂಇ | ಕದಂಬ |
| ,, | ,, | ಲಿವ್ತ ಪಕ್ಷ | ಲಿಪ್ತವಕ್ಷ |
| ೨°೭ | ೨೬ | ಯುಪ್ಬನೆ | ಯುಪ್ಪನೆ |
| ೨೩೮ | ೫ | ನುನುಜ | ಮನುಜ |
| ,, | ೧೩ | ಮದಣಬಾಣಂ | ಮದನಬಾಣಂ |
| ,, | ೧೬ | ನೋಳ್ಫರೊ | ನೋಳ್ಪರೊ |
| ,' | ೨೬ | ಮುಚ್ಚಿರ್ಪ | ಮುಚ್ಚಿಪ |
| ,, | ೨೮ | ಂಧಮಿಲ್ಲ | ಧಮ್ಮಿಲ್ಲ |
| ', | ,, | ಕಾರಕ\|\| | ಕಾರಕಾ\|\| |
| ೨೪೦ | ೧೨ | ಮಣಿಯಾಂಕ | ಮಣಿಮಯಾಂಕ |
| ,, | ,, | ವಿದಗ್ದ | ವಿದಗ್ಧ |
| ,, | ೧೮ | ಧಿಚ್ಛಯಿಂ | ಧಿಚ್ಫಯಿಂ |
| ೨೪೧ | ೨೭ | ಧಿಳಿದಿಂ | ತಿಳಿದಿಂ |
| ೨೪೩ | ೨೧ | ದಾಳದಪ್ರೀ | ದಾಳಧಿಪ್ರೀರ್ |
| ,, | ೨೫ | ಯೆಂದನೆ | ಯೆಂದೆನೆ |
| ,, | ೨೬ | ಯೆಂದನೆ | ಯೆಂದೆನೆ |
| ೨೪೪ | ೯ | ಮಗಳ್ವಟರಂ | ಮಗಳ್ವೆಟರಂ |
| ೨೪೬ | ೫ | ಬಜತಿಯಂ | ಬಣಿತಿಯಂ |
| ,, | ೮ | ವೆರೆಪುದು | ವೆರೆವುದು |
| ,, | ೧೭ | ಮಂದು | ಮೆಂದು |
| ,, | ೧೮ | ಚಿತ್ತಗೆ | ಚಿತ್ತ್ರಗೆ |
| ,, | ೨೩ | ನೀಂ ನಿದೇಂ | ನೀ ನಿದೇಂ |
| ೨೪೯ | ೧೫ | ನೀರ್ವೇದೋ | ನಿರ್ವೇದೋ |
| ೨೫೦ | ೩ | ತಲ್ಲ | ತಲ್ಪ |
| ,, | ೫ | ಪದ್ಮಾಸ್ಯೆ | ಪದ್ಮಾಸ್ಯೆ |
| ೨೫೩ | ೨೨ | ಮುಂಸ | ಮುಂಟೆ |
| ೨೫೫ | ೧೭ | ತಿಳಿದೆ | ತಿಳುಪ |
| ,, | ೨೦ | ತಾಬ್ದಿ | ತಾಬ್ಧಿ |
| ,, | ೨೧ | ಕೃವಾನ್ವಿತಮೇ | ಕೃಪಾನ್ವಿತಮೆ |
| ೨೫೬ | ೧೨ | ಹರಣಕೌ | ಹರಣಭರಣಕೌ |
| ,, | ೧೪ | ಕಾವಾನಿ | ಕಾಶಿನಿ |
| ,, | ೨೩ | ಮದೋಜ್ಞ | ಮನೋಜ್ಞ |
| ೨೬೧ | ೨೫ | ರೋದೋಂ | ರೋಧೋಂ |
| ೨೬೮ | ೬ | ದೊಲ್ಲೀಲೆ | ದೋಳ್ಲೀಲೆ |
| ೨೭೪ | ೨೧ | ರ್ಣಸ್ಪುರ | ರ್ಣಸ್ಫುರ |
| ೨೮೪ | ೭ | ಮೆಂದಲೆದೇವ | ಮೆಂದಲೆ \| |
| ,, | ೮ | ಬುಧಂ \|\| | ದೇವಬುಧಂ |
| ೨೮೫ | ೫ | ನಿಜಧೈರ್ಯ \| | ನಿಜಧೈ \| |
| ,, | ೬ | -ದೆಗಣಿಸದೆ | ರ್ಯದೆಗಣಿಸದೆ |
| ,, | ೨೨ | ಬುದ್ದಿ | ಬುದ್ಧಿ |
| ೨೯೦ | ೧೧ | ಮಖೋ | ಮುಖೋ |
| ,, | ೧೫ | ಪೂಜೆಸಿ | ಪೂಜಿಸಿ |
| ೨೯೨ | ೧೯ | ಪುಷ್ಟಪುಷ್ಪ | ಪುಷ್ಪಮ |
| ೨೯೩ | ೯ | ಭೃತ್ಯಾ | ಭೃತ್ಯಾಂ |

| ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ | ಪುಟಂ | ಪಙ್ತಿ | ಅಶುದ್ಧಂ | ಶುದ್ಧಂ |
|---|---|---|---|---|---|---|---|
| ೨೯೫ | ೩ | ಳೆೄಽೀಗಿಪಂ | ಳೆೄಽೀಗಿಪಂ | ೩೬೫ | ೫ | ಕರ್ಣಕೆ | ಕರ್ಣಿಕೆ |
| ೨೯೯ | ೨೫ | ಪೊಟ್ಟಳ | ಪೊಟ್ಟಣ | ,, | ೧೪ | ಶ್ರೀರಸಂ | ಶ್ರೀಗಳ ಶ್ರೀರಸಂ |
| ೩೦೦ | ೬ | ತರವಿಜ | ತರಜವಿ | ೩೩೬ | ೧ | ಪಳವಾತಿನ | ಪಳೆವಾತಿನ |
| ೩೦೩ | ೩ | ಡಿಬಪ್ಪಾ | ಡಿ ಬರ್ಪಾ | ೩೩೦ | ೧೨ | ೯ಂಗೆ | ರಾಂಗೆ |
| ೩೦೫ | ೧೧ | ಬೇಡಿತಂ | ಬೇಡಿದಂ | ೩೩೯ | ೧೮ | ಮಣ | ಮಣಿ |
| ೩೦೭ | ೨೦ | ಧರ್ಮ | ಧರ್ಮ | ,, | ೨೪ | ರೊಳ | ರೊಳ್ |
| ೩೧೩ | ೧೨ | ಸೂಸನು | ಸೂನು | ೩೪೦ | ೮ | ಚ್ಛಾಯು | ಚ್ಛಾಯು |
| ೩೧೪ | ೯ | ಮನದ | ಮನಕ್ಕೆ | ,, | ೨೬ | ಚ ಂಪೇ | ಚಾಂಪೇ |
| ೩೧೮ | ೨ | ತೃಕ್ಷ | ತೃಕ್ಷ | ೩೪೭ | ೫ | ಗೀಶ್ವರಂ | ಗೀಶ್ವರಂ |
| ೩೧೯ | ೧೯ | ದ್ಘಾಸತೆ | ದ್ಘಾಸತೆ | ,, | ೯ | ಭೃಂಗ್ವಂ | ಭೃಗ್ವಂ |
| ೩೨೧ | ೧೧ | ಯೇ ಪುಸಿ | ಯೇಂಪುಸಿ | ,, | ೧೩ | ವಾಸವನ | ವಾಸವನೆ |
| ೩೨೨ | ೨೭ | ದ್ಗಮದಂತೆ | ದ್ಗಮಮುದ್ಗಮ | ೩೪೩ | ೭ | ಸಭಾಸ್ಥಳೀ | ಸಭಾಸ್ಥಳಿ |

# ಬಸವೇಶ ವಿಜಯಂವು



ಶಂಕರಾರಾಧ್ಯರಿಂದ ಸಂಸ್ಕೃತಭಾಷೆಯಲ್ಲಿ ರಚಿಸಲ್ಪಟ ಬಸವೇಶ ವಿಜಯವನ್ನು ಮೊದಲು ಮಹಾರಾಜಾ ಕಾಲೇಜ್ ಕರ್ಣಾಟಕ ಪಂಡಿತರಾಗಿದ್ದು ಈಚೆಗೆ ಆಸ್ಥಾನ ಮಹಾವಿದ್ವಾಂಸ್ ಕರ್ಣಾಟಕ ಭಾಷಾರತ್ನ ಎಂಬ ಬಿರುದನ್ನು ಪಡೆದ ವೇ || ಪಿ. ಆರ್. ಕರಿಬಸವಶಾಸ್ತ್ರಿಗಳು ಕನ್ನಡದಲ್ಲಿ ರಚಿಸಿ ಅದರ ವಿಶಿಷ್ಟ ಹಕ್ಕು ಬಾಧ್ಯತೆಯನ್ನು ಬಿ. ಎ. ಕೋದಂಡರಾಮಶೆಟ್ಟರಿಗೆ ಕೊಟ್ಟಿರುತ್ತಾರೆ. ಈ ಭಾವಚಿತ್ರಗಳನ್ನೊಳಗೊಂಡ ಗ್ರಂಥದಲ್ಲಿಬಸವೇಶ ಮುಂತಾದ ಅನೇಕ ಮಹಾತ್ಮರಾದ ಭಕ್ತರ ಚರಿತ್ರೆಗಳು ಅಡಕವಾಗಿರುವುದರಿಂದ ಇದನ್ನು ಓದುವವರಿಗೆ ಭಕ್ತಿ, ಮುಕ್ತಿಗಳುಂಟಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಆದುದರಿಂದ ಶಿವಭಕ್ತಿ ಸಂಪನ್ನರಾದಎಲ್ಲರೂ ಈ ಗ್ರಂಥವನ್ನೋದಿ ಕೃತಕೃತ್ಯರಾಗಬಹುದು. ಈ ಗ್ರಂಥವು ಕ್ರೌನ್ ಸೈಜಿನ ೪೦೦ ಪುಟಗಳುಳ್ಳದ್ದಾಗಿರುತ್ತದೆ ಇದರ ಕ್ರಯ ರೂ ೧-೮-೦. ಇಷ್ಟು ಸುಲಭವಾದ ಬೆಲೆಯುಳ್ಳ ಪುಸ್ತಕವನ್ನು ಸಕಲ ಸಜ್ಜನರೂ ಸಂಪಾದಿಸಿಟ್ಟುಕೊಂಡು ಓದಿ ಗ್ರಂಥಕರ್ತರ ಉದ್ದೇಶವು ನೆರವೇರುವುದಲ್ಲದೆ ಸ್ವಾರ್ಥಸಿದ್ಧಿಯೂ ಆಗದೆ ಹೋಗುವುದಿಲ್ಲವೆಂದು ಧೃಢವಾಗಿ ಹೇಳುವೆವು.

ಶ್ರೀರಸ್ತು.

# ರಾಜಶೇಖರವಿಳಾಸಂ

## ಪ್ರಥಮಾಶ್ವಾಸಂ.

(ಪೀಠಿಕಾರಚನಾ ಸಮುದ್ರ ಮೇರುಗಿರಿ ವರ್ಣನಂ)

---

ವೃತ್ತ॥ ಶ್ರೀಶೈಲಾದಿಪ್ರಸಿದ್ಧಂ ಸುರುಚಿರವಿಜಯಸ್ತುತ್ಯ ಸುದ್ರಿಕ್ತಸತ್ವಾ |
ವೇಶಂ ಕಲ್ಯಾಣಭೂಭೃತ್ಸದನ ಧನದ ಮಿತ್ರಂ ಧರಾಧಾರಧರ್ಮಂ ||
ವೈಶದ್ಯದ್ಯೋತಿ ಚಂದ್ರೋಪಲಸಿತ ಭಸಿತಾನಂತಕಾಂತೋತ್ತಮಾಂಗಂ |
ಶ್ರೀ ಶೈವಶ್ರೀಯಮಂ ಮಾಳ್ಕೆಮ ಗನವರತಂ ನಂದಿಕೇಶಂ ಮಹೇಶಂ॥ ೧

ನಿಜನೇತ್ರಂ ಲೋಕನೇತ್ರಂ ನಿಜಭರಣ ಮಿಳಾಚಕ್ರಭಾರಾವಹಂ ಮೇ |
ಣ್ಣಿಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ ||
ನಿಜರೂಪಂ ವಿಶ್ವರೂಪಂ ನಿಜರಮಣಿ ಜಗನ್ಮಂಡಳೀ ಮಾತೆ ನಿಚ್ಚಂ |
ನಿಜಮಾದಂ ಸುಪ್ರಮೋದಂ ಕುಡುಗೆಮ ಗತುಳಶ್ರೀಯಮಂ ಶೈಲಜೇಶಂ ||೨

ಪರಮುಕ್ತಿಪ್ರಮದಾಮುಖೈಕಮುಕುರಂ ಮೋಹಾಂಧಕಾರೌಘ ಭಾ |
ಸ್ಕರಬಿಂಬಂ ಮುನಿಮುಖ್ಯಮಾನಸಗೃಹಾಂತರ್ಜ್ಯೋತಿ ಚಿದ್ವ್ಯೋಮಮಿ ||
ಸ್ಫುರದಬ್ಜಾಹಿತಮಂಡಳಂ ಶ್ರುತಿಸತೀಸೀಮಂತರತ್ನಂ ಮಹೇ |
ಶ್ವರಪಾದಾಬ್ಜನಖಂ ಸುಖೋದಯಕರಂ ತಾನಿರ್ಕೆ ಮಚ್ಚಿತ್ತದೊಳ್ || ೩

ಕ್ಷಿತಿಯಂ ಪಾಲಿಪಗಣ್ಯಪುಣ್ಯಮತಿಯಂ ಪ್ರಖ್ಯಾತಸೌಂದರ್ಯಸಂ |
ಗತೆಯಂ ಶೈವಮತೈಕ ಕಲ್ಪಲತೆಯಂ ಶ್ರೀವಾಗ್ವಧೂಸಂತತ ||
ಸ್ತುತೆಯಂ ಚಂದ್ರಧರಾರ್ಧದೇಹಯುತೆಯಂ ಬಾಲಾಬ್ಜಸೀತಾಂತಸ |
ದ್ಯುತಿಯಂ ಪಾರ್ವತಿಯಂ ಕೃಪಾವತಿಯ ನಾಗಳ್ಬಣ್ಣಿಪೆಂ ಭಕ್ತಿಯಿಂ || ೪

ಮುರಹರ ಪದ್ಮಸದ್ಮಮುಖನಿರ್ಜರಕೋಟಿಯ ನೊಕ್ಕಲಿಕ್ಕಿ ಸ |
ಚ್ಚರಿತಜಿತಾಕ್ಷಸಂಚಯಮನಂಜಿಸಿ ಭಂಜಿಸಿ ಮೂಜಗಂಗಳೊಳ್ ||
ಸರಿದೊರೆಯಿಲ್ಲಮಂಗೆನಿಪ ಶೌರ್ಯಮನಾಂತ ಮನೋಜನಂ ಕನ |
ಲ್ದುರುಪಿದ ಶಂಭುವರ್ಧತನುವಂ ಸೆಳೆದಂಬಿಕೆಗೈದೆ ವಂದಿಪೆಂ || ೫

ವೃ|| ಯತಿತತಿಚಕ್ರವರ್ತಿ ರುಚಿರಾಮಳಮೂರ್ತಿ ವಿಶಾಲಕೀರ್ತಿಪೂ |
ರಿತಹರಿದಂತ ಸುಜ್ಜ್ವಳಗುಣಾವಳಿಕಾಂತ ನತೀವಶಾಂತ ನಾ ||
ಶ್ರಿತಜನರಕ್ಷ ನನ್ವಿತಜಿತಾಕ್ಷ ನಮೋಘಕೃಪಾಕಟಾಕ್ಷ ನೂ |
ರ್ಜಿತ ಚಿಕವೀರದೇಶಿಕಶಿಖಾಮಣಿ ಮಾಳ್ಕೆಮಗಿಷ್ಟಸಿದ್ಧಿಯಂ || ೬

ರದನದ ಕಾಂತಿ ನಿರ್ಝರ ಮುದಗ್ರಕಿರೀಟಮಣಿಪ್ರಕಾಶ ಮೊಂ |
ದಿದ ನವಧಾತು ಬದ್ಧ ಫಣಿ ಯಂದಮರ ಕ್ಕರ್ಡೆಯಲ್ಕೆ ಕಟ್ಟಿದ ||
ಗ್ಗದಫಣಿ ಗಂಡಮಂಡಳಮದಾಂಬುಗೆ ಪಾರ್ದ್ದರಪುನ್ಮದಾಳಿ ನೀ |
ರದಮೆನೆ ಮಂದರಂಬೊಲೆಸೆವಾನೆಮೊಗಂ ಮಿಗೆ ಮಾಳ್ಕವಿಘ್ನಮಂ || ೭

ಅಹಿತತಮೋಪಹಂ ದನುಜಸಂಹೃತಿಶಕ್ತಿಧರಂ ಪ್ರಭಾಕರಂ |
ಮಹಿತ ಮಹೋದಯಂ ಕಮಳಬಂಧುರ ಸಸ್ಮಿತವಕ್ತ್ರಭಾಸುರಂ ||
ಬಹುಕರರಂಜಿತಂ ವಿಹೃತದೋಷ ನನಾರತಮೆನ್ನ ಹೃತ್ಪಯೋ |
ರುಹಕುರೆ ತಾರಕಾರಿ ಮಿಗೆ ಮಾಡುಗೆ ಭವ್ಯತರಪ್ರಮೋದಮಂ || ೮

ಸ್ಥಿರಕಾಯಂ ಸತ್ಸಹಾಯಂ ಶಮಿತವಿತತಮಾಯಂ ಸುರವ್ರಾತಗೇಯಂ |
ಗುರುಶೃಂಗಂ ಸಾಧುಸಂಗಂ ಮದನಮದವಿಭಂಗಂ ಮಹೇಶಾಂತರಂಗಂ ||
ವರವೇಷಂ ಚಿತ್ರಭೂಷಂ ಪದವಲಯಿತಶೇಷಂ ಸದಾ ಸತ್ಯಭಾಷಂ |
ಪರಿರುಂದ್ರಂ ಭೂತಿಸಾಂದ್ರಂ ಕುಡುಗೆಮಗೆ ವಿತಂದ್ರತ್ವಮಂ ಶ್ರೀವೃಷೇಂದ್ರಂ||

ಸಕ್ಷಮ ದಕ್ಷಶಿಕ್ಷಣ ವಿಚಕ್ಷಣ ಸುಕ್ಷಣಲಕ್ಷಣೇಕ್ಷಣಾ |
ರಕ್ಷಿತ ಲಕ್ಷಿತೇಶ್ವರ ಮುಮುಕ್ಷುಜಿತಾಕ್ಷ ಮಹೋಕ್ಷಲಕ್ಷ ಫಾ ||
ಲಾಕ್ಷ ತರಕ್ಷುರಾಕ್ಷಸ ವಿಪಕ್ಷ ವಳಕ್ಷ ಸರಕ್ಷದೇಹ ಮೋ |
ಹಕ್ಷಯ ದಕ್ಷ ರಕ್ಷಿಪು ದಧೋಕ್ಷಜಪಕ್ಷ ಶಿವಾಕ್ಷಿ ಸಂಭವಾ || ೧೦

ಸದಮಳ ಧರ್ಮರೂಪ ನಭವಾಗಮಸಾರ ಕಳಾ ಕಳಾಪ ನು |
ನ್ಮದ ಮದನಪ್ರಲೋಪ ನಕಳಂಕ ಸದದ್ವಯ ತತ್ವದೀಪ ನ ||
ಭ್ಯುದಯಮಹಪ್ರತಾಪ ನತಿಭಕ್ತಿವಶೀಕೃತ ಶೈಲಚಾಪ ನಾ |
ತ್ತದಯ ಜಿತತ್ರಿತಾಪ ಬಸವೇಶ್ವರ ನೀಗೆಮಗೀಶ ಭಕ್ತಿಯಂ || ೧೧

ವೃಜಿನವ್ರಾತಮ ನೊಕ್ಕಲಿಕ್ಕಿ ಮದಮಾತಂಗಂಗಳಂ ಸೀಳ್ದು ತಾ |
ಳ್ದು ಜಗದ್ವಿಶ್ರುತವರ್ತಿಕೀರ್ತಿಯ ನನಂಗೋದ್ರೇಕಮಂ ಮೆಟ್ಟಿ ಮು ||
ಟ್ಟಿ ಜಡಂಪೊರ್ದ್ದದ ಸಾಧು ಬೋಧಮನಶೇಷತ್ಯಾಗಮಂ ಯೋಗಮಂ |
ಸುಜನಗ್ರಾಗಿಪಭಿನ್ನ ಚನ್ನಬಸವೇಶಂ ಮಾಳ್ಕೆ ಸುಜ್ಞಾನಮಂ || ೧೨

ವೃ|| ಅರಿವರ್ಗಧ್ವಂಸನಮಂ ಪೂರ್ಣ್ದೆಸಗಿ ತಳೆದು ಪಂಚಾಂಗಸನ್ಮಂತ್ರಮಂ ಪೊ|
ದ್ದಿರ್ಱೆ ಸತ್ವಂ ಸತ್ಪ್ರಜಾಪಾಲನೆಯ ನೆಗಳ್ದುಪಾಯಂಗಳಂ ಸಾಡ್ಗುಣ್ಯ ಶಕ್ತಿ ||
ಸ್ಫುರಣಂ ಕೈಗಣ್ಮೆ ತಂತ್ರೋದಿತ ಗುಣಗಣಮಂ ತಾಳ್ದಮೋಘಪ್ರಭುತ್ವಂ |
ದೊರೆಕೊಂಡೆಮ್ಮಾಳ್ದನಾದಲ್ಲಮವಿಭು ವಿರತಿಶ್ರೀಯಮಂ ಮಾಳ್ಪದೆಮ್ಮೊಳ್ ||

ದುರಿತ ತಮಃ ಪತಂಗನ ಮಳಾರ್ಥ ವಿವೇಚನ ಸತ್ಪ್ರಸಂಗ ನೀ |
ಶ್ವರಲಸದಂತರಂಗ ನಭವಾಗಮವಾರಿಜ ದಿವ್ಯಭೃಂಗ ನ ||
ಕ್ಷರಪರಲಿಂಗಸಂಗ ನತಿಶಾಂತಿ ನಿರಸ್ತ ಜಡಾನುಷಂಗ ನೊ |
ಲ್ದುರುತರಸಿದ್ಧಲಿಂಗಯತಿತುಂಗ ನೊಡರ್ಚುಗೆ ಸಜ್ಜನೇಷ್ಟಮಂ || ೧೪

ಶಿವನೊಡನುಂಡು ಶಂಕರನ ನಂಗನೆ ಯಂಗಣಕಟ್ಟಿ ಶಂಭುವಿಂ |
ಗವಯವನಿತ್ತು ಶರ್ವನೊಡನಕ್ಷಮನಾಡಿ ಭವಂಗಮರ್ಚಿ ಚ ||
ಕ್ಷುವ ನಭವಂಗೆ ಪಾಲೆರೆದು ಭರ್ಗನೊಳರ್ಪಿಸಿ ಸರ್ವಮಂ ಶಿವಾ |
ಧವನೊಲವೆತ್ತರಿಂದೆಮಗೆ ವಂದ್ಯ ರನಿಂದ್ಯ ರವದ್ಯವರ್ಜಿತರ್ || ೧೫

ಕಂ|| ಸುಜನ ವರ ನತ ಪದನ ಸದ |
ಸುಜನವರದ ನಕುಳನಾದರಸಿಕನ ವಿಳಸ ||
ನ್ನಿಜಗುಣಯೋಗಿಯ ನಿರುಪಮ |
ನಿಜಗುಣಯೋಗಿಯ ಪದಾಬ್ಜಕಾ ನತನಪ್ಪೆಂ || ೧೬

ವೃ|| ರೇಣುಕರಾಮಪಂಡಿತ ಮಹಾಮರುಳಾರ್ಯರ ಮಾಯಿದೇವರಂ |
ಜಾಣನ ಜಕ್ಕಣಾರ್ಯನ ಜಗನ್ನುತಮಲ್ಹಣ ಮಲ್ಲಣಾರ್ಯರಂ ||
ಪ್ರೀಣಿತ ಶಂಭು ಶಂಕರ ಹರೀಶ್ವರ ರಾಘವ ಕೇಶಿರಾಜರಂ |
ಮಾಣದೆ ಬಣ್ಣಿಸುತ್ತೆರಗಿ ಮೇಣ್ಪಡೆವೆಂ ಪರಮಾರ್ಥಸಿದ್ಧಿಯಂ || ೧೭

ನುತಿಪೆಂ ವಿಶ್ರುತವೀರಶೈವಶರಧಿ ಶ್ರೀಸೋಮನಂ ಸೋಮನಂ |
ಜಿತವಾದಿವ್ರಜ ಸದ್ಬುಧಸ್ತುತ ಲಸತ್ಪತ್ಪದ್ಮನಂ ಪದ್ಮನಂ ||
ಶತ ಗರ್ವೋದ್ಧತ ದುರ್ವಿದಗ್ಧ ಜನತಾ ಹೃದ್ಭೀಮನಂ ಭೀಮನಂ |
ಸತತಾರಾಧಿತ ಶಂಕರೀರಮಣ ಪಾದಾಂಭೋಜನಂ ಭೋಜನಂ || ೧೮

ಧರೆಯೊಳ್ಮೇಣ್ಪುಟ್ಟಿ ಪುಟ್ಟುತ್ತುರುಳ್ವ ನರರ ಮೇಲುಬ್ಬಿರ್ಕಜ್ಜುಬ್ಬಂಗಳಂ ಬಿ||
ತ್ತರಿಸುತ್ತುಂ ಸಪ್ರಯಾಸಂ ಕೆಲಕೆಲರಕಟಾ ಕಬ್ಬಿಗರ್ಕೆಟ್ಟುಪೋದರ್ ||
ಹರಿದೇವಂ ದೇವದೇವೋತ್ತಮನ ಶರಣರಂ ಪಾಡಿ ಕೈವಲ್ಯಲಕ್ಷ್ಮೀ |
ವರನಾದಂ ಮತ್ತವಂ ಗತ್ಯಧಿಕಶಿವಕವೀಂದ್ರಂ ಗದಾರ್ಸಾಟಿಯಪ್ಪರ್ ||೧೯

ಕಂ|| ವರ್ಣತತಿಮಾತೃಜನಕ ರ |
ಪರ್ಣಾಪರಮೇಶ ರೆಂಬ ನಿಗಮೋಕ್ತಿಯ ನೀ ||
ಕರ್ಣಿಸಿ ತನ್ನುತಿಗೆಯ್ವುದ |
ದುರ್ವರಕೃತಿಕರನೆ ಲಬ್ಧವರ್ಣವರಾಂಕಂ || ೨೦

ರಸೆಯೊಳ್ರಸವತ್ಕವಿತೆಯ |
ನುಸಿರಲ್ಪಡೆದಸಮನಯನನಂ ಪೊಗಳದೆ ಮಾ ||
ನಿಸರಂ ಸುರರಂ ಪೊಗಳ್ವುದು |
ಕಸವರಮಂ ಕಳೆದು ಕಸಮನಾಂತವೊಲಕ್ಕುಂ || ೨೧

ಅದರಿಂದೆ ಮಹಿತಮಹಿಮಾ |
ಸ್ಪದನಂ ಶಿವನಂ ತದೀಯಶರಣವ್ರಜಮಂ ||
ಪದೆದು ಮುದಮೊದವೆ ಬಲ್ಲಂ |
ದದೆ ನುತಿಪೆಂ ನುತಿಸೆ ನುಳಿದ ಸುರರಂ ನರರಂ || ೨೨

ವೃ|| ಬರೆಬರೆದಂತದಂ ತೊಡೆದು ತೊಟ್ಟನೆ ನಿಟ್ಟಿಸಿ ಮೆಲ್ಲನೊಂದುಮಂ |
ಸರಸಪದಾರ್ಥಮಂ ತಡಕಿ ಕಾಣದೆ ಕಳ್ದು ಪರೋಕ್ತಿಯುಕ್ತಿಯಂ ||
ವಿರಚಿಸುತಂತು ವಿಂತು ಮಳಿಗಬ್ಬಮ ನಾಗಿಸಿ ಕೇಳಿಸುತ್ತೆ ಕಾ |
ಲುರಿಚರ ತೋರ್ಪ ದುಷ್ಕವಿ ಮಹಾಕವಿ ಮಧ್ಯದೊಳೊಪ್ಪ ಲಾರ್ಪನೇ|| ೨೩

ಕಂ|| ಅಳಿಗಬ್ಬಿಗ ನೊರ್ವ್ವಂ ಮಂ |
ಜುಳಯುಕ್ತಿಯನೊಂದ ನೊಂದಿ ಸರಿವರ್ಪನೆ ಯ ||
ಗ್ಗಳಕವಿಗೆ ರನ್ನ ಮೊಂದಂ |
ತಳೆದಹಿ ರತ್ನಾಕರಕ್ಕೆ ಸರಿವಂದಪುದೇ || ೨೪

ಸಕಳಕಳಾನಿಧಿ ನಿಕಟದೆ |
ಸುಕರ ರಸ ಪ್ರಕಟ ಕಾವ್ಯ ಮೆಂಬಮೃತಪಯೋ ||
ಧಿ ಕರಂ ಪೆರ್ಚ್ಚುಗುಮಲ್ಲದೆ |
ಕುಕವಿ ಬುಧಪ್ರಭೃತಿ ಯಿದಿರೊಳೇಂ ಪೆರ್ಚುಗುಮೇ || ೨೫

ಕೃತಿ ಕೃತಕೃತಿಯಂ ಕ್ಷಿತಿಯೊ |
ಳ್ಮತಿರಹಿತತ್ತ್ರಳಿಯರೆಂದು ಪಳಿಯೆಂ ಮುಳಿಯೆಂ ||
ರತಿಲಾಲಸೆ ರಮಣೀ ಸಮು |
ರತಿಯಂ ಕ್ಲೀಬಕ್ಕಳೆಂತು ಮೇಣರಿದಪರೇ || ೨೬

ಕಂ|| ಬೇರೆನಿಸಿ ಮಿಸುಗುವಲರ್ಗ |
ಳ್ಬೇರುವ ನರುಗಂಪಿಸೊಳ್ವಿಶೇಷಮ ನರಿವಂ ||
ತಾರಡಿ ನಾನಾಕೃತಿಯೊ |
ಳ್ತೋರುವ ನವಭಾವಭೇದಮಂ ಬುಧನರಿವಂ ||　೨೭

ವೃ|| ಭುವನದೆ ಭೋಜರಾಜನ ಮಹಾಸಭೆಯೊಳ್ಬಹುಶಾಸ್ತ್ರಕೋವಿದ |
ಸ್ಸರ್ವಿ ಸಲೆ ಪೊಣ್ಮೆ ಪಾಡುವವರೇ ನಿರರೇ ತೆಗೆ ಕಾಳಿದಾಸನು ||
ಖ್ಯ ವಿವಿಧಸತ್ಕವೀಂದ್ರರ ಜಸಂ ಬಿಡದಿನ್ನು ಮಿರುತ್ತೆ ತೋರ್ಪವೋ |
ಲವರ ಜಸಂ ವಿರಾಜಿಪುದೆ ಸತ್ಕವಿಯೊಳ್ಸರಿವರ್ಪ ನಾವನೋ ||　೨೮

ಕಂ|| ಆರಾರೇರ ಶಾಸ್ತ್ರ |
ಶ್ರೀರೋಹಣ ಗಿರಿಯನಲ್ಲಿ ನವಕವಿತಾ ಚಿಂ ||
ತಾರತ್ನಂ ದೊರೆಗುಮೆ ಮಾ |
ರಾರಿಯ ಕೃಪೆಯಿಲ್ಲದಂಗೆ ಧರಣೀತಳದೊಳ್ ||　೨೯

ಕಲಿಸಿದೊಡೇಂ ಬಕ್ಕುರ್ಮೆ ಸ |
ಲ್ಲಲಿತ ಕವಿತ್ವಂ ನಿಸರ್ಗಸುಭಗಂ ರಮಣೀ ||
ವಿಲಸಿತ ರತಿರಸ ರಸಿಕತೆ |
ತಲೆದೋರ್ಪುದು ತಾನೆ ಕಲಿಸಲೇಂ ಬಂದಪುದೇ ||　೩೦

ನಿಂದಿಸುವದುರ್ಜನರೆಂ |
ಬೊಂದು ಭಯಂಬೆತ್ತು ಸುಕವಿ ರಚಿಸನೆ ಕೃತಿಯಂ ||
ಮಂದೇಹರ ಭಯದಿಂ ದರ |
ವಿಂದಸಖಂ ನಿಜಮಯೂಖಮಂ ಪಸರಿಸನೇ ||　೩೧

ಕಿರಿಯಕೃತಿ ಪಿರಿದೆನಿಕ್ಕುಂ |
ಪೆರರರ್ಥಕೆ ಕೈದುಡುಂಕದಿರೆ ಸತ್ಕವಿಗಂ ||
ಕಿರಿಯಸಿರಿ ಪಿರಿದೆನಿಕ್ಕುಂ |
ಪೆರರರ್ಥಕೆ ಕೈದುಡುಂಕದಿರೆ ಮನುಜಂಗಂ ||　೩೨

ಮಿಸುನಿ ಯದೊಂದಾದೊಡದೇಂ |
ಪೊಸತೊಡ ವೆನಿಸುತ್ತೆ ಬೇರೆಬೇರೆನಿಸುವವೋಲ್ ||
ರಸವತ್ಕವಿತಾಮಾರ್ಗಂ |
ರಸೆಯಲ್ಲಿ ವಿಚಕ್ಷಣರ್ಕಳಿಂ ಪೊಸತೆನಿಕುಂ ||　೩೩

ಕಂ|| ಭವ್ಯಸ್ಸರ್ತ್ಕೃತಿ ವೇಳ್ದ |
ಕ್ಕಾರ್ವ್ಯಾಲಾಪಾಂಶ್ಚ ವರ್ಜಯೇದೆಂಬುದ ಸ ||
ತ್ಕಾವ್ಯನಿಬಂಧನ ಮದರಿಂ |
ಸೇವ್ಯಂ ಸತ್ಕಾವ್ಯ ಮವನಿಯೊಳ್ಬುಧಜನದಿಂ || ೩೪

ವೃ|| ಮೊದಲಕವೀಂದ್ರರೊಲ್ದೊರೆದ ಸತ್ಕೃತಿಸಂಚಯಮೀ ಧರಿತ್ರಿಯೊ |
ಳ್ಪುದಿದಿರೆ ನೋಡಿ ತುಷ್ಟಿವಡಲೊಲ್ಲದೆ ಕಬ್ಬಿಗರೇಕೆ ಕಬ್ಬಮಂ ||
ಗದಿಪರೊ ಬೇರೆನುತ್ತೆ ನುಡಿವಳ್ಕಜಕಾರನವಂಗೆ ಪುತ್ರಸಂ |
ಪದದೊದವೇಕೆ ಬೇರೆ ಪರಪುತ್ರರನೀಕ್ಷಿಪೆ ತುಷ್ಟಿಸಾಲದೇ || ೩೫

ಎರವಿನ ಪಚ್ಚಮಂ ತಳೆದಿದರ್ಕ್ಕೆಣೆವಾರದಿದೆಂದು ಲೋಗರಾ |
ಭರಣಮನೇಳಿಪಂತೆ ತನಗಿಲ್ಲದೆ ಸಾರಕವಿತ್ವ ಮನ್ಯಕಾ |
ವ್ಯರುಚಿರಪದ್ಯಮಂ ಪಠಿಸಿ ಸತ್ಕವಿ ನಿರ್ಮಿತ ಪದ್ಯಮಿಂತಿದ |
ಕ್ಕೊರೆಯೆ ಯೆನುತ್ತೆ ಕಾಳ್ಗೆಡೆವನಂ ನಗದಿರ್ಪ್ಪರೆ ಬಲ್ಲ ಕಬ್ಬಿಗರ್ || ೩೬

ಕಂ|| ಕೃತಿಕಾದಂಬಿನಿ ರಸಮಂ |
ಕ್ಷಿತಿಪಸಭಾಕ್ಷಿತಿಗೆ ಸುರಿವ ಸಮಯದೆ ಖಲಗ ||
ರ್ಜಿತ ಘನಗರ್ಜಿತ ಮೊದವಿದೊ |
ಡತಿರಸವಿಸರಪ್ರಸಾರಕಾರಣಮಲ್ತೇ || ೩೭

ಅಜನಜಗರ ಗೆರದಿಂ ದ |
ಭೃಜಶಿಖಿರವದಿಂದೆ ಪುಲಿಯಕಾಯ್ಪಂ ನಿಸದಂ ||
ವೃಜಿನ ಘನಕುಜನ ಜನಮಂ |
ಸೃಜಿಸಿದನಲ್ಲದೊಡವಂಗೆ ಜಗಮಂಜುವುದೇ || ೩೮

ಸ್ಥಿತಿಯೊಳ್ಸುಜನಂ ಸುಖದಂ |
ವೃತಿಯೊಳ್ಕುಜನಂ ಜಗಜ್ಜನೌಘಕ್ಕಾದ್ಯಂ ||
ವೃತಿಯೊಳ್ದುಃಖದ ನಂತ್ಯಂ |
ಸ್ಥಿತಿಯೊಳ್ಪರಿಕಿಪ್ಪೊಡೀರ್ವ್ವರುಂ ಸರಿಯಲ್ತೇ || ೩೯

ವೃ|| ಪರಪರಿವಾದಮಂ ನೆಗಳ್ವುದೇ ಜಪ ಮನ್ಯಮನಃಪ್ರಸೂನಮಂ |
ಕೊರಗಿಪುದೇ ತಪಂ ಪೆರರ ಜೀವಿತಮಂ ಪರಿದಿಕ್ಕುವಂದವೇ ||
ಪರತರಶೀಲ ಮಾದರಿಸಿ ಲೋಗರ ಮರ್ಮಮನೈದೆ ಭೇದಿಪೊಂ |
ದಿರವೆ ಪೊದಳ್ದ ಜಾನಮೆನೆ ದುರ್ಜನತಾಪಸನೇಂ ಕೃತಾರ್ಥನೋ || ೪೦

ಕಂ|| ಕಡಿವಡೆದುದೊ ಸಂಜಿನ ಮು |
ಳ್ಪುಡಿದುದೊ ಕಾರ್ಬೊನ್ನ ಸರಲೆ ಕೀಲಿಸಿದುದೊ ಮೇ ||
ಣಡರ್ದುದೊ ಮೂಕಗ್ರಹಮೆನೆ |
ಮಿಡುಕದು ಖಳರಸನೆ ಸುಕವಿ ಕಾವ್ಯಸ್ತವದೊಳ್ || ೪೧

ಇಲ್ಲದ ದೋಷಮ ನಲ್ಲಿಯೆ |
ಸೊಲ್ಲಿಪನದನೆಲ್ಲಿ ತರ್ಪ್ಪನೋ ಖಳ ನಿದ ನೆ ||
ನ್ನಲ್ಲಿ ನೆರೆ ತಿಳಿದೆ ನಬ್ಧಿಯೊ |
ಳಿಲ್ಲದ ವಿಷಮಂ ಮಹಾಹಿಯೇಂ ತೋರದೆ ಪೇಳ್ || ೪೨

ಖಲಕರ್ಣ ಬಿಲದೊಳಿಳಿದು |
ಜ್ಜ್ವಲಕೃತಿರಸದಿಂದೆ ಸಂದಿತಕ್ಕುಂ ದ್ವೇಷ ||
ಜ್ವಲನ ಮದಲ್ಲದೆ ತನ್ಮುಖ |
ವಲಯಮನಾವರಿಸಿ ಪೊಗೆಯದೇಂ ತೋರುಗುಮೇ || ೪೩

ಘನಮಾರ್ಗಸುಭಗೆ ಸತ್ಕಾಂ |
ತಿನಿಯುಕ್ತಂ ವಿಗತದೋಷ ಮಮೃತರುಚಿಸ್ಫೂ ||
ರ್ತಿ ನವೀನಕಾವ್ಯರವಿ ದು |
ರ್ಜನಘೂಕವ್ರಜಕಸಹ್ಯಮಂ ಪುಟ್ಟಿಸುಗುಂ || ೪೪

ತಿಳಿದನಿತ ನನುಭವಿಸಿ ನೆರೆ |
ತಿಳಿಯದುದಂ ತಿಳಿದರಿಂದೆ ತಿಳಿವುದು ಕೃತಿಯೊ ||
ಳ್ಪೊಳೆವ ರ್ಥಮ ನದನೆ ಖಳಂ |
ತಿಳಿಯದೆ ತಾಂ ಪಳಿಯೆ ಪಳಿಗೆ ಪಕ್ಕಾಗಿರನೇ || ೪೫

ಸಲೆ ಸತ್ಕೃತಿಯೊಳ್ದೋಷಮ |
ನಲಸದೆ ನಡೆ ನೋಡಿನೋಡಿ ಕಾಣದೆ ಮನದೊ ||
ಳ್ಮಲಮಲನೆ ಮರುಗುವೀ ಕೋ |
ಟಲೆಯಿಂ ಖಳನೆಂತು ಬರ್ದುಕುವಂ ಭೂತಳದೊಳ್ || ೪೬

ಅದರಿಂ ದೋಷಾಭಾಸಮ |
ನೊದವಿಪ ರೊಂದೆಡೆಗೆ ದುರ್ಜನಸ್ತುತ್ಯತು ಎಂ ||
ಬುದನನುಕರಿಸಿ ಕವೀಂದ್ರ |
ರ್ಪ್ಪದಪಿಂ ಕೃತಿಯೊಳ್ಪರೋಪಕೃತಿ ಪರತಂತ್ರರ್ || ೪೭

ಕಂ|| ಪಳಿಯಲ್ಬಲ್ಲಂ ನೆಗೆಳ |
ಲ್ಕಳನೇಂ ಬಲ್ಲನೆ ನವೀನಕಾವ್ಯಮ ನಿಳೆಯೊಳ್ ||
ತೊಳಗುವ ರವಿಯಂ ಮುಸುಳಿಪ |
ಜಳಧರಮುದರಂತೆ ಜಗಮನೇಂ ಬೆಳಗುಗುಮೇ || ೪೮

ಸುಕವಿ ಗುಣ ರಚಿತ ಕೃತಿ ಚಂ |
ಪಕಮಾಲಿಕೆಗಕಟ ಮಳಿನನಮಳಿನ ಸುಮನಃ ||
ಪ್ರಕರಮು ನಲೆದೆರಗುವ ಧೂ |
ರ್ತಕದಂಬ ಭ್ರಮರ ನಿವಹಮೇ ನೆರಗುಗುಮೇ || ೪೯

ರಸಿಕಕವಿ ರಚಿತ ಕೃತಿ ಮಾ |
ನಸದೊಳ್ವಿಹರಿಪ ವಿದಗ್ಧ ವಿಮಳ ಮರಾಳಂ ||
ವಸಿಯಿಕ್ಕುಮೆ ಕುಕವಿಕೃತಕೃತಿ |
ವಿಸರತ್ಪಲ್ವಲದೊಳ ಬುಧಬಕಸೇವಿತದೊಳ್ || ೫೦

ವೃ || ಒರೆಯೆ ಸುವರ್ಣರೇಖೆ ಮಿಗೆ ಬಾಗದೊಡಂ ಪೊಸಚಿನ್ನದಂತೆ ಕಂ|
ಡರಸಿದೊಡಿಕ್ಷುಕಾಂಡಮೆನೆ ಸೀಯ್ಯನೆ ಸದ್ರಸ ಮುಣ್ಮದಿರ್ದೊಡಂ ||
ಸರಗೊಳಿಸುತ್ತೆ ತಾಳೆ ಮಣಿಮಾಲಿಕೆಯಂತೆ ಕೊರಲ್ಗೆ ಕಾಂತಿಯಂ |
ನೆರಪದೊಡಂ ರಸಜ್ಞಸುಮನೋಜ್ಞಮೆ ಕಾವ್ಯಮದುಂ ಧರಿತ್ರಿಯೊಳ್ ||೫೧

ಕಂ|| ಕವಿ ವಿಬುಧರ ಕಿವಿಯೊಳ್ಸೂ |
ಸುವ ನವರಸಮಿಳಿದು ತೀವಿ ತನುವಂ ಮನವಂ ||
ಕವಿದು ಪೊರಸೂಸಿತೆನೆ ಪೊ |
ಣ್ಮುವ ಸುಖಬಾಷ್ಪಂ ತುಳುಂಕೆ ಪೇಳ್ವುದು ಕೃತಿಯಂ || ೫೨

ವೃ||ಶಿವವಕ್ತ್ರೋಥಭಸ್ಮರೇಣುಪ್ರಭವ ನೆನಿಸಿಯುಂ ರೇಣುಕೇಶಾಖ್ಯೆಯಂತಾ
ಳ್ದವನೀರಕ್ಷಾರ್ಥ ಮೀಶಂ ಬೆಸಸೆ ಧರಣಿಯೊಳ್ಕೊಲ್ಲಿಪಾಕೀಶನೋಳ್ಸಂ ||
ಭವಿಸುತ್ತುಂ ಜಂಗಮಾಕಾರದೆ ಸುಳಿದಖಿಳ ಕ್ಷೇತ್ರಮುಂ ಪಾವನಂ ಗೆ |
ಯ್ದು ವಿಶೇಷೌನ್ನತ್ಯದಿಂ ಕುಂಭಜಮುಖಮುನಿಪವ್ರಾತಮಂ ಬೋಧಿಸುತ್ತಂ||

ಖಗತಿಯೊಳೈದಿ ಲಂಕೆಗೆ ವಿಭೀಷಣ ನಿಷ್ಟಮನಿತ್ತು ಸಿದ್ಧರಂ |
ಬಗೆಗೆಡಿಸುತ್ತೆ ಬಿಜ್ಜಳನ ನಳ್ಕಿಸಿ ನೇತ್ರಮನಿತ್ತು ತೆಲ್ಲಿಗಂ ||
ಗೆ ಗರುಡವಾಹಕಂಪನಮ ನಿಲ್ಲೆನಿಸುತ್ತೆ ನಿಜೋರುತೇಜದಿಂ |
ದಗಣಿತಮಾದ ಪೆಣ್ಸೆರೆಗಳಂ ಬಿಡಿಸುತ್ತುರು ವಿಕ್ರಮಾರ್ಕನಾ || ೫೪

ವೃ|| ಅಭಿಮತವಿತ್ತು ಖರ್ಪರನ ಭಂಗಿಸಿ ಯಕ್ಷನ ರಕ್ಷಿಸುತ್ತೆ ಬಂ |
ದಭವ ನನುಜ್ಞೆಯಿಂ ಮದುವೆನಿಂದು ಮಹೇಶ್ವರ ಪುತ್ರಿಯರ್ಕಳೊಳ್ ||
ವಿಭವದೆ ತದ್ವಧೂತತಿಯೊಳಗ್ಗದ ಭೋಗಮನಾಂತು ರೇವಣ |
ಪ್ರಭು ಪಡೆದಂ ಮಹೋತ್ಸವದೆ ರುದ್ರಮುನೀಶ್ವರ ನೆಂಬಪುತ್ರನಂ || ೫೫

ಕಾರುಣ್ಯಂಗೆಯ್ದು ಸದ್ದೀಕ್ಷೆಯ ನೆಸಗಿ ಲಸಚ್ಚಿತ್ಕ್ರಿಯಾಮಾರ್ಗಮಂ ಪೇ|
ಳ್ದು ರಾಜತ್ಸೂನುಗಾಚಾರ್ಯತೆಯ ನೊಸೆದು ತಾನಿತ್ತು ಮೀಶಾಜ್ಞೆಯಿಂದಿಂ||
ತೀರೇಳ್ನೂರ್ವರ್ಷ್ಸರಂಗಳ್ನೆರೆಯೆ ಭರದೊಳಾ ಕೊಲ್ಲಿಪಾಕೀಶನೊಳ್ಪೊ |
ಕ್ಕಾಕರಾಧ್ಯಂ ಮುಕ್ತಿರಾಮಾ ರಮಣನೆನಿಸಿದಂ ರೇಣುಕಾಚಾರ್ಯ ವರ್ಯಂ ||

ರುದ್ರಮುನೀಂದ್ರ ನಾಮ ಮುನಿಮುಖ್ಯ ನಿಳಾತಳದಲ್ಲಿ ಪೆಮ್ರ್ಮೆವೆ |
ತ್ತದ್ರಿಜೆಯಾಣ್ಮ ನಗ್ಗದ ಮಹತ್ತ್ವಮನೆಲ್ಲೆಡೆಯಲ್ಲಿ ತೋರುತುಂ ||
ಕ್ಷುದ್ರಮತಂಗಳಂ ಜಯಿಸಿ ಬೆಳ್ಗಸ ಮೆಣ್ದೆಸೆದೀವೆ ಸಂತತಂ |
ಭದ್ರಚರಸ್ವರೂಪ ನೆಸೆದಂ ನಿಗಮಾಗಮ ಶಾಸ್ತ್ರಪಾರಗಂ || ೫೭

ಆ ಗುರುನಾಥವಂಶದೊಳೆ ಪುಟ್ಟಿದ ನೊರ್ವ್ವನಖರ್ವ್ವಸರ್ವ್ವಶೈ |
ವಾಗಮವೇದಿ ನಿರ್ಜ್ಜಿತಮನೋಜ ನಿಳಾತಳರುದ್ರಮೂರ್ತಿ ಸ ||
ದ್ಯೋಗಿವರೇಣ್ಯ ನಾನತಸುರಾಗನ ರಾಗನ ಗಣ್ಯಪುಣ್ಯಶೋ |
ಭಾಗತ ವಿಗ್ರಹಂ ವಿಪುಳಶೈವ ಸುಧಾಂಬುಧಿ ಶರ್ವರೀಶ್ವರಂ || ೫೮

ಜ್ಞಾನನಿದಾನ ನಾನತಜನಪ್ರಸರಾಮರಭೂರುಹಂ ಸುಧಾ |
ಭಾನುಸಮಾನಕೀರ್ತಿ ಶಿವಮೂರ್ತಿ ಮುನೀಶ್ವರ ಚಕ್ರವರ್ತಿ ಧಾ ||
ತ್ರೀನವಿತಾನ ಮಾನಿತಪದಂ ಪದೆದೊಪ್ಪಿದನುತ್ಪ್ರಭಾವನು |
ದ್ಧಾನನವೀನ ನಾಮಚರಪುಂಗವನಂಗಜಮಾನಮರ್ದನಂ || ೫೯

ಆ ಶಿವಯೋಗಿ ಹಸ್ತಕಮಲೋದರದೊಳ್ಮಿಗೆ ಪುಟ್ಟೆ ಭಕ್ತಿಯಿಂ |
ಶ್ರೀ ಶಿವನಂಘ್ರಿಯಂ ಭಜಿಸಿ ತತ್ಕೃಪೆಯಿಂ ಘನಶಿಷ್ಯವೃಂದಮಂ ||
ದೇಶಿಕಶೇಖರಂ ಪಡೆಯುತಾತ್ಮ ಸಮಾನರ ನುರ್ವಿಗನ್ನದಾ |
ನೀಶನೆನಿಪ್ಪನಾಮ ಮಭಿರಾಮತೆ ವೆತ್ತಿರೆ ಶೋರ್ದ್ದನೂರ್ಜಿತಂ || ೬೦

ಶಿವನ ಗುಣಂ ಪುರಾಂತಕನ ವಿಕ್ರಮ ಮಿಂದುಕಳಾಕಪರ್ದನು |
ತ್ಸವ ಮಹಿರಾಜಭೂಷಣನ ಮೈಮೆ ಮಹೇಶನ ಭಾಗ್ಯ ಮಂಬಿಕಾ ||
ಧವನ ಜಸಂ ಗಿರೀಶ್ವರನ ಗೌರವ ಮೊಬ್ಬುಳಿಗೊಂಡು ಪುಟ್ಟಿದಂ |
ತೆವೊಲೊಗೆದಂ ತದೀಯ ಕರಕಂಜದೆ ರೇವಣಸಿದ್ಧ ದೇಶಿಕಂ || ೬೧

ಕಂ|| ಧರಣೀರಮಣೀ ಹೃದಯಾಂ |
ಬುರುಹದವೋಲ್ಮೆರೆದು ತೋರ್ಪ್ಪ ದನುಗೂರೊಳ್ಪಾ ||
ಸುರಕರ್ಣಿಕೆಯೆನೆ ರಾಜಿಪ |
ವರ ಮಠದೊಳ್ಪರಮಹಂಸನೆನೆ ರಂಜಿಸಿದಂ || ೬೨

ವೃ|| ಶಿವಪೂಜಾರತಿಯಿಂ ರತೀಶ್ವರಜಯಪ್ರಾಗಲ್ಭ್ಯಸದ್ವೃತ್ತಿಯಿಂ |
ವಿವಿಧಾಮ್ನಾಯವಿಚಾರದಿಂ ಶರಣಗೋಷ್ಠೀ ಸಾರ ಸಲ್ಲಾಪದಿಂ ||
ಭುವನಸ್ತುತ್ಯ ನಶೇಷ ಶಿಷ್ಯತತಿಯಿಂ ತಾನೊಪ್ಪಿದಂ ಶಂಭು ಸಂ |
ಭವ ತದ್ರೇಣುಕರೂಪ ರೇವಣಮಹಾಯೋಗೀಂದ್ರ ಪಂಚಾನನಂ || ೬೩

ಕಂ|| ವರವಾಣಿ ವಿಬುಧಸೇವಿತ |
ಚರಣಂ ಕಲ್ಯಾಣಗರ್ಭನಾಗಿಯುಮಜನಂ ||
ತಿರೆ ಜಡಜಜ ನೆನಿಸದೆ ತ|
ದ್ಗುರು ಕರ ಕಂಜಾತ ಜಾತ ನೆನಿಸಿದ ನೀತಂ || ೬೪

ವೃ|| ಮಣಿಯದ ಮಾನ್ಯರಿಲ್ಲ ತಲೆವಾಗದ ವಾದಿಗಳಿಲ್ಲ ಬಂದು ಸಂ |
ದಣಿಸದ ಸಂತರಿಲ್ಲ ನಡೆ ನೋಳ್ಪೊಡೆ ಬಾರದ ರಾಜರಿಲ್ಲ ಕೂ ||
ರ್ತೆಣಿಸದ ಧೀರರಿಲ್ಲ ನುತಿಗೆಯ್ಯದ ಕಬ್ಬಿಗರಿಲ್ಲ ಸಾರ ಸ |
ದ್ಗುಣಮ ನೆನಲ್ಧರಾ ತಳದೊಳೊಪ್ಪಿದನಾ ಚಿಕವೀರದೇಶಿಕಂ || ೬೫

ಕ್ಷೀರ ಪಟೀರ ಹೀರ ಘನಸಾರ ಸುಶಾರದ ನೀರದೋರು ಮಂ |
ದಾರ ತುಷಾರ ವಾರ ವರಹಾರ ಸರೋರುಹ ಸಾರಸಾರಿ ಬೃಂ ||
ದಾರಕ ವಾರಣಾ ರುಚಿರ ನಾರದ ತಾರ ಸವಿರಾರಭುಗ್ವರೋ |
ದ್ಗಾರ ಯಶಂ ವಿರಾಜಿಸಿದು ದೆಣ್ದೆಸೆಯೊಳ್ಚಿಕವೀರ ದೇವನಾ || ೬೬

ಜನಸುತ ಶಾಂತಿಭೂಷಣ ಜಗಜ್ಜನ ವಂದ್ಯನ ಧರ್ಮಪೂರ್ಣಕೋ |
ಶನ ಧರಣೀಶಪೂಜ್ಯನ ಶುಭಾವಹ ಭಾವನ ಶೈವಪಾರಿ ಜಾ ||
ತನ ಮಧುರಸ್ವಭಾವನ ಮಹಾಮಹಚಿತ್ತನ ಮನ್ತ್ರಧಾರಿ ರೂ |
ಪನ ಚಿಕವೀರದೇವನ ಚಿದಂಬರ ಶಂಬರಜಾತ ಮಿತ್ರನಾ || ೬೭

ಕರಕಂಜಾತ ಸುಜಾತ ನುತ್ತಮ ಜನಾನಂದಾಬ್ಧಿ ರಾಕಾಸುಧಾ |
ಕರ ನುದ್ಯತ್ಕವಿತಾಲತಾರ್ಜಿತ ಯಶಃಪುಷ್ಪೋದಯಂ ಸಾಂಬ ಶಂ ||
ಕರಪಾದಾಬ್ಜ ಮಧುವ್ರತಂ ಸು ಕವಿವೃಂದಸ್ತೋತ್ರಪಾತ್ರಂ ಷಡ |
ಕ್ಷರದೇವಂ ಸರಸಪ್ರಬಂಧ ಸುಭಗಾಂಭೋಜ ಪ್ರಭಾವಲ್ಲಭಂ || ೬೮

ಕಂ|| ಜಸವೆತ್ತು ಪೆರ್ಮೆ ಮಿಗೆ ದಂ |
ಜಿಸೆ ವಸುಧಾತಳದೊ ಳಖಿಳ ಕಳೆಗಳ ನೊಳಕೊಂ ||
ಡೆಸೆವ ಬುಧರಾಜ ರಾಸಂ |
ದಿಸಿ ಸಲೆ ಕೊಂಡಾಡಿ ಕೂರ್ಮೆಯಿಂ ದಿಂತೆಂದರ್ || ೬೯

ಎಳವರೆಯದೊ ಳಖಿಳ ಕಳಾ |
ವಿಳಾಸಮಂ ಕಂಡು ಮಚ್ಚಿ ಬರೆ ಕವಿತಾಕೋ ||
ವಿಳೆ ಯವಳ್ಗಿರ್ದೆಯಿತ್ತುಂ ಯತಿ |
ತಿಳಕಂ ನೀನೆನಿಪುದಿಳೆ ಗಿದಚ್ಚರಿಯಲ್ತೆ || ೭೦

ಇಂಗಡಲೊಡನಾಡಿಯೊ ಸೆರೆ |
ದಿಂಗಳಸೋದರಮೊ ಸುದತಿಯಧರಾಮೃತದಿಂ ||
ಪಿಂಗಿದು ಗುರುವೊ ಸುಧಾರಸ |
ಮಂ ಗೆಲ್ದಂಕವೊ ಭವದ್ವಚಸ್ಸಮುದಯವೋ || ೭೧

ವೃ|| ನಿನಗೆ ನಿಸರ್ಗಮಲ್ತೆ ನಿರಹಂಕೃತಿ ನಿರ್ಮಲಬುದ್ಧಿ ಶುದ್ಧವ |
ರ್ತನೆ ಶಿವಯೋಗಮಾಗಮವಿಚಾರರತೆ ಸದ್ಗುರುಭಕ್ತಿ ಶೈವಕಾ ||
ವ್ಯನಿವಹ ಸತ್ಪುರಾಣತತಿ ತರ್ಕಸಮಂಚಿತ ಷಟ್ಸ್ಥಲಾಂಕ ಶಾ |
ಸ್ತ್ರನಿಚಯ ಸಾರದರ್ಶನ ಮಿಳಾಪತಿ ಪೂಜಿತ ಪಾದಪಂಕಜಾ || ೭೨

ವಚನ|| * ಎಂದು ಮನಂದಂದು ಕೀರ್ತಿಸಿ ಮತ್ತಮಿಂತೆಂದರ್ *—

ಶ್ರೀಮತ್ಕೈಲಾಸದೊಳ್ಶಂಕರನಿರೆ ಸಭೆಯೊಳ್ಬಂದು ಮೆಯ್ಯಿಕ್ಕಿಬೊಮ್ಮಂ |
ಸ್ವಾಮಿ ಶ್ರೀಕಂಠ ನಿಮ್ಮಾಜ್ಞೆಯೊಳೆ ಗುಹನನೊಲ್ದೋದಿಸಲ್ಕೆಂದು ಮುನ್ನಾಂ||
ಪ್ರೇಮಂಬೆತ್ತೊತ್ತುವೋಂಕಾರಮನೆ ಬರೆಯೆಕೋರೆರ್ಥೀಸ್ಯಮೇ ಬ್ರೂಹಿಯೆಂದೆಂ।
ಬೀಮಾತಂ ಪೇಳೆ ಮುಂ ಕೇಳ್ವುದು ಲಘುವೆನೆ ಪೊಯ್ದಂ ಕಶಾದಂಡದಿಂದಂ||

ಕಂ|| ವೇದಾಂಗವದನ ನಿವನೊ |
ಳ್ವಾದಿಸುವುದಯುಕ್ತಮೆಂದು ತತ್ಪ್ರಣವಕ್ಕಾ ||
ನೋದಿದೆ ನುಚಿತಗ್ರಂಥಮ |
ನಾದರದಿಂ ದೇವ ಪನ್ನೆರಳ್ಸಾಸಿರಮಂ || ೭೪

ವೃ|| ಆದನಾಕರ್ಣಿಸಿ ಜಾಡ್ಯಬುದ್ಧಿ ತೊಲಗೆಂದೇಳ್ತಂದನಿಲ್ಲಿಂದೆ ಮೇ |
ಲೆ ದಯಾವಾರಿಧಿ ನೀಂ ನಿರೂಪಿಸನೆ ಕೇಳೆಂದೋದಿದಂ ಶಂಭು ಸಂ ||
ಮುದದಿಂ ದ್ವಾದಶಲಕ್ಷಮಂ ಪ್ರಣವದರ್ಥಗ್ರಂಥಮಂ ಕೇಳ್ದು ಷ |
ಡ್ವದನಂ ದ್ವಾದಶಕೋಟಿಯುಂಟೆನೆ ಮಹೇಶಂ ಮೆಚ್ಚಿ ಸಂಪ್ರೀತಿಯಿಂ|| ೭೫

ವೃ || ಅಂದಗಜಾತೆಗಾ ನೊರೆವ ಕಾಲದೊಳಾಲಿಸಿ ಬಾಲನೀಕುಮಾ |
ರಂ ದಿಟಮಂತದಂ ಮರೆದನಲ್ಲೆಸುತಃಂ ಪೊಗಳ್ದಲ್ಲಿ ಪೋಗು ಸೈ ||
ಪೊಂದಿದ ಚೋಳಮಂಡಳದ ಶೈವಸಮೂಹಕೆ ಮಂತ್ರದರ್ಥಮಂ |
ಕುಂದದೆ ಬೋಧಿಸೆಂದುಸಿರ್ದು ಕಂಜಜನಂ ಕರೆದೊಲ್ದು ಶಂಕರಂ || ೭೬

ವಾಗೀಶಾಹ್ವಯಮಾಂತು ಪುಟ್ಟಿ ತಿಳಿ ನೀನೀಮಂತ್ರದರ್ಥಂಗಳಂ |
ಪೋಗೆಂದಂ ದೊಡಗೂಡಿ ಮೇಣ್ಕಳಿಪೆ ಚೋಳೋರ್ವೀತಳಕ್ಕೈದಿ ಸ ||
ದ್ರಾಗಂ ಕೈಮಿಗೆ ತಾಮಮಂಗರಿ ಪುವಾಗಳ್ಪಿನ್ನೆ ಸೈನಾರರಿಂ |
ಬಾಗಿದ್ದೋರಂ ದಿತಿಹಾಸಮಂ ದ್ರಾವಿಡಭಾಷಾಭೇದದಿಂ ಪೇಳಿದರ್ || ೭೭

ಆ ಕಥೆಯಂ ಕೃತಾರ್ಥಸುಮನೋಲತೆಯೆಂ ವರಮಲ್ಲಣಾರ್ಯರು |
ರ್ವೀಕವಿರಾಜರಾಜಿ ನುತಮಾಗಿರೆ ವರ್ಣಕದಿಂದೆ ಭಾವರ ||
ತ್ನಾಕರಮಾಗಿ ಪೇಳ್ದರದನೊಪ್ಪಿರೆ ವಸ್ತುಕಮಾಗಿ ಪೇಳ್ವುದಾ |
ಲೋಕಿತ ಕಾವ್ಯಬೃಂದದೊಳಗಿಲ್ಲದ ಮಂಜುಳಯುಕ್ತಿಪುಂಜದಿಂ || ೭೮

ವಚನ || ಎನೆ ಮನಂದಂದು—

ಕಂ|| ಮೃದುಮಧುರ ಪದವಿಲಾಸಾ |
ಸ್ಪದ ರಸ ವಿಸರ ಪ್ರಕಾಶ ಕರ್ಣಾಟಕವಿ ||
ತ್ವದೊಳೊರ್ವ್ವನೆ ಪೆಸರ್ವಡೆದ |
ಗ್ಗದ ಹರಿಹರ ಸುದಿತಮಾರ್ಗದಿಂದಿದನೊರೆವೆಂ || ೭೯

ಮೊದಲೊರೆದ ಕೃತಿಗಳಿರೆ ಪೇ |
ಳ್ವುದು ಮೆರೆಯುವಿದೆನ್ನದಿರ್ಕ್ಕೆ ವಿಬುಧವ್ರಾದಲ ||
ಗ್ಗದ ಸಕ್ಕದಮಿರೆ ಕನ್ನಡ |
ಮುದಯಿಸಿ ರಂಜಿಸದೆ ಕರ್ಣಕಮನೀಯತೆಯಿಂ || ೮೦

ಕಾವ್ಯಮೆನಿಸಿದ್ದು ವಿಬುಧ ಸು |
ಸೇವ್ಯಂ ಘನರಸಮಿದೆನಿಸಿ ಭಂಗವಿರಹಿತಂ ||
ಭವ್ಯಗುಣಮೆನಿಸಿ ಕುಜನಾ |
ಭಾವ್ಯಂ ಮತ್ಕೃತಿ ಚಮತ್ಕೃತಿ ಪ್ರದಮಲ್ತೆ || ೮೧

ವೃ|| ಸರಸಿಜದಂತೆ ಸಾರಗುಣ ಮರ್ಣವದಂತೆ ರಸಾರ್ದ್ರಮರ್ದನಂ |
ತಿರೆ ಘನಮಾರ್ಗಶೋಭಿ ವನಿತಾಜನದಂತಿರೆ ಭಾವಜಾತಿಬಂ ||
ಧುರ ಮಮರಾದ್ರಿಯಂತೆ ವಿಬುಧಾವಳಿಸೇವಿತ ಮಿಂದುಬಿಂಬದಂ |
ತಿರೆ ಸುಕರಪ್ರಸಿದ್ಧ ಮೆನಿಕುಂ ವಿಳಸಸತ್ಕೃತಿ ನ್ಮನೋಜ್ಞನಾ || ೮೨

ವೃ|| ಅತಿರಸವೃತ್ತ್ಯಲಂಕೃತಿ ಸಮನ್ವಿತ ಪದ್ಧತಿ ಸಾರವಿಜ್ಞಮ |
ತ್ಕೃತಿಕರ ಭಾವಸಂಗತ ನವೀನಗುಣೋನ್ನತಿ ಸತ್ಕವೀಂದ್ರಸಂ ||
ತತಿ ಸರಸೋಕ್ತಿಸನ್ನುತಿ ಬುಧವ್ರಜಸಂಮತಿ ಮಂಜುಳಾರ್ಥಸು |
ಸ್ಥಿತಿ ನವರೀತಿ ಸದ್ರತಿಯೊಡಚ್ಚರ್ವುದೀಕೃತಿ ಸದ್ಗುಣಾಂಕನಾ || ೮೩

ತೆಂಬೆಲರಂತೆ ತುಂಬುವೆರೆಯಿಂ ಪೊರೆವೊಣ್ಮುವ ಜೊನ್ನದಂತೆ ಪೆ |
ಣ್ದುಂಬಿಯ ಗಾನದಂತೆ ಪೊಸಪುಗ್ಗಿಯ ನಂಡನದಂತೆ ಸಲ್ಮೆಯಿಂ ||
ದಂ ಬಿಗಿದಪ್ಪಿದಂಗನೆಯ ಪೆರ್ಮೊಲೆಸೋಂಕಿನ ಸೌಖ್ಯದಂತೆ ಚಿ |
ತ್ತಂ ಬಿಡಿದಪ್ಪುದೀಕೃತಿ ಷಡಕ್ಷರದೇವಕೃತಂ ರಸಜ್ಞರಾ || ೮೪

ನುತರಸಸಂಪದಂ ಪದಮುದರ್ಥಸಮನ್ವಿತ ಮರ್ಥಮಾರ್ಯಸಂ |
ಮತಗುಣರಂಜಿತಂ ಗುಣಮುದಾತ್ತನವಸ್ಥಿತಿ ವೃತ್ತಿ ವೃತ್ತಿ ನಿ ||
ರ್ಮಿತ ಸರಸಾನುಭಾವ ಮುರುಭಾವ ಮುದಂಚಿತ ರೀತಿ ರೀತಿವಿ |
ಶ್ರುತಸದಲಂಕೃತಿ ಸ್ಫುರದಲಂಕೃತಿ ರಂಜಿಪುದೀ ಪ್ರಬಂಧದೊಳ್ || ೮೫

ಕಂ|| ವಿತತಪುರಾತನ ಕವಿಕೃತ |
ಕೃತಿ ಭೂಷಣ ಭೂಷಿತಾಂಗಿ ಭಾರತಿ ಭುವನ ||
ಸ್ತುತ ಕಾಂತಿ ಗುಣವಿಳಿತ ಮ |
ತ್ಕೃತಿ ನವಸೀಮಂತರತ್ನಮಂ ತಳೆದೆಸೆವಳ್ || ೮೬

ವೃ|| ಕಡೆಗಾಣಗ್ಗಡ ವಿಷ್ಣು ಮುಖ್ಯ ವಿಬುಧರ್ಕಲ್ಪಾಂತಪರ್ಯಂತಮಾ |
ಮೃಡಮಾಹಾತ್ಮ್ಯಮ ನಾಗಳುಂ ಪೊಗಳ್ದು ಮೆಂದೆಂಬಾಗಳಾಂಪೇಳ್ವೆನಂ||
ದೊಡೆ ಕಿಂಚಿದ್ಜ್ಞನದೆಂತು ತೀರ್ದಪುದೊ ಮೇಣಂತಾದೊಡಂ ತಚ್ಛಲಂ |
ಬಿಡಿದಿಂದಾಗಿಪೆ ನನ್ನ ಮೆಲ್ನುಡಿಗೆ ಬಲ್ಲರ್ಮೆಚ್ಚೆ ಸಾಫಲ್ಯಮಂ || ೮೭

ಅನುಚಿತಮಲ್ತೆ ಯೋಗಿಜನಮಂಡನ ನೀಂ ಕೃತಿವೇಳ್ವುದಿಲ್ಲಿಕೇ |
ಳ್ಮನಸಿಜಕೇಳಿಮುಖ್ಯ ಜನರಂಜನ ವರ್ಣನೆಗೈವುದೆಂದು ಸ ||
ಜ್ಜನರಿದ ನೆನ್ನದಿರ್ಕೆ ಶಿವಯೋಗಿ ಹರೀಶ್ವರ ಮಲ್ಲಣಾರ್ಯರಿಂ |
ಪಿನ ಪೊಸಕಬ್ಬಮಂ ನೆಗೆಳ್ದ ರಾಸವರಂತಿರೆ ಪೇಳ್ವೆನಿಂತಿದಂ || ೮೮

ಕಂ || ನರನೊರ್ಮ್ಮೆ ನೆನೆಯೆ ಸಲೆ ಶಂ |
ಕರನಂ ನೆರೆ ಮಾಳ್ಪ ಮಹಿಮೆಯುಂ ತಳೆದ ಷಡ ||
ಕ್ಷರಮಂತ್ರ ಡಮಳ ಕಥನಮ |
ನೊರೆ ವೆನ್ನಿಂದಸ್ಯರೊಳರೆ ಧನ್ಯರ್ಜಗದೊಳ್ || ೮೯

ವಚನ || ಅದೆಂತೆಂದೊಡೆ—

ವೃ|| ಅಂಭಃಕುಂಭೀನ ಕುಂಭೀನಸ ಮಕರ ಮಹಾಕೂರ್ಮ ಕೀರೌರ್ಘೋರ್ಮಿಮಾ
ಜೃಂಭದ್ದಂಭೋಳಿಹಸ್ತಾಹತ ಚಕಿತ ಗತ ಕ್ಷ್ಮಾಭೃವಿಸ್ಫಾರವಿದ್ಯು || [ಲಾ
ತ್ಸಂಭಿನ್ನಾಂಭೋಭೃದುದ್ಯತ್ತಟಚಟುಳಚಳನ್ಮೀನಫೇನಪ್ರತಾನಂ |
ಶುಂಭದ್ಗಂಭೀರಿಮಂ ರಂಜಿಸಿದುದಮಮ ದತ್ತೇಂದ್ರಭದ್ರಂ ಸಮುದ್ರಂ ||೯೦

ಕಂ|| ಯಮುನಾನದಿ ರೋಮಾಳಿವೊ |
ಲಮರೆ ಮಹೀ ರಮಣಿ ನಿಜಮಹೀಧರ ಜಘನ ||
ಕ್ಕೆ ಮುದಂ ಮಿಗೆ ತೆಗೆದುಟ್ಟವೊ |
ಲೆ ಮನೋಜ್ಞಾಂಬರಮ ನೆಸೆದುದಂಬುನಿಧಾನಂ || ೯೧

ವಚನ || ಮತ್ತಮಲ್ಲಿ —

ಕಂ || ತನುಜನ ತೇಜಮನಪಹರಿ |
ಪನಿವನೆನುತ್ತಬ್ಧಿ ಮುಳಿದು ಸಂಧ್ಯಾರುಣ ಸೂ ||
ರ್ಯನ ಕಿರಣಮನುರೆ ಸೆರೆವಿಡಿ |
ದನೆನೆ ವಿರಾಜಿಪುದು ವಿದ್ರುಮಂ ಸದ್ರುಚಿಯಿಂ || ೯೨

ಜಲಕರಿನಿಕರಂ ಪುಷ್ಕರ |
ಮಲರೆ ಕರಂ ನಿಮಿರೆ ಪೂತ್ಕರಿಸೆ ಸಿಡಿದ ಲಸ ||
ಜ್ಜಲಕಣಮ ನಮಳಮುಕ್ತಾ |
ಫಳಮೆಂದುರೆ ಮುಗ್ಧ ಖಚರಿಯುಕ್ಕೈರ್ಯಿಡುವರ್ || ೯೩

ಪಡೆದುದುಗಡ ಮೊದಲಿಂದುವ |
ಕಡಲಿದು ಮೇಣೆಂದು ಪಡೆದು ದುಡುವಿತತಿಯನೆಂ ||
ಬೆಡೆಗೆಡೆಯಾದುದು ಜಡನಿಧಿ |
ಸಿಡಿ ದೆಡೆವಿಡಿದಿಡಿದ ವಾರಿಕಣಗಣದಿಂದಂ || ೯೪

ಎಲೆ ಜಲಧಿ ಜಿಷ್ಣುಚಕಿತಾ |
ಚಲಪಾಲಕ ಕಾವುದೆಮ್ಮನೆನುತುಂ ಕರ್ಗ್ಗ ||
ಳ್ತಲೆ ಖರಕರಕರಭಯವಿ |
ಹ್ವಲಮಿರ್ಪ್ಪಂ ತದರತೀರದೊಳ್ಮುಗಿಲೆಸೆಗುಂ || ೯೫

ಜಲನಿಧಿ ಜಲಮಂ ಜಲಭೃ |
ತ್ಕುಲಕ್ಕೆ ನಲಿದಿತ್ತುದತ್ತ ಮಿತ್ತನದೀ ನಿ ||
ರ್ಮಲ ಸಲಿಲಂ ದೊರೆದುದು ಗಡ |
ನೆಲದೊಳ್ಕೊಟ್ಟಂಗೆ ಬಡತನಂ ಬಂದಪುದೇ || ೯೬

ಕಂ॥ ಘನದ ಬರವ ಪ್ರಯೋಜನ |
ಮೆನುತರಿದುಂ ಜಡಧಿ ಜಡಮನಿತ್ತುದದಂ ನೆ ||
ಟ್ಟನೆ ಪೊತ್ತುದು ಜಳದಂ ವ್ಯ |
ರ್ಥನಿಯುಕ್ತಮಿದೆಂದು ಬಗೆಪೊಡಿದು ಚಿತ್ರತರಂ ॥ ೯೭

ವೃ॥ ಜಲನಿಧಿ ಜಂಭವೈರಿಗರಿಯಂ ಗಿರಿಯಂ ಬಿಡು ಬೇಗಮೆಂದು ಜಂ |
ದುಲಿವವೊಲೊಪ್ಪೆ ಸುಸ್ತನಿತಮುಚ್ಚತಟಿತ್ಕರವಾಳನಾಂತ ತ ॥
ಜ್ಜಲದಭಟಂಗದಂ ಕುಡದೆ ತನ್ನಯ ಜೀವನಮಿತ್ತುದಬ್ಧಿ ಭೂ |
ತಲದೊಳೆ ಸತ್ವಶಾಲಿ ಪಗೆಗೇಂ ಮರೆವೊಕ್ಕನ ನೀಯಲಾರ್ಪನೇ ॥ ೯೮

ಕಂ॥ ಎಱಗಿದ ನಿರಿಮುಗಿಲೊಳ್ನೆರೆ |
ಮಿರುಗುವ ಮಿಂಚುಗಳ ಸುಡಿದು ಪಿಡಿದನೊ ಕಡುಪಿಂ ॥
ತೊರೆಯೆರೆಯಂ ತೆರೆಗೈಗಳಿ |
ಸುರದೆನೆ ಕೆಮ್ಮಿನ್ಗಳೇಂ ಮಸಂಗೊಳಿಸಿದುವೋ ॥ ೯೯

ವೃ॥ ಎನ್ನೊಳ್ಪುಟ್ಟಿದ ಚಂದ್ರನಿಂದೆ ಪಡೆಗುಂ ಸಸ್ಯಾಳಿ ಸಂಪತ್ತನಂ |
ತೆನ್ನೊಳ್ಪುಟ್ಟಿದ ಲಕ್ಷ್ಮಿಯಿಂದೆ ಪಡೆಗುಂ ಸೌಭಾಗ್ಯಮಂ ಧಾತ್ರಿ ಮೇ ॥
ಣೆನ್ನೊಳ್ಪುಟ್ಟಿದ ವಸ್ತುವಿಂದೆ ಪಡೆದಂ ಸರ್ವಾರ್ಥಮಂ ಜಿಷ್ಣು ತಾ |
ನೆನ್ನೊಳ್ಪೇಳ್ಸರಿಯಾವನೆಂ ದುಲಿವವೋಲುದ್ಘೋಷಿಕುಂ ಸಾಗರಂ ॥ ೧೦೦

ಅಳಿಯಂ ಪೂಗಣ್ಣ ನೆನ್ನೀಮಗಳೆ ಚಪಳೆ ಪುತ್ರಂ ಕರಂ ರಾಜಯಕ್ಷ್ಮ |
ಕುಳ ಸೆನ್ನೈಶ್ವರ್ಯಮಂ ನಿರ್ಜರರೆ ಕವರ್ದರೆನ್ನೊಳ್ವಿಸಂ ಪುಟ್ಟಿತೆನ್ನಂ ॥
ಕಳಶಪ್ರೋದ್ಭೂತ ನಂದೀಂಟಿದ ನಕಟ ಮಹಾಭಂಗಮಂ ತಾಳ್ದೆನೆಂದೆಂ |
ದೊಳಗಂಭೋರಾಶಿ ಚಿಂತಾಗ್ನಿಯನೆ ತಳೆದವೋಲೌರ್ವನಂತಸ್ಥಮಿರ್ಕುಂ ॥

ವ॥ ಮತ್ತಂ ತಡಿಗೊಂಡೆಡೆವಿಡದೆ ಮಡಲ್ತು ಬಳೆದ ತರುಣತಮಾಲತರು ವನದೊಳಿಡಿದು. ಕಡುಗೊರ್ಬ್ಬಿ ಪರ್ಬ್ಬಿದ ಮರ್ಬ್ಬು ಮಿಗವಕ್ಕೆಗನೊಳಾದ ಪಗೆತನಮಂ ಬಗೆಗೊಂಡು ತಜ್ಜನಕ ವನನಿಧಿಯಂ ಕನಲ್ದು ಸುತ್ತಮೊತ್ತರಿಸಿ ಮೊತ್ತಂಗೊಂಡು ಪತ್ತುಗೆ ಗುಂದದೊತ್ತಿ ಮುತ್ತಿದು ದೆಂಬೊಪ್ಪಮ ನಪ್ಪುಗೈಯ್ದಳಿಯ ಬಣ್ಣಮಂ ಪಳಿದು ನೀರುಣಲೆಂದು ಸಾರೆವಂದು ತೀರದೊಳ್ನಿಂದ ನೀರದಂಗಳ ವಾರದಿಂ | ಆನೀರದಂಗಳೊಳ್ವಾರಿವಾಹ ವಾಹನೊಳೊದವಿದ ವೈರದಿಂ ವಾರಿಧಿಯೊಳೊಕ್ಕ ಭೂರಿಭೂಧರಂಗಳ್ಪಳಂಚಲೆಂದು ಪಟುತೆಯಿಂದಿದಿರ್ಚ್ಚಿ ನಿಂದು ವೆಂಬಂತೆ ಸಾರ್ತ್ತಂದದಂ ಪ್ರತಿಗಜವ್ರಜಮೆಂದು ಸರಿಸದೊಳ್ನಿಂದು ಕೊಡಂಕೆ ಚಲಿಸೆ ಕೋಡಮೊನೆಯೊಳೀಡಿರಿಯೆ ಮುಗಿಲ್ಮುತ್ತುಗಳ್ವೆರಸು ಜಲಕಣಗಣಂ ಝಲ್ಲನುಗೆ ಮಿಂಗೆ ಮೆಱೆವಂಬು ಸ್ತಂಬೇರಮಂಗಳಿಂ | ಆಸ್ತಂಬೇರಮಂಗಳನಂಬುದಂಗೆತ್ತು ದಂತಕಾಂತಿಯಂ ಗೊಂ

ಚಲ್ಮಿಂಚೆಂದುಂ ಗರ್ಜನೆಯಂ ಪರ್ಜನ್ಯ ಜನ್ಯಧ್ವನಿಯೆಂದುಂ ಮುಂದುಗೆಟ್ಟು ತೊಟ್ಟನೆ ಕಂಡ ಕಡೆಗೆ ಬಡಬಂಗಳ್ಕಿ ಶಂಖಸಮುದಯಂ ನೆಗೆದು ಪೋಪಂತೆ ಬೆಗಡುಗೊಂಡು ನೆಗೆದು ತಳರ್ವ ತರುಣ ಮರಾಳಂಗಳಿಂ | ಆ ಮರಾಳಂಗಳ ಗರಿದುರುಗಲ ತುದಿಗಳಿಂ ಕೆದರ್ದುರುಳ್ವ ವಿಮಳ ಜಲಕಣಗಣಮಂ ಕಡಲೊಳ್ಬಡಬಾನಲಜ್ವಲಜ್ವಾಲೆಯಿಂ ಶುಕ್ತಿಪುಟಂಗಳೊಳ್ಬಳಿಲಿ ನೆನೆಸಿಡಿದೊಡೆ ದದರಿಂದುಚ್ಚಳಿಸಿ ದಚ್ಚ ಮುತ್ತಂದು ತುಡುಂಕಲವ್ವಳಿಪ ಖೇಚರಾಂಗನೆಯರಂ ನೆರೆನೆಗೆವ ನಿಡುಮಿಾನ್ಗಣಂಗಳಿಂ ಕಂಡು ಕೆಂಬವಳಮೆಂಬ ತಂಬುಲರಸಂ ಸೂಸೆ ಶುಕ್ತಿಯಿಂ ಪೊರಪೊಣ್ಮುವ ಸುಣ್ಮುತ್ತೆಂಬ ಸುಲಿಪಲ್ಲ ಸೂಸುವೆಳಗು ಥಳಥಳಿಸಿ ಪೊಳೆಯೆ ಬೆಳ್ನೊರೆಯೆಂಬ ಹಸನರುಚಿ ದೆಸೆದೆಸೆಗೆ ಪಸರಿಸೆ ತೊಳಪ ನೀಳ್ದೆರೆಯೆಂಬ ನಳಿತೋಳಸಿ ನೀಡಿ ನದೀನಾರಿಯ ರರುಣಸರಸಿಜ ಮೆಂಬ ಆರತಳಮಂ ಗಳಿಲನೆ ಪೊಯ್ದು ರಯ್ಯಮೆನೆ ಮೆಯ್ಯದಿರೆ ಮತ್ತೆ ಮತ್ತೆ ಮಾಣದೆ ಗಹಗಹಿಸಿ ನಕ್ಕಪನೆಂಬಂತೆ ಪವನಹತಿಪ್ರಚಲಿತ ತರಂಗ ಸಂಘ ಸಮುದ್ಘೋಷಣದಿಂ ತಳ್ತು ರತ್ನಾಕರಂ ರಮಣೀಯಮಾಗಿರ್ಪುದಂತು ಮಲ್ಲದೆ—

ವೃ|| ಪವಳಮೆ ನೀಳ್ದ ಕೆಂಜೆಡೆ ಮೊಗಂ ಶತಪತ್ರ ಮುದೀರ್ಣಫೇನಮೊ |
ಪ್ಪುವ ಭಸಿತಂ ಕರೋಟಿ ಸುಳಿ ಕಂಬು ಕದಂಬಕ ಮಸ್ಥಿಮಾಲೆಮಿಾ ||
ನ್ರವಿಮದ ಘೂರ್ಣಿತಾಕ್ಷಿ ಜಳಸರ್ಪನೆ ಕೂರಸಿ ವೀಚಿಬಾಹುವ |
ರ್ಣವ ನವ ಭೈರವಂಗೆ ಮಣಿಬುದ್ಬುದ ಕಿಂಕಿಣಿ ಕಣ್ಗೆ ರಂಜಿಕುಂ || ೧೦೨

ವಚನ || ಅಂತುಮಲ್ಲದೆಯುಂ—

ವೃ|| ಘುಳಿಘುಳಿಸುತ್ತೆ ಬರ್ಪತೆರೆಯಿಂ ಕರೆಯಿಂ ನೊರೆಯಿಂ ಬಿನೊಳ್ಕರಂ|
ಬಳಿದ ತಮಾಲ ನೀಲವನದಿಂ ಘನದಿಂ ಬಿನದಂಬುಗುತ್ತೆ ಸಂ ||
ಚಳಿಸುವ ಪೀನಮೀನಕುಲದಿಂ ಬಲದಿಂ ಜಲದಿಂ ಸಿಡಿಲ್ದನಿ |
ರ್ಮಳತರ ಶುಕ್ತಿಯಿಂದೆ ಹರಿಯಿಂ ಕರಿಯಿಂ ಗಿರಿಯಿಂದ ಮೊಪ್ಪುಗುಂ||೧೦೩

ವಚನ|| ಮತ್ತಮಾಸಮುದ್ರಂ ರುದ್ರನಂತೆ ವಿಷವಿಷಧರಭರಣನುಂ | ಸುಪರ್ಣಪಶಾಕನಂತೆ ಶಂಖಚಕ್ರಕರಾಂಬುಜ ಕಲಿತನುಂ | ವಿರಿಂಚನಂತೆ ಸುರಸಭಾಕಾಂತನು| ಮಮರಲೋಕದಂತ ನಿಮಿಷಸಂತಾನಾಶ್ರಯನುಂ | ಸುರಪಥದಂ ತುಡುಪತರಣಿಗಮನ ರಮಣೀಯನುಂ ದ್ವಿಪಪ್ರವಿಷ್ಟ ವನದಂತೆ ಸುಪ್ರವಾಳಭಂಗಭಾಸುರನುಂ | ಶರದ್ಘನದಂತೆ ಮುಕ್ತಾಂಬುಕಣ ಮನೋಹರನುಂ | ಭೂತಲದಂತ ಸದಾನದೀನತಾಸಹಿತ ನೆನಿಸಿರ್ದನಂತುಮಲ್ಲದೆ—

ವೃ|| ಯಮಿಯಂತಂಬರದಂತೆ ಹಂಸನಿಲಯಂ ಪದ್ಮಾಭಿರಾಮಂ ರಮಾ |
ರಮನಂತಾನಿಧಿಯಂತೆ ಪುಷ್ಕರಯುತಂ ಮತ್ತೇಭದಂತರ್ಕನಂ ||
ತೆ ಮಹಾಮಾರುತಿಯಂತೆ ಚೈತ್ರಕುಜದಂತುದ್ಯತ್ಪ್ರವಾಳಾಶ್ರಯಂ |
ಸುಮದಂತುತ್ತಮನಂತೆ ಸಂಭೃತರಸ ಶ್ರೀಗಾಗರಂ ಸಾಗರಂ || ೧೦೪

ವೃ॥ ಪೃಥುತರಮಧ್ಯಕಂಕಣಮೆ ಸುತ್ತಿದ ಪನ್ನಗನಾಗೆ ತತ್ಫಣಾ |
ಪ್ರಥಿತ ಸುರತ್ನಮಾಗೆ ಮಣಿಸಾಸು ಸುರರ್ಪ್ಪಿರಿದಾಸೆಯಿಂದೆ ಮೇ ||
ಣ್ಮಥಿಯಿಸಲೆಂದು ಮಂದರಮ ನಲ್ಲಿರದಿಟ್ಟ ರೆನಿಪ್ಪ ಭಾವಮಂ |
ಕಥಿಯಿಸುವಂತೆ ಮೇರು ಮೆರೆದಿರ್ದ್ದುದು ಮಧ್ಯದೊಳಾ ಪಯೋಧಿಯಾ೧೦೫

ಸುತನಕ್ಷತ್ರಾಚ್ಛಮುಕ್ತಾವೃತ ಮಮೃತ ಮಯೂಖಾರ್ಕ ಸದ್ದರ್ಪಣಂ ತ|
ದ್ಗತಶೃಂಗೋತ್ತುಂಗ ದಂಡಾಮರವರ ಸರಿದುದ್ಯದ್ಧ್ವಜಂ ರತ್ನರುಕ್ಚಿ ||
ತ್ರಿತ ಪಾಥೋಭೃತ್ಪಟಂ ಶಂಕರಗೃಹಕಲಶಂ ದೇವರಾಜಾದಿ ದೇವ |
ಪ್ರತಿಮಂ ಸ್ವರ್ಣಾಚಲಾ ಲಂಕೃತರಥಮೆಸೆ ದತ್ತೀಶ್ವರಾ ವಾಸಯೋಗ್ಯಂ ||

ಮೇವ ಮುಗಿಲ್ಗಳಿಂ ಮುಸುಕಿ ಮೋಹಿಪ ಭೂಧರಮೊಂದು ಪಕ್ಕದೊ |
ಳಾತ್ತವರೆ ಗಣ್ಣನಂತಿರೆ ಧರಾಧರಮೊಂದು ಸಧಾತು ನಿಂದ ವಾ ||
ಣೀಪರನಂತೆ ತಳ್ತಿರೆ ಮೊದಲ್ದುದಿಗಾಣಿಸದಿರ್ದ್ದ ಸಾಂದ್ರ ತೇ |
ಜೋವಹ ಲಿಂಗದಂತೆ ಕನಕಾಚಲ ಮುಜ್ಜ್ವಲ ಮಾದು ದುರ್ವ್ವಿಯೊಳ್||೧೦೭

ಕಂ || ಹರನಿರ್ಪ್ಪಗಿರಿ ಯಿದೆಂದಾ |
ದರದೆ ನಭೋಲಕ್ಷ್ಮಿ ಭಗಣವಿಚಕಿಲ ಸುಮ ದಿಂ ||
ದಿರದರ್ಚಿಸಿ ಬೆಳಗುವ ಬಂ |
ಧುರದೀಪದ ತೆರದೆ ಹಿಮಕರಂ ಬಲವರ್ಪ್ಪಂ ||  ೧೦೮

ಖರನಖರದೆ ಹರಿ ಗಿರಿಕರಿ |
ವರಶಿರಮಂ ಸೀಳ್ದು ಕೆದರ್ದ ಮುತ್ತಿನ ಮಣಿಗಳ್ ||
ತರುಗಳೊಳೆಡೆವಿಡ ದಮರ್ದಂ |
ತಿರುತಿರ್ಪ್ಪುವು ತಪ್ಪಲಲ್ಲಿ ಮಿಗೆ ತಾರೆಗೆಗಳ್ ||  ೧೦೯

ಸಾರಸಸಖ ನಾನಗ ಕಾ |
ಸಾರಸಮುತ್ಪನ್ನ ಕಮಳಮಂ ಕೇಳ್ಪಾಂತಂ ||
ದಾರಿಯೊಳಲ್ಲದೊಡೆ ನಭ |
ಶ್ಚಾರಿಗೆ ನೆಲನರಿಯೆ ನಳಿನಮೇಂ ದೊರೆದಪುದೇ ||  ೧೧೦

ನಗದ ಗಗನೇಚರಿಯ ಸು |
ಣ್ಣೊಗರುಗುವ ಮೊಗಂ ಮೃಗಾಂಕನುಂ ಸಂಧಿಸೆ ತ ||
ನ್ಮೃಗಮದ ತಿಲಕಂ ಪತ್ತಿರೆ |
ಜಗಮರಿಯದೆ ವಟ್ಟಮಿದೆಂಬು ದಿಂದುವ ಕಂದಂ ||  ೧೧೧

ಗುರುತರ ತರುತಳದೊಳ್ಕಿ |
ನ್ನರಿಯರ ಸರಕೆಳಸಿ ಬಳಸದಿರೆ ನಿಜಹರಿಣಂ ||
ಹರಿಣಾಂಕಂ ಸಲೆ ನಿಲೆ ತ |
ತ್ತರುಣಿಯರಿದು ಸುಕರಮುಕುರ ಮೆಂದೀಕ್ಷಿಸುವರ್ ||೧೧೨

ಮುನಿದಿನಿಯ ಳಿನಿಯನೊಳ್ದ |
ಲ್ಲನೆದೀವಿದ ಜಾದಿಯಲ್ಲಿ ವೈಗರೆದಿರೆ ಕ ||
ದ್ವನಿತೆಯ ಸಿಡುಜಡೆ ಗಂಡದ |
ನನುವಿಸುವಂ ರಾಹುವೆಂದು ರಜನಿಪ ನದರೊಳ್ || ೧೧೩

ಚಪಲಾಕ್ಷಿಯ ರಾಗಿರಿಯೊ |
ಳ್ತಪ ನಾತಪವೈದೆ ಸುಟ್ಟೊಡಿರಲಾರದೆ ಪಾ ||
ರಿ ಪಯೋಧರ ದೆಡೆಯೊಳ್ಯೀ |
ತ ಪಯೋಜಾಕರದೆ ಪೊಕ್ಕು ಜಳಮಂ ಕಳೆವರ್ || ೧೧೪

ವೃ|| ವಿರಹಿಣಿಯಂತೆ ತದ್ಗಿರಿಯ ತಂಗೊಳದೊಳ್ನೆಲಸಿಪ್ಪ ಪದ್ಮಿನೀ |
ತರುಣಿಯ ಚಾರು ಕೋರಕ ಕುಚಂಗಳ ಸುತ್ಕರದಿಂದಿನಂ ಸಮಂ ||
ತಿರ ದಮರ್ದಂಟಿ ಕಂಟಕಿತಮಾದ ಲತಾಂಗಮೆ ಕಂಪಿಪಂತೆ ತೆ |
ಳ್ದಿರೆ ಪೊಯ್ಯೆ ತೋರ್ಪುದೇಳ್ದ ಬೆಮರಂತಿರೆ ತದ್ಗತ ಶೀಕರೋತ್ಕರಂ ||೧೧೫

ಪರಿತಂದಾ ಗಿರಿಯೊಂದು ತಪ್ಪಲೆಳವುಲ್ಲಂ ಮೇದು ಮೆಯ್ವೆರ್ಚ್ಚ ನಿ |
ರ್ಜರ ಕಾಂತಾನನಚಂದ್ರನಿಂ ದೊಸರ್ದ ಚಂದ್ರಾಶ್ಮಾಂಬುವಂಪೀರ್ದ್ದ ಕಿಂ||
ನರಗೀತಕ್ಕೆ ಕಡಂಗಿ ಕಾಮಧುಫು ಮುದ್ಯತ್ಕ್ಷೀರಮಂ ಕೆಚ್ಚಲಿಂ |
ಸುರಿಯಲ್ತಳ್ತು ಸುಧಾಂಗನಾದ ನದರೊಳ್ಮಾಂದಿಂದು ವೇನೆಂದಪೆಂ|| ೧೧೬

ಅರಿಗಿರಿವೈರಿ ವಾರಿಧರಗುಪ್ತಚರಕ್ಕಳನಟ್ಟಿ ಕಂಡು ತ |
ದ್ಗಿರಿ ನೆರೆ ತಳ್ತ ಶೃಂಗಕರದಿಂ ಕಶೆಯಿಂ ಕಡುಕಾಯ್ದು ಪೊಯ್ವವೋ ||
ಲಿರೆ ಸೆಳೆಮಿಂಚು ಕಣ್ಬನಿವೊಲಲ್ಪರಿತಪ್ಪವೊಲೊಪ್ಪೆ ವೃಷ್ಟಿ ಶೋ |
ಕರವದ ಮಾಳ್ಕೆಯಿಂದವರ ಪೆರ್ಮೊಳಗೊಪ್ಪುಗು ಮಲ್ಲಿ ತಪ್ಪಲೊಳ್||೧೧೭

ಚರಿಪ ನಿಳಿಂಪಕಾಂತೆಯರ ಪಚ್ಚದ ಪಚ್ಚೆಯಕಾಂತಿ ಕಣ್ಗೆ ಮುಂ |
ಬರಿಯೆ ಕರುಂಕೆ ಗೆತ್ತೆಳಸಿ ಚಂದ್ರನ ಪುಲ್ಲೆ ತುಡುಂಕಲೆಂದು ನಿಂ ||
ದಿರೆ ಪರಿವೊಜ್ಜರಂ ಬಿಡಿದು ಪುಟ್ಟಿದ ಪುಲ್ಗಳ ನೀವರಲ್ಲಿ ತ
ತ್ತರುಣಿಯ ರಂದದಕ್ಕೆ ನಿಜನೇತ್ರವ ನೇತ್ರದೆ ಪೋಲ್ತ ನಣ್ಪನಿಂ || ೧೧೮

ಕಂ || ಎರಪ ಶರಧರದ ತುರುಗ |
ಳ್ಕರೆವ ಘನೋಪಳ ಕದಂಬ ಮುಡುಗಣಮನೆ ಮೇ ||
ಣ್ತಿರಿಸಂದು ನುಂಗಿ ಕಳ್ತಲೆ |
ನೆರೆ ಯುಗುಳ್ವೊಂದೊಪ್ಪ ಮೊಪ್ಪೆ ತಪ್ಪಲೊಳೆಸೆಗುಂ || ೧೧೯

ಮುಗಿಲಿಂದೆ ತಟಿಲ್ಲತೆ ಮಿಗೆ |
ಚಿಗಿದೊಗೆ ವಂದದೊಳೆ ನೆಗೆವ ಖಚರಿಯ ಮುಡಿಯಿಂ ||
ದುಗು ವಲರ್ಗಳ್ಕರಮೆಸೆಗುಂ |
ಮುಗಿಲಿಂ ಮುಗಿಲೊಗೆದು ಕರೆವ ಕರಕಂಗಳವೋಲ್ ||೧೨೦

ವೃ||ಗಿರಿಶೃಂಗಾಗ್ರದೆ ನಿಂದು ನೆಟ್ಟ ನಿದಿರೊಳ್ತೋರ್ಪಿಂದುವಂ ನೋಡಿಪಂ|
ಕರುಹಂ ತಪ್ಪ ದಿದೆಂದು ಮಧ್ಯದ ಕಳಂಕಂ ಕಂಡು ಮತ್ತಾಳಿಯೆಂ ||
ದು ರಣತ್ಕಂಕಣಹಸ್ತಮಂ ನೆಗಪಿ ಸೋವುತ್ತಿರ್ಪ ಗಂಧರ್ವ ಸುಂ |
ದರಿಯಂ ಕಿನ್ನರಿಯರ್ಕ್ಕರಂ ನಗುವರಾ ಸ್ವರ್ಣಾಚಲ ಪ್ರಾಂತದೊಳ್||೧೨೧

ನಗತಟ ನಂದನಸ್ಥಿತ ಲತಾಭವನಂಗಳೊಳಾಂತ ನಂಗಕೇ |
ಳಿಗಳನೆ ಖೇಚರೀಸಿವಹ ಮಾಗಸಕಾಗಳೆ ಪಾರಿಪೋಗಲು ||
ಜ್ಜುಗಿಸಿ ಬಳಲ್ದು ಪಾರ ಲಳವಿಲ್ಲದೆ ಕಾಮ್ಮುಗಿಲೇರಿ ಸಲ್ಲರೊ |
ಳ್ನಗುತೆ ವಿಳಾಸದಿಂ ತಳರ್ವುದಲ್ಲಿಯ ಮಿಂಚೆನೆ ಚಂಚಲೇಕ್ಷಣಂ || ೧೨೨

ಕಂ || ಪೊಸ ಸುಸಿಲೊಳೆಸೆಗೆ ರಮಣಂ |
ಮಿಸುಗುವ ನೆಲೆಮೊಲೆಯೊಳೆಸೆವ ನಖಹತಿಯ ನದಂ ||
ಮುಸುಕು ದೆರೆದೆರಗಿ ನೋಡು |
ತ್ತೆಸವಸದಿಂ ದಾರಿದಪ್ಪುವ ಖೇಚರಿಯರ್ || ೧೨೩

ವೃ|| ಮುಳಿದು ನಿಜೇಶನೊಳ್ಖಚರಿ ಕಾರ್ಮುಗಿಲೊಳ್ಮರೆಗೊಂಡು ಗಾಳಿಯಿಂ|
ತಳರ್ದೊಡದಾಗಸಕ್ಕೊಡನೆ ತಾಂ ತಳರುತ್ತಿರೆ ಸೋರ್ವ ಕರ್ಪಿನು ||
ತ್ಪಳ ದಳ ಮಾಲೆಯಾಂತ ಕಬರೀಭರದಿಂ ಕರಿವಾವ ಕರ್ಚಿ ಕಂ |
ಗೊಳಿಸುವ ಸೋಗೆಯಂ ಕೆಳೆತನಕ್ಕದು ತಾಳ್ದು ದೆಸಲ್ವಿರಾಜಿಕುಂ || ೧೨೪

ವಚನ || ಇಂತು ಸಕಳವಿಭವ ಸಮಗ್ರಸಮುಜ್ಜ್ವಳ ವಿಲಾಸಂಬಡೆದು ರಂಜಿಪಾ ಪೊಂ ಬೆಟ್ಟದ ನಿತಂಬದೊಳಿಂಬುವಡೆದ ಜಂಬೂ ಜಂಬೀರ ಪನಸ ಪಾಟಳೀ ರಸಾಲ ಸಾಲ ತಮಾಲ ತಾಲ ಹಿಂತಾಲ ನಾಳಿಕೇರ ನಾರಂಗ ಲುಂಗ ಲವಂಗ ಪೂಗ ಪುನ್ನಾಗ ನಾಗಕೇಸರ ಕರ್ಣಿಕಾರ ಖರ್ಜೂರ ಕರ್ಪೂರ ಕದಳೀಷಂಡ ಕಮಲಷಂಡಂಗಳಿಂದಿಡಿದು ಕಡುಬೆಡಂಗಾದ ಸಾರ್ವರ್ತು

ಕಮಾದ ಸದಮಳ ತಪೋವನದ ಪರಮಪವಿತ್ರತೆವೆತ್ತ ಪರ್ಣಶಾಲೆಯೊಳ್ ಇಟ್ಟವಿಭೂತಿಯ ತೊಟ್ಟ ರುದ್ರಾಕ್ಷ ಯುಟ್ಟ ಮೃಗಾಜಿನದ ಬಿಟ್ಟೆಳಲ್ವ ಕೆಂಜಡೆಯ ಕಟ್ಟಿದ ಕರಣಂಗಳ ನಟ್ಟ ನಿರೀಕ್ಷಣದ ಮುಟ್ಟಿಮಾಳ್ಪ ಜಪದ ವಿಟ್ಟನೆ ವಿಡುಕದಂಗದ ನೆಟ್ಟನೆ ನಿಂದ ಮನದ ತೊಟ್ಟನೆ ತೋರ್ಪ ಸಾತ್ವಿಕದ ದಿಟ್ಟಿಗಚ್ಚರಿಗೊಳಿಪ ಕಟ್ಟಣಕದ ಕಡುಮೈಮೆಯಾಂತ ತಪೋಧನರಿರ್ಪ ತಾಣದಲ್ಲಿ —

ವೃ|| ಉಡುಗುತ್ತಲ್ಲಿರ್ಪ ದುದ್ರುಚ್ಚಮರೀ ರಜಮನಾತಾಣದೊಳ್ಹಸ್ತಿ ಕೈನೀ
ರಿಡುತುಂ ಸಮ್ಮಾರ್ಜನಂಗೈವುದು ಸುರಿವುದು ಮುಕ್ತೌಘಮಂ ಮೇಘಮಂ
ಬಡೆವಂತಲ್ಲಲ್ಲಿ ರಂಗಾಗೆ[illegible]ಳಿಪುದು ಸುಮನೋರೇಣುವಿಂ ಮಾರುತಂ ಸಂ| [ದಂ
ಗಡವೆಲ್ಲಂ ಮೆಲ್ಲನಾತಾಪಸರ್ಗೆ ಪರಿಚಯಂ ಮಾಳ್ಪವಾಗಳ್ಮೃಗಂಗಳ್ ||

ವಚನ || ಮತ್ತಮಲ್ಲಿ —

ವೃ || ಸುಮಮಕರಂದದಿಂದೆ ಕಪಿ ಕೈದೊಳೆದಾ ದ್ರುಮ ಪತ್ರಪಾತ್ರೆಯಂ|
ಸಮೆದದರಲ್ಲಿ ತುಂಬಿ ತುಳಿದೊಂದದ ಪೂಗಳನ್ನೈದೆ ತುಂಬಿ ಕೊಂ ||
ಡಮರ್ದಮರ್ದಂತೆ ತೋರ್ಪ ಗಿಳಿಮುಟ್ಟದ ಪಣ್ಗೊನೆಯಾಂತು ಬಂದು ಸಂ
ಯಮಿಗಳ ಮುಂದೆ ನಿಂದೆರಗಿ ಕಾಣ್ಕೆಯೆನಿತ್ತು ದತೀವ ಭಕ್ತಿಯಿಂ || ೧೨೬

ವಚನ || ಮತ್ತೊಂದು ಪವಿತ್ರ ಸತ್ರಶಾಲೆಯಲ್ಲಿ —

ಹೋಮದ ಕುಂಡದಿಂ ಕಡೆಸಿಡಿಲ್ದು ಪೊದಲ್ದಿರೆ ಕಂಡು ಕೆಂಡಮಂ |
ಕಾಮಿಸಿ ಗೇರಪಣ್ಣೆನುತೆ ಪಣ್ಣನೆ ಪೊರ್ದ್ದಿ ತುಡುಂಕೆ ಕೈಸುಡಲ್ ||
ಭೂಮಿಗೆ ತಗ್ಗಿ ಕುಗ್ಗಿ ಮಿಗೆ ಪಲ್ದೆರೆದುಃಪ್ಪೆನುತೂದಿ ಪುರ್ಬ್ಬಿಡು |
ತಾಮುನಿಪುತ್ರರಂ ನಗಿಸಿ ಹರ್ರ್ಸುತೇಡಿಸಿ ತೊಂದುಕೋಡಗಂ || ೧೨೭

ವಚನ|| ಮತ್ತಮೊಂ ದುದೀರ್ಣ ಮಹಿಮಾಕೀರ್ಣ ವರ್ಣಪೂರ್ಣ ಪರ್ಣಶಾಲೆಯಲ್ಲಿ —

ವೃ ||ಯಮಮುಖ್ಯಾಷ್ಟಾಂಗಯೋಗಂ ಸಮನಿಸೆ ಹೃದಯಾವಾಸದೊಳ್ಶಂಭು ಪಾದಾ|
ಬ್ಜಮ ನೋರಂತಿಟ್ಟು ಕಟ್ಟುಬ್ಬಟೆಯ ಪವನನಂ ಕಟ್ಟಿ ಕೈಕೊಂಡು ಬೋಧ ||
ಕ್ರಮಮಂ ದೇಹೋಹಮೆಂದೆಂಬುದ ನುಡುಗಿ ನಿಜಾನಂದಮಂ ನೆಮ್ಮಿ ಭಿನ್ನ
ಭ್ರಮೆಯಂ ಕೀಳ್ತಿಕ್ಕಿ ಮುಕ್ತಿಪ್ರಮದೆಯನೊಲಿಸಲ್ಕಾಸ್ಸರಿದ್ದರ್ಮುನೀಂದ್ರರ್

ವಚನ|| ಪೆರತೊಂದು ಕುಸುಮ ಕಿಸಲಯ ಮಹಿತ ಮಂದಾರ ಮಹೀಜಾತ ಸಂಜಾತ ಮಧ್ಯಪ್ರದೇಶದಲ್ಲಿ —

ವೃ || ಶಿವಕಥೆವೇಳ್ವ ಶಂಕರಪುರಾಣಮ ನಾಲಿಪ ಶೈವತತ್ವಮಂ |
ವಿವರಿಪ ಶಂಭುವಂ ಪದೆದು ಕೀರ್ತಿಪ ಹೃದ್ಗೃಹದಲ್ಲಿ ಶೈಲಜಾ ||
ಧವನನೆ ನೆಟ್ಟು ಜಾನಿಪ ಮಹೇಶನ ನರ್ಚಿಪ ಸೋಮನಾಮಮಂ ||
ಸವಿನುಡಿಯಿಂದೆ ಬಣ್ಣಿಸುವ ಬದ್ದಿನ ತಾಪಸವರ್ಯರೊಪ್ಪಿದರ್ || ೧೨೯

ವಚನ || ಅಲ್ಲಿ ಮತ್ತವೊಂದು ತಳಿರ್ತ ತರುಣ ತಮಾಲ ತರು ವನದ ತಳದ ತಣ್ಣೆಳಲ ವಳಿತುವಾ ಸರೆಯ ಪರ್ಣಶಾಲೆಯಲ್ಲಿ—

ವೃ || ಕರಿಯನೆ ನೆಮ್ಮಿರ್ದ ಸಿಂಗಮುದನಂಟಿ ಮಹಾ ಶರಭಂ ಶಿರೋದ್ವಯಂ
ಕರಮುದನೊಂದಿ ಸಾರ್ದಿರ್ದ ಪುಲಿ ಪುಲ್ಲೆಯ ನಲ್ಲಿಯ ಮೌನಿಮಧ್ಯದ ||
ಲ್ಲಿರುತೆ ಮುಂದಂ ಒಡುತ್ತೆ ಸೆರೆದಾಲಿಪು ದದ್ಭುತ ಮೆಂಬಿನಂ ಪೊದ |
ಳ್ದರಗಿಳಿ ಯೋದುವೀಶ್ವರ ಪುರಾಣಮ ನಾದರದಿಂದ ನಾರತಂ || ೧೩೦

ಎಳೆಮಿಂಚಂ ಪೋಲ್ವ ಬಂಬಲ್ಜಡೆ ಬಳೆದ ಘನಶ್ಮಶ್ರು ಭಸ್ಮತ್ರಿಪುಂಡ್ರಂ |
ತೊಳಪುದ್ಯದ್ಭಾಳ ಮಾಲಂಬಿತ ವಿಳಸಿತ ರುದ್ರಾಕ್ಷಮಾಲಾಳಿ ಹಸ್ತೋ ||
ಜ್ಜ್ವಳದಂಡಂ ಯೋಗಪಟ್ಟಂ ಮೃಗದ ಸದಜಿನಂ ವಲ್ಕಲಂ ಲಾಗುಳಂ ಮಂ|
ಜುಳಮಂದಸ್ಮೇರವಕ್ತ್ರಂ ಮಿಸುಗೆ ಚರಿಯಿಪ ರ್ತಪ್ಪಲೊಳ್ತಾಪಸೇಂದ್ರರ್ ||

ವಚನ || ಮತ್ತವೊಂದು ನಗತಟದ ಸರಸ ಸರೋವರದ ತೀರದಲ್ಲಿ—

ವೃ|| ಪಗೆಯಂ ಕೈಬಸಮಾಗಿಪೊಂದು ಬಗೆಯಂ ತಾಳ್ದಲ್ಲಿ ಕಾಸಾರ ವಾ
ರಿಗತಂ ತಾನೆನಿಸಿರ್ದು ಮಾಡಿ ತಪಮಂ ತತ್ಪಾಣಿಯಾದಂಬುಜಂ ||
ನಗದೊಳ್ಪರ್ಪ ಮೃಗಾಂಕನಂ ಪಿಡಿದು ದೆಂಬಂ ತುಕ್ಸಲಾಪಾತ್ಮದಿಂ |
ನೆಗಳ್ದೊಳ್ಗುಂಡಿಗೆಯಾಂತ ದಕ್ಷಿಣಕರಂ ತೋರ್ದಿತ್ತು ಯೋಗೀಂದ್ರನಾ ||

ವಚನ || ಮತ್ತೊಂದೆಡೆಯೊಳತ್ತರಂ ಬಿಡಿದೊತ್ತರಿಸಿ ಬಳೆದಕ್ಷೀಣವೇಣು ಕುಂಜದ ಮಂಜುಳಸ್ಥಾನದಲ್ಲಿ—

ಕಂ || ಒತ್ತರಿಸಿ ಸುತ್ತಿ ಮೆಯ್ಯೊ |
ಳ್ಪುತ್ತಿಡೆ ಬೇರಿಳಿಯೆ ಜಡೆಗಳಿಡಿಕಿರಿದಹಿಗ ||
ಳ್ಮತ್ತಿ ಪರಿದಾಡುತಿರೆ ನಡು |
ನೆತ್ತಿಯ ಪೆಜ್ಜೊರ್ಡರ ನೊರ್ಪ ನೀಕ್ಷಿಸುತಿರ್ದಂ || ೧೩೩

ಅಡರ್ದುರ್* ಸಿಡುಜಡೆ ಯೆಡೆಯೊಳಹಿ |
ಯುಡಂಗೆ ತನ್ಮಸ್ತಕಸ್ಥ ಫಣಮಣಿ ಪದಪಂ ||
ಪಡೆದುದು ತನ್ಮುನಿಪನ ತಲೆ |
ಯೆಡೆಯಣ ಚಿಜ್ಜ್ಯೋತಿ ಚಿಗಿದು ಪೊರಪೊಣ್ಮೆದವೋಲ್ ೧೩೪

ವಚನ || ಮತ್ತಮಲ್ಲಿ ಸಲ್ಲೀಲೆಯಿಂ ವಲ್ಲಭನೊಡನೆ ಮೆಲ್ಲನಿಳಿದು ತಳಿರ್ತ ಕಂಕೇಳಿ ವನಮಧ್ಯದ ಮಲ್ಲಿಕಾಮಂಟಪದಲ್ಲಿ ಪಸರಿಸಿದ ಮಿಸುಪ ಕುಸುಮದೆಸಳ ಪೊಸವಸೆಯಮೇಲೆ ನಲ್ಲನೊಡನೆ ಚಲ್ಲದಿಂ ಕುಳ್ಳಿರ್ದು ಪುಲ್ಲಶರಕೇಳಿಯಂ ಮನಂ ತಣಿಯೆ ತನುಕರಗಲನುಭವಿಸಿ

ಬಳಲ್ದಲರ್ವಟ್ಟೆಗೆ ಪಾರಲಳವುಗೆಟ್ಟ ಬಟ್ಟಜವ್ವನದ ಬಿಜ್ಜೋದರಿಯರಂ ಪೆಗಲೊಳ್ಪೆಂಪಿಂ ತಳೆ
ದು ತಳರ್ವ ವಿಪುಳವಿದ್ಯಾಧರರ್ಗ್ಗೆ ಸಹಾಯಮಾಗಿ ಪೊತ್ತೆತ್ತಲುಜ್ಜುಗಿಪ ಕಾಮರ್ಮುಗಿಲ್ಗೆ ಕ
ಬ್ಬರ್ವಿಲ್ಲಂ ಕೈವೀಸಿ ಕರೆದು ಕಳುಪಲೊಡನೆ ತಾನುಂ ಸಂಗಡವಾಗಿ ಪೋಗಿ ಪೊತ್ತೆತ್ತುವ
ಗಂಧವಹನ ಪಿಂದುಗೊಂಡು ಮಂಡಳಿಸಿ ಮರಿಮುಗಿಲಂತೆ ಪಾರ್ವ ಮದಮಧುಕರಪ್ರಕರ
ದಿಂ | ಮತ್ತಮೊಂದೆಡೆಯೊಳ್ದರದಳಿತ ವಿಮಳ ದಳ ವಿಪುಳ ಪರಿಮಳ ಮಿಳಿತ ಕುಸುಮ
ವಿಸರ ವಿಳಸಿತ ಮಧುರ ಮಧು ಮುದಿತ ತರುಣ ಮಧುಕರ ನಿಕರ ಪರಿವೃತ ಮೃದುಳ ಕಿ
ಸಲಯ ಮಹಿತ ಪಾರಿಜಾತ ಮಹೀಜಾತಮೂಲ ಹರಿನೀಲ ವಿಶಾಲ ಶಿಲಾತಳದೊಳ್ಸಂದಣಿಸಿ
ಗೊಂದಣಂಗೊಂಡು ಕುಳ್ಳಿರ್ದ್ದ ಸುರಸುದತಿಯರ ನೆರವಿಯೊಳೊರ್ವ್ವ ಮನ್ನಣೆಯ
ಕಿನ್ನರಕನ್ನೆ ತನ್ನ ಚೆನ್ನ ಕಿನ್ನರಿಯಂ ತೆಗೆದು ಮೇಳಂಗೈದಾಳಾಪಿಸಿ ಕೊರಲಬೆರಲ ಸಂಚು
ಗೂಡಿ ನುಣ್ಚರಂ ದೆಗೆಯೆ ಕೇಳ್ದೊಡನೆ ಪೆಡೆಯೆತ್ತಿದ ಕಾಳಾಹಿಯೆಂಬಂತೆ ನಿಡುಜಡೆ ಕಡು
ಬೆಡಂಗುವಡೆಯಲೆಳಸಿ ಬಳಸಿ ಬಂದು ನಿಂದು ಸುತ್ತಿ ಮುತ್ತಿ ಮೇವಂ ತೊರೆದು ಮೆಯ್ಯಂ
ಮರೆದಭ್ಯರ್ಣದೊಳಾಕರ್ಣಿಪ ತರುಣ ಹರಿಣ ಗಣಕ್ಕೆ ಸರಸೇಕ್ಷಣದ ಸವಿನೋಟಮ ನುಪದೇ
ಶಿಪಂತೆ ದೇಸಿವಡೆದು ಮುರಿದಿಟ್ಟ ಪರಿದಿಟ್ಟ ನೆರೆ ಮೆರೆಯೆ ಮೊಗಸಸಿಯ ಮುಗುಳ್ನಗೆ ಜೊ
ನ್ನದಿಂ ಮುನ್ನಲರ್ದ ಕನ್ನವುರದ ಕನ್ನೈದಿಲೊಳಿರದೆರಗಿ ಝೇಂಕರಿಪ ಮಧುಕರಿ ಮದನ ನಾ
ಣತಿಯಿಂ ಜಾಣಿಂದೊಡನೆ ಸುತಿಯೆಚ್ಚರಿಸಿದಪುದೆಂಬಂತೆಸೆಯೆ ಕೇಳ್ವರ ಕರ್ಣಕುಹರ ಕಾಸಾ
ರಂ ತುಂಬಿ ಪೊರಸೂಸಿ ಪೊನಲಿಟ್ಟು ಪರಿವಂತೆ ಪಿಂಗದೆ ಸಂಗೀತಸುಧಾ ರಸವೃಷ್ಟಿಯಂ
ಸುಧಾಕಾದಂಬಿನಿಯಂತೆ ಕರೆಯೆ ಕೂರ್ಮ್ಮೆಯಿಂ ಕೇಳ್ದು ವಸಂತಂ ಸಂತಸಂ ಬಟ್ಟು ಮರ
ದುದಿಯೊಳಿರ್ದ್ದ ಮಚ್ಚಿ ಪುಷ್ಪಾಂಜಲಿಗರೆದನೆಂಬಂತೆ ಪವನ ಪಾತದಿ ನಾಯುವತಿಯ ಮೇಲೆ
ತತ್ಕುಜದ ಸೆಳೆಗೊಂಬಿನಿಂ ಕಳಿದು ಕವಿವ ಕಮ್ರಲರ್ಗಳಿಂ ‖ ಮತ್ತಮೊಂದೆಡೆಯೊಳ್ಬಿಸಿಗದಿರನ
ಬಿಸಿವಿಸಿಲ್ಮೆಯ್ಯಂ ಪೊಯ್ಯೆ ತನುಲತೆ ಮುಗುಳ್ತಂತೆ ತಳ್ತಿಡಿದು ತೀವಿದ ಘರ್ಮಜಳ ಕಣದಿಂ
ಭಗಣಮಂ ತಳೆದ ಗಗನಲಕ್ಷ್ಮಿ ನಗದ ಪೆರ್ಮೆಯ ನೂರ್ಮೆ ಕೂರ್ಮೆಯಿಂ ನೋಡಲಿಳಿತಂದ
ಳೆಂಬಂತಂದಂಬಡೆದಿಳಿತಂದು ಕಂದರದೊಳ್ನಿಂದು ಕಂದಿದ ಮೊಗದಾವರೆಯಿಂ ಕಾಂತಿಗುಂದಿದ
ಕಣ್ಣೈದಿಲಂ ಬಳಲ್ದ ಕುಚಕೋಕಮಿಥುನಮಂ ಕೊರಗಿದ ತೋಳ್ವಳ್ಳಿಯಂ ನೀರ್ವುಗಿಸುವಂತೆ
ವಿಪುಳಪುಳಿನ ವಿದಳಿತ ನಳಿನ ವಿಮಳ ಕುಮುದ ಕಲ್ಹಾರಸುರಭಿ ಮಿಳಿತ ತುಹಿನ ಶೀತಲ ಸಲಿಲ
ಸಂಭೃತ ಸರಸಿಜಾಕರಮಂ ಸಂತಸಂ ಮಿಕ್ಕು ಪೊಕ್ಕು ಮುಗಿಲಿಂ ಮುತ್ತು ಸುತ್ತಂ ಸೂಸು
ವಂತೆ ಮುಡಿಯಿಂ ಮುಗುಳುದಿರೆ ಕುಚಕಮಳ ಕುಟ್ಮಳಕ್ಕೆ ಮುಖಚಂದ್ರನತ್ತಣಿಂ ಭೀತಿ
ಬೇಡೆಂದು ಕುಸುಮಶರಂ ಪೊಸವಿಸಿಲ ಗವಸಣಿಗೆ ದುಡಿಸಿದಂತೆ ಮನೋರಮಣಂ ರತಿಸಮಯ
ದೊಳ್ನಿಜಕರದಿಂ ತೊಡೆದ ಕುಂಕುಮ ಪಂಕಂ ಜಳದೊಳೊಡವೆರೆದು ತರಳ ತರ ತರಂಗಪಾತ
ದಿಂ ವಿಕಚ ಕನಕ ಕಮಳ ಪರಾಗಪಟಳಂ ಸುರಿದು ಪರಿದಂತೆ ಪಸರಿಸೆ ಕಮಲವನದೊಳೆರಗಿದ
ಪರಮೆ ದುರುಗಲೆಂಬಂತಲ್ಲಿ ಚಿಕುರ ನಿಕರಮೆಸೆಯೆ ಸಲಿಲಕೇಳಿಯ ನಾಂತು ಬಳಲ್ಕೆಗಳೆದ್ದೈದಿ

ತನ್ನಗದ ಕಾಂತಿಯನೆಳವಿಸಿಲ್ಗೆತ್ತು ಮೆಯ್ಯೊಡ್ಡಿ ನಿಂದಂಬುಜಂ ತುಂಬಿಗಳ ಬಂಬಲಂ ಮೈದಡ
ವುವಂತೆ ನುಣ್ಗುರುಳ್ಗಳಂ ನೆಳಲುವ ಕರಾಬ್ಜಂ ಕೆಂಗೊಳಿಸೆ ತೋರ್ಪರ್ ಗಂಧರ್ವ ಸುಂದರಿ
ಯರಿಂ | ಮತ್ತಮೊಂದೆಡೆಯೊಳ್ ಗಗನಕ್ಕೊಗೆವ ಮುಗಿಲೊಡನೆ ನೆಗೆದು ಪಾರ್ವ್ವಲ್ಲಿ ನಿಜಾರು
ಣಾಧರಮನವಲೋಕಿಸಿ ರಸಾಲದಳ ಬಿಂಬಫಳಭ್ರಾಂತಿಯಿಂ ಕರ್ದುಂಕಲೆಂದೈತಂದು ನೆಟ್ಟನೆ
ಕಟ್ಟದಿರೊಳ್ನಿಂದ ಪರಪುಟ್ಟ ಪಂಡಿತವಕ್ಕಿಗಳಂ ನಿಜಕರಾಗ್ರದಿಂ ಪಿಡಿದೊಡಗೊಂಡು ಪೋಗಿ
ನಿಜಗೃಹದೊಳೋವಿ ಯಾಗಿಳಿಯ ಮುದ್ದುತನಕ್ಕೊಲ್ದು ವಾತ್ಸ್ಯಾಯನಮನೋದಿಸಿ ರಸಾ
ಲರಮಣನೆಂಬ ಪೊಸವೆಸರನಿಟ್ಟು ಕಳಕಂಠನ ಕಳರವಕ್ಕೆ ಮಚ್ಚಿ ನಿಚ್ಚಂ ಸವಿಸವೆಯದ ಸಾರ
ಸಂಗೀತಮಂ ಕಲಿಸಿ ಮಾಕಂದಮಧುರನೆಂದು ನಾಮಕರಣಂ ಗೆಯ್ದನಂತರಂ ಸಿಂಗರಂ ಬಡೆ
ದು ಕನಕನಗದ ನಂದನಮಧ್ಯದ ಮಂದಾರತರು ತಳದ ತಣ್ಣೆಳಲ ತಳಿರ್ವಂದರ ಮಲ್ಲಿಕಾಕುಸು
ಮಮಾಲಿಕಾಲಂಕೃತ ಕುಸುಮಮಂಟಪದೊಳರೆವಿರಿದ ಕೆಂಜಾದಿಯ ನನೆ ದುರುಗಲ ಸಿಂ
ಹಾಸನದ ಮೇಲೆ ತಳಿರ ಗದ್ದುಗೆಯಲ್ಲಿ ಚೈತ್ರನೆಂಬ ಚಿಪ್ಪಿಗಂ ಮಾಂದಳಿರ್ವಟ್ಟೆಯೊಳ್ ಶಿ
ರೀಷಕುಸುಮಮಂ ತುಂಬಿ ಕಮಳಕಂಟಕ ಸೂಚಿಯಿಂ ಕಮಳಸೂತ್ರಮಂ ಕೋದು ಪೊಲಿದಿ
ರಿಸಿದ ಮಲಂಗುಮೂಡೆಯಂ ಮೋಡಿಯೊಳೊರಗಿ ಬಳಸಿ ಶಶಿವಸಂತಾದಿಗಳೋಲೈಸಿ ನಿಲೆ
ಶೃಂಗಾರಸಾರಸರ್ವಸ್ವಮಂಗಂಬಡೆದಂತೆ ಕೆಂಗೊಳಿಪನಂಗಚಕ್ರೇಶ್ವರಂ ತನ್ನಂಗನೆಯಾದ
ರತಿದೇವಿಯೊಡನೊಡ್ಡೋಲಗಂ ಗೊಟ್ಟಿರ್ಪ ವೇಳೆಯರಿದು ಭೋಂಕನೈದಿ ಸಾದರಂ ಮಿಗೆ
ರತಿಕಾಮರ್ಗೆ ಮಣಿದುಚಿತಸ್ಥಾನದೊಳ್ಕುಳ್ಳಿರ್ದ ಪಿಕನಿಂ ಮಾರವೀರನ ಬರೆದ ಬಿರುದಾ
ವಳಿಯಂ ಪಾಡಿಸುತ್ತು ಮಾರಾಜಶುಕನಿಂ ತಾನುಸಿರ್ದ ಮದ ವಿಜಯಮೆಂಬ ಸರಸ ಕಾವ್ಯ
ಮಂ ಸಭೆ ಕೇಳ್ದು ತಲೆದೂಗಲೋದಿಸುತ್ತು ಮವೆರಡಂ ಕಾಣ್ಕೆ ಗೊಟ್ಟಚ್ಚಗಾರ್ತಿ ಪಚ್ಚೆವಿ
ಲ್ಲರಿಂ ಮಚ್ಚುವಡೆದಚ್ಚರಿಮಿಗೆ ತಳಿರ್ವೊಚ್ಚೇರೆಗಣ್ಣ ಪೆರ್ಚ್ಚನಚ್ಚರಿಯರಿಂ | ಮತ್ತಮೊಂ
ದೆಡೆಯೊಳ್ ಸೋಗೆನವಿಲಂತೆಸೆವ ಸೋರ್ಮುಡಿಗೆ ಮೊಲ್ಲೆಯ ಮುಗುಳಂ ತುರುಂಬಿ, ಅರೆವೆರೆ
ಯಂತೆ ಮೆರೆವ ಪಣೆಗೆ ಕಳಂಕ ನಮರ್ಚ್ಚುವಂತೆ ಕತ್ತುರಿಯ ಬಟ್ಟಬೊಟ್ಟನಿಟ್ಟು ಮದನಂ ವ
ದನಲಕ್ಷ್ಮಿಯ ನೋಜೆಯಿಂ ಪೂಜಿಸಿದ ಸಂಪಗೆಯೆನೆ ಸೊಂಪುಗರೆವ ನಾಸಿಕಕ್ಕೆ ನರಸುಯ್ಗಂ
ಪಂ ಪಡೆದು ರತಿಯ ಮುಡಿಗೆ ಮುಡಿಯಲ್ಯೋಗ್ಯಮಕ್ಕೆಂದು ಮಲ್ಲಿಗೆ ಮುಗುಳಂ ಸೇರಿಪಂ
ತಾಣಿಮುತ್ತಿನ ಮೂಕುತಿಯಂ ಸಾರ್ಚಿ ಮದನ ಮದಗಜದ ಕುಂಭದಂತಿಂಬುವಡೆದ ಬಟ್ಟ
ಮೊಲೆಗೆ ತಲೆಮಾಲೆಯನಲಂಕರಿಪಂತೆ ಕಂಠಮಾಲೆಯಂ ನೆಲೆಗೊಳಿಸಿ ಕಂಜದಂತೆ ರಂಜಿಪ ಕರ
ಯುಗಳಕ್ಕೆ ರವಿಕಿರಣಮಂ ತುಡಿಸುವಂತೆ ಸುವರ್ಣಮಣಿವಲಯಮಂ ಕೈಗೊಳಿಸಿ. ರೋಹ
ಣಾಚಲ ಮೆಂಬೂಹೆಗೊಳಗಪ್ಪ ಘನನಿತಂಬಮಂಡಳಕ್ಕೆ ಮಾಲೆಗೊಂಡ ಮಣಿಗಣಮಂ ಸೇ
ರಿಪಂತೆ ನೂತ್ನರತ್ನಕಾಂಚಿಯ ನಮರ್ಚ್ಚಿ ಯನಂಗನಿಷಂಗಮೆನೆ ಕೆಂಗೊಳಿಪ ಜಂಘೆಗಳ್ಗಣಸಂ
ಬಂಧಿಪಂತಂದುಗೆಯನಂದಂಗೊಳಿಸಿ ನುಣ್ದೊಡೆಗಳೆಂಬ ರಂಭಾಸ್ತಂಭಂಗಳ್ಕಂದದಂತೆ ಬೆಳ್ದಿಂ
ಗಳಿಂ ಬಾಸಣಿಸುವಂತೆ ಬೆಳ್ವಟ್ಟೆಯನುಟ್ಟು ಸಿಂಗರಂ ಗೈದು ಕಡೆಗಣ್ಣ ಕದಿದ್ದುರುಗಲ್ಕಡಿ

ಮಿಂಚಂ ಕೆದರೆ ಬಿಂಬಾಧರದ ಕೆಂಬೆಳಗಿನೊಡನೆ ಸುಲಿಪಲ್ಲ ನುಣ್ಬೆಳಗು ನೊಗಸಿರಿಯ ಮೈಸಿರಿಯಂ ಪಸರಿಸುವಂತೆ ಮಿಸುಪಂಗಲತೆಯ ಪೊಸಕಂಪು ದೆಸೆದೀವೆ ಮದವೇಳ್ದ ಮದನಗಜದ ಮದಲಕ್ಷ್ಮಿಯಂತೆ ಸೊಕ್ಕುರ್ಗಂಜವನೆ ಸೊಗಯಿಪ ವಿಮಳಕಮಳಾಕರದ ತೀರದ ವಿಶದ ಶಶಿಮಣಿಭಿತ್ತಿಯಂ ನೆಮ್ಮಿ ಚೆನ್ನೆಸೆಯೆ ಸಿಂಗರಂಗೈದು ಕಾದಂಬಿನಿಯ ಬರವಂ ಬಯಸುವ ಮಯೂರನಂತೆ ತನ್ನ ಬರವಂ ಬಯಸುತ್ತೆ ಕುಳ್ಳಿರ್ದ ಮನದನ್ನನೆಡೆಗೆ ತಡೆಯದೈತಪ್ಪಲ್ಲಿ ನಿಜಪ್ರತಿಬಿಂಬಮುಮಂ ನೆಮ್ಮಿರ್ದ ಚಂದ್ರಕಾಂತಭಿತ್ತಿಯೊಳ್ಮಾರ್ಪೊಳೆಯ ಲ್ಪತಿಯುವತಿಯೆಂದು ಬಗೆದು ಕನಲ್ಕೆ ಕೈಮಿಾರೆ ಮುಳಿದು ಮುಗಿಲ್ವಟ್ಟೆಗೆ ಗಳಿಲನೆ ನೆಗೆಯೆ, ತನ್ನ ನೆಳಲ್ಸಿಗಲ್ಲ ನೆಲಗಟ್ಟೆ ನೊಳ್ತೊಟ್ಟನೆ ತೋರೆ ಮೋಹೋದ್ರೇಕದಿಂ ಮುಂದುಗಾಣದೆ ಧರೆಗಿಳಿದಳ್ಗಿತ್ತು ಮೂರ್ಛೆವೋದ ಮನದನ್ನನಂ ಕಂಡು ಕರುಣಾರಜ್ಜು ವೆಳೆದಂತೆ ತಳ್ವದಿಳಿತಂದು ತೆಗೆದು ಬಿಗಿದಪ್ಪುತ್ತೆ ಸುರತರುತಳ ವಿಳಸಿತ ವಿಕಚ ವಿಚಕಿಲ ನಿಚಯ ನಿಚಿತ ರುಚಿರತರ ಮಲ್ಲಿಕಾಮಂಟಪ ಕೊಡಗೊಂಡು ಪೋಗಿ ನಳನಳಿಪೆಳವಳಿರ ಪೂವಸೆಯೊಳಿರ್ವ್ವರುಂ ಕುಳ್ಳಿರ್ದು ಬಳ್ಳಿವರಿವ ಕಟಾಕ್ಷದಿಂದಡರೆ ನೋಡಿ ಮದನಾನುರಾಗಂ ಕೈಗಣ್ಮೆ ಮನಂಬಂದ ಬಂಧದಿಂ ಸವಿಸವೆಯದ ಸುಸಿಲ ಸೊಗಮನನುಭವಿಸಿ ತದ್ದಂಪತಿಗಳ್ಪೋಗೆ, ಪಾಸಿನೊಳ್ಪತ್ತಿದ ಕಜ್ಜಳಮಂ ಸೂಸಿದ ನರುದಂಬಲಮ ನುದಿರ್ದಂಗರಾಗಮಂ ಕೆದರ್ದ ಮೃಗಮದರಜಮಂ ಜಗುಳ್ದ ಪೂಮಾಲೆಯಂ ಮುಗುಳ್ದ ಮುಸುರ್ವಳಿಗಳಂ ಕಂಡು ಕಾದಲನ್ನೆರೆದು ತಳರ್ದ ತಾಣಮಿದೆಂದು ಜಾಣಿಂ ಕೆಳದಿಯರಂ ಕರೆದು ತೋರಿ ಮುಗುಳ್ನಗೆ ನಗುತ್ತ ನಂಗನಿಂಗಿತ ದಂಗಮಂ ಪಿಂಗದೆ ಪೊಗಳ್ವ ದೇವಾಂಗನೆಯರಿಂ | ಮತ್ತಮೊಂದೆಡೆಯೊಳಜಗರ ಮುಗುಳ್ದ ಗರಳದುರಿಯ ಪೆರ್ಚ್ಚಿಗೆ ಪೊಯ್ಕೆ ಗಗನದಿಂ ಜಗುಳ್ದುರುಳ್ದ ವಿಧು ರವಿಗಳಂತೆಸೆವ ರವಿಮಣಿಚಂದ್ರಕಾಂತಂಗಳಿಂ ರವಿಶಶಿಗಳ್ಗೆ ರಾಹುಭ್ರಾಂತಿಗುಡುವಿಂದ್ರನೀಲದ ಕೋಡುಂಗಲ್ಗಳಿಂ ಸಪ್ತಾಶ್ವನಶ್ವಂಗಳ್ಗೆ ಶಶ್ವದ್ದೂರ್ವಾಂಕುರಶಂಕೆಯಂ ಭೋಂಕನೊಡರ್ಚುವ ಪಚ್ಚೆಗಲ್ಗಳಿ: ಹರಿಯೊಳ್ವುರುಡಿಸಿ ಗಿರಿವರಂ ವಜ್ರಮನಾಂತ ಬೆಡಂಗನಾಗಿಪ ವಜ್ರಶೃಂಗದಿಂ. ಹರನೋಲಗಕ್ಕೆ ಹರಿಸದಿಂ ಪೋಗಿ ಬರ್ಪ ಸುರಖಚರ ಕಿನ್ನರಗಾರ್ಗವಾಸಮಾದ ರನ್ನಗವಿಗಳಿಂ ತಾಪಸರೇಪೊಳ್ತುಂ ನೆಲೆಗೊಂಡ ತಪೋವನಂಗಳಿಂ ಪಾರ್ವಪಕ್ಕಿಗಳಿಂ ನೆಗೆವ ಮೃಗೇಂದ್ರಂಗಳಿಂ, ಚಲ್ಲವರಿವ ಪುಲ್ಲೆಗಳಿಂ ಸಮ್ಮದಂಬಡೆವ ಪೊಂಮರಿಗಳಿಂ ಪರಿವ ಪುರುಷಾಮೃಗಂಗಳಿಂ ನೆರೆದು ಪರಿವ ಕರಿಗಳಿಂ ಸಾರಿಬರ್ಪ ಭೇರುಂಡಂಗಳಿಂ, ನಲಿವ ಪುಲಿಗಳಿಂ, ನಿಲುಂಬಿದ ಮೊಲಂಗಳಿಂ ಪೆಡೆಯೆತ್ತುವ ಗಡಣದಹಿಗಳಿಂ, ಕೋಡಿಡುವ, ಕೋಳ್ಮಿಗಂಗಳಿಂ ಸರಿವ ಮರೆಗಳಿಂ ಮೆಲ್ಲನೆಬರ್ಪ ಜಲ್ಲಿಮಿಗಂಗಳಿಂ ಬಹುವಿಧದ ವಿಹಗಂಗಳಿಂ, ನೂತನಂ ಬಡೆದ ಜ್ಯೋತಿರ್ಲತೆಗಳಿಂ. ರಮಣೀಯಮಾದಮರತರುಗಳಿಂ, ಸುರುಚಿರಮಾದ ಸುರಧೇನುಗಳಿಂ, ಸಂತತಮೆಸೆವ ಚಿಂತಾಮಣಿಯ ಕಣಿಯಿಂ ಪರುಷದರೆಯಿಂ, ಪರಿವ ಸಿದ್ಧರಸದಿಂ, ಫಣಿಪತಿಗಮಾದೊಡಂ ಗಣಿಸಲರಿದಾಗ ಘನಮಹಿಮೆ

ಯಾಂತ ಶಿವಲೋಕವುಂ ತನ್ನ ನೆತ್ತಿಯೊಳೊಪ್ಪುತ್ತಲಂಪಿನ ಪೆಂಪಿಂಗೆ ಪಕ್ಕಾದ ಸರ್ವಪರ್ವತ ಸಾರ್ವಭೌಮ ನಖರ್ವ ಸಂಪದಂ ಮಿಗೆ ಮೆರೆವುತ್ತಿರ್ದುದಂತು ಮಲ್ಲದೆಯುಂ—

ವೃ ‖ ನಮದಮರವಧೂಟೀ ಕುಂತಳಸ್ರಸ್ತಮಾಲಾ |
ಸಮುದಿತ ಮಕರಂದೋತ್ಸಿಕ್ತಪಾದಾಂಬುಜಾತೆ ‖
ಕಮನಕಮಳಜಸ್ತ್ರೀಗೀಯಮಾನಾಂಕಮಾಲಾ |
ಸಮುದಯೆ ದಯೆಯಿಂದಂ ದೇವಿ ರಕ್ಷಿಪ್ಪುದೆಸ್ನಂ ‖ ೧೩೫

ಇದು ವಿನಮದ ಮರವರ ಮಕುಟ ತಟಘಟಿತ ಮಣಿಗಣ ಮಹಾಪ್ರಭಾಪಟಲ ಪರಿವೃತ ಪರಶಿವಶ್ರೀಪಾದ ನಖಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನ ಮಾನಿತೋಭಯ ಕವಿತಾವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್ ಪೀಠಿಕಾ ರಚನಾ ಸಮುದ್ರಮೇರುಗಿರಿವರ್ಣನಂ,

ಪ್ರಥಮಾಶ್ವಾಸಂ ಸಂಪೂರ್ಣಂ



## ದ್ವಿತೀಯಾಶ್ವಾಸಂ.
(ದ್ರಾವಿಡದೇಶಾದಿ ವರ್ಣನಂ)

---

ಕಂ ‖ ಶ್ರೀಪಾರ್ವತೀಪಯೋಧರ |
ಲೇಪಿತ ಮೃಗಮದ ವಿಲಿಪ್ತವಕ್ಷಸ್ಸ್ಥಳನು ‖
ರ್ವ್ವೀಪಾಲನ ಶೀಲಂ ಕರು |
ಣಾಪಾಂಗಂ ಪಾಲಿಕೆಮ್ಮ ನುರೆ ಶಿವಲಿಂಗಂ ‖ ೧

ಅಂತೆಸೆವ ಮೇರುಗಿರಿಗೆ ಸ |
ಮಂತೊಪ್ಪುವ ದಕ್ಷಿಣಾಶೆಯೊಳ್ಪನಧರಣೀ ‖
ಕಾಂತೆಯ ಸೀಮಂತದ ರ |
ತ್ನಂ ತಾನೆನೆ ಚೋಳಮಂಡಳಂ ಸೊಗಯಿಸುಗುಂ ‖ ೨

ವೃ ‖ ದಳಿತಾಂಭೋಜಾಳಿ ತಳ್ತೊಪ್ಪುವ ಕೆರೆ ಕುಮುದಂ ತೀವಿ ತೋರ್ಪಬ್ಜಷಂ
ಕಳಹಂಸಶ್ರೇಣಿಯಿಂ ರಂಜಿಪ ಪೊಳೆ ಬೆಳೆಯಿಂ ಬಾಳ್ವಕೈ ಪೂಗಳಿಂ ಕಂ | [ಡಂ
ಗೊಳಿಪುದ್ಯತ್ಪುಷ್ಪವಾಟೀಕುಳ ಮಲರ್ದ*ಲರಿಂ ಕಾಯ್ಗಳಿಂ ಪಣ್ಗಳಿಂ ಮಂ|
ಜುಳಮಾ ದುದ್ಯಾನಮಾ ನಾಡೊಳೆ ಪಿರಿದೆಸೆಯುತ್ತಿರ್ಪು ದಲ್ಲಲ್ಲಿ ನಿಚ್ಚಂ ‖ ೩

ವೃ|| ತರುಸಂತಾನಮುದೊಪ್ಪೆ ತನ್ನ ತಟದೊಳ್ ಕ್ಷೀರಾಟಕೆಂದೆಯ್ದಿ ಸಾ |
ದ್ರ್ವರೆ ದಿವ್ಯದ್ವಿಪ ಮಿಂಬುಗೊಂಡು ಜಳಮಂ ರಂಭಾದಿಗಳ್ ಸೇವಿಸು ||
ತ್ತಿರೆ ಕೂರ್ಪಿಂ ದವಗಾಹಿಸು ತ್ತನಿಮಿಷವ್ರಾತಂ ಕರಂ ತೋರೆ ನಿ |
ರ್ಜರಗಂಗಾನದಿ ತಾನಿದೆಂಬ ತೆರದಿಂ ಕಾವೇರಿ ಕಣ್ಗೊಪ್ಪುಗುಂ || ೪

ಕಂ|| ಶರನಿಧಿಯೊಳೊಗೆದ ವಿಷಮಂ |
ಧರಿಯಿಸಿ ಸುರರಂ ಸಮಂತು ಪೊರೆದ ಭವಂಗೀ ||
ಧರೆ ಪಾಸಿದ ನಡೆಮುಡಿಯೆನೆ |
ಕರಮೆಸೆದುದು ವಿಮಳ ಗುಣದಿ ನಾನದಿ ಪದಪಿಂ || ೫

ವೃ|| ದರದಳಿತಾಂಬುಜಾನನ ದೊಳೊಪ್ಪುವ ಕತ್ತುರಿಬೊಟ್ಟಿನಂತೆ ಸಾ |
ದ್ರ್ವರ ಲಳಿ ತೊಟ್ಟ ಮುತ್ತುಗಳಿವೆಂಬಿನ ಮೊಪ್ಪಿರೆ ಶೀಕರಾಳಿ ಬೆ ||
ಳ್ದೊರೆ ಸಿರಿಕಂಡ ದಣ್ಪೆನೆ ವಿರಾಜಿಸೆ ಪದ್ಮಪರಾಗವಾಸೆ ವಾ |
ಕ್ಚರ ಚಪಲಾಕ್ಷಿ ಪೊಚ್ಚಪೊಸವೆಣ್ಸಲೆ ಸಿಂಗರವಾಂತು ತೋರಿದಳ್ || ೬

ಪರಿಗತಕೃಷ್ಣವೇಣಿ ಯುರರೀಕೃತಪುಷ್ಕರೆ ಸಿಂಧುರಾಗ ಬಂ |
ಧುರೆ ಧೃತತುಂಗಭದ್ರೆ ಜಿತಭಾನುಜೆ ಗೋಮತಿ ಧೂತಪಾಪೆ ಭಾ ||
ಸುರತರ ಲೋಕಪಾವನೆ ನತಾಘಲತಾಸಿ ಸಮಸ್ತದೇವತಾ |
ವರಣೆ ಕವೇರಕನ್ಯೆ ಕೆಳೆಗೊಂಡತ್ತಳನೇಕನದೀ ವಿಳಾಸಮಂ || ೭

ಕಂ|| ಚಾರುಪಯೋಧರೆ ಮಹಿಮಾ |
ಧಾರೆ ಸದಾನಿಮಿಷಸೇವ್ಯರಸೆಯುತೆ ವರಶ್ರೃಂ ||
ಗಾರಾಜಿತೆ ಯೆನಿಸುವ ಕಾ |
ವೇರಿ ಧರಾಕಾಮಧೇನು ವೆನಿಪುದು ಪುಸಿಯೇ || ೮

ವಚನ|| ಎಂಬ ನೆಗಳ್ತೆವಡೆದಾತರಂಗಿಣಿತಡಿಗೊಂಡು ಬಳೆದರೆವಿರಿದ ಸರಸಿಜದರಲ ಸರಸ ಪರಿಮಳಕೆ ಮೊರೆದೆರಗುವ ಪರಮೆ ವರಿದುರುಗಲಿಂ ತೊರೆಯೆರೆಯುನೊಳ್ಪುರುಡಿಸಿ ನೀಲರತ್ನ ಮಂಥವಳನಳಿನ ಶುಕ್ತಿಯೊಳ್ಪಡೆದಪ ಳೆಂಬಂತಿಂಬುವಡೆದು ಪಾಳಿಯಿಂ ಜಳಕೇಳಿಗೆಯ್ದು ತಳರ್ದ ತುಂಬುಜಾವನದ ನಿತಂಬಿನಿಯರಕುಂಭಕುಚದಿರುಂಬಿನೊಳಿಂಬುವಡೆದುತುಂಬಿದ ಮಿಗೆಸೊರ್ಕು ಗೆಸರಿಂ ಮೈಗಚ್ಚಿರ್ಕೊಳ್ವ ಮದಗಜಂಗಳ ಕಟತಟದ ಮದಕರ್ದಮದಿ ನೊಡವೆರೆದು ಕಲಂಕಿ ಕಲಸಿ ಕಡುಗರ್ಪನಾಳ್ದು ಕಾಳಿಂದಿಯಂತೆ ಕಣ್ಗೆವಂದು ತೀರದೇಶದ ಪುಳಿನ ತಳದೊಳೋ ರಣದಿ ನಡಿಯಿಡು ವರಸಂಚೆ ವರಿಗಳ ಮೆಲ್ನಡೆಗೆ ನಿಟ್ಟಿಪ ಬಟ್ಟಜಾವನೆಯರ ದಿಟ್ಟಿ ತಾಗದಂತೆ ಕಟ್ಟಳ್ಕರಿಂ ತೂಪಿಂದವಳೆನೆ ತುರುಗಿ ತೂರಿ ಸಿಡಿವ ಸೀಪ್ರ್ಪನಿ ಕಡುಬೆಡಂಗುವಡೆಯೆ ಸುಸಿಲೆಸಗಿ

ಬಳಲ್ದು ಬಸವಳಿದು ಪಸಿದ ಜಕ್ಕವಕ್ಕಿ ಮೆಲಲೆಂದು ಸಾರ್ತಂದು ಮೃದು ಮೃಣಾಳವಂ ಮು ರಿದೆತ್ತ ನೊಂದೆನೆಂದಳಿ ರವವ್ಯಾಜದಿ ನರಳ್ವ ನಳಿನಿಯಂ ನೆರೆನೆಗವ ನಿಡುಮೀಂಗಣ್ಗಳಿಂ ನಿಳ್ಕಿ ನೋಡಿ ಘುಳು ಘುಳಿಸಿ ಮೊರೆವ ನೆವದಿಂ ಪಲ್ಮೊರೆದು ಶೆರೆದೋಳನೆತ್ತಿ ಕಶೆಗೊಂಡು ಪೊಡೆವಂತೆ ತಳ್ತು ಪಾಯ್ದು ನಿಡುವಾಸಿಯಿಂ ರಂಜಿಸಿ ನೀರಾಟಕೆಳಸಿ ತೀರದೇಶದೊಳ್ನಿಂದ ವಾರನಾರಿಯರ ನಿಡುಜಡೆಯ ಪಡಿನೆಳಲನೊಳಕೊಂಡು ನಿಜಸಲಿಲನಿರ್ಮಲತೆಯಿಂ ನಾಗಲೋಕದ ನಾಗಿಣಿಯರಂ ತೋರ್ಪಂತೆ ತೋರ್ಕೆವಡೆದು ನೀರ್ವೊಗೆಯಲೆಂದು ನಿಲುಂಬಿ ನಿಂದ ಪೌರನಿತಂಬಿನಿಯರ ಕರಘಟಿತ ಘಟಪಟಳಮಂ ಕಂಡಗಸ್ತ್ಯಜನಕಂಗಳನೇಕಂಗಳೀಂಟಲೀಳ್ತಂದು ವೆಂದಳ್ಕಿ ನಡುಂಗುವಂತೆ ಪವನಪ್ರಪಾತಚಲಿತ ಕಲ್ಲೋಲಮಾಲೆಯಿಂ ಕಂಪಿಸಿ ಕುಡಿಗೊಂಡ ಬೆಳ್ನೊರೆಯಿಂ ಕರೆಕತ್ತರಿಸಿ ದಂಬರದಂ ತಿಂಬುವಡೆದು ಮತ್ತಮಿತ್ತರಂ ಬಿಡಿದು ಬಿತ್ತರಂಬಡೆದು ಬಳೆದ ಚೂತ ಚಂಪಕ ಕುಟಜ ಕುರವಕ ತಿಲಕ ಬಕ ವಕುಳ ಲಿಕುಚ ತಮಾಲ ತಾಲ ಹಿಂತಾಲ ಪೂಗ ಪುನ್ನಾಗ ಕದಳೀ ಕಂಕೇಳಿ ನಾರಂಗ ನಾಳಿಕೇರ ಪನಸ ಪಾಟಲೀ ಜಂಬು ಜಂಬೀರ ಕದಂಬ ಕಪಿತ್ಥ ಲವಂಗ ದಾಡಿಮ ದ್ರಾಕ್ಷಾ ಮಾಲತೀ ಮಲ್ಲಿಕಾ ಜಾತಿ ಯೂಥಿಕಾ ಮುಖಲಲಿತ ಲತಾವಿತಾನವನದಿಂ ಪರಿಶೋಭೆವಡೆದು ಜಪತಪೋನುಷ್ಠಾನ ಪರಾಯಣಪರಮ ತಪೋಧನ ನಿವಹ ಸ್ನಾನಪಾನಾನುಕೂಲೆಯೆನಿಸಿ ತನ್ನ ನೆನೆದರಂ ನಿರ್ಮಲರಂ ಮಾಡುತ್ತೆ ಕಂಡರಂ ಕಲುಷರಹಿತರೆನಿಸುತ್ತೆ ಮುಳುಂಗಿದರ ಮೋಹಮಂ ಪರಿಯುತ್ತೆ ಸೇವಿಸಿದಗ್ಗ ಸುಕೃತಮಂ ಸಾಚುತ್ತೆ ಮನಕ್ಕೆ ಮನೋಹರಮೆನಿಸಿ ನುತಿಪೊಡತಕ್ಕುದಾಗಿ ಪರಮಪವಿತ್ರರೂಪಿಣಿ ಪರಿದೊಪ್ಪುತ್ತಿರ್ಪಳಂತು ಮಲ್ಲದೆಯುಂ—

ವೃ || ಇಳೆಯಂ ಪಾಲಿಪ ಸೃಪಿ ನೊಂದು ಬೆಳೆಯಂ ಚಂದ್ರಾಶ್ಮ ಸದ್ರಶ್ಮಿನಿ||
ರ್ಮಳೆಯಂ ನಿರ್ಜಿತಶರ್ಮಧರ್ಮ ಫಳೆಯಂ ಪದ್ಮೋತ್ಪಲೋತ್ಫಲ್ಲಸಂ ||
ಕುಳೆಯಂ ಕೋಕಬಳಾಕ ಹಂಸಬಳೆಯಂ ಡಿಂಡೀರ ಪಿಂಡೌಘಮಂ |
ಜುಳಿಯಂ ಪೆಂಪಿನಲಂಪನಾಳ್ದ ಪೊಳೆಯಂ ಪೇಳ್ಬಣ್ಣಿಸಲ್ಬರ್ಕುಮೇ || ೯

ವಚನ || ಎನಿಸಿ ರಂಜಿಸಿರ್ದುದದರತಟನಿಕಟಪ್ರದೇಶದಲ್ಲಿ—

ವೃ || ಬಳಸಿರೆ ನೀಲನೀರಜ ವನಂ ಕರೆಯಂಚಿನವೊಲ್ಪೊಡಪ್ಪಿನಿಂ |
ಬೆಳೆದೆಳಗೆಂಪ ನಾಂತ ಕಡೆಗದ್ದೆಗಳಂತರ ವರ್ಣದಂತೆ ಕಂ ||
ಗೊಳಿಸೆ ಶುಕಾಳಿ ಚಿತ್ರಮೆನೆ ರಂಜಿಸೆ ಪಚ್ಚೆಯಸೇಲೆಯಂ ಧರಾ |
ಲಲನೆ ವಿಳಾಸದಿಂ ತಳೆದಳೆಂದೆನೆ ಶಾಲಿಯ ಗದ್ದೆ ತೋರುಗುಂ || ೧೦

ವ|| ಅಂತುಮಲ್ಲದೆಯುಂ—

ಕಂ|| ತೂಗುತೆ ತೊನೆಯುತೆ ಬಳ್ಕುತೆ |
ಬಾಗುತೆ ಕಂಪಿಡುತೆ ಕನಕರುಚಿದಾಳುತ್ತುಂ ||
ರಾಗಿಸುತೆ ರಂಜಿಸುತೆ ಸೊಂ |
ಪಾಗಿರ್ದುವು ಕಣ್ಗೆ ಗಂಧಶಾಲಿವನಂಗಳ್ ||   ೧೧

ಕಂ|| ಗಿಳಿಗಳ ಬಳಗಂ ಗಳಗಳ |
ಸಿಳಿದೊಳ ಪೊಕ್ಕೆಳಸಿ ಬಳಸಿ ಖರಚಂಚುಪುಟಂ ||
ಗಳಿಸುಡಿವು ದೆಂದಗಿದು ನೀ |
ರ್ಗ್ಗಳ ನೊಳಪೊಕ್ಕಂತೆ ನೆಲ್ಲಗರ್ದ್ದೆಗಳೆಸೆಗುಂ || ೧೨

ಪಾಲ್ದುಂಬಿದ ಸಾಲ್ದೆನೆಗಳ |
ನೆಲ್ದುರುಗಲ ನೊಲ್ದು ಸೀಳೆ ಗಿಳಿ ಭಯಭರದಿಂ ||
ಜೋಲ್ದಿಳೆ ಗಿಳಿವಂತಿರೆ ಬಂ |
ಬಲ್ದೆರೆಯೊಳ್ಪೊಳೆದು ಮಡಿಯ ನೀರೊಳ್ತೋರ್ಕ್ಕುಂ || ೧೩

ಆರಗಿಳಿ ಸೀಳ್ದೊಡೆ ಮಡಿಯೊ |
ಳ್ಸುರಿದಿರೆ ನೆಲ್ವಾಲ್ತದಂಬುವಂ ಹಂಸಂ ಬೇ ||
ರಿರಿಸುತಮುರ್ದೀಂಟೆ ಕಾಣುತೆ |
ಸಿರವೊಲೆವಂ ತೊಲೆವ ಕಳಮೆಗಳ್ಕಣ್ಗೆಸೆಗುಂ || ೧೪

ಎಳಗಿಳಿಗಳ ಬಳಗಂ ಗಳ |
ಗೆಳ ನಿಳಿತಂದೆಳಸಿ ಬಳಸಿ ಸುಳಿದೊಳಪುಗುತುಂ ||
ಸೆಳನಳಿಸಿ ಬೆಳೆದು ಕಳಿಯದ |
ಕಳಮೆಯ ಕಣಿಶಂಗಳಂ ಕರಂ ಖಂಡಿಸುಗುಂ || ೧೫

ವೃ|| ಬಡನಡು ಬಳ್ಕೆ ಬಟ್ಟವೊಲೆ ಮೇಲುದ ನೆತ್ತೆ ನಿತಂಬಮಂಡಳಂ |
ಪೊಡರೆ ಕಪೋಲ ರಂಗದೊಳೆ ನರ್ತಿಸೆ ಕನ್ನವುರಂ ಸರಾಗ ಮಿ ||
ರ್ಕ್ಕಡೆಗೆಡೆಯಾಡೆ ನೋಟಮುಳಿಯುತ್ತಿರೆ ಸೋರ್ಮ್ಮುಡಿ ಬಂದು ನಿಂದು ಪೆ |
ಣ್ಗಡಣ ಮದಲ್ಲಿ ಪಾರಿಪುದು ಕೈರವದಿಂ ದಿಡುತುಂ ಶುಕಾಳಿಯಂ || ೧೬

ವಚನ || ಮತ್ತಂ—

ವೃ|| ತಾವರೆ ಗಾವೊಳಾಗಿಸಿದ ಬಿಲ್ಗದ ರೀರೆಳೆಯೇರಿಸುತ್ತೆ ಚೆ |
ಲ್ವಾವರಿಸಿರ್ದ್ದ ತದ್ದಳದ ಪಟ್ಟೆಯ ಮಧ್ಯದೊಳಿಟ್ಟು ಕಟ್ಟಿ ಭೃಂ ||
ಗಾವಳಿ ಯೆಂಬ ಮಿಂಟೆ ಪಿಡಿದಂಟಿಸಿ ಗೆಂಟಿನೊಳಿಟ್ಟು ಪಾರಿಪ |
ರ್ತ್ತೀವಿದ ಕೀರಮಂಡಳಿಯ ನಲ್ಲಿಯ ಪಾಮರಿಯರ್ನ್ನಿರಂತರಂ || ೧೭

ವಚನ || ಅವರೊಳೊರ್ವ ಪಾಮರಂ—

ಕಂ || ಅರಗಿಳಿಯಂ ಸೋವ ಲ್ಸರ |
ಸಿರುಹೇಕ್ಷಣೆ ನಿಂದು ಕುಮುದಮಃ ಕೀಳ್ತಿಡೆ ಶಂ ||
ಬರರಿಪು ವಿಸೆ ಭೀಂಕ್ಷತಿಯೊಡೆ |
ವೆರೆದ ಶದಸ್ತ್ರಮನೆ ಸಾಳಿರವ ಮದು ಪ್ಪೋಲ್ಗುಂ || ೧೮

ವಚನ || ಮತ್ತಮೊಂದೆಡೆಯೊ ಳೊರ್ವ್ವ ಮತ್ತಕಾಶಿನಿ ಗಿಳಿಯಂ ಪಾರಿವಲ್ಲಿ—

ಕಂ || ಯೆಳೆಯುಳ ಕಣ್ಗದಿ ರೋಡುವ |
ಗಿಳಿಗಳ ಬೆಂಬತ್ತಿ ಸುತ್ತಿ ಮುತ್ತಿರೆ ತೋಕ್ಕಣ್ಗಂ ||
ಪೊಳೆವಿಡುವಲೆ ಯಿಡೆ ಯುವಳಮ |
ನೊಳಗಾಗಿಸಿದಂತೆ ನೋಳ್ಪ ಪಥಿಕಗಾರ್ಗಗಳ್ || ೧೯

ವಚನ || ಮತ್ತ ಮೊಂದೆಡೆಯೊಳೊರ್ವಳ್ ವೃತ್ತಕುಚದ ಮತ್ತಗಜಗಮನೆ—

ಕಂ || ಏಡುಂಜಾವನೆ ಮೇಲುದು |
ಜಾರೆ ಕೆಲಂದೋರೆ ತೋರವೊಲೆಗ ಳ್ಮೊದಲೊ ||
ಳ್ಪಾರಿಸಿದ ಳ್ಯುವಧೃತಿಯಂ |
ಪಾರಿಸಿದ ಳ್ಬಳಿಕೆ ಗಿಳಿಯ ಕರತಳರವದಿಂ || ೨೦

ವಚನ || ಇಂತ ನಂತಜನ ಮನಸ್ಸೂಚೀಸೂತ್ರಮಾದ ಕಳಮಕ್ಷೇತ್ರದ ನತಿದೂರದ ಭೂರಮೆಯ ಸಸಿಂದೂರ ಸೀಮಂತ ರೇಖೆಯಂತೆ ಚೆಂಬುಡಿ ತಳ್ತು ಕಂಗೊಳಿಪ ಘಂಟಾಪಥದ ಪರಿಸರದಲ್ಲಿ—

ವೃ||ಎಳಗಾಂಗೊಳ್ಗಂಬದಿಂ ಬಾಳೆಯ ತೊಲೆಯಿ ನಳಿಸ್ಫಾರಕಲ್ಹಾರಪುಷ್ಪಂ|
ಗಳ ಘಂಟಾಶ್ರೇಣಿಯಿಂ ಕೇತಕಿಯ ದಳದ ಕಿಳ್ಜಂತೆಯಿಂ ಬಾಳವೇರ್ವ್ವ ||
ಗಳ ಕೇರಿಂ ಬಾಲಸತ್ಪಲ್ಲವದ ಪೊದಕೆಯಿಂ ದಿಕ್ಸುದಂಡಗಳಿಂ ಕ |
ಣ್ಗೊಳಿಕುಂ ನಾನಾಲತಾಂತ ಪ್ರಸರಸರಯುಗಂಗ ಳ್ಪ್ರಪಾಮಂಟಪಂಗಳ್ ||

ವಚನ || ಅಲ್ಲಿ—

ಕಂ || ಪಚ್ಚ ಪಸಿವರೆಯದಲಗ್ಗಳ |
ಪಚ್ಚದ ಶತಪತ್ರ ಸೂತ್ರದಂಬರದ ತೊಳ ||
ಪ್ಪಚ್ಚಸಸಿ ಮೊಗದ ಸೊಗಯಿ |
ಪ್ಪಚ್ಚರಸಿಯರಂತೆ ಮೆರೆವ ತರುಣಿಯರೆಸೆದರ್ || ೨೧

ವಚನ || ಅಂತೊಪ್ಪುವ ಶ್ರಾಂತಪಥಶ್ರಾಂತ ಪಾಂಥ ಸಂತಾನ ನಯನ ಪಾಂಥ ಪ್ರತಾನ ಲಾವಣ್ಯರಸ ಪ್ರಪಾಶಾಲೆಯರಪ್ಪ ಬಾಲೆಯರೊಳೊರ್ವ್ವಳ್ ಲೀಲೆವಡೆದು—

ವೃ || ತೊಳಗುವ ಚಂದ್ರಕಾಂತಕಲಶಂ ಬಿಡಿ ದಂಬುಜನೇತ್ರೆ ನೀರನಂ |
ಜಳಿಪುಟಗಲ್ಲಿ ನಿಂದೆರೆಯೆ ತನ್ಮಧುರಾಧರರಾಗ ಮಿಶ್ರಿತ ||
ಜ್ಜಳ ಮರುಣಾಂಬುವೆಂದುಸಿಕ ನಿರ್ಭುದ ನೀಕ್ಷಿಸಿ ಸಕ್ಕೊಡಾಕೆಯು |
ಜ್ಜ್ವಳ ದಶನಾಂಶು ಮಿಶ್ರಮದು ಶಂಕೆಯ ನೋಡಿಸೆ ಪಾಂಥ ನೀಂಟಿದಂ| ೨೩

ಕಂ || ಕರತಳಗತ ಜಳಬಿಂಬಿತ |
ತರುಣೀನೇತ್ರಮನೆ ನೋಡಿ ಪೆರನೊರ್ವಂ ತ ||
ತ್ಪರಿಮಳ ಕೆಂದಿಟ್ಟ ಸಿತಾಂ |
ಬುರುಹ ಮಿದೆಂದೀಂಟ ಲೊಲ್ಲದೀಕ್ಷಿಸುತಿರ್ದಂ || ೨೪

ವೃ|| ಉಗುರ್ಗಳನುಣ್ಗದಿ ತೊರ್ತ್ಳಪ ಪಾಂಗಶಶಿಪ್ರಭೆ ಸಾರಸೌರಭಂ |
ಸೊಗಯಿಪ ಸುಯ್ಯೆಲ ರ್ಕ್ಕರಕ ವಾರಿಯೊಳಾಗಿಸೆ ನಿರ್ಮಳತ್ವಮಂ ||
ನೆಗಳ್ದ ತಿಶೈತ್ಯಮಂ ಮೃದುಸುಗಂಧ ಮನಿಂದು ನಿಭಾಸ್ಯೆ ಸೂಸೆ ಮಾ |
ರ್ಗಗನೆರ್ದೆ ತಣ್ಪನಾನೆ ತನು ಝೊಂಪಿಸಿ ಕಂಪಿಸೆ ನೀರ ನೀಂಟಿದಂ ||೨೫

ವಚನ || ಮತ್ತಮಲ್ಲಿ ಪೆರತೊಂದರವಟ್ಟಿಗೆ ಯೊಳೊರ್ವ್ವಂ—

ವೃ|| ನೀರೆರೆವಚ್ಛ ಜಾವನೆಯ ಮೇಲುಡು ಮೆಲ್ಲನೆ ಜಾರೆ ಗೌರರು |
ಕ್ಷ್ಯರುಕುಚಂಗಳೆಂಬ ಕಳಶಂಗಳ ಕಾಂತಿಪಯಃಪ್ರವಾಹವಂ ||
ಪೀರುತೆ ಕಣ್ಗಳಿಂ ಮರೆದು ನೀಗ್ಗುರ್ಡಿವಂದವ ಸಂದು ನಿಂದು ನಿ |
ಸ್ಸಾರಮುಖಂ ಮನೋಭವನ ಬಾಣದ ಬಾರಿಗೆ ಬಂದನಧ್ವಗಂ || ೨೬

ವ|| ಅಂತುಮಲ್ಲದೆಯುಂ—

ವೃ|| ಅರಲಿಂ ಪಣ್ಣಿಂ ಮರಂ ಪೆಣ್ಗಳಿಯಿ ನಳಿಯಿನುದ್ಯಾನ ಮಂಭೋಜದಿಂದೀ|
ವರದಿಂ ಕಾಸಾರಮಾಸಾರದೆ ಪೊಸಬೆಳೆಯಿಂ ಭೂಮಿ ಭೂಮೀಜದಿಂ ತ ||
ಣ್ಣೆರಲಿಂ ಮಾರ್ಗಂ ಮರಾಳೋತ್ಕರದೆ ನೆರೆವಚಕ್ರಾಘದಿಂ ಸಿಂಧು ಸಿಂಹೋ|
ತ್ಕರದಿಂ ಪೇರಾನೆಯಿಂ ಕಾನನಮಿಡಿದೆಸೆಗುಂ ದೇಶದೊಳ್ನಿಂದಜಸ್ರಂ || ೨೭

ನದಿಯಿಂ ನಂದನದಿಂ ಲತಾಪ್ರತತಿಯಿಂ ಪುಷ್ಪಾಳಿಯಿಂ ಪಾಳಿಯಿಂ |
ಪುದಿದೆತ್ತಂ ನವಸೌರಭಂ ಬಡೆದ ಸದ್ಭೃಂಗಾಳಿಯಿಂ ಗಾಳಿಯಿಂ ||
ಮದವತ್ತಾಮ್ರಮುಖಪ್ರತರ್ಜನ ಕರಸ್ತ್ರೀಶಾಳಿಯಿಂ ಶಾಳಿಯಿಂ |
ಕದಳಾಮಂಡಳ ಮೊಪ್ಪುಗುಂ ಕ್ರಮುಕದೊಳ್ಪೊಂಬಾಳೆಯಿಂ ಬಾಳೆಯಿಂ ||

ವಚನ || ಮತ್ತಮಾ ಜನಪದಂ ಸಮುದ್ರಂತೆ ಸದಾರ ವಿಭವೋಪೇತಮು ಮನಂತಾತಿಶಯಾನ್ವಿತಮುಂ ನಾಕಲೋಕದಂತೆ ಸುರಾಗನಂದನಾಶ್ರಿತಮುಂದಿ ಧಿರೌಘಮುಂ ವಿಮಳಾಪ್ಸರೋಗಣ ವಿರಾಜಿತಮುಂ ಅಳಕಾನಗರದಂತಗಣ್ಯಪುಣ್ಯಜನವಿಳಿತಮುಂ ಧನಸನಾಥೈಲಬಿಲೋಪಯುಕ್ತಮುಂ ಅಂತಃಪುರದಂತೆ ಮಹಾಮಹಿಷೀಮಂಡಿತಮುಂ ಗೋರಾಜಿತಾಂತ ಸ್ಥಿತಿ

ಘೋಷಾಂಚಿತಮುಂ ಕಾರ್ಗಾಲದಂತೆ ವಿತತ ಕಾಸಾರ ಘನ ವನೋರ್ಜಿತಮುಂ ವಿಳಿತಶಿಲೀಮುಖ ಕದಂಬ ಸುಮನೋ ಗಂಧವಹ ವಿಜೃಂಭಿತಮುಂ ತಪೋವನದಂತೆವೊಲ್ಪಾವನಡಂಬರಮು ಮನೇಕಶಾಖಾಶ್ರಿತ ದ್ವಿಜ ಧ್ವನಿ ಮನೋಜ್ಞಮುಂ ಭೈಷಜ್ಯ ಸಂಗ್ರಹದಂತೆ ಬಹುಧಾನ್ಯಕ ಧಾತ್ರೀ ಸಂಯುಕ್ತಮುಂ ಸಾರ ರಸೌಷಧಿ ಸಮೇತಮುಂ ಸರೋವರದಂತೆ ಕಳಮಹಿತ ಧ್ವನಿಹಂಸಯಾನ ಕಾಂತಮುಂ ಕಮಳಾಭಿರಾಮಮುಮ ಮೆನಿಸಿ ರಮಣೀಯ ಮಾಗಿರ್ಪುದಂತು ಮಲ್ಲದೆ—

ಕಂ || ದ್ವಿಜಹತಿ ವನಿತಾಧರದೊ |
ಳ್ದ್ವಿಜಾತಿಪಾತಂ ಮದಾಳಿ ಕುಳದೊಳ್ವನದೊ ||
ಳ್ಕುಜನಾಳೀಕಾಕರಸಂ |
ಭಜನಂ ತಲೆದೋರ್ಕುಮಲ್ಲದಿಲ್ಲಾನಾಡೊಳ್ || ೨೯

ಬಡತನಮುಂ ಮಾಂದ್ಯಮು ಮಿ |
ಟ್ಟೆಡೆಯುಂ ಚಪಲತೆಯು ಮಧಿಕತರ ಕುಟಿಲತೆಯುಂ ||
ಮಡದಿಯ ನಡುನಡೆ ಮೊಲೆ ಕಂ |
ಣ್ಗಡೆ ಕುರುಳೊಳ್ತೋರ್ಕುಮಲ್ಲಿ ತಲೆದೋರುಗುಮೇ || ೩೦

ಎನಗೆ ಪಗೆ ಧರ್ಮಮದನಿದು |
ವಿನಯದೆ ತಳೆದಿರ್ಪುದೆಂದು ಮುಳಿದಂತೆವೋಲಾ ||
ಜನಪದ ಮನಧರ್ಮಂ ತೊರೆ |
ದನಿಶಂ ಕದ್ರಿಪು ಧರಿತ್ರಿಯೊಳ್ನೆಲಸಿರ್ಕುಂ || ೩೧

ವಚನ || ಇಂತ ಖರ್ವ ವಿಭವಾವಾಸಮಾದ ಚೋಳದೇಶದ ಮಧ್ಯದೇಶದಲ್ಲಿ—

ವೃ || ಕ್ಷಿತಿವಧು ತಾಳ್ದಲಂಕೃತಿ ಯಿದೆಂದೆನಿಸಿರ್ಪುದು ಸಾರವಸ್ತುಸಂ|
ಗತಿ ಮಣಿಹರ್ಮ್ಯಸಂಹತಿ ಸುರೇಂದ್ರಪುರಾಕೃತಿ ಲೋಕನೇತ್ರ ನಿ ||
ರ್ವೃತಿ ಕರ ರಾಜಪದ್ಧತಿ ಸದಾಶ್ರಿತಸಂತತಿ ದತ್ತನಿರ್ಜರ |
ಸ್ಥಿತಿ ನುತಿವೆತ್ತ ಧರ್ಮವತಿ ಯೆಂಬಪುರಂ ವಿತತಪ್ರಭಾವದಿಂ || ೩೨

ವಚನ || ವಿಳಾಸೈಕದೇಶಮಾದಾ ಪುರಧ ಬಹಿಃಪ್ರದೇಶದಲ್ಲಿ—

ಕಂ || ಇರುಳೊಸರ್ವ* ಚಂದ್ರಮಣಿಬಂ |
ಧುರ ತತ್ಪುರಸಾಲದಂಬು ಬಳಯಿಸೆ ಬೆಳೆದಾ ||
ಪುರ ನಂದನಮುಂ ಹರಹರ |
ಸುರನಂ ದನಮೆಂದು ಬಣ್ಣಿಸ ಲ್ಬಗೆವುಗದೇ || ೩೩

ವಚನ || ಎಂಬ ಪಿರಿಯ ಸಿರಿಯ ನಪ್ಪುಗೈದು—

ಕಂ || ಪರಿಗತರಂಭಾ ಸುಮನ |
ಸ್ಸ್ಫುರಿತಪ್ರಮದಾಳಿ ಮಂಜುಘೋಷಾಂಚಿತ ಮ ||
ಚ್ಚರಿವಡೆದು ಪೋಲ್ತು ಮೆರೆದುದು |
ಪುರಸಂದನ ಮಮರ್ದುರ್ಗ ಮಿಸುಪ ಸುರನಂದನಮಂ || ೩೪

ವೃ || ಕಳರವ ಮಿಲ್ಲದಿರ್ಪ್ಪ ಪಿಕ ಸಂಚೆ ಗಳಾಡದ ಪೂಗೊಳಂ ಫಳಾ |
ವಳಿ ಬಳಸಿಲ್ಲದಿರ್ಪ್ಪ ಪೊಸಮಾವಿ ನಿವಾತುಗಳಾಡದಿರ್ಪ್ಪಪೆ ||
ಣ್ಗಿಳಿ ಯಳಿರಾಜಿ ರಾಜಿಸದ ತಾವರೆ ಪೂಗುಡಿ ಮೂಡಿ ತೋರದಿ |
ರ್ಪ್ಪಳಲತೆ ಮೆಲ್ಲಿತಲ್ಲ ದೆಲರಿಲ್ಲೆನೆ ತದ್ವನಮೇಂ ಮನೋಜ್ಞಮೋ || ೩೫

ವಚನ || ಮತ್ತಮಲ್ಲಿ —

ವೃ || ಅರಸೇರಿಲ್ನಿಂಬೆ ಕಂಕೆಲ್ಲಿ ಪಲಸು ಬಕುಳಂ ಬಾಳೆ ಪೇರೀಳೆ ತಾಳೀ |
ತರು ತೆಂಗುಂ ಕೌಂಗು ಸಪ್ತಚ್ಛದಕದಳಿ ತಮಾಲಂ ಲಸಚ್ಚಂಪಕಂ ಪಾ ||
ದರಿ ಪುನ್ನಾಗಂ ರಸಾಲಂ ತಿಲಕ ಕುರವಕಂ ಕರ್ಣಿಕಾರಂ ಕದಂಬಂ ||
ಸಿರಿಸಂಶ್ರೀಪರ್ಣಿದಾಳಿಂಬಮರಮಮರ್ದುರ್ಗಸಾಲ್ಗೊಂಡುಕಣ್ಗೊಪ್ಪುತಿರ್ಕುಂ

ಎಳನನೆ ತೀವಿ ತೋರ್ಪ್ಪ ಮೊಸೆಮಲ್ಲಿಗೆ ತಾವರೆ ತೀವಿ ತೋರ್ಪ್ಪತಂ |
ಗೊಳಮಳಿ ತೀವಿ ತೋರ್ಪ್ಪ ಮಧುದೂತಿ ಯಲರ್ತ್ತವೆ ತೀವಿತೋರ್ಪ್ಪಪಾ ||
ಟಳಿ ಗಿಳಿತೀವಿ ತೋರ್ಪ್ಪಪೊಸಮಾವು ತಳಿರ್ಬ್ಬಿಡೆ ತೀವಿತೋರ್ಪ್ಪಮಂ |
ಜುಳತರಮಾದ ಶೋಕೆ ಮೆರೆದಿರ್ಪ್ಪುದು ತದ್ವನ ಮಧ್ಯದೇಶದೊಳ್ || ೩೭

ವಚನ || ಮತ್ತಮಲ್ಲಿ —

ಕಂ || ಬಲವಪ್ಪಾರ್ಪರಡಿ ಬಗ್ಗಿಪ |
ಕಳಕಂಠಂ ತೊಂಡುಗೆಡೆವ ಗಿಳಿ ಪೂತೆಸೆದಿ |
ರ್ಪ್ಪಲಜರ್ಗ*ಂಪಂ ಕಾತೊರಗುವ ಫ
ಲಾಳಿ ತಳ್ತಿರೆ ರಸಾಲ ಭೂರುಹ ಮೆಸೆಗುಂ || ೩೮

ವೃ || ಅಲರ್ಗಂ*ಪಿಂ ಗೆರಗಿರ್ದ್ದ ತುಂಬಿಗಳ ಬಂಬಲ್ಕಾಮ್ರಮ್ರ್ಗಿ ಲ್ಪಲ್ಲವಾ |
ವಳಿ ವಿದ್ಯುತ್ಪ್ರಚಯಂ ಪಿಕಪ್ರಕರನಾದಂ ಮೇಘನಾದಂ ನಿರಾ ||
ಕುಲ ಮೊಂದಿರ್ಪ್ಪ ಶುಕಾಳಿ ಶಕ್ರಧನು ವೆಂಬಂತಾಗೆ ಮೇಘಾಗಮಂ |
ಬೋಲದೇಂ ಸೂಸಿದುದೋ ಮರಂದರಸವೃಷ್ಟಿ ವ್ರಾತಮಂ ಮಾಮರಂ || ೩೯

ಕಂ|| ಸ್ಮರನಲ್ಲಿ ನೆಲಸಿ ನೆಲೆಗೊಂ |
ಡಿರೆ ಮಾಮರದತ್ತ ಗಿರಿಶನುರಿಗಣ್ಣುರಿ ಬಂ ||
ದಿರದಡರ್ದು* ಸುತ್ತಿ ಮುತ್ತಿದ |
ಪರಿಯಂ ಪಸರಿಪುದು ಚೆಲ್ವ ಚೆಂದಳಿ ದುರ್*ರುಗೆಲ್ || ೪೦

ಮಲ್ಲಿಗೆ ಮಾಮರ ದೆಳದಳಿ |
ರಲ್ಲಿ ಮುಗುಳ್ತಡರೆ ಮುಗುಳ್ಗ*ಳಸೆದುವು ಸಂಧ್ಯಾ ||
ಸಲ್ಲಲಿತ ತಾರಕಾಳಿವೊ |
ಲಲ್ಲಿ ಳಿವಾರಡಿಗ ಳಿಳಿವ ತಮ ಮೆನಿಸಿರ್ಕುಂ || ೪೧

ಅಳಿಗಳ ಗಿಳಿಗಳ ತಳಿರ್ಗ*ಳ |
ಫಳಂಗಳಲರ್ಗ*ಳ ವಿಶೇಷವರ್ಣದಿ ನೆಸೆಗುಂ ||
ತಳತಳಿಪ ಪಂಚರತ್ನದ |
ನಿಳಯಮಿದೆನೆ ಮದನನೃಪತಿಗದು ಮಧುರಚಿತಂ || ೪೨

ತರುಣಾಮ್ರತರು ಯುಗಳಮದ |
ಕರಿಗ ಳಕ್ಕದಲ್ಕೆ ನಿಲೆ ಮನೋಜನ ಬಿನದ ||
ಕ್ಕಿರ ದಡರ್ದವನಾದರ್ದ |
ಬ್ಬರಿಪರ ಸರಗೈವ ಪರಭೃತಂಗ ಳ್ಪೋಲ್ಗುಂ || ೪೩

ವೃ|| ತುದಿಗೇರಿರ್ದೊಂದುಕೀರಂ ಮರಕತಕಲಶಂ ಸತ್ಫಲಂ ದರ್ಪಣಂ ಪ|
ಬ್ಬಿದ ಮಲ್ಲೀವಲ್ಲಿಯೇ ಬಲ್ಸೊರಜಿ ನಿಚಿತಭೃಂಗವ್ರಜಂ ನೀಲಶೋಭಾ ||
ಸ್ಪದಮಾಲ್ಯಂ ಪುಷ್ಪಗುಚ್ಛಂ ಚಮರಮುರುಪಟಂ ಪಲ್ಲವಂ ಕೋಕಿಲವ್ರಾ |
ತದ ನಾದಂ ವಾದ್ಯಮಾಗ ಲ್ಕುಸುಮಶರನ ತೇರಂತೆ ಚೆಲ್ವಾಯ್ತು ಚೂತಂ ||

ಕಂ|| ಎಲರಲೆಯೆ ಕೆಲಕೆ ತೊಲಗಿದ |
ಚಲಶಾಖೆಯ ತಳಿರ ತುಡುಕ ಲಾತುರಿಪ ಪಿಕಂ ||
ಗೆಲೆವಂದುದು ಮುಳಿದು ಕೆಲ |
ಕ್ಕೊಲೆದಳ ಚೆಂದುಟಿಯು ಚುಂಬಿಸ ಲ್ತವಕಿಪನಂ || ೪೪

ವಚನ|| ಮತ್ತಮಲ್ಲಿ—

ಕಂ|| ಚೆಂದಳಿರದು ಮಾಂದಳಿರೆನೆ |
ಸಂದಣಿಸಿದ ಪಣ್ಗಳ ಳಿಗಳೆನೆ ತಾನುಂ ಮಾ ||
ಕಂದಮೆನಿಸ ಲ್ಕೆಗಳ್ಚಿದ |
ಚಂದಮನಾಂತಂತೆ ನೇರಿ ಲಲ್ಸೆಸದಿರ್ಕುಂ || ೪೫

ಮಿಡಿ ಪಚ್ಚೆಯ ಪರಲೆನೆ ಕೆಂ |
ಪಿಡಿದರೆವ ಣ್ಪದ್ಮರಾಗಮೆನೆ ತನಿವಣ್ಣ ||
ಪ್ಪಿರ್ಡಿ ದಿಂದ್ರನೀಲಮೆನೆ ಮಣಿ |
ಗಡಣಮ ನಾಂತಂತೆ ನೇರಿಲೆಸೆದುದು ಬನದೊಳ್ || ೪೭

ಅಮರ್ದಿನಿದ ನಿದರಿ ನಿದ ನೆಲೆ |
ಯಮರರೆ ಸರಿ ನೋೞ್ಪುದೆಂದು ನಿಜರಸ ಮನಿಳಾ ||
ರಮೆ ಮರಕತ ಕಳಶದೆ ತುಂ |
ಬಿ ಮೇಲೆ ನೀಡಿದಪಳೆಂಬವೋ ಲ್ತೆಂಗೆಸೆಗುಂ || ೪೮

ಬಿಡದಾಲವಾಲ ಜಲದೊ |
ಳ್ಕಡುಗೆಂಪಿಡಿದಿಡಿದ ಬೀಜ ರದನದ ಚೆಲ್ವಂ ||
ನಡೆ ನೋೞ್ಪಂತಿರೆ ತೋರ್ಕ್ಕುಂ |
ಪಡಿನೆಳಲಿಂಬಾಗೆ ಬಾಗಿ ರಸದಾಳಿಂಬಂ || ೪೯

ಜಲದ ಜಲದಕ್ಕೆ ಜಲವ |
ತ್ಫಲ ಮಿಾವುದು ತೆಂಗಿದರ್ಕ್ಕೆ ಕುಡದಾಯ್ತೇನಂ ||
ಸಲಪಿ ದಿಳೆಗೆಂದೆರಗಿ ನವ |
ಫಲಂಗ ಳೀವಂತೆ ಬಾಗಿ ಬಾಳೆಗಳೆಸೆಗುಂ || ೫೦

ಘನತರಫಳಮಂ ಬೇರಿಂ |
ಕೊನೆವರೆಗಂ ತಾಳ್ದ ಬಕ್ಕೆವಲಸಿನ ಪಣ್ಣ ||
ಳ್ಮನಸಿಜನ ಮಲಗು ಮೂಡೆಯ |
ನನುಕರಿಪುವು ನೋೞ್ಪ ಮನುಜ ನಿಕರಕಜಸ್ರಂ || ೫೧

ಗಗನೇಚರಿ ಯುಗ್ಗ್ರಗನದೆ |
ನೆಗೆತರುತುಂ ಬನದ ಕಾಂಗಿನೆಳಅಡಕೆಗಳಂ ||
ಮಿಗೆ ಪಚ್ಚೆವರಲಿ ವೆಂದು |
ಜ್ಜುಗಿಪ ತ್ರ್ತಡಲೆಂದು ಬಂದು ನಿಂದದ ರೆಡೆಯೊಳ್ || ೫೨

ಅಲರಂಬಂ ಕುಸುಮಸಮು |
ಜ್ಜ್ವಲ ಲಿಂಗಮನರ್ಚಿಸಲ್ಕೆ ನಿಲಿಸಿದ ದೀಪಾ ||
ವಳಿಯ ಘನಸ್ತಂಭಂಗಳ |
ವೊಲದೇನೆಸೆದುವೊ ಸಪುಷ್ಪ ಚಂಪಕ ತರುಗಳ್ || ೫೩

ಬನಗಳ್ತಲೆಯುಂ ಕಮುಳಾ |
ಪ್ತನ ಕದಿರುಂ ಕಾದಿ ಮಡಿಯು ತಳಿಯುಂ ಚಾಂಪೇ ||
ಯ ನಿಕಾಯ ಮಾದುವಲ್ಲದೊ |
ಡೆಸಸುಂ ತದ್ವ್ರಯಕೆ ಪಗೆತನಂ ಸಮನಿವುದೇ || ೫೪

ಕೆಂಬಟ್ಟೆಯ ಗೂಡಾರವು |
ನಿಂಬರಿದು ಬಸಂತ ನೆಯ್ದೆವೊಯ್ದನೊ ಮದನಂ ||
ಗೆಂಬಂತೆ ಮುಸುಕಿ ತಳಿರ್ಗಳಿ |
ಸೇಂ ಬಂದುದೊ ಕಣ್ಗನೇಕ ಶಾಖಮಶೋಕಂ || ೫೫

ತಳಿರ್ಗಳೆ ದಳ್ಳುರಿ ಮುಸುಕಿ |
ರ್ದ್ದಳಿಗಳೆ ಪೊಸಮಸಿಗಳಾಗೆ ಮದನನ ಬಾಣಾ ||
ವಳಿಯಂ ಕಾಸಲ್ಕೆೃತ್ರೋ |
ಜ್ವಳ ಕಾರುಕ ನಿಟ್ಟ ಕುಮ್ಮಟಂಬೊಲದೆಸೆಗುಂ || ೫೬

ವೃ|| ಆಲರ್ವಿಲ್ಲಂಗಜವೀರ ನಿನ್ನ ಪಗೆಯಾವಂ ಕಾಯ್ದವಂ ಬೈದು ಮೇ|
ಣ್ಕಲುಷಂ ಗೂಡಿದೆ ಯೆಂದು ವರ್ಜಿಸಿದ ನೆನ್ನಂ ಬಂದೆ ನಿಂದಾಂ ನಿರಾ ||
ಕುಲ ಮೆನ್ನೊಂದೆಸಳಂ ತೊಡರ್ಚ್ಚಿ ಬಿಡು ನಿನ್ನೀ ಬಿಲ್ಲೊಳಾಂ ಗೆಲ್ವೆನೆಂ |
ದುಲಿವಂ ತುದ್ಭ್ರಮರಸ್ವನಂ ಸೊಗಯಿಸಿತ್ತಾ ತಾಣದೊಳ್ಕೈತಕಂ || ೫೭

ಕಂ|| ಹರನೊಳ್ಪುಸಿ ನುಡಿದಘವುಂ |
ಪರಿಹರಿಸಲ್ನಿಜ ರಜೋವಿಭೂತಿಯ ನಂಗಂ ||
ಬೊರೆದಕ್ಷ ಮಾಲೆಯಂ ಮೇ |
ಣ್ತಿರುವುವ ವೊಳ್ಭೃಂಗ ಮಾಲೆಯಿಂದದು ಮೆರೆಗುಂ || ೫೮

ವೃ|| ಕೊಳನೊಂದಿರ್ದುದು ಕಣ್ಗೆ ಕೌತುಕಮ ನೀಯುತ್ತಲ್ಲಿ ಯತ್ಯುದ್ಘ ನಿ|
ರ್ಮಳ ಪಾನೀಯದಿ ನುರ್ವಿ ಬರ್ಪ ತೆರೆಯಿಂ ಕನ್ನೈದಿಲಿಂ ನೈದಿಲಿಂ ||
ದಳಿಯಿಂದರ ಕಳಹಂಸೆಯಿಂ ಕಮಳದಿಂ ಕೋಕಂಗಳಿಂ ಮೀಂಗಳಿಂ |
ಚಳಶೈವಾಳದಿ ಸಿತ್ತರಂ ಬಿಡಿದ ಭೂಜಾತಾಳಿಯಿಂ ಪಾಳಿಯಿಂ || ೫೯

ಕಂ|| ಅಲರಂಬ ನಂಬುಗಳ ಬೆಳೆ |
ವೊಲ ಮಲರ್ಪಕ್ಕಿಗಳ ಗೀತಶಾಲೆ ಸರೋಜೋ ||
ತ್ಪಲಸಖರ ರಾಣಿವಾಸದ |
ನೆಲೆ ಮಂದಾನಿಲನ ಕೋಶ ಮಾಕಾಸಾರಂ || ೬೦

ವೃ|| ಪರಿಗತರಾಜಹಂಸ ರುಚಿರಂ ಜಿತಮಾನಸ ಮುನ್ನತಾಳಿ ಬೃಂ |
ದ ರುಚಿವಿಕೀರ್ಣ ಸಾರಸ ರಜೋಮರುದನ್ವಿತ ಪುಷ್ಪಕಂ ಪಯೋ ||
ಧರ ವರಚಕ್ರಮಂಡಿತ ಸಮಂಗಳ ಸೌಮ್ಯ ಕವಿಪ್ರಯುಕ್ತಮಂ |
ಬರದವೊಲೇಂ ಮನಂಗೊಳಿಸಿತೋ ಪೊಸವಿಂಗಳಿನಂಬುಜಾಕರಂ || ೬೧

ವಚನ|| ಅಂತುಮಲ್ಲದೆಯುಂ—

ವೃ|| ಕಳಹಂಸೀಚಾರು ಚಂಚೂ ದಳಿತಗಳಿತ ಬಾಲಾಬ್ಜಬೀಜಾಳಿ ಮುಕ್ತಾ
ಕಳಿತಂ ಷಟ್ಪಾದ ಪಕ್ಷಾಹತಿ ಪತಿತ ಪಯೋರುಟ್ಪರಾಗಾರುಣಶ್ರೀ ||
ವಿಳ ದು ದ್ಯದ್ವರ್ಣಕಂ ಕಂದಳಿತ ಕನುಳಚಿತ್ರಂ ಪ್ರವಿಷ್ಟಾರ್ಕರೋಚಿ |
ರ್ಜ್ವಳಿತಂ ಕಾಸಾರವೊಂದಾರತಿ ರತಿರಚಿತಂಕಂತುಗೆಂಬಂತೆ ತೋರ್ಕುಂ||೬೨

ವೃ|| ಸರದೊಳ್ಪೂರ್ವೆಳವರ್ಕಮಂಡಳಮುಮಲ್ಲೊಕ್ಕಿರ್ದ್ದ ತೀರಕ್ಷಮಾ|
ಜರಜಃಪೂರಿತ ಪುಷ್ಪಬೃಂದಮುಮದೇಂ ಚೆಲ್ವಾಯ್ತೊ ತತ್ಪಂಕಜಾ ||
ಕರಚಾರುತ್ವಕೆ ಮೆಚ್ಚಿ ತೂಗೆ ಶಿರಮಂ ಮೇಲಂಬರಶ್ರೀಯ ಸುಂ |
ದರಸೀಮಂತದ ರತ್ನಮುಂ ಮುಡಿಯ ಪುಷ್ಪವ್ರಾತಮೊಕ್ಕಂದದಿಂ || ೬೩

ವೃ|| ರತಿಕಾಮರ್ಮಲ್ಲಿಕಾಮಾಲತಿಗಳ ಲತಿಕಾಗೇಹದೊಳ್ತಾಳ್ದಮೋಘಂ|
ರತಿಕೇಳಿಶ್ರಾಂತಿಯಂ ತತ್ಸರದೊಳೆ ಜಳಕಂ ಬೊಕ್ಕವರ್ಪೋಗೆ ಸೂಸಿ ||
ತ್ತು ತದೀಯಾಂ ಗಾಂಗರಾಗಂ ಪಿರಿದೆನೆಕರಮೊಪ್ಪಿತ್ತು ಕಂಜಾತಕಲ್ಹಾ |
ರತಟಕ್ಷ್ಮಾಜಾತ ಪುಷ್ಪವ್ರಜ ರಜಮಳಿಪಕ್ಷಾನಿಲೋದ್ಧೂತಮೆತ್ತಂ ||೬೪

ಕಂ|| ನಿಜಪತಿ ಯಭಿಧಾನಮ ನೀ |
ದ್ವಿಜನಾಂತುದು ಮಾಣದೆಂದು ಹಂಸಂಗಾನೀ ||
ರಜನಿ ಪದೆದಿತ್ತ ಮುಕ್ತಾ |
ಸ್ರಜಮೆನೆ ತತ್ತಸುವೊಳಿಡಿದ ಜಳಕಣ ಮೆಸೆಗುಂ || ೬೫

ನೀರಕ್ಷೀರ ಪರೀಕ್ಷಾ |
ಧೀರತೆ ಗಾನಲ್ಲದಿಲ್ಲೆನುತೆ ಮುಡಿಗಿಕ್ಕಿ ||
ತ್ತಾರಾಜಹಂಸನೆನೆ ಖಗ |
ವಾರದೆ ಗರಿಗೆದರೆ ಜರಿದ ಗರಿ ನೆರೆ ಮೆರೆಗುಂ || ೬೬

ಮೊರೆವಳಿನಿಯ ರವಮಿಷದಿಂ |
ದರವಿಂದಿನಿ ಪಾಡೆ ಮೆಚ್ಚಿ ಮುತ್ತಿನ ಸರಮಂ ||
ಸರಸಿ ತೆರೆಗೈಯೊಳೀವಂ |
ತಿರೆ ಜಲಕಣಮಾಲೆ ಮೇಲದೇಂ ರಂಜಿಸಿತೋ || ೬೭

ಅಂಬುಪ್ರತಿಬಿಂಬಿತ ರವಿ |
ಬಿಂಬದೊಳೊಡೆವೆರೆಯ ಲೆಂದು ಕಮಳಿನಿ ಘನವೋ ||
ಹಂ ಬಡೆದು ಮುಳುಗಿದಂತೆ ನಿ |
ಲುಂಬಿದ ತೆರೆ ಪೊಯ್ಯೆ ಮುಳುಗುತುಂ ಮೋಹಿಸುಗುಂ || ೬೮

ಆರಡಿಯೆರಗಿದೊಡೆ ಕೆಲಂ |
ಜಾರುತೆ ತರುಣಾಂಬುಜಂ ತರಂಗಾಹತಿಯಿಂ ||
ತೋರಿದು ದಿನಿಯಂ ಚುಂಬಿಸೆ |
ನೀರೆ ಮೊಗಂದಿರುವುವಂದಮಂ ಮುಳಿಸಿಂದಂ || ೬೯

ಅಲರ್ದ*ಮೊಗದಿಂದೆ ನರುದಂ |
ಬಲಮುಗಳ್ದ*ಳ್ಳಿನಿ ಪಚ್ಚೆವಡಿಗದೊಳೆಂಬಂ ||
ಕಲರ್ದಲರಿಂದುಗುತುಂ ಕೀ |
ಳಿಲೆಯೊ ಳ್ಮಧುಮಿಶ್ರ ಕದ್ರುಜ ರಂಜಿಸುಗುಂ || ೭೦

ದಳಿತಾಬ್ಜದಿಂದ ಮೊಂದೊಂ |
ದ ಳಿಗಳ್ಗೆನೆಗೆದು ಮತ್ತ ಮೆಱಗುತ್ತಿರೆ ತ ||
ನ್ನಳಿನಿ ಹರಿನೀಲದಿಂ ಕಂ |
ದಳದೊ ಳ್ತಿರಿಕಲ್ಲ ನಾಡುವಂತೆ ಪೊಲೆಸೆಗುಂ || ೭೧

ವೃ॥ ಕುವಳಯ ಕುಟ್ಮಳಾವಳಿಯ ಪೆರ್ಗ್ಗಳೆಯಂ ನೆಗೆದೇರಿ ಲಾಗಿಸು |
ತ್ತೆ ವನಜವಲ್ಲರೀ ನಿಬಿಡ ಕಂಟಕ ಸೂಚಿ ನಿಬದ್ಧಯಂತ್ರ ದೊ ||
ಳ್ತಿವೆ ನುಸುಳ್ದೇರಿ ಪಾಸೆ ವಿಳಿಯೊಳ್ಪರಿದಾಡಿ ತರಂಗ ಸಂಘಸಂ |
ಭವ ರವವಾದ್ಯ ಕಾಡಿದುದು ಕೂಡೆ ಝುಷಂ ಪೊಸಡೊಂಬನೆಂಬಿನಂ || ೭೨

ತೊರೆದ ಪಯೋಧರಂ ನವಮರಂದ ರಸಾಮೃತ ಪೂರ್ಣಕುಟ್ಮಳಂ |
ಪರಿಯದೆ ನಿಂದತುಂಬಿ ಸೊಡರ್ವ*ಕ್ಕಿನ ಬೊಟ್ಟು ಪಲಾಶವಾಸೆ ವಿ ||
ಸ್ಫುರಿತ ಮರಾಳ ನೊಂದು ಶಿಶುವಾಗಿರೆ ಬಾಣತಿಯಂತೆ ಕಣ್ಗದೇಂ |
ಸುರುಚಿರಮಾಯ್ತೊ ನೀರಜನಿ ಸೈಜರಜೋ ರಜನೀ ವಿರಾಜಿತಂ || ೭೩

ಜಗಮಂ ಪುಟ್ಟಿಪನೆನ್ನ ಸೂನು ಬುಧರಂ ತಲ್ತೆನ್ನ ದಿರ್ಕ್ಕನ್ನ ವೋ |
ಲ್ಜಗದೊ ಳ್ಪೂರ್ಣರಜೋ ಗುಣಾನ್ವಿತ ನದಂತಿಕರ್ಕ್ಕತನಂಶೂಲಿ ಸುಂ॥
ಮುಗೆ ಕೊಂದಂಗಡ ನೋಡಿಮೆಂದಜಕಪಾಲಂ ಬೊತ್ತುಪೇಳ್ವಂತೆ ಹಂ |
ಸಗತಾಂಭೋಜಮದೊಪ್ಪಿದತ್ತು ಮಧುಬಾಷ್ಪಾ ಳಿಸ್ವನಾರ್ತಸ್ವರಂ || ೭೪

ಕಂ|| ತೀರ ಮಹೀರುಹ ನಿಕರಂ |
ನೀರೊಳ್ಪ್ರತಿಬಿಂಬಿಸಿದೊಡೆ ಪೋಲ್ತುದು ತತ್ಕಾ ||
ಸಾರಂ ಬೃಂದಾರಕ ತರು |
ವಾರಮನೊಳಕೊಂಡು ಪೆಂಪುವಡೆದಂಬುಧಿಯಂ || ೭೫

ವೃ|| ನಳಿನೀನಾಳಮದೆಂಬ ಕಂಬಮನೆ ಕಟ್ಟುತ್ತಲ್ಲಿ ಚಕ್ರಂಗಳಿಂ |
ಬಲಸತ್ಸಂಗ್ರಹಣಂಗಳಂ ಪಿಡಿದು ಮೇಲೆತ್ತುತ್ತೆ ತತ್ಸೀಕರಾ ||
ವಳಿ ಘರ್ಮಾಂಬುವ ನಾಂತು ಪಂಕಜರಜೋವ್ಯೃದ್ಧೂಳಿಯುಕ್ತಂ ಸರ |
ಸ್ಸ್ಥಳದೊಳ್ಕ್ರೀಡಿಸಿ ಮಲ್ಲನಂತೆ ಸುಳಿದಂ ವೈದೋರಿ ಮಂದಾನಿಲಂ || ೭೬

ವಚನ|| ಮತ್ತಮಾಪುರದ ಬಹಿರ್ವನಂ ದರ ದಳಿತ ಕುಸುಮ ವಿಸರ ವಿಳಸಿತ ಪರಾಗ
ಪಟಲ ಸುರಭಿ ಲಲಿತ ಲತಾಲಿಂಗಿತ ತರುಣ ರಸಾಲ ತರುನಿಕರ ದೆಳಗೊಂಬಿನೊಳ್ಕುಳ್ಳಿ
ರ್ದ್ದ ಕುರಮನವಲೋಕಿಸಿ ಭೋಂಕನೆ ತುಡುಂಕಿ ನಿಜ ಚಂಚುವಿಂದುಡಿದು ಕರ್ದ್ದಂಕಿ
ಱಗುಳ್ವರಸಧಾರೆಯಂ ಮಗುಳ್ದು ಸೇವಿಸಿ ಚಂಚತ್ಪಂಚಶರನ ಬಂಚದರಂತೆ ಮುಂಚಿ ಪಂಚಮ
ದಿಂಚರಮಂ ಪಂಚಮೆನೆ ನೆಗಳ್ದು ಸಂಗಡಿಸಿದ ಕೆಂಗಣ್ವಕ್ಕಿಗಳಿಂ | ಮತ್ತಮಲ್ಲಿ ಸಲ್ಲೀಲೆ
ಯಿಂ ನಲ್ಲಳೊಡನೆ ಸುಸಿಲೆಸಗಿ ಬಳಲ್ದು ಬಾಯಾರಿ ಕಟ್ಟಿದಿರೊಳ್ತೊಟ್ಟನೆ ಲಱಲಿಯೆ ಸಾರೆ
ವಂದು ಸೆಳೆಗೊಂಬಿನೊಳಿಂಬುವಡೆದ ತನಿವಣ್ಣಂ ಮನವಾರೆ ನೋಡಿ ಸಂತಸಂಮಿಕ್ಕು ಪೊಕ್ಕು
ಪಕ್ಕದಿಂದಪ್ಪಿ ಮಿಂಚುವ ಚಂಚುವಿಂ ಸೆಳೆದು ಸೀಳ್ದು ಗಳಿಲನೆ ಗಳಿಯಿಪ ರಸಾಸಾರಮಂ ಮ
ನೋರಮಣ ನಿನಿಯಳ ಬಿಂಬಾಧರರಸಮಂ ಸವಿವಂತೆ ಸವಿದು ಚೀತ್ಕಾರಂ ಪೊಣ್ಮೆ ಕಣ್ಮುಚ್ಚಿ
ತನ್ನ ನಚ್ಚಿನ ನಲ್ಲಳಂ ಗಱಿಸನ್ನೆಯಿಂ ಕೆಲಕ್ಕೆ ಕರೆದಳ್ಕರಿಂ ಮುಕ್ಕುಳಿಸಿ ಚಂಚುಗೂಡಿ,
ಗಾಡಿಯಿಂದೆರೆದವಳೂಡಿ ಕುಸುಮಪರಾಗಮೆಂಬಂಗ ರಾಗಮಂ ತಳೆದು ಮುಂದೆ ಮಂದಾ
ನಿಲನಿನೊಗೆತಂದ ಚೆಂದಳಿರ್ದ್ದರು ಗಲ್ವೀಗುರಿಯಾಗೆ ಕೆಲದೊಳಲರ್ವಕ್ಕಿಗಳಿ ನೊಲಿವ ರಸಾ
ಲ ಲತಾಸರಲ ಶಾಖಾಗ್ರದೊಳೂತ್ತುಸುವ ಪೂಗುಡಿ ಧವಳ ಚಾಮರಮೆನಿಸೆ ಪಾಡುವ ಪರಮೆ
ದುರುಗಲ ಸರಸವ ಸಂಗೀತವಿಂಬುವಡೆಯೆ ಕಳಕಂಠನ ಕಂಠ ನಿನದಂ ವಂದಿಧ್ವನಿಯಂ
ತೆಸೆಯೆ ನಟ್ಟಗೊಂಬಿನ ತುತ್ತತುದಿಯೊ ಳಲರ್ವಡಿ ನೆಗೆದು ಮಂಡೈಸಿ ಮಂಡಳಿಸಿ ಧವಳಾ
ತಪತ್ರ ಲಕ್ಷ್ಮಿಯಂ ತಳೆಯೆ ರಾಜಶುಕ ನಾಮಕ್ಕಿದುಚಿತ ಮೆಂಬಂತೆ ಮೆರೆದು ಸೋಜಿಗ
ಮೆನೆ ರಾಜಿಸುವ ರಾಜಶುಕ ಸಮಾಜದಿಂ | ಮತ್ತಮಲ್ಲಿ ಸಲ್ಲೀಲೆಯಿಂ ಮೆಲ್ಲನಲಿವ ಮೆಲ್ಲಿ
ಲರಿಂದುಳ್ಳಲರ್ದ್ದ ಮಲ್ಲಿಗೆಯ ಮಕರಂದ ದೊಡವೆರೆದ ಪರಾಗಮೆಂಬ ಪೊಸ ಕೆಸಪ್ಪರ್ತ್ತ
ಕೆಚ್ಚಿರ್ ಕಳೆಯಲೆಂದು ಸಂದಣಿಸಿ ಗೊಂದಣಿಗೊಂಡೈದುತರವಿಂದಾಕರ ದರವಿಂದಬೃಂದ
ಮರಂದ ರಸದೊಳ್ಮುಳುಂಗಿ ಪಿಂಗದೆ ಪಸಿವಿನೆಸಕದಿಂ ದೆಸಳ ಕುಸುಂಕರೊಳ್ಮುಸುಂಬಿಟ್ಟು
ಮಿಸುಪ ಪೊಸಬಂಡನುಂಡು ಪಿಂಡುಗೊಂಡು ಮಂಡಳಿಸಿ ಕೆಲದ ಪುಂಡರೀಕದೊಳ್ಕಂಡಿಳಿಸಿ

ದ ಮರಾಳಮಂಡಳಿಗಳಾಂಡಜಳದ ಮಂಡಳ ಶಂಕೆಯಂ ಭೋಂಕನಾಗಿಸಿ ಮೇಗಣ್ಗೆ ಪಾರಿಸಿ ಪರಕಲಿಸಿ ಪಾಡುವ ಪರಮೆವರಿಗಳಿಂ | ಮತ್ತಂ ಜಾತಿ ಯೂಥಿಕಾ ಮಲ್ಲಿಕಾಮಾಲತೀ ಲತಾಮಂಟಪಂಗಳೊಳ್ನೆರೆದು ಸೆದೆವಟ್ಟ ಕಾದಲದರ ಸುಯ್ಯೆಲರ ನರುಗಂಪಿನೊಡವೆರೆದು ಸೊಂಪುಗರೆವ ಚಂಪಕ ಮುಕುಳದೀಪಂಗಳ ನಲಿದು ಫಲಭಾರಮಂ ಪೊರಲಾರದೆ ನಿಂದು ಬಳ್ಕಿ ಬಸವಳಿವ ಬಾಲರಸಾಲಂಗಳ ಮಕರಂದ ಘರ್ಮಜಲಕಣಮನುದಿರ್ಚ್ವ ಮೈಸಾರ್ಚ್ವ ಸರಳ ಶಾಖೆಗಳಂ ಪೊತ್ತೆತ್ತಿ ಕುಸುಮವಿಸರಸುರಭಿರಜಮಂ ಕೊರಲ್ಕು ಸಿವಿನಂ ಪೊತ್ತು ಪಿಂದುಗೊಂಡು ಬರ್ಪಿಂದಿಂದಿರ ಬೃಂದದ ಝುಂಕಾರರವ ವ್ಯಾಜದಿಂ ಪೊರಲಾರದೆ ನರಳ್ದು ನಿಂದುನಿಂದು ಬರ್ಪ ಮಂದಾನಿಲಂಗೆ ಕರುಣಿಸಿ ಕೈಗೊಟ್ಟಪುವೆಂಬಂತೆ ಕೆಂದಳಿರಂದಂಬೆತ್ತಡ್ಡಗೊಂಬಿಂದೆದ್ದವಾದನೇಕಾಶೋಕಾನೋಕಹಂಗಳಿಂ | ಮತ್ತಂ ವಸಂತರಾಜಂ ವನಲಕ್ಷ್ಮಿಯೊಡನೆ ಸುಸಿಲಿಸಗೆಲೊಡ ನವಳ ನಿಡುಮುಡಿಯಿಂ ಕುಚಕುಂಭದಿಂ ತನುಲತೆಯಿಂ ಸುರಿದು ಪಸರಿಸಿದ ಕುಸುಮವಿಸರ ಕುಂಕುಮ ರೇಣು ಘರ್ಮಜಳಕಣಂಗಳೆಂಬಂತೆ ತರುತರುಗಳ ಸೆಳಿಗೊಂಬುಗಳೊಂದೊಂದ ನೊರಸೆ ಸುತ್ತಂ ಸೂಸಿ ಬಿಡದೆಲ್ಲೆಡೆಯೊಳ್ಗಿಲ್ಪಾದ ಲಲಿತ ಲತಾಂತ ಪರಾಗ ಮಕರಂದ ಸಂದೋಹದಿಂ ದಳಿತ ಧವಳ ಕುಸುಮ ವಿಸರದಿಂ ಕಳಕಂಠನ ಕಳಕಳಧ್ವನಿಯಿಂ ನಾಕಲೋಕದ ನಂದನಮಂ ನಗುವಂತೆ ನಳಿನಬಾಣನ ಕೇಳೀನಿಳಯಮೆಂಬಂತೆ ಬನಸಿರಿಯ ಬಿನದ ದೆಡೆಯಂತೆ ಚೈತ್ರರಾಜನ ಚಿತ್ರಶಾಲೆಯಂತಲರಂಬನ ಬಲದ ಗರುಡಿಯೆಂಬಂತೆ ಲತಾನರ್ತಕಿಯ ನರ್ತನ ಶಾಲೆಯಂತೆ ಕಲಕಂಠನ ಸಂಗೀತ ಭವನದಂತೆ ರಾಜಶುಕಂಗಳ ಭೋಜನಶಾಲೆಯಂತೆ ಮನೋಹರವಾಗಿರ್ಪುದಂತುಮಲ್ಲದೆಯುಂ—

ಕಂ|| ಸುರತರುಯುತ ನಂದನವಂ |
ಸುರತರುಣಿಯ ರೆಳಸ ದಿಸಿಯರೊಡ ನೇಳ್ತರುತುಂ ||
ಸುರತರುಚಿದಾಳ್ದು ಘನಭಾ |
ಸುರತರುತಳದಲ್ಲಿ ನೆರೆವರಾವುಪವನದೊಳ್ || ೭೭

ವಚನ|| ಇಂತೊಪ್ಪುವಾಪುರೋಪವನವನಮಧ್ಯದಲ್ಲಿ—

ವೃ|| ನಳಿನಪರಾಗ ರಂಗಮನೊಡರ್ಚ್ವ ಮರಂದ ರಸಾಭಿಷಿಕ್ತಭೂ |
ತಳದೊಳೆ ಸಾರ್ಚ್ವ ಚಂಪಕದ ಕುಟ್ಮಳದೀಪಮನೊಕ್ಕ ಪುಷ್ಪಸಂ ||
ಕುಳಮನೆ ಪಾಸಿ ತೋರಣಮನಾಗಿಸೆ ಚೆಂದಳಿರಿಂದೆ ಲಪ್ಪಿಕೇ |
ಕಳರುತಿ ವಾದ್ಯವಾಗೆ ಭಜಿಪಂ ಸಲೆ ಕುಂತು ಲತಾಂತ ಲಿಂಗಮಂ|| ೭೮

ವ|| ಮತ್ತಮಾವನಂ ವನಧಿಯಂತೆ ವಲ್ಲಕಿಯಂತೆ ವರಪ್ರವಾಳ ಮಂಡಿತಮುಂ ಸುತ್ರಾಮನಂತೆ ಸುಜನನಂತೆ ಸುಮನೋಮನೋಜ್ಞಮುಂ ಕಮಳದಂತೆ ಕಳಹಂಸನಂತೆ ಕಮಳಾ

ಕರಾಭಿರಾಮಮುಂ ನೀರದಂತೆ ನಿಷಂಗದಂತೆ ನಿಬಿಡಶಿಲೀಮುಖಮುಂ ರಾಜಚಿತ್ತದಂತೆ ರಮಣೀಹೃದಯದಂತೆ ರಸಾಲಸಮುದಂಚಿತಮುಂ ವಿರಹಿಯಂತೆ ವಿಧಿವಾಹನದಂತೆ ವಿಕಳಧ್ವನಿ ವಿಳಸಿತಮುಂ ಬಗೆಯಂತೆ ಬಾನಂತೆ ಬಹುಲತಾರಾರಾಜಿತಮುಂ ಸಗ್ಗದಂತೆ ಸಮರದಂತೆ ಸಂರಂಭಾನ್ವಿತಮುಮೆನಿಸಿದು ದಂತುಮಲ್ಲದೆ—

ಕಂ|| ಅಲಕಾಳಿ ರುಚಿರಮಾ ವನ |
ವಲಯಂ ತಿಲಕೋಪಶೋಭಿ ಸರದಚ್ಛವಿ ಮಂ ||
ಜುಲ ವಿಂದುಕಾಂತ ರುಚಿರೋ |
ಜ್ಜ್ವಲಾ ಧರಸ್ಥಾನ ಮಾಸ್ಯಮೆನೆ ನೆಲಸಿರಿಯಾ || ೭೯

ವೃ|| ಮೊರೆದೆತ್ತಂ ದಾನಧಾರಾ ಸುರಭಿ ಗೆರಗು ವಿಂದಿಂದಿರಶ್ರೇಣಿಯಂಪೊ
ಯ್ದುರ ಟತ್ಕರ್ಣಾಗ್ರದಿಂದಂ ತಗುಳೆ ಮುಗುಳೆ ತತ್ಪುಷ್ಕರಂಗಂಡು ರಕ್ತಾಂ ||
ಬುರುಹಂಗೆತ್ತಾದ್ದರ್ ಸಾರ್ತಂಡೆರಗೆ ಬಿದಿರ್ದರ್ ದಂತಾಗ್ರ ಕುಂತಾಗ್ರಕಾಂತಿ
ಸ್ಫುರಣಂ ಕೈಗಣ್ಮೆ ತನ್ನಂದನ ದೆಡೆಯೊಳೆ ರಾಜಿಪ್ಪುವಾ ಗಳ್ಗಜಂಗಳ್|| ೮೦

ವಚನ || ಮತ್ತಮಲ್ಲಿ—

ವೃ || ಕರಿವರಗಂಡ ಮಂಡಳ ಗಳನ್ಮದ ಕರ್ದಮ ಮಗ್ನ ಮತ್ತಷ |
ಟ್ಚರಣ ಗಣಂ ವಿರಾಜಿಪುದು ತದ್ರದನ ದ್ಯುತಿ ಚಂದನಚ್ಛಟಾ ||
ಪರಿಪಿಹಿತಂ ಸಿತಂ ಪ್ರಕಟ ಕುಂಭತಟ ಸ್ಫುಟಮೌಕ್ತಿಕವ್ರಜಂ ||
ಸುರಿವ ಮದಾಂಬುಧಾರೆ ಯೊಡಗೂಡಿ ಕರಂ ಪೊರಪೊಣ್ಮೆ ತೆಂಬಿನಂ || ೮೧

ಕಂ || ಭಯರಹಿತ ಜ್ವರ್ಯಸಹಿತ |
ನ್ನರ್ಯವಿಹಿತ ಹರ್ಯಮುಸೇರಿ ಬಹುವಿಧಗತಿಯಿಂ ||
ರಯದಿಂ ಪರಿಯಿಪ ವೈಹಾ |
ಳಿಯ ಬಯಲಿಂ ತಳ್ತು ತದ್ವನಂ ರಂಜಿಸುಗುಂ || ೮೨

ವಚನ|| ಇಂತನಂತಜನ ವಿಲೋಚನ ರಮಣೀಯಮಾದ ವನವಳಯದಿಂದ ಮೊಳಗೆ—

ವೃ|| ಘನಸತ್ಸೇವ್ಯನ ನಂತ ರತ್ನರುಚಿ ಲಾವಣ್ಯಪ್ರಭಾವಸ್ಥಿತಂ |
ವಿನತಾನಂದನವಾಹ ಸಂಶ್ರಯ ನುದಾತ್ತಾಭಂಗ ವಿಕ್ರಾಂತವಾ ||
ಹಿನಿ ತಾನೀ ನರನಾಥ ನೆನ್ನ ವೊಲೆನು ತ್ತಂಭೋಧಿ ತಾಂ ಬಂದು ನಂ |
ದನೆ ಯಿತ್ತಲ್ಲಿಯೆ ನಿಂದಪೋಲ್ಪರಿಖೆ ಚೆಲ್ವಂ ಬೀರಿ ಕಣ್ಗೊಪ್ಪುಗುಂ || ೮೩

ಕಂ|| ಮಣಿದೆನೆಗಳ ಮಾರ್ಪೊಳಪಂ |
ಫಣಿಪ ಸ್ಫಟಿಗೆತ್ತು ನೋಳ್ಪ ಖೇಚರಿಯರ ಕ ||

ಣ್ಬೊಣ ಗರ್*ಳ್ಮ್ಮ ರ್ವೊಳೆವಂದವು |
ನಣಕಿಪುವಗಳ ಮಳಜಳ ದೊಳಂಬುಚರಂಗಳ್ || ೮೪

ಆಂತಳೆ ದಿಳೆಯಂ ಭುಜದೊ |
ಳ್ಾತಂ ತಳೆದಂ ನೃಪತಿಯೆಂದು ವೇಲಾಚಲವೋ ||
ಠಂ ತೈದಿ ನೋಡಿ ಕುತುಕ |
ಸ್ವಾಂತಂ ನಿಂದಂತೆ ಸಾಲಮೇಂ ಸೊಗಯಿಸಿತೋ || ೮೫

ಖರಕರ ತುರಗೋತ್ಕರ ಖರ |
ತರ ಖುರಘಟ್ಟನದಿ ನಾದಕುರುಪೆನೆ ಮೆರೆಗುಂ ||
ಸುರುಚಿರ ಕೋಟಾಚಕ್ರದ |
ತರವಿಡಿ ದಿಡಿದೆಸೆವ ಬಟ್ಟದೆನ ಯೆಡೆಯೆಡೆಗಳ್ || ೮೬

ಘನಕೇತನ ಪಟದಗ್ರದೊ |
ಳಿನಬಿಂಬಂ ಬಂದು ನಿಂದು ಮಧ್ಯಂದಿನದೊ ||
ಳ್ಕನಕಮಯ ದರ್ಪಣಂ ತಾ |
ನೆನೆ ಪೊಳೆವುದ ದೆಂದೊಡದ ನದೇಂ ವಣ್ಣಿಪುದೋ || ೮೭

ಪೊಂದೆನೆಗಳ್ಬರ ಕರಕಗ |
ದಿಂದಂ ಕರಗುಗು ಖಮೆಂದು ಪುರರಾಜಂ ನೀ ||
ರೊಂದಿದ ಸಿತಪಟಶತಿಯಂ |
ಕುಂದದೆ ಮುಸುಕಿದ ಪೊಲಬ್ದ ಜಯ ಮಲ್ಲಿಕರ್ಕ್ಕರಂ || ೮೮

ಮತ್ತಂ—

ವೃ|| ಆಪುರಭರ್ಮಹರ್ಮ್ಯ ರುಚಿ ಪೊಂಬಿಸಿಲರಿತಿರೆ ರಾತ್ರಿಯೊಳ್ನೃಪ |
ರ್ಪಪಗೆಯೊಳ್ವಿರಾಜಿಪ ರಥಾಂಗಯುಗಂ ನೆರೆದಿರ್ಪ್ಪ ದಂಬುಜ ||
ಶ್ರೀ ಪರಿದೆತ್ತ ವೋಸರಿಸಳಲ್ಲಿ ವಿಳಾಸದೆ ನಿಂದು ನಿರ್ಜರ |
ಸ್ತ್ರೀ ಪದೆದೊತ್ತಿ ಮೇಲುದನಭೀಕ್ಷಿಪಳು ತ್ಕುಚದೊಳ್ನಖಾಂಕಮಂ || ೮೯

ವಚನ|| ಅಂತುಮಲ್ಲದೆಯುಂ—

ಕಂ|| ತಳರ್ವ*ಳವೆಣ್ಗಳ ನಯನಾಂ |
ಚಳ ರುಚಿ ಚಂದ್ರಿಕೆಯ ನಾಂತು ಪೊಂದುಡಿಗೆಗಳು ||(ದೊ)
ಜ್ಜ್ವಳಕಿರಣ ಮೆಂದ ಬಿಸಿಲಂ |
ತಳೆದಲ್ಲಿಯ ಸೋಮಸೂರ್ಯ ವೀಧಿಗಳೆಸೆಗುಂ || ೯೦

## ಲಯಗ್ರಾಹಿವೃತ್ತಂ

ಧೀರಜನರಿಂ ಶ್ರುತಿವಿಚಾರ ಪರರಿಂ ಲಸದುದಾರರಗುಣರಿಂ ದುರಿತದೂರ [ಶಿವಭಕ್ತ್ಯಾ |
ಚಾರಯುತರಿಂ ನಿಗಮಸಾರವಂತರಿಂ ಸುಭಗದಾರರತರಿಂ ಹರಿಕುಮಾರ ವರ [ಮಾರಾ |
ಕಾರಮಹರಿಂ ವಿವಿಧ ವೀರಭಟರಿಂ ವಿಜಿತಶೂರ ಪರರಿಂತುರಗವಾರಗಜಶಿಕ್ಷಾ
ಭಾರವಹರಿಂ ವಿಳದಪಾರಧನರಿಂ ಮೆರೆಗು ಮಾರುಚಿರ ಪಟ್ಟಣ ವಿಳಾರಮಣ [ಯುಕ್ತಂ || ೯೧

ಕಂ|| ಆಧರ್ಮವತಿಯ ಪುರದ ಮ |
ಹಾಧರ್ಮಯುತಗ್ಗೆ ಸುರರ್ಗೆ* ಮೈವೆತ್ತುದು ಕಾಂ ||
ಸಾಧರ್ಮ್ಯವೆಂದು ಬಿದಿ ಮಿಗೆ |
ವೈಧರ್ಮ್ಯಮನ ನಿಮಿಷತೆಯ ನವರೊಳ್ನೆಗಳ್ದಂ || ೯೨

ವೃ|| ಶಿವಪದಪದ್ಮಮಂ ಪದೆಗು ಪೂಜಿಪ ಶೈವಪುರಾಣಮಂ ಮಹೋ ||
ತ್ಸವದಿ ನೊರಲ್ದು ಕೇಳ್ವ ಶಿವಭಕ್ತ ಸಮರ್ಚನೆಗೈವ ಸಂತತಂ |
ಶಿವಸದನಂಗಳಂ ರಚಿಪ ಸಾರಶಿವಾಗಮ ಪೂಗದರ್ಥಮಂ |
ವಿವರಿಪ ಶೈವಧರ್ಮಪರರಿಂ ಮೆರೆದತ್ತು ಪುರಂ ನಿರಂತರಂ || ೯೩

ವ|| ಆ ನಗರಾಂತರಾಳದಲ್ಲಿ —

ವೃ || ಮನೆಮನೆದಪ್ಪದೊಪ್ಪಿದುದು ವೀಣೆಯ ಮೆಲ್ಲುಲಿ ರಾಜಕೀರ ನಿಂ |
ಪಿನ ನುಡಿ ವಾಸದಿಂಚರ ಮುದಾರ ಮೃದಂಗರವಂ ಶಿವಸ್ತುತಿ ||
ಸ್ವನ ಮುರುಘಂಟಿಕಾರುತಿಯ ಜೀಯಜಯಧ್ವನಿ ಸಾಮಗಾನ ನಿ |
ಸ್ವನಿತ ಮಶೇಷಶಾಸ್ತ್ರನಿನದಂ ಘನಶಂಖದ ನಾದಮಾವಗಂ || ೯೪

ವ|| ಮತ್ತಮಲ್ಲಿ —

ಕಂ|| ಧನದಂ ಭಿಕ್ಷುಸಖಂಗೆ |
ಳ್ಳನಿತಂ ಧನಮಾಯದಾದ ನಾನಾಮಂ ಸುಂ |
ಮನೆ ಬಂದುದೆಂದು ನಗುತುಂ |
ಧನದಾಪ್ತನ ನಲ್ಲಿ ಮನ್ನಿಪ ಘನಧನದರ್ || ೯೫

ಪುಲಿದೊವಲಂ ಗಜದಜಿನವು |
ನೆಲೆ ನೀ ನುಡದಿ ಬ್ಬಿ‌ಡೆಂದು ಬಿಡಿಸುತೆ ವೃಡನಂ ||
ಸುಲಲಿತ ದಿವ್ಯಾಂಬರಮಂ |
ನಲಿದುಡಿಸುವ ದೂಸಿಗ ಕ್ಕ‌ರಂ ನೆಲಸಿಪ್ಪ‌ರ್ ‖ ೯೬

ಸುರರೆಲ್ಲಂ ಸುತ್ರಲ್ಕಂ |
ಬರ ವೊಂದದು ಪಳಿಯದೆಂದು ಪಳಿದದ ನೆಸೆಗುಂ ||
ಪುರಜನರೆಲ್ಲಂ ಕೊಳಲಾ |
ಪುರದೊಳ್ಬಹು ನೂತನಾಂಬರಂಗಳ ಪಸರಂ ‖ ೯೭

ಶರಧಿ ನಿಜಾತ್ಮಜೆಯೆನಿಸುವ |
ಪುರಲಕ್ಷ್ಮಿಗೆ ಕಳಿಪಿದ ಮಳರತ್ನವ್ರಾತಂ ||
ತರವಿಡಿದೆಸೆದ ಪುದೆಸೆದ ಸುಂ |
ದರಮಾದುದು ರತ್ನವಸರ ದೊಳ್ಮಣಿವಿಸರಂ ‖ ೯೮

ವ|| ಮತ್ತಂ—

ಕಂ|| ಅರಸನ ತೋಳೊಳ್ಸಲೆ ನೆಲ |
ಸಿರುತಂ ಮಣಿಗರ್ಭೆ ಪಡೆದ ಮಣಿಗಣ ಮದು ತ ||
ತ್ಪುರದೆಡೆಯೊಳ್ನೆಲಸಿ ದುದೆನೆ |
ಸುರುಚಿರ ನವರತ್ನರಾಶಿ ಪಸರದೊಳೆಸೆಗುಂ ‖ ೯೯

ವೃ|| ಅಳಿಕುಲ ನೀಲಚೇಲಮದು ಮೌಕ್ತಿಕವೃಂದಮ ನಾಂತು ಕಣ್ಗದೇಂ|
ತೊಳಗಿದುದೋ ಪಳಚ್ಚ ನೆಸೆವಂಗಡಿವೀಧಿಯೊಳಲ್ಲಿ ಕೇತನಂ |
ಗಳ ಗಳೆ ತಾಗಿ ತಟ್ಟುಗಿಯೆ ತಾರೆಗಳೊಬ್ಬು‌ಳಿಗೂಡಿ ತದ್ಧರಾ |
ವಳಯದ ಮೇಲೆ ತಾಂ ಪರಿದು ಬೀಳ್ದನಭಸ್ಥಳಖಂಡದಂತೆವೋಲ್ ‖ ೧೦೦

ಕಂ|| ಅನುದಿನ ಮಿನಘನ ರುಚಿಯಂ |
ಜನಿತೋತ್ಸವದಿಂದೆ ಸೇವಿಸಿದ ವನಜಂಗಳ್ ||
ಜನಪನ ಪುರಸರದೆ ಪಳ |
ಚ್ಚನೆ ಪೊಳೆದ ಲರ್ದ*ಂತೆ ಕಂಚುವಸರಂ ತೋರ್ಕು‌ಂ‖ ೧೦೧

ಗಗನಶ್ರೀ ರವಿಯೊಂದಂ |
ಮಿಗೆ ತಳೆದೊಡೆ ಪುರುಡಿಸುತ್ತೆ ಪುರರಮೆ ಕಳೆದ ||

ಳ್ಗಬಿಂಬಶತಮನೆಂದೆನೆ |
ಸೊಗಯಿಸಿದುದು ತೊಳಪ ಕಂಚುಗಾರರ ಪಸರಂ || ೧೦೨

ವನಿತಾ ಮಧುರಾಧರದಿಂ |
ಪನೆ ಬಯಸಿ ಬೆಳತುರ್ದೆನಿಪ ಬೆಳ್ಳಿಲೆ ಬಿಡದೇಂ ||
ನೆನೆಯಿಸಿದುದೊ ತರುಣೀಜನ |
ಘನವಿರಹಾಪಾಂಡುಗಂಡಮಂಡಳದಿರವಂ || ೧೦೩

ವೃ|| ಸುರಯಿಯ ದುಂಡದಂಡೆ ಪೊಸಮಲ್ಲಿಗೆಯೈ ಸರಮುನ್ಮದಾಳಿಬಂ|
ಧುರ ನವಮಾಲತೀ ತ್ರಿಸರವೊಪ್ಪುವ ಸಂಪಗೆ ಪೂವಿನೊರ್ಜ್ಜರಂ ||
ಸುರಚಿರ ಕುಂದ ಬೃಂದದ ಶಿಖಾಸ್ರಜ ಮೆಂಬಿವ ನಬ್ಜಸೂತ್ರದಿಂ |
ವಿರಚಿಪ ಮಾಲೆಗಾರ್ತ್ತಿಯರ ಮಂತಣಮೊಪ್ಪುಗು ಮಲ್ಲಿ ಸಂತತಂ || ೧೦೪

ಪರಿಮಳ ಸಂಭ್ರಮ ಭ್ರಮರ ವಿಭ್ರಮ ಭೃನ್ನಿಜ ದೃಷ್ಟಿಪುಷ್ಪಭಾ |
ಸುರ ಸುಮಮಾಲೆಯಿಂ ಸಮಧು ತದ್ರಜಮೊಕ್ಕಿರೆ ಪದ್ಮಪತ್ರದೊಳ್ ||
ತರುಣ ವಿಟ ರ್ನ್ನಿರೀಕ್ಷಿಸಿ ಕದಂಬ ಕದಂಬಮಿ ದೆಂದು ಬಂದು ಸುಂ |
ದರಿಯರ ಮುಂದೆ ನಿಂದು ಬೆಲೆಯಿತ್ತ ದನೊಯ್ವ ರತೀವರಾಗದಿಂ || ೧೦೫

ಕಂ|| ನೀಲಪಟಾಂಚಿತ ಕಂಚುಕ |
ಬಾಲಾಬಾಹಾಲತಾಗ್ರ ದೊಳ್ಮೆರೆದುದು ಪೂ |
ಮಾಲೆ ವಿಧುಂತುದಮುಖದಿಂ |
ಸಾಲಿಟ್ಟಿಳಿ ವಿಂದು ವಮೃತ ಕಣಮಂಜರಿವೋಲ್ || ೧೦೬

ತಾರಗೆಗಳ ನೋರಂತಿರೆ |
ವಾರಿಜಮದು ತೆಗೆದು ಕಟ್ಟಿ ಸೆರೆಯೊಪ್ಪಿಸುವಂ ||
ತಾ ರವಿಗೆಸೆದುದು ರಮಣೀ |
ಚಾರುಕರಂ ನೆಗಪಿ ಮಾಲೆಯಂ ಮಲ್ಲಿಗೆಯಾ || ೧೦೭

ವ|| ಇಂತೆಸೆವ ಮಾಲೆಗಾರ್ತ್ತಿಯರಂಗಡಿಯ ಮುಂಗಡೆಯಲ್ಲಿ —

ವೃ||ಮೊದಲೊಳ್ಕುಂಕುಮಮಿಟ್ಟುಮತ್ತೆನವಕಸ್ತೂರೀರಜಂಬೊಯ್ದುಮೇ |
ಣ್ಬೆದುವಂ ಸಾರ್ಚ್ಚಿ ವರಾಂಗಿ ಗಂಧಮನೊಡರ್ಚ್ಚಲ್ತೀಯೆ ಕಣ್ಗೊಪ್ಪಿದ||
ತ್ತದು ಚಂದ್ರಾಶ್ಮದ ಸಾಣೆಗಲ್ಕ್ರಮದೆ ಮೂವಣ್ಣಂಗಳಂ ತಳ್ದು ತ |
ತ್ಸದತೀ ಪಾಣಿಪಯೋಜಮರ್ದನಕೆ ಪಕ್ಕಾದಿಂದುವೆಂಬಂತೆವೋಲ್ || ೧೦೮

ಚಂದ್ರಕಾಂತ ಶಿಲೆಯಲ್ಲಿ ನವಶ್ರೀಖಂಡಮಂ ನಿಟ್ಟು ಕರಾಬ್ಜದಿಂ ।
ಚಂದ್ರಿಕಾಲಸದಪಾಂಗೆಯರುದ್ಯತ್ಸೌರಭ ನಿಶ್ವಸಿತಾಂಗಿಯರ್ ॥
ಸಾಂದ್ರಚಂದನದ ಘಟ್ಟಿಗೆ ನೀರಂ ಪಾರದೆ ಮಾಳ್ಪುದ ನೀಕ್ಷಿಸು ।
ತ್ತಿಂದ್ರನಂದನನ ಪೋಲ್ವಭುಜಂಗ ಕಾರ್ಕೃತುಕದಿಂ ಕಲೆದೂಗುವರ್ ॥ ೧೦೯

ಹಾರಂ ಕುಂತಳಮುಯ್ಯಲಾಡೆ ಜಘನಾಭೋಗಂ ಪಯೋಭೃದ್ದ್ವಯಂ
ಸಾರಂ ನರ್ತನಮಾಡೆ ಚಿಟ್ಟುಮುರಿಯುಂ ಪೆಣ್ದುಂಬಿಯುಂ ಘ್ರಾಣಸಂ ॥
ಚಾರಂ ಮಾರುತನಾಡೆ ಪಾಯ್ವಳಿಗಳಿಂ ಕರ್ಣೋತ್ಪಲಂ ವೇಣಿಯುಂ ।
ಸೇರುತ್ತುಂತಿರಿಕಲ್ಲನಾಡೆ ತೆಗೆವ ಶ್ರೀಖಂಡಮಂ ಬಾಲೆಯರ್ ॥ ೧೧೦

ವ॥ ಮತ್ತಮಾಸುಗಂಧ ವಿಪಣಿಯಲ್ಲಿ—

ವೃ॥ ತುರುಗಿದಯೂಥಿಕಾಕುಸುಮಮಂಜರಿಯೊಳ್ನರುಗೆಂಪಸುಂಡುಪಾ ।
ರ್ದ್ರಗಲೊಡರ್ಚಿ ಮಂಡಳಿಸಿ ಮಲ್ಲಿಗೆಗೊಲ್ವಳಿಪಿಂಡು ಕಾಮುರ್ಗಿಲ್ ॥
ಗರಿಗಳ ಸಾಲ್ಗಳಿಂ ಸುರಿವ ತನ್ಮಧು ವೃಷ್ಟಿಯದಾಗೆ ಗಂಧಮಂ ।
ನೆರೆ ತೆಗೆವಚ್ಚ ಜಾವನೆಯ ಸೋಮುರ್ಡಿ ತಾಂ ನವಿಲಂತೆ ನರ್ತಿಕುಂ ॥

ನೃಪಸೇವಾಯಾತಪೃಥ್ವೀಪತಿಸುತವೃತತೂರ್ಯಪ್ರಣಾದಂ ಪಯಃಪಾ ।
ನಪರವ್ಯಾಯಾತ ಗಂಧದ್ವಿಪಗಣ ಘನಘಂಟಾಪ್ರಘೋಷಂ ಪಣಸ್ತ್ರೀ ॥
ವಿಪುಳಾಗಾರಸ್ಥಳೀನಿರ್ಗಮಿತವಿಟವಪುಸ್ಸೌರಭವ್ಯಾಪ್ತಭೃಂಗೀ ।
ಚಪಲಧ್ವಾನಂ ಕರಂ ರಂಜಿಸೆ ಬಗೆಗೊಳಿಕುಂ ತತ್ಪುರೀ ರಾಜಮಾರ್ಗಂ॥೧೧೨

ವ॥ ಅದಲ್ಲದೆಯುಂ—

ವೃ॥ ನಡೆವೆಳವೆಣ್ಗಳುನ್ನತ ಕುಚಂಗಳ ಕುಂಕುಮರೇಣು ಸೂಸೆ ಸೋ ।
ಮ್ಮುರ್ಡಿಯಡೆಯಲ್ಲಿ ತಾಳ್ದಮೃಗನಾಭಿಜ ಪುಷ್ಪರಜಃಪ್ರತಾನಮೊ ॥
ಗ್ಗುರ್ಡಿಸಿರೆ ಬೀದಿಯಲ್ಲಿ ಬಿದುವೊಳ್ಬಿಡದೊಟ್ಟಿಕೊಳುತ್ತೆ ಗಂಧಮಂ ।
ಪಡೆದೆಡೆ ಯಾಡುತಿಪ್ಪರ್ಕರಿ ತಾಳ್ದುದು ಗಂಧಗಜಾಭಿಧಾನಮಂ ॥ ೧೧೩

ಕಂ॥ ಲೋಲಾಕ್ಷಿಯರೈದುತ್ತಿರೆ ।
ಸಾಲಿಟ್ಟವರಳಕ ಗಂಧಕೊಡನೈತರುತುಂ ॥
ರೋಲಂಬಮಾಲೆ ಮೇಲದು ।
ನೀಲದ ನಡೆತೋರಣಂ ಬೊಲೇನೊಪ್ಪಿದುದೋ ॥ ೧೧೪

ಕಿಳಿರ್ವ*ಶ್ವಂಗಳ ನಿನದಂ |
ತಳರ್ವ* ಗಜಂಗಳ ನಿಬದ್ಧ ನಿಗಳಧ್ವನಿ ಕೆಂ |
ದಳಿರ್ವ*ಣ್ಣದ ಕೇತನದೊ |
ಳ್ಮಿಳಿರ್ವ*ರುಘಂಟಾನಿನಾದಮಲ್ಲಿಡಿದಿರ್ಕುಂ || ೧೧೫

ವೃ|| ಪಚ್ಚೆಯತೋರಣಂ ಕನಕದುಯ್ಯಲಪೂರ್ವಸುರೇಂದ್ರರತ್ನದಿಂ |
ದಚ್ಚರಿದಿರ್ದ್ದ ವೇದಿಕೆ ಸುಧಾಕರ ಕಾಂತದ ಸೆಜ್ಜೆ ಕಾಂತಿಯಂ ||
ಬಿಚ್ಚಳಿ ಪಚ್ಚ ಬಜ್ಜರಗದಂ ನವಮೌಕ್ತಿಕ ಸೌಧಮಾಲೆ ಕ |
ಣ್ಗಚ್ಚರಿಯಾದ ರನ್ನವನೆ ರಯ್ಯ ಮದಲ್ಲಿಯ ಸೂಳೆಗೇರಿಯೊಳ್ || ೧೧೬

ಕಾಮಶಾಸ್ತ್ರಮನೋದುಗುಂ ಗಿಳಿ ಪೇಳ್ಗು ಮಂತದರರ್ಥಮಂ |
ಪ್ರೇಮದಿಂ ಬಳಿಸಾರ್ದ್ದುಸಾರಿಕೆ ಬೀಣೆಯಂ ನೆರೆ ಬಾಜಿಕುಂ ||
ಸೋಮರತ್ನಸಜೀವಪುತ್ರಿಕೆ ಪಾಡುಗುಂ ಕಳಕಂಠಿಗಳ್ |
ಕಾಮನುದ್ಗಮ ಚಾಪನೋಲಗಿ ಸಿಪ್ಪನಚ್ಚರಿ ಯೆಂಬಿನಂ || ೧೧೭

ಲಲಿತರಗಳೆ|| ಅಲ್ಲಿ ಮಣಿಭವನದೊಳ್ಸಲ್ಲಲಿತ ಸೌಧದೊಳ್ | ಪೊಸತಪ್ಪ ಸೆಜ್ಜೆಯೊಳ್ಮಿಸುಪ ನೆಲೆವನೆಗಳೊಳ್ | ಪನ್ನೀರ್ಗಳಂ ಮಿಂದು ಚೆನ್ನೆಸೆಯಲೈತಂದು | ಬಿಳಿಯ ಸವುರವನುಟ್ಟು ಪೊಳೆವಂದುಗೆಯ ನಿಟ್ಟು | ಮುಂಚುತುಂ ಸಡಗರಿಸಿ ಕಾಂಚಿಯ ನಲಂಕರಿಸಿ | ಘುಸೃಣ ರಸದಣ್ಪಿಟ್ಟು ಮಿಸುನಿರವಕೆಯ ತೊಟ್ಟು | ತೊಳತೊಳಪ ತೋರಮಾಣಿಕದ ಮಾಲಿಯನಾಂತು | ತಳತಳಿಪ ಪಂಚರತ್ನದ ಪದಕಮುಮನಾಂತು| ಭುಜಮುಕರಿಕೆಯ ಬಾಹುಪೂರ ಕಟಕಂಗಳಂ | ನಿಜರುಚಿಯ ನುಗುಳ್ವನವರತ್ನ ದುಂಗುರಗಳಂ || ತಳೆದಾಣಿ ಮುತ್ತುಗಳ ಹತ್ತುಸರವಂ ಧರಿಸಿ | ಕಳೆವೆತ್ತ ಪೊಸರತ್ನ ದೋಲೆಯ ನಲಂಕರಿಸಿ | ತೋರಮುತ್ತಿನ ಮೂಕುತಿಯ ನಾಂತು ಕಂಪೆಸೆವ | ಸಾರಮೃಗಮದದ ತಿಲಕಮ ನಾಂತು ನುಣ್ಪೆಸೆವ | ತೆಳ್ಗದಂಪಿಂಗೆ ಮಕರಿಕೆಯ ನಂದಂಗೊಳಿಸಿ| ಯೊಳ್ಗುರುಳ್ಗೆ* ಮುತ್ತಿನಬಲೆಯ ನೊಲ್ದು ಕೈಗೊಳಿಸಿ || ಮಾಲತಿಯ ಮಾಲೆಯಂ ನಿಡು ಜಡೆಯೊಳಳವಡಿಸಿ| ಲೀಲೆಯಿಂ ಕರ್ಣದೊ ಳ್ಕರ್ಣಪೂರಮ ನಿರಿಸಿ | ಕಡೆಗಣ್ಣ ಕಾಂತಿ ಕುಸುಮಾಸ್ತ್ರಮಂ ಕರೆಯುತಿರೆ | ಕುಡುಪುರ್ವ್ವ ಕುಡುವಿಲ್ಲ ಚೆಲ್ವ ಸ್ಯೆಗರೆಯುತಿರೆ | ಕೆಂಬಲ್ಲ ನುಣ್ಬೆಳಗು ದೆಸೆದೆಸೆಗೆ ಪಸರಿಸಿರೆ | ಬಿಂಬಾಧರದ ಕಾಂತಿ ಕೆಂಬರಲ ನಿಳಿಪುತಿರೆ | ತೊಡೆವೆಳಗು ತಳತಳಿಸೆ ನಿಡುಮುಡಿಯ ನಳಿ ಬಳಿಸೆ | ಮುಖರಸಂ ತುಳ್ಕುತಿರೆ ನಖದ ರುಚಿ ನಿಳ್ಕುತಿರೆ | ನಡೆಗಂಚೆ ತೊಡರುತಿರೆ ನುಡಿಗೆ ಗಿಳಿಯೊಡನೆ ಬರೆ | ಮೊಲೆ ಮೇಲುದೊತ್ತರಿಸೆ ಸಲೆ ಚೆಲ್ವು ಬಿತ್ತರಿಸೆ | ಘನನಿತಂಬಂ ಜಡಿಯೆ ತನು ಮಧ್ಯಮುದು

ಸೆಡೆಯೆ | ನೋಡೆ ನಡೆಗೆಡಿಸುತುಂ ಕೂಡೆ ಕೆಳೆಗೊಳಿಸುತುಂ | ಬೇಟಮಂ ಪೆರ್ಚಿಸುತೆ ಕೂಟಮಂ ಮೆಚ್ಚಿಸುತೆ | ಕಳಗಳದ ಕಳರವದ ಚಳದಳಕ ವಿಳದಳಿಕ | ದೆಳನಗೆಯ ಕಳಿಯಗೆಯ ಸರಸಿಜದ ಸಿರಿವೊಗದ | ಗುರುಕುಚದ ವರಕಚದ ಚದುರಿಡಿದ ಮೃದುವಡೆದ | ಸವಿನುಡಿಯ ತಳಿರಡಿಯ | ವಿಡುತದಿಱ ಮೆಲ್ನಡೆಯ | ಪುರವಾರನಾರಿಯುಪ್ಪರವ ಸುಕುಮಾರಿಯರ್ | ಸುರತ ರಣಧೀರೆಯುಸ್ಸರಸ ಗುಣಸಾರೆಯರ್ | ಪೊಸದೇಸಿವೆತ್ತು ಸಂತತವಿಂತು ರಾಜಿಪರ್ | ಕುಸುಮಶರನಂ ರತಿಯ ನನುದಿನಂ ಪೂಜಿಪರ್ ||

ವೃ|| ಆವಾರಾಂಗನೆಯಕ್ಕರ್ಳಾಸ್ಯಕಮಳಂ ಮಂದಸ್ಮಿತಜ್ಯೋತ್ಸ್ನೆಯಿಂ|
ತೀವಿದ್ದರ್ಂ ನಯನೋತ್ಪಳಂ ಕನಕ ತಾಟಂಕಾರ್ಕಬಿಂಬ ಪ್ರಭಾ |
ಶ್ರೀ ವಿನ್ಯಾಸಕ ವಾಗಿಯುಂ ಮುಗಿದುದಿಲ್ಲೇಕೆಂಬೊಡೀತಾಣದೊ |
ಳ್ಕಾವಂ ಕಿತ್ತಡಿಯಿರ್ಪ್ಪ ನಾತೆನ ಮಹತ್ವಂ ತಾನಿದೆಂಬ ಬ್ಬುಧರ್ ||೧೧೮

ಕೆಂಬವಳಂ ಬೊಲೊಪ್ಪುವ ರುಣಾಧರಮಂ ಗಿಳಿ ಬಿಂಬಮೆಂದು ತಾಂ |
ಚುಂಬಿಸಲಾ ಟಿಸುತ್ತಿರೆ ಕರಾಗ್ರದೊಳೊಯ್ಯನೆ ನೋಡಿ ತಮ್ಮಬಾ ||
ಯ್ದಂಬುಲ ಮಿಕ್ಕೆ ವಾರವಧುಗ ಳ್ಸವಿದಾಸ್ಯದೆ ಕೆಂಪನಾಂತುದ |
ಲ್ಲೆಂಬೊಡದೆಂತು ಸಾರ್ದ್ದದೊ ತದಂಚಿತ ಚಂಚುಗೆ ಕೆಂಬರಲ್ಲದಿರ್ ||೧೧೯

ವ|| ಮತ್ತಂ—
ಉದಯಂ ಬೆತ್ತೊಪ್ಪುವರ್ಕಂ ಘನ ರುಚಿ ಕಲಶಂ ಕಾಂಚನೋದಂಚಿತಂ ಪ|
ಬ್ಬಿದ ಸಂಧ್ಯಾರಾಗ ಮೊಪ್ಪಂ ಬಡೆದೆಸೆವ ಮಹಾಪದ್ಮರಾಗಾಂಶು ತಾನಾ|
ಗೆ ದಿಟಂ ಪೂರ್ವಾದ್ರಿಯೆಂಬಂತೆಸೆಗು ಮವಿರತಂ ಭೂಮಿಕಾಧಾರಕಂ ಕಾಂ|
ತಿದ ಸದ್ವಾತಾಯನ ಪ್ರಸ್ಫುರಿತ ಮಮರ್ದು*ಗಾಣಿಕ್ಯ ಮಾಣಿಕ್ಯಹರ್ಮ್ಯಂ ||

ವ|| ಅಂತೆಸೆವ ನಿರ್ವಿತ ಶರ್ಮ ಧರ್ಮ ಹರ್ಮ್ಯದೊ ಳ್ಕಾವರ್ಮ್ಮಯಿಂ ಪೆರ್ಮೆವೆತ್ತು—

ಕಂ|| ಪದಪದ ಮರ್ದಿ*ರೆ ಸುಧಾಸಾ |
ರದ ರದನಚ್ಚದದ ರದದ ರುಚಿ ಬೆರಸೆ ಲಸ |
ನ್ಮದ ಮದನಾಗಮಮಂ ತ |
ಪ್ಪದೆ ಪದೆದುಪ ದೇಶಿಪರ್ಪ್ವಿದಗ್ಧೆಯರದರೊಳ್ || ೧೨೧

ವ|| ಮತ್ತಂ—
ನೆಲೆವಾಡದ ನೆಲೆನೆಲೆಯೊ |
ಳ್ಕಲೆಮೊಲೆಯೊ ಳ್ತಳೆದು ವೀಣೆಯಂ ಬಾಜಿಸುತುಂ ||
ನೆಲೆಗೊಂಡಿರ್ಪುದು ಸತತಂ |
ನೆಲೆಯಾದ ಲತಾಂಗದಂಗನಾಜನಮಾಗಳ್ || ೧೨೨

ವೃ|| ಇದು ಚಿತ್ರಂ ಬಾಳೆವಿಾಸ್ಮಿಂಚನೆಕರೆದವುದಂಭೋರುಹಂಚಂದ್ರಿಕಾ ಸಂ
ಪದಮಂ ಬೀರುತ್ತು ಮಿಲ್ಲಿರ್ದಪುದು ಮಧುಕರಶ್ರೇಣಿ ತಾರಾಳಿಯಂ ತಾ |
ಳ್ದದು ಚಾಂಪೇಯಪ್ರಸೂನಂವಿಚಕಿಲಮುಕುಲಂ ಬೆತ್ತ ದೆಂದಲ್ಲಿ ಹರ್ಮ್ಯಾ
ಗ್ರದ ವಾರಸ್ತ್ರೀಯರಂ ಶಂಕಿಪ ರವಯುವಮಂ ನೋಡಿದ ಭ್ರಾಂತಿಯಿಂದಂ||

ವ|| ಅಂತುಮಲ್ಲದೆಯುಂ—

ವೃ|| ಪುರ ಸೌಧಾಗ್ರಸ್ಥಿತಾ ತ್ಮೇಶ್ವರ ವಿರಹ ಶಿಖಾವ ಚ್ಛಿಖಾ ತಪ್ತಕಾಂತಾ
ಕರ ಕಂಜಾತಾ ಸಿತಾಂಭೋರುಹ ನಿಹತ ತದುದ್ಯದ್ರಜಃಪುಂಜ ಮಂಜು ||
ಸ್ಫುರಬಂಕಾಂಕಂ ಮೃಗಾಂಕಂ ತದಧಿಕಮುಖರುಕ್ತಸ್ಕರಂ ಪೂರ್ಣನಪ್ಪಂ |
ಪರಯುಕ್ತದ್ಯೋಷಿದಾಸ್ಯಾಹೃತ ಸಕಲ ಕಲಂ ಸಕ್ರಮಂ ಕುಂದುತಿರ್ಪಂ ||

ವ|| ಮತ್ತ ಮಾಪುಟಭೇದನ ಸ್ಫುಟಪ್ರದೇಶದಲ್ಲಿ—

ವೃ|| ವರವೇದಂ ವಾದ್ಯನಾದಂ ನೆರೆದಿರೆಕುಸುಮಾ ಮೋದಮಾಹ್ಲಾದವಾದಂ
ನರವಾರಂ ನರ್ತಕೀರಂ ಜಿತ ನಟನಮುದಾರಾಂಗನಾಗೀತಸಾರಂ |
ಸ್ಫುರದತ್ಯಂತಾಂ ಶುತತ್ಯನ್ವಿತ ನವಮಣಿ ಭಿತ್ತ್ಯಂಚಿತಂ ದೇವನುತ್ಯಂ |
ಸುರಕಾಂತಂ ತನ್ನಿಶಾಂತಂ ಕರಮೆಸೆಗು ಮನಂತ ಪ್ರದೀಪಾಳ್ಯಪಾಂತಂ ||

ವ|| ಮತ್ತಂ—

ವೃ|| ತುಂಗ ಮೃದಂಗಮಂಗಳರವಂ ಕಹಳಾಧ್ವನಿ ತಾಳನಿಸ್ವನಂ |
ರಂಗದ ಸಾಂಗ ಸಂಗತ ನಟೀ ನವನರ್ತನ ಮಾಗಮ ಪ್ರಘೋ ||
ಷಂಗಳ ಭಂಗ ಶಂಖನಿನದಂ ಬಿನದಂ ಬಡೆದಿರ್ದ್ದಭಕ್ತಲೋ |
ಕಂಗಳ ಕಂಗಳಂ ಗಮಿಸೆ ಸಂಗಳಿಸಿರ್ಪ್ಪವು ಲಿಂಗಗೇಹದೊಳ್ || ೧೨೬

ಕಂ|| ಆಲಿಂಗಾಲಯಶಿಖರ |
ಸ್ಥೂಲೋನ್ನತ ಕನಕಕಳಶ ಮದು ಗಗನಶ್ರೀ |
ಪಾಲಂ ಗೀವುದು ಕಾಸಕ |
ಚೇಲದ ಚೆಲ್ವಂ ನಿರಂತರಂ ನಿಜರುಚಿಯಿಂ || ೧೨೭

ಮೃಡಸೇವೆಗೆ ಬಿಡುಗಣ್ಣ |
ನ್ನಿಡೆ ತರಲೆಂದ ಜನೊಡಚ್ಚ್ರ ನಿಚ್ಚಣಿಗೆಯನಿ ||
ಕ್ಕಡೆಯಿಟ್ಟ ನೆಂಬ ಪೆಂಪಂ |
ಬಡೆ ದಂಬರಚುಂಬಿ ಗೋಪುರಂ ಕರಮೆಸೆಗುಂ || ೧೨೮

ಅಮರಾಪಗೆ ಯೊಳ್ಮಿಂದಂ |
ದಮರಿಯರಾಗೋಪುರಾಗ್ರದೊಳ್ನಿಂದದರ ||
ಗ್ರಿಮಕನಕ ಕಲಶ ರುಚಿಯನ |
ಹಿಮಕರ ಕರವೆಂದು ಕೇಶಮಂ ಪಸರಿಸುವರ್ || ೧೨೯

ಹರಗೃಹದಿಂ ನೆಗೆದು ನಭೋಂ |
ತರ ಕೈದುವ ಧೂಪಧೂಮ ದಾವೋದಕ್ಕಂ ||
ಬರಲಕ್ಷ್ಮಿ ನಿಜಶಿರೋಜೋ |
ತ್ಕರಮಂ ಬಿಚ್ಚಿರ್ದವೊಲಬ್ದಮಗ್ರ ದೊಳೆಸೆಗುಂ || ೧೩೦

ಅಲ್ಲಿ ಧರಾಸುರ ವಿಸರಂ |
ಮೆಲ್ಲನೆ ಮಾಳ್ಪತುಳ ಹೋಮಧೂಮಂ ಪುಗೆ ಕ ||
ಣ್ಣಲ್ಲಿ ಸಲೆ ಮೇಲೆ ನಡೆಯ |
ಲ್ಸಲ್ಲದೆ ರವಿ ದಕ್ಷಿಣೋತ್ತರಾಯಣ ನೆನಿಪಂ || ೧೩೧

ವ|| ಇಂತನಂತ ವಿಭವ ಸನಾಥಮಾಗಿ ಪೆರ್ಮೆವೆತ್ತಾ ಪುರಮಧ್ಯದಲ್ಲಿ—

ವೃ|| ಕನಕ ಕವಾಟ ಕೋಟಿ ಘಟಿತ ಸ್ಫುಟರತ್ನ ಮರೀಚಿ ವೀಚಿ ಚಂ |
ದನ ಘನಸಾರ ಸೌರಭ ಸಮಾವೃತ ಭೃಂಗರಮಾಧಿವಾಸವಾಸ ವಾ ||
ಸನಳಿನಮಿಂದು ಕಾಂತಗೃಹಕಾಂತಿ ಜಳಂಲಲನಾಕ್ಷಿ ಕೈತವಂ |
ಘನತರ ರಾಜಹಂಸನಿರೆ ರಾಜಗೃಹಂ ಕೊಳದಂತೆ ರಂಜಿಕುಂ || ೧೩೨

ವ|| ಅಂತೊಪ್ಪ ವಂತಃಪುರದ ವಜ್ರಮಯಬಹಿಃ ಪ್ರಾಕಾರ ದಂತರಾಳ ದೊಳಗೆ—

ಕಂ|| ಮರಕತರತ್ನದ ಪೊಸಮಂ |
ದುರದೊಳ್ಹಯರಾಜಿ ಮೆರೆದುದದ ರುದ್ದ್ರಚಿತ ||
ಳ್ತಿರೆ ತತ್ಪ್ರತಾಪ ಮದು ಭಾ |
ಸ್ಕರಾಶ್ವ ವೃಂದಮನೆ ತಂದು ಸೆರೆಯಿಕ್ಕಿದವೋಲ್ || ೧೩೩

ತಾರಾಚಲ ಘನಗುಹೆಯೊಳ |
ಗೈರಾವತ ಮಿರ್ಪ್ಪತೆರದೆ ಶಶಿಮಣಿ ಸೌಧಾ ||
ಗಾರದೆ ತದ್ರುಚಿದವಳಾ |
ಕಾರಾನ್ವಿತಭದ್ರಗಜ ಮದೇನೊಪ್ಪಿದುದೋ || ೧೩೪

ತೊಳಪ ನಿಜರುಚಿ ಸುಧೆಗೆ ಬಗೆ |
ಯೆಳಸಿ ಕರಂ ನಿಂದ ಛೀಕರಾಹಿಗಳ ನಿದೇಂ ||
ತಳೆದುದೊ ಪೇಳೆನೆ ಶಸ್ತ್ರಾ |
ವಳಿಯಂ ತಳೆದ ಮಳಶಸ್ತ್ರಶಾಲೆಯದೆಸೆಗುಂ || ೧೩೫

|| ಅಲ್ಲದೆಯುಂ ||

ವೃ|| ವರಕರ್ಪೂರ ಪರಾಗ ರಂಗ ಮುರುಕಸ್ತೂರೀ ಪ್ರಲಿಪ್ತಂ ಸುಮೋ |
ತ್ಕರಮಾಲಾಕಲಿತಂ ಪ್ರದೀಪ ಪಟು ಧೂಪಾಮೋದಿ ಚಿತ್ರಾಂಬರಾ ||
ವರಣಂ ರತ್ನವಿತಾನ ರಂಜಿತ ಮುದಂಚತ್ಪಂಚವಾದ್ಯಂ ಸುಧಾ |
ಕರ ಕಾಂತೋಪಳ ನಿರ್ಮಿತಂ ಗಿರಿಶ ಪೂಜಾಮಂದಿರಂ ರಂಜಿಕುಂ || ೧೩೬

ವಚನ|| ಮತ್ತಮಂತಃಪುರಮೆಂಬಸರೋವರದ ಸಿರಿಯ ಕರುಮಾಡಂಗಳಂತೆ ಸೆವಕರು ಮಾಡಂಗಳುಂ ಕರುಮಾಡಂಗಳ ಸೊದೆವೆಳಗಂ ಸೊಡೆಗೆತ್ತು ಸಾರೆವರ್ಪ ದೀಹ ದಂಚೆಗಳುಂ ದೀಹದಂಚೆಗಳ್ಗೆ ಕಾಮುರ್ಗಿಲೆಂಬ ಶಂಕೆಗೊಟ್ಟ ದಿಟ್ಟುಗವಿಂದ್ರ ನೀಲನಿಳಯಂಗಳು, ಮಿಂ ದ್ರನೀಲ ನಿಲಯಂಗಳ ಕರ್ಬೊಳೆಪಂ ಕಳ್ತಲೆಗೆ ತ್ತಗಲ್ವ ಗೃಹಸರೋವರಚಕ್ರಂಗಳುಂ ಗೃಹ ಸರೋವರಚಕ್ರಂಗಳ್ಗೆ ಪಾಸೆಯಂ ಬಾಸೆ ಗುಡುವ ಬಾಸೆ ದಳೆದು ನೀಮುರ್ಳಗುವ ನಿತಂಬಿ ನಿಯರುಂ ನೀಮುರ್ಳುಗುವ ನಿತಂಬಿನಿಯರ ನಿಡುಜಡೆಯಂ ಜಳೋರಗಮೆಂದು ತಡಿವಿಡಿದು ನೋಳ್ಪ ನೃಪ ಕುಮಾರಿಯರುಂ ನೃಪಕುಮಾರಿಯರ ಕಟಾಕ್ಷ ರುಚಿಯಂ ವಿಚಕಿಲ ಮಾಲಿ ಯೆಂ ದೆರಗಲವ್ವಳಿಪ ಮದ ಮಧುಪಂಗಳುಂ ಮದಮಧುಪಂಗಳ್ಗೆ ಪುಷ್ಕರ ಭ್ರಾಂತಿ ಗುಡುವ ಪುಷ್ಕರದಿಂ ಮೆರೆವ ಮದಕಳಭಂಗಳು ಮಾಮದಕಲಭಂಗಳಂ ಮೇಚಕಾಚಲ ಮೆಂದಿ ರೋ ಹಿಪ ಲೀಲಾಮಯೂರಂಗಳುಂ ಲೀಲಾಮಯೂರಂಗಳ್ಗೆ ಪೊಸಮಿಂಚಂ ಪಸರಿಪ ಮಿಸುನಿ ವನೆಗಳುಂ ಮಿಸುನಿ ವನೆಗಳ ಮಿಸುಪ ಕಾಂತಿಯಂ ಬಿಸಿಲೆಂದು ಪೆರದೆಗೆವ ಚಪಳ ಚಕೋರಂ ಗಳುಂ ಚಪಳ ಚಕೋರಂಗಳ್ಗೆ ಚಂದ್ರಿಕೆಯಂ ಪರೆಪುವ ಚಂದ್ರಮಣಿಕುಟ್ಟಿಮಂಗಳುಂ ಚಂ ದ್ರಮಣಿ ಕುಟ್ಟಿಮಂಗಳಂ ತಿಳಿಗೊಳಂಗಳೆಂ ದಡಿಯಿಡಲಂಜಿ ಪೆಡಂಮೆಟ್ಟುವ ಕಿರುಮೆಂಡಿರುಂ ಕಿರುನೆಂಡಿರ ಲತಗೆಯ್ದವಜ್ಜೆಯಂ ಕಂಡು ಮಾಂದಳಿರೆಂದು ಕರ್ದುಂಕುವ ಕೇಳಿ ಕಳಕಂಠಿ ಗಳುಂ ಕೇಳಿಕಳಕಂಠಿಗಳೆಂ ಪುರುಳಿಗಳೆನಿಸಿ ಮಾಳ್ಪ ಪಸುರ್ವರಲ ಪಂಜರಂಗಳುಂ ಪಸುರ್ವ ರಲ ಪಂಜರಂಗಳೊಳ್ಮಾರ್ಪೊಳೆವ ನಿಜತುಂಡ ಪ್ರತಿಬಿಂಬಮಂ ಬಿಂಬ ಫಳಂಗೆತ್ತು ತುಡುಂ ಕುವ ತಾಮ್ರತುಂಡಂಗಳುಂ ಸಂಗಳಿಸಿ ಮಂಗಳಮಂ ಕಂಗೊಳಿಸಿರ್ದ ವಂತುಮಲ್ಲದೆ—

ವೃ||ರಮಣೀಕಂಕಣ ಕಿಂಕಿಣೀ ಕ್ವಣಿತ ದಿಙ್ಮಾನ್ಯಾಕರಾಂ ಭೋರುಹ |
ಭ್ರಮಿತಾಂಭೋಜ ಮಿಳದ್ಭ್ರಮದ್ಭ್ರಮರ ಝುಂಕಾರಂ ಸುಬಿಂಬಾಧರಾ ||

ಸಮುದಂಚತ್ಕರಶಾರಿಕಾ ಶುಕರವಂ ಕೂಜತ್ಪಿಕಾಲಾಪಿನೀ |
ಕ್ರಮ ಸಂವಾದಿತ ಸಾಧುನಾದ ವಹ ವೀಣಾರಾವ ಮಲ್ಲೊಪ್ಪುಗುಂ||೧೩೭

ಕರುಮಾಡಂ ಕಣ್ಗೆವಂದ ತ್ತಮೃತ ಕರಶಿಲಾನಿರ್ಮಿತಂ ಭರ್ಮ ಬದ್ಧ |
ಸ್ಫುರದುದ್ಯತ್ಪದ್ಮರಾಗಾಂಚಿತ ಕಲಶಮಿನಗ್ರಾವ ದೀಪ್ಯದ್ವಿಟಂಕಾ |
ವರಣಂ ವೈಡೂರ್ಯವೇದೀ ವಿದಿತ ಮುರುಹರಿತ್ಕುಟ್ಟಿಮಂ ವಜ್ರಕುಡ್ಯಂ |
ಹರಿನೀಲ ಸ್ತಂಭ ಮುದ್ವಿದ್ರುಮ ಲಸದರರಂ ಮೌಕ್ತಿಕ ದ್ವಾರಬಂಧಂ||೧೩೮

ಕಂ|| ಸೊದೆವೆಳಗಂ ಸುಧೆ ಗೆತ್ತಾ |
ಬಿದಿಯ ಮರಾಳಂ ಸರಾಗ ಮುರುತರ ಸೌಧಾ ||
ಗ್ರದೆನಿಂದುದೆಂಬ ಭಾವಮ |
ನೊದ ವಿಪುದಿರುಳದರ ತುದಿಗೆ ಒಂದಮೃಗಾಂಕಂ || ೧೩೯

ಅದರಗ್ರದಲ್ಲಿ ಪಾಡುವ |
ಸುದತೀ ಗೀತಮನೆ ಕೇಳ್ದು ಸುರಪಶು ಸುರಿದ ||
ಗ್ಗದ ಪಾಲ್ಸರಿ ಪಸರಿಸಿತೆನೆ |
ಬಿದುಗದಿರ್ಗಳ ನಿಳಿಪಸೊದೆಯ ದೇಂ ಸೊಗಯಿಸಿತೋ||೧೪೦

ಅಮರಿಯರಾ ನೃಪ ಹರ್ಮ್ಯಾ |
ಗ್ರಮಹಾಧ್ವಜಪಟದ ಮರೆಯೊಳಡಗಿರೆ ಬಿನದ |
ಕ್ಕಮತರಸವಸದೆ ತನ್ಮಕು |
ತ ಮನವರ ಕಪೋಲಮೆಂದು ಚುಂಬಿಸುತಿರ್ಪರ್ || ೧೪೧

ವೃ||ಕಡೆಗಣ್ಣಂಕಾವನಂಬಂಕರೆಯುತೆಕುಡುವುರ್ವಿಂದೆ ಜವ್ವನತ್ತೆ ಮುಂಗೈ|
ಯೆಡೆಯೊಳ್ಕಳ್ಳಿರ್ದ್ದಕೀರಂನುಡಿದನುಡಿಯನಾಕರ್ಣಿಸುತ್ತೊವ್ಮೆರ್ಕೈಯೊಳ್
ಪಿಡಿದುಂ ಭೋಜನಾತದಿಂ ಸುಯ್ಗ್ಗರಪಳಿಗಳ ಸೋವುತ್ತೆ ಮಂದಸ್ಮಿತಂ ಮುಂ |
ದಿಡೆ ಚಂಚಜ್ಜ್ಯೋತ್ಸ್ನೆಯಂ ಸೌಧದೊಳೆಸೆವುದಳುಂಬಂ ನೃಪಸ್ತ್ರೀಕದಂಬಂ ||

ಮತ್ತಂ—

ವೃ|| ಹಿಮಷಂಡಂ ಫೇನಖಂಡಂ ತುರಗತತಿ ತರಂಗಾಳಿ ಪೇರಾನೆ ನೀರಾ |
ನೆ ಮಹಾ ಹರ್ಮ್ಯಾಳಿ ಭೀತಾ ಚಲ ಮಭವಗೃಹಂ ಭೈತ್ರ ಮುತ್ಕೇತು ತತ್ಕೇ |
ತು ಮಣಿವ್ರಾತಂ ತದುದ್ಯನ್ಮಣಿ ಗಣ ಮುರುಸೌಧಾಂಶು ದುಗ್ಧಂ ಧರಿತ್ರೀ |
ರಮಣಾಗಾರಂ ಮಣಿದ್ವೀಪಮಿದೆನೆಪುರಿ ರತ್ನಾಕರಂ ಬೋಲ್ಮನೋಜ್ಞಂ||

ಕಂ|| ಆನಗರಿಯೊಳೆಸೆದಿರ್ಪ್ಪಂ |
ಶ್ರೀನಾಯಕ ವಿಭವ ನಭವ ಪದಭಕ್ತ ನಿಳಾ |
ಮಾನಿನಿಯರಸಂ ಸರಸಂ |
ಭೂನುತ ಸತ್ಯೇಂದ್ರಚೋಳ ರಾಜಾಹ್ವಯದಿಂ || ೧೪೪

ವ್ಯಾನಮ್ರಶ್ರೀಮುಖಸುರವಧೂ ವಕ್ತ್ರಪದ್ಮ ಪ್ರಭಾಂಭ|
ಸ್ನಾನ ಸೋನ್ಮೀಲತ್ಪದಕಮಳೆ ಕಲ್ಯಾಣಿ ಕಲ್ಯಾಣಶೈಲಾ |
ನೂನಾಸ್ಥಾನಾಶ್ರಿತ ಸಿತಗಳಾಂಕಸ್ಥಳಾರೂಢೆ ಗೌರೀ |
ನೀನೆನ್ನಂ ರಕ್ಷಿಪುದು ಸತತಂ ಸತ್ಯವಾಣೀ ಮೃಡಾಣೀ||೧೪೫

ಇದು ವಿನಮದಮರವರ ಮಕುಟತಟ ಘಟಿತ ಮಣಿಗಣ ಮಹಾಪ್ರಭಾ ಪಟಲ ಪರಿವೃತ ಪರ
ಶಿವ ಶ್ರೀಪಾದ ನಖಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯ
ಮಾನ ಸರಸಜನ ಮಾನಿತಶ್ರೀ ಮದುಭಯ ಕವಿತಾವಿಶಾರದ ಶ್ರೀಷಡಕ್ಷರ
ದೇವವಿರಚಿತ ಮಪ್ಪ ರಾಜಶೇಖರ ವಿಳಾಸ ವಿಪುಳಪ್ರಬಂ
ಧದೊಳ್ ದ್ರಾವಿಡ ದೇಶಾದಿ ವರ್ಣನಂ ದ್ವಿತೀ
ಯಾಶ್ವಾಸಂ ಸಂಪೂರ್ಣಂ



## ತೃತೀಯಾಶ್ವಾಸಂ.

(ಶಿವಲೀಲಾವರ್ಣನಂ)

---

ಕಂ|| ಶ್ರೀ ತುಹಿನಗಿರಿ ಸುತಾ ಕರ |
ಜಾತ ಕ್ಷತ ಕಲಿತ ಕಂಧರಂ ನಿಜರುಚಿ ನಿ ||
ರ್ಧೂತ ಯಮಿ ಹೃದಯ ತಮ ಸಂ |
ಪ್ರೀತಿಯೊಳಿಮಗೀಗೆ ಸೌಖ್ಯಮಂ ಶಿವಲಿಂಗಂ ||

ವೃ|| ಹರಚರಣಾರವಿಂದ ಮಕರಂದ ಮಧುವ್ರತ ನೀಶಭಕ್ತಭ |
ಕ್ತಿರಸ ಸುಧಾಬ್ಧಿ ಸೋಮ ನಭಿರಾಮ ಶಿವಸ್ತುತಿ ಪೂರ್ಣಕರ್ಣ ನೀ ||
ಶ್ವರ ಯುಜನಾನು ರಕ್ತನಭಿಯುಕ್ತ ಗುರೂಕ್ತ ಮತಾನುವರ್ತಿ ಶಂ |
ಕರಪರಮಂತ್ರ ತಂತ್ರ ನಿಪುಣಾಗ್ರಣಿ ಭೂವರ ನಾರಶೇಖರಂ || ೨

ಅಕಳಂಕಾ ನನಮಿಂದುವಂ ಗೆಲೆ ಧರಾಭಾರಾವಹಂ ಬಾಹು ದಿ |
ವ್ಯಕರಿಶ್ರೀ ಕರಮಂ ಕರಂ ಜರಿಯೆ ಚಂಚದ್ರಶ್ಮಿ ವಿಸ್ಮೇರ ದೃ ||
ಷ್ಟಿ ಕಳಾಪೇಕ್ಷಣ ಮಬ್ಜಮಂ ಪಳಿಯೆ ಸೌಂದರ್ಯಾಂಗ ನೀಶಾಂಘ್ರಿ ಸೇ |
ವಕನಾ ದರ್ಪಕನಂ ತಿರಸ್ಕರಿಸಿದಂ ಶ್ರೀಚೋಳಭೂಪಾಲಕಂ || ೩

ಕುಳ ಭೂಭೃತ್ಪರಿಪಂಥಿ ಪಾವಕ ಮುಖಂ ಪಾಕಾಪಹಂ ಧ್ವಸ್ತದು |
ರ್ಬಳ ನುದ್ಧ್ವೀತ ಕುಲೀನ ವೃತ್ತಿ ಸತತಂ ಸಂಕ್ರಂದನಂ ಸದ್ಗುಣೋ ||
ಜ್ಜ್ವಳ ಸತ್ಯೇಂದ್ರ ನರೇಂದ್ರರುಂದ್ರ ಯಶಮಂ ಗಂಧರ್ವರಿಂ ಕೇಳ್ದನಾ |
ಣ್ದಳೆ ದಾಗಳ್ಗಡ ನಿದ್ರೆಗೈದಪನೆ ಪಕ್ಷ್ಮಸ್ಪಂದಮಂ ಮಾಳ್ಪನೇ || ೪

ವ|| ಅಂತುಮಲ್ಲದೆ—

ವೃ|| ಸುರನದಿಯಲ್ಲಿ ಮಿಂದು ಸುರಮಾರ್ಗ ಕಚೌಘ ಮನ್ನೆದೆ ಬಿಚ್ಚಿ ವಿ
ಸ್ಫುರಿತ ತದುತ್ಪ್ರತಾಪ ತಪನಾತಪ ದಾರಿಸಿ ಸೂಡಿ ತಾರಕೋ ||
ತ್ಕರ ಕುಸುಮಂಗಳಂ ತಳೆದು ಚಂದ್ರಿಕೆಯೆಂಬ ವಿಶಾಲ ಚೇಲಮಂ |
ಧರಣಿಪ ಕೀರ್ತಿಕಾಂತೆ ವಿಧುದರ್ಪಣಮಂ ನೆರೆ ನಿಂದು ನಿಟ್ಟಿಪಳ್ || ೫

ವದನಂ ಚಂದ್ರನಿಭಂ ವಿಲೋಚನಯುಗಂ ಪಂಕೇಜ ಪತ್ರಪ್ರಭಂ |
ರದನಂ ವಜ್ರಸಮಂ ಪ್ರವಾಳ ಸದೃಶಂ ದಂತಚ್ಛದಂ ಮಂಗಳಾ ||
ಸ್ಪದನಾಸಾಮುಕುಳಂ ಸುಚಂಪಕಸುಮಪ್ರಖ್ಯಂ ಗಳಂ ಶಂಖಸಂ |
ಪದ ಮುದ್ಯದ್ಭುಜ ಯುಗ್ಮಮೇ ಭುಜಗರಾಜಸ್ಪರ್ಧಿ ಭೂಪಾಳನಾ | ೬

ರೂಪದು ಪುಷ್ಪಚಾಪ ನನುದಗ್ರಯಶಂ ಸಸಿಯಂ ಸುಭಾಗ್ಯಮಾ |
ಶ್ರೀಪತಿಯಂ ಪ್ರತಾಪ ಮಿನನಂ ಘನಧೈರ್ಯಗುಣಂ ಧರಾದ್ರಮಂ ||
ಕೋಪಮುದಗ್ನಿಯಂ ಸುರತರಂಗಿಣಿಯಂ ದಯೆ ಗೆಲ್ದು ತೋರದಾ |
ಭೂಪನ ಖಡ್ಗವೊಂದೆ ಸಲೆ ಗೆಲ್ದುದೆ ವೈರಿಸರಾಧಿನಾಥ ರಾ || ೭

ತ್ವರಿತ ಗತಿಪ್ರಯುಕ್ತ ತುರಗೋತ್ಕರ ಸತ್ಖುರಘಟ್ಟನೋತ್ಥಿತೋ |
ದ್ಧುರರಜಮರ್ಕಮಂಡಲ ಮನಾವರಿಸುತ್ತಿರೆ ತತ್ಪ್ರತಾಪದಿಂ ||
ಪರಿಭವಮಾಂತ ಮಾಳ್ಕೆಯೊಳೆ ಮಾಸಿದ ದರ್ಪಣದಂತ ದೊಪ್ಪೆ ನಿ |
ರ್ಜರಕರಿ ಪಾಂಸು ಕೇಳಿಯ ನೊಡರ್ಚುಗುಮಲ್ಲಿ ಜಯಪ್ರಯಾಣದೊಳ್ ||

ಕೃತ ಶುಂಭದ್ವೇಷಿ ಚಂಚತ್ತನು ವಿಭುಧಪತಿ ಸ್ತುತ್ಯೆ ಕಲ್ಯಾಣಿ ತೇಜೋ |
ನ್ವಿತೆ ದೃಪ್ಯಚ್ಚಂಡ ಮುಂಡ ಪ್ರಹರಿಣೆ ರಿಪುದುರ್ಗಘ್ನೆ ಸೌವರ್ಣ ಕೋಶ ||
ಸ್ಥಿತೆ ರೌದ್ರಶ್ರೀಸಮಾಲಂಬಿತೆ ಶುಭಕರ ವಿಖ್ಯಾತೆ ರಕ್ತಾಂಗವಿಭ್ರಾ |
ಜಿತೆ ವಿದ್ಯುದ್ಯೋತಿ ತದ್ಭೂಭುಜ ನಸಿ ಲತಿಕಾಕಾಳಿ ಕಣ್ಗೊಪ್ಪುತಿರ್ಪಳ್ ||

ವ|| ಮತ್ತಮಾನರೇಂದ್ರನುಪೇಂದ್ರನಂತೆ ಸದಾನಂದಕ ರಾಜಿತನುಂ ಕಮಳಭವನಂತೆ ಸಕಳವಿಬುಧ ಸಂಸೇವಿತ ಸಾರಸೋನ್ನತ ಪೀಠಾಸೀನನುಂ ಸುರೇಂದ್ರನಂತೆ ಸಹಸನೇತ್ರಾಶ್ರಿತ ವಿಪುಳ ವಿಗ್ರಹ ಪರಬಲಾಪಹನುಂ ವೀತಹೋತ್ರನಂತೆ ವಿತತ ಕಾಂತಾರ ತಮೋಹನುಂ ದಂಡಧರನಂತೆ ಕುಜನ ತಾಪಕಾರಿಯುಂ ರಾಕ್ಷಸೇಶ್ವರನಂತೆ ಸದಾನವ ವಿಭವನುಂ ಪಾಶಹಸ್ತನಂತೆ ಘನಸಿಂಧು ರಾಜಿತಾಪ್ರಮೇಯ ಬಲನುಂ ಸಮೀರಣನಂತೆ ನಿಜಸತ್ವ ಸಮುದ್ಧೃತಪರಭೂಪರಾಗನುಂ ಧನೇಶ್ವರನಂತೆ ಮಹಾಪದ್ಮಾಶ್ರಿತ ಕೋಶನುಂ ಈಶಾನನಂತೆ ಚಂದ್ರೋಪಲಸಿತಾಂಗ ವೃಷೇಂದ್ರ ಗಮನನುಂ ಕೃತಪದ್ಮಾನಂದನಾಗಿಯುಂ ಸಕಲ ಕಳಾನಿಧಿಯುಂ ಕುವಲಯಾಧಿಪನಾಗಿಯು ಮನಂತರತ್ನನುಂ ಪ್ರಬಳತೇಜಸ್ವಿಯಾಗಿಯು ಮಂಧಕಾರಾತಿ ರುಚಿಯುಂ, ಮಹಾಮಹಿಮ ರಾಶಿಯಾಗಿಯುಂ ಸುರಾಗನುಂ ಸುಧರ್ಮಾಧಿಷ್ಠಿತನಾಗಿಯುಂ ಗೋತ್ರಪ್ರಿಯನುಂ ಭೂಜನಕುಳಾಶ್ರಯನಾಗಿಯುಮವನ ಸ್ವಭಾವನುಂ, ಮಹಿತನಯಯುಕ್ತನಾಗಿ ಯುಮನವಗ್ರಹನುಮತನುವಿಭೂತಿ ವಿಲಸಿತನಾಗಿಯು ಮಶೇಷಭರಣ ಕರನೆನಿಸಿರ್ದನಂತುಮಲ್ಲದೆ.

ವೃ|| ವನದಂ ತಿಂದ್ರನ ಲೋಕದಂತೆ ಸುಮನೋವಾಸಂ ಸುಧಾಧಾಮನಂ|
ತಿನ ನಂತುತ್ಕಮಲಾಶ್ರಯಂ ಗಗನದಂತ ಬ್ಜಾಕ್ಷಸಂತೈದೆ ದಿ ||
ವ್ಯನವೀನ ದ್ವಿಜರಾಜ ರಂಜಿತಸಭಂ ಸತ್ಕಾವ್ಯ ದಂತಬ್ಧಿಯಂ |
ತೆ ನಿತಾಂತಂ ಸರಸಂ ವಿರಾಜಿಸಿದ ನಾರಾಜೇಂದ್ರ ಪಂಚಾನನಂ || ೧೦

ಪತಿ ನಿದ್ರಾಸಕ್ತನಾದಂ ಜಡಧಿಯೊಳದರಿಂ ಜಾಡ್ಯನಾದಂತೆ ಭಂಗಾ |
ನ್ವಿತನಾದಂ ತಂದೆ ಕುಂಭೋದ್ಭವ ನಿನದು ವಲಂ ತಳ್ತಪಾಂಗಿಂದೆ ಪುತ್ರಂ ||
ಕೃತಶಂಭುದ್ವೇಷದಿಂ ಮೆಯ್ಯಳಿದ ನದು ಮಧುಸ್ನೇಹದಿಂದಾದವೋಲೆಂ |
ದುತದುದ್ಯಾವ್ಯಮೋಹಮಂತಾಂತೊರೆದುಸಿರಿಸರಾಧೀಶನಂಸಾದ್ರ್ದಬಾಳ್ದಳ್

ವ|| ಇಂತೊಪ್ಪ ವಿಳಾಕಾಂತ ನಂತಃಪುರಕಮಳದೊಳ್ಕಮಳೆಯಂತೆ ಕನುನೀಯತೆಯನಪ್ಪಗೈದು—

ಕಂ|| ಅಮೃತಮಯವಾಣಿ ಪರಿಲಸ |
ದಮೃತಾಧರೆ ಯಮೃತಕಿರಣಮಂಡಳ ಮುಖಿ ತಾ ||
ನಮೃತವತಿ ಯೆಂಬ ಪೆಸರ್ವೆ ಸ |
ರಮರ್ದಿರೆ ತನ್ನ ಹಿಪ ಮಹಿಳೆ ಕರಮೆಸೆದಿರ್ದಳ್ || ೧೨

ವೃ|| ಲೋಕಾ ಲೋಕನಚಿತ್ರಪುತ್ರಿಕೆ ಲಸಲ್ಲಾವಣ್ಯ ಲಕ್ಷ್ಮೀ ಮುಖ |
ಶ್ರೀ ಕಲ್ಯಾಣ ಯಶೋನಿಧಾನೆ ರತಿರತ್ನಜ್ಯೋತಿ ವಿಖ್ಯಾತಶ್ರೈ ||

ವಾಕೂಪಾರ ಶಶಾಂಕಮಂಡಳಿ ಕಳಾಸಸ್ಯಾವಳೀ ಧಾತ್ರಿ ಸು |
ಶ್ಲೋಕಾನೇಕ ಗುಣಾಬ್ಜಪದ್ಮಿನಿ ವಿಳಾಸಂಬೆತ್ತು ಕಣ್ಗೊಪ್ಪಿದಳ್ ॥ ೧೩

ಕಂ॥ ಕಳರವಜಿತ ಕೋಕಿಳೆ ಕೋ |
ಮಳೆ ಮಲಯಜಗಂಧಿ ಗಂಧ ಗಜಪತಿಗತಿ ಮಂ ॥
ಜುಳೆ ಮಧುಕರ ಕುಂತಳೆ ಮಂ |
ಗಳಮಯಿ ಮಾಧುರ್ಯ ಗುಣ ಗಣೋಜ್ಜ್ವಳೆ ಮೆರೆದಳ್ ॥೧೪

ವೃ॥ ಪ್ರರದ ತುಂಬಿಯಂ ಕರೆಯೊಳೊಂದಿರದಿಂದುವ ನಿಂದು ದರ್ಶನ |
ಕ್ಕಾರಡಿಗೊಳ್ಳ ದಂಬುರುಹಮಂ ಬಿರಿಸಾಗದ ರನ್ನಮಂ ಕೆಲಂ ॥
ಜಾರದ ಚಕ್ರಮಂ ಜರಿದು ಬೀಳದ ಸುಣ್ಮಳಲೊಟ್ಟಿಲಂ ಫಲಂ |
ದೋರದ ಬಾಳೆಯಂ ಬಲಿಯದೊಪ್ಪುವ ಶೋಕ ನವಪ್ರವಾಳಮಂ ॥ ೫೧

ಕಂ॥ ಪಡೆಯದುದಂ ಮುಂ ಪಡೆದಂ |
ಜಡಜಭವಂ ಜಡನೆನಿಪ್ಪ ಸುಡಿಯ ತೊಡಂಕಂ ॥
ಬಿಡಿಸ ಲೊಡಚ್ಚಿರ್ದ ಸೆಂದೆಸೆ |
ಮಡದಿಯ ದಿವ್ಯಾಂಗಮೇಂ ಮನಂಗೊಳಿಸಿದುದೋ ॥ ೧೬

ವ॥ ಅಂತುಮಲ್ಲದೆಯುಂ—

ವೃ॥ ಸುಲಿ ಪಲ್ಕೆಂಬ ವಳಂಬೊಲೊಪ್ಪುವ ಧರಂ ಭೃಂಗಾಳಕಂ ಸುಣ್ಣಾಸ|
ಲ್ತಿಲಪುಷ್ಪೋಪಮನಾಸಿಕಂ ನಗೆಮೊಗಂ ನೀಳ್ದಕ್ಷಿಗಳ್ಸಣ್ಗೊರ ॥
ಲ್ವಿಲಸದ್ದೋರ್ಲತೆ ಕೆಂದಳಂ ಘನಕುಚಂ ಗಂಭೀರನಾಭೀಲಸ |
ದ್ವಲಯಂ ಪೂರ್ಣನಿತಂಬ ಮೊಳ್ತೊಡೆ ಪದಾಬ್ಜಂ ಮಂಜುಳಂ ಕಾಂತೆಯಾ॥

ಕುಮುದನಯನಂ ಕುಂದಸ್ಮೇರಂ ಲಸ ದ್ವಿಸಜಾನನಂ |
ಸಮದಗಮನಂ ಸಾಮೋದಾಂಗಂ ಸುಧಾ ಮಧುರಾಧರಂ ॥
ತಿಮಿರಚಿಕುರಂ ತೀಕ್ಷ್ಣಾಪಾಂಗಂ ಘನಂ ಜಘನಸ್ಥಳಂ |
ಕಮಳಚರಣಂ ಕಣ್ಗೊಪ್ಪಿ ತ್ತಾ ಧರಾಧಿಪ ಕಾಂತೆಯಾ ॥ ೧೮

ವ॥ ಮತ್ತಂ—

ವೃ॥ ತನುಗಳವಟ್ಟರೂಪು ಘನರೂಪ ನಲಂಕರಿಪಚ್ಚ ಜೌವನಂ |
ಮನ ಕಿನಿದಾದ ಜೌವನಕೆ ತಕ್ಕವಿ ಳಾಸತೆ ಸದ್ವಿಳಾಸಮಂ ॥
ಘನಮನೆ ಮಾಳ್ಪಜಾಣ್ಮೆ ಪೊಸಜಾಣ್ಮೆಯ ನುರ್ವಿಪ ಸದ್ಗುಣಂ ನೃಪಾಂ |
ಗನೆ ಗೆಸೆದತ್ತು ಸದ್ಗುಣಮನೇಳ್ಗೆಯೊಳೊಂದಿಪ ಶೈವಸಂಪದಂ ॥ ೧೯

ಕಲಹಂಸೀಯಾನೆ ಕಂಜಕರ್ಣೆ ಕುಮುದವಿಶಾಲಾಕ್ಷಿ ಸಚ್ಚಂದ್ರಿಕಾಮಂ|
ಜುಲ ಲೀಲಾಪಾಂಗೆ ಕುಂದಸ್ಮಿತೆ ಘನಕಬರೀ ಭಾರೆ ಭೂಷ್ಯನ್ನಿತಂಬೋ||
ಜ್ವಲೆ ಸಿಂಹೀಮಧ್ಯೆ ಬಿಂಬಾಧರೆ ಶುಕವಿಲಸದ್ವಾಣಿ ತಾನಾದಪಾಂಗಿಂ |
ದೆ ಲತಾತನ್ವಂಗಿ ಕಲ್ಪದ್ರುಮ ಸಮನೃಪ ನೊಳ್ಕೂಡಿ ಬಾಳುತ್ತುಮಿರ್ದಳ್||

ಕಂ|| ಗುಣವು ನೊಳಕೈದು ತೋರ್ಕ್ಕುಂ |
ಮಣಿ ಮಹಿಯೊಳದೆಂಬುದುಚಿತ ಮವನೀಶ ತಿರೋ |
ಮಣಿಯ ನೊಳಕೈದಃದಾಪೆ |
ಣ್ಮಣಿಯ ಗುಣಂ ತಾನಿದೆಂಬುದೇ ನಚ್ಚರಿಯೋ || ೨೧

ವ|| ಮತ್ತಮಾಸತ್ಯೇಂದ್ರನರೇಂದ್ರಂಗೆ—

ವೃ|| ಶಿವಲಿಂಗಾರ್ಚಕ ನಾರ್ಯಸಂಗತಿರತಂ ತೇಜೋನ್ವಿತಂ ರಾಜನೀ |
ತಿವಿದಂ ವಿದ್ವದಮರ್ತ್ಯರತ್ನ ನಮಳಸ್ವಾಂತಂ ಪರಕ್ಷ್ಮಾಧವ ||
ಸ್ತವನೀಯಂ ಸಮದರ್ಶಿ ಸದ್ಗುಣಯುತಂ ಸತ್ಕೀರ್ತಿಯುಕ್ತಂ ನಯಾಂ |
ಕ ವಚಸ್ಕಂ ಪತಿವೋಹಿನಾಮದಿನಬಂಪಿಂ ಮಂತ್ರಿಪಂ ರಾಜಿಪಂ || ೨೨

ಅರಸನ ಧರ್ಮಕೋಶ ಮೆರಡಂ ಪರಿವರ್ಧಿಪ ನೀಶಭಕ್ತರೈ |
ತರೆ ಪೊಡಮಟ್ಟು ಪೂಜಿಪ ಸರಾತಿ ನರಾಧಿಪ ರೆಲ್ಲರಂ ನಿಜೇ ||
ಶ್ವರಚರಣಾಬ್ಜ ಕಾನತರನಾಗಿ ಪನುತ್ತಮ ಮಂತ್ರ ಭಕ್ತಿ ವಿ |
ಸ್ಫುರಿತ ನಿಜಪ್ರತಾಪದಿ ನವಂ ಪತಿವೋಹಿ ಯೆನಿಪ್ಪ ಮಂತ್ರಿಪಂ || ೨೩

ಪರರಾಜ ಶ್ರೀಕರಾ ಕರ್ಷಣ ಕರಣ ಕರಂ ಸೂರ್ಯಸೂತಂಬೊಲಂಭೋ |
ಧರ ವಾಹಂ ಬೊಲ್ವಿಪಕ್ಷ ಕ್ಷಿತಿಭೃದುರುಬಲಧ್ವಂಸಿ ಪದ್ಮಂಬೊಲುದ್ಯ ||
ತ್ಪರಿಣದ್ಧಶ್ರೀಗುಣಾಂಕಂ ರಜನಿ ಕುವಲಯಂ ಬೊಲ್ವಲಂ ಸೋಮಪಾದಾ |
ಬ್ಜರುಚಿಸ್ನಿಗ್ಧಂ ಸದಾವೋದ ರಸರಸನುದಂಚತ್ಸಮುದ್ರಂ ಬೊಲಾತಂ ||

ಕಂ|| ಆಮಂತ್ರಿ ಮೌಳಿಮಣಿಗೆ ಮ |
ಹಾಮಹಿಮ ಮಹೀಶಮೌಳಿಮಣಿ ಚೋಳಧರಾ ||
ಭಾಮಾಧಿಪತಿ ಮನೋಜ್ಞ |
ಶ್ರೀ ಮಹಿತಂ ಪೃಥುಳಭಾಗ್ಯಮಂ ಪದೆದಿತ್ತಂ || ೨೪

ಅಂತಿತ್ತ ಸಂಪದಮ ನವ ನನವರತ ಮನುಭವಿಸುತು ಮಿರ್ದ್ದು—

ವೃ|| ತೆನಯರ್ಕ್ಕಳ್ತನಗಿಲ್ಲಮೆಂದು ಪಿರಿದಾಯಾಸಕ್ಕೆ ಪಕ್ಕಾದ ಕಾ |
ಮಿನಿಯಂ ಸಂತಮಿಡುತ್ತೆ ಚಿದ್ಘನ ಶಿವಾಚಾರ್ಯಾಂಯಘ್ರಿಂ ಪೊರ್ದ್ದಿ ಸೇ ||

ವನೆಗೆಯ್ಯುತ್ತಮಿರಿತ್ತಮಂತ್ರಬಲದಿಂ ಸತ್ಪುತ್ರನಂ ಪೆತ್ತು ತ |
ತ್ತನಯಾನಂದಿತ ನಿರ್ದ್ದನಾ ನೃಪಸಭಾವಾರಾಶಿ ಚಂದ್ರೋದಯಂ || ೨೬

ವ|| ಅಂತಾ ಪತಿವ್ರೋಹಿ ಮಂತ್ರಿಪಂ ನಿಜಸುತಂಗೆ ಮಿತವಚನಾಭಿಧಾನ ಮನಿಟ್ಟು ಕಟ್ಟಳ್ಕರಿಂ ಸಲಹುತ್ತ ಮಿರ್ಪ್ಪಿನ ಮೊಂದು ದಿವಸಂ—

ವೃ|| ಹರಿಪೀಠಾಸೀನ ನುದ್ಯತ್ಸಚಿವ ನಿಚಯ ಸಂಯುಕ್ತನುದ್ದೀಪ್ತದಿವ್ಯಾ|
ಭರಣಾಂಚ ತ್ಕಾಯನು ರ್ವೀಶ್ವರ ನಿಕರನಿಷೇವ್ಯಾಂಘ್ರಿಪದ್ಮಂ ಪಯೋಭೃ |
ದ್ಭರ ನಮ್ರಾಂಗಾಂಗ ನಾಚಾಲಿತ ಚಮರ ರುಹದ್ವಂದ್ವ ಪಾರ್ಶ್ವಂ ಜಯಸ್ವ |
ಸ್ವರ ಭಾಸ್ವದ್ವಂದಿ ವೃಂದಸ್ತುತ ನವನಿಪ ನೊಡ್ಡೋಲಗಂಗೊಟ್ಟನಾಗಳ್ ||

ವ|| ಅಂತೊಡ್ಡೋಲಗಂ ಗೊಟ್ಟಿರ್ದು ನಿಜಾಮಾತ್ಯನಪ್ಪ ಪತಿದ್ರೋಹಿಯುಂ ನಿರೀಕ್ಷಿಸಿ

ಕಂ || ಲೀಲೆ ಮಿಗೆ ನುಡಿದ ನಾನರ|
ಪಾಲಂ ಪತಿವ್ರೋಹಿಯೊಡನೆ ಪದಪಿಂ ಪರಮೋ ||
ಕ್ಷಾ ಲಂಬಮೆನಿಪ ಕಾಶಿಗೆ |
ಕಾಲಾರಿಗೆ ಪೋಗಿ ಜಹ್ನುಜಾಂಬುಗಳಿಂದಂ || ೨೮

ವೃ|| ತುಂಬಿ ಸಹಸ್ರಕುಂಭ ದಭಿಷೇಕವ ನಾಗಿಪೆ ನಾಗಮೋಕ್ತಮಾ |
ರ್ಗಂಬಿಡಿದಂಬಿಕಾಪತಿಗೆ ಮನ್ಮನದಿಷ್ಟಮಿದಲ್ತೆ ತಳ್ವದೇ ||
ಳೆಂಬುದು ಮಿಂಬು ವೆತ್ತ ಪಣೆಗತ್ತುರಿಬೊಟ್ಟು ತದಂಘ್ರಿಪದ್ಮದೊ |
ಳ್ತುಂಬಿ ಯಿದೆಂಬವೋಲಮರ್ದು ಪತ್ತಿರೆ ತಾಂ ಪೊಡಮಟ್ಟು ಮಂತ್ರಿಪಂ ||

ಕಂ || ನುಡಿದನೆಲೆ ಜೀಯ ನಿಮ್ಮೊ |
ಳ್ಮೃಡನೆಂದುಂ ನೆಲಸಿ ನಿಂದನದರಿಂ ನೀಮಿ ||
ರ್ದ್ದೆಡೆ ಕಾಶಿಯಲ್ತೆ ಬೇರಿ |
ನ್ನೆಡೆಯಾಡಲದೇಕೆ ತರಿಪೆ ನಾನದಿಯುದಮಂ || ೩೦

ವೃ|| ಜವದಿಂದಿಲ್ಲಿಗೆನುತ್ತೆ ಧರ್ಮವತಿಗೇಳ್ನೂರ್ಗಾವುದಂಬೆತ್ತ ಶಾಂ |
ಭವ ಲೀಲಾಗೃಹ ಮಾದ ಕಾಶಿಯ ನದೀತೋಯಂಗಳಂ ಮಂಗಳೋ ||
ತ್ಸವದಿಂ ಭೂವರವೃಂದಮಂ ಸಿಲಿಸಿ ಸಾಲ್ಗೊಂಬಂತುಟೋ ರೊರ್ವ್ವರಿಂ |
ದವಸಂ ದೈದಿಸಿದಂ ಸುವರ್ಣಘಟದಿಂ ತಾನೆಂದೊಡೇಂ ಪೆರ್ಮೆಯೋ|| ೩೧

ವ|| ಅಂತು ಘನಕನಕಘಟೀ ಸಹಸ್ರದಿಂ ಭಾಗೀರಥೀ ಭದ್ರಮಯಾಂಬುವ ನೈದಿಸಲೊಡನೆ ಸಂಭ್ರಮಂ ಮಿಗೆ—

ವೃ|| ತಳೆದಾನಂದಮನಾನರೇಂದ್ರತಿಳಕಂ ಪೂಜಾಗೃಹಂ ಬೊಕ್ಕು ನಿ |
ರ್ಮಳಕಾಯಂ ಭಸಿತಾಕ್ಷ ಮಾಲಿಕೆಗಳಂ ತಾಳ್ದಂಗದೊಳ್ತನ್ನದೀ |
ಜಳದಿಂ ಮಂತ್ರಯುತಂ ಶಿವಾಗಮವಿದಂ ಶೂರ್ಯಸ್ವನಂ ಪೊಣ್ಮೆ ಮಂ |
ಗಳಲಿಂಗಕ್ಕಭಿಷೇಕಮಂ ರಚಿಸಿದಂ ಮಾಹೇಶ್ವರಪ್ರಾವೃತಂ ‖ ೩೨

ಅನಂತರಂ—

ಘನ ಘನಸಾರ ಕುಂಕುಮ ವಿಲೇಪನದಿಂ ಧವಳಾಕ್ಷತಂಗಳಿಂ |
ವನರುಹ ಕೈರವ ಪ್ರಸರದಿಂ ನವಸೌರಭ ದಿವ್ಯ ಧೂಪದಿಂ ||
ದಿನ ರುಚಿದೀಪದಿಂ ದಿನಿ ದನಪ್ಪಿದ ಸಾರ ಸುಧಾನ್ನದಿಂ ಹಿಮಾಂ |
ಕನಿಯುತ ವೀಟಿಕಾ ವಿತತಿಯಿಂ ನೃಪನರ್ಚಿಸಿದಂ ಕಪರ್ದಿಯಂ || ೩೩

ವ|| ಅಂತುಮಾ ರಾಜಮೌಳಿಮಣಿಗೆ ರಾಜದ್ರಾಜಮೌಳಿಮಣಿಮಣಿದು ರಾಜವದು ಪಚಾರಮ ನೋಜೆವಿಗೆ ರಚಿಸಿ—

ವೃ|| ತನು ರೋಮಾಂಚಮನೊಂದೆ ಮುಂದೆ ನಯನಾ ನಂದಾಶ್ರುಗಳ್ಜಾರೆ
ರೆ ನವಂ ಗದ್ಗದಮುಣ್ಮೆ ಪೊಣ್ಮೆ ನಡುಕಂ ಘರ್ಮಾಂಬು ಕೈಗಣ್ಮೆ ಜಾ|| [ತೋ|
ಣ್ಮೆ ನಿತಾಂತಂ ದೃಢಯೋಗ ರಾಗರಸದಿಂ ಚಿತ್ತಾಬ್ಧಿ ನೀರೇರೆ ಮಿ |
ರೆ ನರೇಂದ್ರಂ ಶಿವಲಿಂಗ ಸಂಗರತಿಯಂ ತಳ್ತಪ್ಪಿದಂ ತೊಪ್ಪಿದಂ || ೩೪

ವ|| ಮತ್ತಮಾಗಳ್—

ವೃ|| ನುತಿಗೈದಂ ನುತರಾಜರಾಜ ನಗಜಾ ತಾ ಕಾಂತನಂ ಕಾಂತನಂ |
ಶಿತಶೂಲಾ ಹತನಾಗ ನಾಗಭರಣ ಭ್ರಾಜಿಷ್ಣುವಂ ಜಿಷ್ಣುವಂ ||
ದಿತನಂ ವಿಶ್ರುತದೇವ ದೇವನ ಸುದಾರ ಶ್ರೀದನಂ ಶ್ರೀದನಂ |
ದಿತನಂ ದರ್ಪಿತಭಾವ ಭಾವಜತಮಃಶ್ರೀ ಸೋಮನಂ ಸೋಮನಂ || ೩೫

ವ|| ಅದೆಂತೆನೆ—

ವೃ|| ಶ್ರೀಮತ್ಪೂರ್ಣ ಸುಖಾಬ್ಧಿ ನಿತ್ಯ ನಿರುಪಾಧಿ ಜ್ಯೋತಿ ವಿಖ್ಯಾತಮಾ
ಯಾಮೋಹಾಮಯದೂರ ಸಾರ ನಿಗಮಾಂತಾ ಭೇದ್ಯ ಸದ್ರೂಪ ಚಿ ‖
ದ್ವ್ಯೋಮಾಕಾರ ಯಮೀಂದ್ರ ಮಾನಸ ಸಮುಲ್ಲಾಸಾಸ್ಪದಾವಾಸ ನಿ |
ಷ್ಕಾಮ ಪ್ರೇಮ ಮಹೇಶರಕ್ಷಿಸೊಲವಿಂ ಶ್ರೀಶೈಲಜಾವಲ್ಲಭಾ ‖ ೩೬

ತಳೆದತ್ತಬ್ಜಭವಾಂಡಸಾಮವ ಭವದ್ವಾಮಾಕ್ಷಿ ಸಂಜಾತಭೂ |
ವಳಯಂ ಮೇಣದನೋವಿ ಮಿತ್ರವೆಸರಂ ತಾಳ್ದಿರ್ದ ದಾದಕ್ಷಿಣೋ ‖
ಜ್ಜ್ವಳನೇತ್ರಂ ಪಣೆಗಣ್ಣದಂ ದಹಿಸುಗುಂ ಕಾಲಗ್ನಿರೂಪಂ ನಿರಾ |
ಕುಳ ಮಿಂತಾಗಿರೆ ನಿರ್ವಿಕಾರ ನೆನಿಪ್ಪೈ ಶ್ರೀಶೈಲಜಾ ವಲ್ಲಭಾ ‖ ೩೭

ಪೆದೆವಿಲ್ಗಳ್ತಳೆದಿರ್ಕ್ಕ ಮೀಧರಣಿಯುಂ ಸೂತಂ ಕರಂ ಪುಟ್ಟಿಪಂ |
ಪದಪಿಂದೀ ಭುವನಂಗಳಂ ಪೊರೆಗುಮಾ ಬಾಣಂ ರಥಾಂಗಂಗಳಂ ||
ತದಸುದ್ಯದ್ದ್ರುಚಿಯಿಂ ಪಲಂ ಬೆಳಗುಗುಂ ನಿಸ್ನಶ್ವಮಾಕಮ್ಮಬೊ |
ಮ್ಮದ ಪಾಂಗುಂ ಸಲೆ ಬೋಧಿಕುಂ ಬುಧರ್ಗೆಕೇಳ್ ಶ್ರೀಶೈಲಜಾವಲ್ಲಭಾ || ೩೮

ಹರಿ ಮುಖ್ಯಾಮರರಂ ಪಡಲ್ವಿಡಿಸಿ ಲೋಕಾನೀಕಮಂ ಪರ್ಬ್ಬಿ ಮ |
ರ್ಬ್ಬಿರ ದೇಳ್ತರ್ಪ್ಪ ವೊಲೊತ್ತಿ ಸುತ್ತಿ ಪರಿತರ್ಪ್ಪತ್ಯುಗ್ರಹಾಲಾಹಲೋ ||
ತ್ಕರವುಂ ತಾಳದೊಡೋವೊದೇವಸತಿಯುಸ್ಸೀರ್ಮಂತ ಸಿಂದೂರ ರಾ |
ಗರಜಶ್ರೀಯ ಸದೆಂತು ತಾಳ್ದಪರೊ ಪೇಳ್ಶ್ರೀಶೈಲಜಾ ವಲ್ಲಭಾ || ೩೯

ಶಿವ ನಿನ್ನಂಘ್ರಿಯ ನಾವ ನೊರ್ಮ್ಮೆ ನೆನೆವಂ ಸದ್ಭಕ್ತಿಯಿಂ ದಾಶನಂ
ದಿವಿಜರ್ಕ್ಕಳ್ನೆನೆವ ತ್ವರ್ದಂಘ್ರಿಗೆರಪಂ ತಾನಾವ ನಾತಂಗೆ ಯೋ ||
ಗಿವರ ತ್ತಾರ್ವೆರಪರ್ಥವನ್ನುತಿಯನಾವಂ ಮಾಳ್ಪನಾ ಧನ್ಯನಂ |
ಸವಿವಾತಿಂ ಸುತಿಗೈವುದಾಗಮಚಯಂ ಶ್ರೀಶೈಲಜಾ ವಲ್ಲಭಾ || ೪೦

ನಿಗಮಂಗಳ್ಗೆ ಕಾಣಲಾರ್ತ್ತವೆ ಭವತ್ಪಾದಾಬ್ಜಮಂ ನಿನ್ನ ನೇಂ |
ಪೊಗಳಲ್ಯಕ್ತರೆ ವಿಷ್ಣುಮುಖ್ಯವಿಬುಧ ರ್ಯೋಗೀಂದ್ರರುಂ ಭಾವದೃ ||
ಷ್ಟಿಗಳಿಂ ಲಕ್ಷಿಸಲೇಂ ಸಮರ್ಥರೆ ಭವದ್ಭಕ್ತರ್ಕ್ಕಳೇ ಕಾಣಲುಂ |
ಪೊಗಳಲ್ಲಕ್ಷಿಸಲುಂ ವಲಂ ನೆರೆದಪರ್ ಶ್ರೀಶೈಲಜಾ ವಲ್ಲಭಾ || ೪೧

ಭವದೊಳ್ಬರ್ಪ್ಪ ಮರರ್ಕ್ಕಳಂ ಭವವಿಮುಕ್ತ್ಯರ್ಥಂ ಶರಣ್ಬೊಕ್ಕೊಡೇ |
ನವರೇ ನೀವರೆ ಮುಕ್ತಿಯಂ ಭವಹರಂ ನೀನಲ್ಲದಿಷ್ಟಾರ್ಥಮಂ ||
ತವೆ ಮಾಡಲ್ಸುರಪಾದಪಂ ನೆರೆಗು ಮೀಬರ್ಬೂರವೃಕ್ಷಂಗಳೇ |
ವೃವೆ ಕೇಳಾತಿರೆ ನೀನೆ ಮೋಕ್ಷವರದಂ ಶ್ರೀಶೈಲಜಾ ವಲ್ಲಭಾ || ೪೨

ಸುಲಭಂ ದೇವ ಭವತ್ಪದಾಬ್ಜ ಭಜನಾ ಸಕ್ತರ್ಗ್ಗೆ ಧರ್ಮಾರ್ಥ[illegible]ಕಾ |
ಮ ಲಸನ್ಮುಕ್ತಿಗಳೆಂಬುದಂ ತಿಳಿದು ಮೆನ್ನೀಮಾನಸಂ ನಿನ್ನನಿ ||
ಶ್ಚಳಭಕ್ತಿ ಸ್ಪೃಹಯಾಸದಿರ್ಪ್ಪತೆರನೇಂ ಪೇಳ್ಮೋಹಮೋ ತನ್ನ ಮಂ |
ಜುಳ ಪುತ್ರಾಂಗಮ ಸಿಕ್ಕಿ ದೊಂದು ಮುಳಿಸೋ ಶ್ರೀಶೈಲಜಾವಲ್ಲಭಾ ||

ಕರದೊಳ್ತಾಳ್ದ ನಿಜೇಷ್ಟಲಿಂಗದೆ[illegible]ಮನಂ ಪಂಚಾಕ್ಷರಂ ವಕ್ತ್ರದೊ |
ಳ್ಕೊರಲೊಳ್ತಳ್ತ ಶಿವಾಕ್ಷ ಮಾಲೆ ಭಸಿತಾಲೇಪಂ ಲಲಾಟಾ ಗ್ರದೊಳ್ ||
ಗುರು ಪಾದಾಂಬುಜಸೇವೆ ಕಾಯದೊಳೊಡಂಬಟ್ಟಿರ್ಪ್ಪಭಕ್ತಂಗದಾ |
ರ್ಸ್ಸರಿ ನೀ ನಾತನಧೀನನಲ್ತೆ ಸತತಂ ಶ್ರೀಶೈಲಜಾ ವಲ್ಲಭಾ || ೪೫

ವ|| ಅಂತು ಪೊಗಳ್ದು ಪೊಡವಟ್ಟು ಮಗುಳ್ದು ಲಿಂಗಪೂಜೆಯಂ ಸಾಂಗಮೆನೆ ರಚಿಸಿದ ನಂತರಂ—

ಕಂ || ಧನಕನಕ ವಸನ ಮಣಿಭರ |
ಣ ನಿವಹ ನವಗಂಧಮಾಲ್ಯವೀಟಿಕೆಗಳಿ ನಂ ||
ದನು ನಯದಿಂ ದರ್ಚಿಸಿದಂ |
ಜನನಾಮಯಹರಣ ಶರಣ ಚರಣಾಂಬುಜಮಂ || ೪೫

ವ|| ಅಂತರ್ಚಿಸಿ ಪೊಗೞ್ದು ಮಗುೞ್ದಿರಗಿ ಕೈಂಕರ‍್ಯ ಮನಾಂತ ವರಕಾರುಣ್ಯಮಂ ಪಡೆದ ರಸನ ನವರತಮಿಂತು ಪೊಳ್ತುಗಳೆವುತ್ತುಮಿರ್ದನನ್ನೆವರ ಮಂತಪುರದೊಳಮೃತವತಿ ಮಹಾದೇವಿ ಯೊಂದು ಪುಣ್ಯವಾಸರ ಸುಪ್ರಭಾತಸಮಯದೊಳ್ಶಿವಲಿಂಗ ಪೂಜಾನಂತರಂ ಪುರಾಣಮಂ ಕೇಳ್ವಲ್ಲಿ ಮಾರ್ಕಂಡೇಯಚರಿತಂ ಬರೆವರೆ ತದ್ಬಾಲ ಲೀಲೆಯ ನಾಕರ್ಣಿಸಿ ತನಗೆ ತನಯ ನಿಲ್ಲಪ್ಪುದರಿಂ ನೆನೆದು ಬಿಸುಸುಯ್ದು ಕೆಲದೊಳಿರ್ದ್ದ ಕೆಳದಿಯೊಡ ನಿಂತೆಂದಳ್—

ಕಂ|| ಎಳೆವರೆಯುದೊ ಳೆಳೆಯಕ್ಕ್ಳ |
ನೆಳಸುತೆ ನಳಿತೋಳ್ಗಳಿಂದೆ ಬಿಗಿದಪ್ಪಿ ಮಸಂ ||
ಗೊಳೆ ತಳ್ತು ನೋಡಿ ಮುದ್ದಿಪ |
ವಿಳಾಸವೊಂದಕ್ಕೆ ನೋಂತುದಿಲ್ಲಾಂ ಕೆಳದೀ || ೪೬

ಶಿವ ಭಕ್ತಿಯಿಲ್ಲದನ ಬಾ |
ಳ್ಕವಿತ್ವ ಮಿಲ್ಲದನ ಜಾಣ್ಮೆ ಕಳೆಯಿಲ್ಲದ ಪೆಣ್ ||
ಜವಮಿಲ್ಲದಶ್ವಮುಂ ತನು |
ಭವ ನಿಲ್ಲದಭಾಗ್ಯ ಮೆಂತುಮೇಂ ಮೆರೆದಪುದೇ || ೪೭

ಅರಳೆಲೆ ಮಾಗಾಯ್ಕುಣಿಯು |
ತ್ತಿರೆ ಸುಣ್ಣೊಸ ಲೊಳ್ಕದಂಪಿ ಸೊಳ್ಳ್ಮ್ರದು ಹಾಸ ||
ಸ್ಫುರಿತಂ ಮೊಳೆವಲ್ಮೆನುಗು |
ತ್ತಿರೆ ಪರಿದಾಡುವ ಕುಮಾರನೆಂದಾದಪನೋ ||

ಕರತಳದಿಂ ದೆನ್ನಯ ನು |
ಣ್ಬೆರಲಂ ಪಿಡಿದೇಳ್ದು ಜನನಿ ನಡೆದಪೆ ನೆನುತೊಂ||
ದೆರಡಡಿಯನಿಟ್ಟು ನಿರಿಯಂ |
ಭರದಿಂ ತಳ್ಕೈವಮಗನ ನೆಂದೀಕ್ಷಿಪೆನೋ || ೪೯

ಅರಸನ ಪಿಂದೆಸೆಯೊಳ್ಮೆ |
ಯ್ಗರೆದೆಲ್ಲಿರ್ದಪೆನೊ ಜನನಿ ಪೇಳೆನು ತೊಲವಿಂ ||
ಪರಿತಂದೆಳನಗೆ ಮಿಸುಗು |
ತ್ತಿರೆ ಕುವರಂ ಕೊರಲನೆಂದು ಬಿಗಿದಪ್ಪುವನೋ || ೫೦

ವೃ|| ಮಗನಂ ತಳ್ತಮರ್ದಪ್ಪಿ ನೋಡಿ ಮೊಗವಂ ನುಂಡಾಡಿ ನೇಹಂಮನಂ
ಬುಗೆ ಮಾತಾಡಿಸಿ ಲಲ್ಲೆಗೈದು ನಗಿಸುತ್ತಿಕ್ಕೈರ್ಗಗಳಂ ಸಾರ್ಚೆರ್ವಮಂ ||
ಡೆಗೆ ಬಟ್ಟಾಡೆ ಕೆಲಕ್ಕೆ ಚಿಮ್ಮಿ ಮೊಲೆವಾಲಂ ಮತ್ತೆ ಬಾಯ್ಮೂಗಿಡಿ ಮೆ |
ಲ್ಲಗೆ ತೊಟ್ಟಿಲ್ಗಿರದಿಟ್ಟು ತೂಗುವೆ ಳವೆಣ್ಣೇಂನೋಂಪಿಯಂ ನೋಂತಳೋ ||

ಕಂ|| ಪಡಿನೆಳಲಂ ಮಣಿಕುಟ್ಟಿಮ |
ದೆಡೆಯೊಳ್ಕಡೆ ನೋಡಿನೋಡಿ ದಾಯೆನುತಂ ಕೈ ||
ದುಡುಕಲದು ತುಡುಕೆ ನಗೆನಗೆ |
ಕಡುಬಿನದಂ ಬಡೆವ ಕಂದನೆಂದಾದಪನೋ | ೫೧

ವೃ|| ಇಂತು ಪಲುಂಬಿ ಪಂಬಲಿಸಿ ಭೂಷಣಮಂ ತೆಗೆದಿಟ್ಟು ಚಿತ್ತದೊ |
ಳ್ಚಿಂತೆಯ ನಾಂತು ಕಾಂತೆ ಬಿಸುಸುಯ್ಯಲರಿಂ ತನುವಲ್ಲಿ ಕಂದಿತೆಂ |
ಬಂತಿರೆ ತಮ್ಮೊಳಾಳಿಯರಿದೇನೆಸುತಳ್ಕಿರೆ ತಳ್ವದೈದಿ ದೇ |
ಕಾಂತ ನಿಕೇತನಕ್ಕೆ ಧರಣೀಪತಿ ಬಂದೊಳಪೊಕ್ಕು ನೋಡಿದಂ || ೫೨

ಎಡಗೈಯಿಂದೊತ್ತಿ ಶಯ್ಯಾತಳಮನಿನಿಸು ಜಾರಿರ್ದುದಂ ಮೇಲುದಂ ಪೊಂ|
ಗಡಗಂ ಗಲ್ಕೆಂದು ಶಬ್ದಂಗುಡೆ ಬಲದ ಕರಾಂಭೋಜದಿಂ ದೇರನೂಂಕು ||
ತ್ತೊಡನುತ್ತುಂಗಸ್ತನಾಗ್ರಕ್ಕಿಳಿವ ಮುಡಿಯ ಸಾಂತಾಂಕುಶುಂಕಂಠದಿಂ ಮುಂ|
ಗಡೆಯೊಳ್ಕಂಡೇಳ್ವಳಂ ಕೈವಿಡಿದವಳೊಡನೆ ಧರ್ಮಾಸನಂ ಗೊಂಡನಾಗಳ್||೫೪

ವ|| ಅಂತು ಕುಳ್ಳಿರ್ದು ಕೂರ್ಮೆಯಿಂ ನಿರೀಕ್ಷಿಸಿ —

ವೃ|| ಮೃಗಮದಗಂಧಿ ನಿನ್ನ ಮೊಗವೆಂಬ ಸುಧಾಕರ ಬಿಂಬ ಮಿಂದು ಬೆ |
ಳ್ನಗೆ ತಿಳಿಜೊನ್ನಮಂ ತೊರೆದು ದಿಂದುಟಿ ಚೆಂದಳಿರ್ಪುರ್ಗುಂದಿ ದ ||
ತ್ತಗಲದ ರಾಗ ಸಾಗರದ ಪೆರ್ಚುರ್ಗೆ ತಗ್ಗಿರ್ದು ದಕ್ಷಿಕೈರವಂ |
ಮಿಗೆ ಕೊರಗಿತ್ತು ಚಿತ್ತಪರಿತಾಪ ಮಹಾತಪದಿಂ ಮನೋರಮೇ ||

ವ|| ಅಂತು ಮಲ್ಲದೆಯುಂ—

ವೃ|| ಕರಕಮಳಂ ಕಪೋಳ ಶಶಿಬಿಂಬಮನಪ್ಪಿದುದೇಕೆ ನಿನ್ನ ಭಾ |
ಸುರ ನಯನೋತ್ಪಳೋದ್ಗಳಿತ ಕಜ್ಜಳ ವಜ್ಜಲ ಬಿಂದುಬೃಂದಮ ||

ಟ್ಟರಣಗಣಂ ಕುಚಾಬ್ಜ ಮುಕುಳಕ್ಕೆರಗಿರ್ದ್ದಪುದೇಕೆ ಸುಯ್ಯೆಲ |
ರ್ಕೆಱ್ಕರಗಿಪುದೇಕೆ ಪೇಳಧರ ಪಲ್ಲವಮಂ ತರಳಾಯತೇಕ್ಷಣೇ ‖ ೫೬

ಕಂ‖ ಅರುಣಾಂಬುಜ ನಾಳಮನಾ |
ವರಿಸಿದ ನವಫೇನಪಿಂಡ ಮಾಲೆಯ ಚೆಲ್ವಂ ‖
ಪರಿಭವಿಸಿ ಮೆರೆದುದೇಕಿ |
ಲ್ಲರಸಿ ಪದಾಗ್ರದೊಳೆ ಮೌಕ್ತಿಕದ ಪದಕಟಕಂ ‖ ೫೭

ಗುರುಜಘನ ಬಿಂಬ ಕಂಬರ |
ಹರ ಕರಿವರಕುಂಭದ ಮಿಂಬುವಡೆದುದಿ ದಿಲ್ಲೇ ‖
ಕರವಿಂದಾನನೆ ಮಣಿಗಣ |
ಸುರುಚಿರತರ ಮೇಖಲಾ ಶಿರೋಮಾಲಿಕೆಯಿಂ ‖ ೫೮

ಅಲರ್ಗಣೆಯ ನಚ್ಚಿಸಿದ ವಿಚ |
ಕಿಲಮಾಲೆಯ ನಾಂತ ಪೂರ್ಣಕುಂಭದ ಚೆಲ್ವಂ ‖
ಗೆಲೆ ವಂದುದಿಲ್ಲ ಕುಚಮಂ |
ಡಲ ಮಿದು ತರಳಾಕ್ಷಿ ಮುತ್ತಿನೇಕಾವಳಿಯಿಂ ‖ ೫೯

ಮದನ ಮಣಿದರ್ಪಣದ ಪದ |
ಪೊದವಿದ ಕದಪಿದು ಪೊದಳ್ದ ಮಕರಿಕೆಯಂ ತಾ‖
ಳದೆ ಕರೆವೆರಸದ ಶಶಿಬಿಂ |
ಬದ ಪೋಲ್ವೆಯ ನಾಳ್ದು ದೇಕೆ ಕಮಳದಳಾಕ್ಷೀ ‖ ೬೦

ವದನಾಂಬುಜ ಲಕ್ಷ್ಮಿಯ ನ |
ಪ್ಪಿದ ವೇಣ್ಯಾಸಿತಾಹಿ ಭೀತಬಾಲೇಂದು ವಿದಂ ‖
ಬುದ ನೆನಿಸದೇಕೆ ನೊಸಲೊ |
ಳ್ಪದಮಳತರ ಭಸಿತ ಲಸಿತ ತಿಲಕಂ ರಮಣೀ ‖ ೬೧

ಮೊಗಸಸಿ ನಯನಾಂಭೋರುಹ |
ಯುಗಳ ಮನಮರ್ದಪ್ಪಿ ನಿಂದುದೆಂಬೀ ಪುರುಡಿಂ |
ಜಗುಳ್ದಂತೆ ತೋರ್ಪ್ಪುದಿಲ್ಲೆಲೆ |
ಮೃಗಾಕ್ಷಿ ಪೇಳೇಕೆ ಕರ್ಣಪೂರದ ನೆಯ್ದಿಲ್ ‖ ೬೨

ಕಾರಿರುಳೊಳವರ್ದ ತಾರಗೆ |
ಗೋರಗೆ ಯೆನಿಸಿರ್ದುದಿಲ್ಲ ರಲ್ಮ ಡಿಯೊಳಿದೇಂ ||
ಕಾರಣ ಮರಿಪೆನ್ನೊ ಳ್ಮದ |
ವಾರಣ ಮೃದುಯಾನೆ ನಿನ್ನ ಮನದುಮ್ಮಳಮಂ || ೬೩

ಮದಕೋಕಿಳ ಕಳರವೆ ಸಂ |
ಮದಕರ ಮೃದುವಾಣಿ ನಿನ್ನ ಮೊಗದೊಳ್ಪೊರಪೊ ||
ಣ್ಮದೊಡಳಿರವ ಮಿಲ್ಲದ ಪ |
ದ್ಮ ದೊಳೆಣೆವಂದೆನಗೆ ಮಾಳ್ಪುದಿದು ಮನದಳಲಂ || ೬೪

ಆರಿಂದಾದುದು ಚಿಂತಾ |
ಭಾರಂ ಶಶಿವದನೆ ಪೇಳ್ವು ದೆನ್ನೊಡನೆಂದಾ ||
ಭೂರಮಣಂ ಬೆಸಗೊಳೆ ಕರ
ವಾರಿಜಮಂ ಮುಗಿದು ಮಧುರಭಾಷಿಣಿ ನುಡಿದಳ್ || ೬೫

ಆವಧರಿಪು ದಖಿಳಧರಣೀ |
ಧವ ನಿವಹ ಕಿರೀಟ ಕೋಟಿ ಮಣಿಗಣ ಘೃಣಿ ಸಂ ||
ಭವ ನವ ರವಿ ರುಚಿಚಿರಾಂ |
ಘ್ರಿವ ನೇರುಹಯುಗಳ ದೇವ ದೇವಿಯರಿರವಂ|| ೬೬

ವಾಸ್ತವ ಪುರಾಣ ದೊಳ್ಪೃಥು |
ಳಸ್ತನಿ ಕೇಳ್ದಳ್ಮೃಕಂಡುಜೋಪಾಖ್ಯಾನ |
ನ್ಯಸ್ತ ಮೃಕಂಡುಜಲೀಲಾ |
ವಿಸ್ತಾರಮ ನೆಲ್ಲಮಂ ವಸುಂಧರೆಯುರಸಾ || ೬೭

ತನಗಿಲ್ಲಪ್ಪುದರಿಂದಂ |
ತನಯುರ್ಬ್ಬಸುಸುಯ್ದು ಬಿಸುಟು ಮಣಿಭರಣಮನೀ ||
ವನಿತೆ ವಸಂತಂ ತೊಲಗಿದ |
ವನಲತೆಯೆನೆ ಬಿನ್ನ ನಿಪ್ಪಳೆಲೆ ಧರಣೀಶಾ || ೬೮

ತನುವಲ್ಲಿಗೆ ಫಳಮಾವುದೊ |
ತನಯಂ ತತ್ತನೆಯ ನಿಲ್ಲದಿರೆ ವಿಫಳಂ ಕೇ ||
ಳ್ತನುವಲ್ಲಿಯದರಿನೀ ಮಾ |
ನಿನಗೆ ಕರಂ ಚಿಂತೆ ನೆಗಳ್ದುದವನಿಪತಿಳಕಾ || ೬೯

ದೇವಿಯರ ಚಿತ್ತದಸು ವಿದು |
ದೇವಚ್ಛರ್ತ್ತವಿಪುದೆಂದು ನುಡಿದಳ ನುಡಿಯಂ ||
ಭಾವಿಸಿ ಕಾಂತೆಯ ಚಿಂತೆಯ |
ನಾವಿಭು ತಾಂ ಪಚ್ಛುರ್ಗೊಂಡು ತಳೆದಿಂತೆಂದಂ || ೭೦

ವೃ|| ಶಿವಮುಕ ವಾರ್ಧಿ ವರ್ಧನಶಶಾಂಕ ನಸಂಗಜಮರ್ದನಾರ್ಚನೋ |
ತ್ಸವ ಸವನ ಪ್ರದೀಕ್ಷಿತ ಸನಜ್ಜಕಳಾಧರ ಭಕ್ತಬೃಂದ ಬಾಂ ||
ಧವ ನನುಮೇಶ ಲಾಂಛನ ಧರಾಂಘ್ರಿ ಸರೋರುಹ ಭಕ್ತಿಯುಕ್ತನಂ |
ಕುವರನ ನೀಗಳೆನ್ನ ಬಗೆಯುಂ ಬಯಸಿರ್ದಪುದಂಬುಜಾನನೇ || ೭೧

ವ|| ಎಂದು ನುಡಿದಿನಿಯನನುಕೂಲವಚನಮಂ ಕೇಳ್ದು |

ಕಂ|| ವದನಸ್ಥಿತ ವಾಣಿಯ ಕ |
ಣ್ಗದಿರುವ್ವಿರ್ದುದೆಂಬ ಭಾವಮಂ ಬೀರಿ ಲಸ ||
ದ್ರದನ ದ್ಯುತಿ ಪಸರಿಸೆ ತ |
ತ್ಸುದತಿ ಮೃದೂಕ್ತಿಯೊಳೆ ಕಾಂತನೊಡ ನಿಂತೆಂದಳ್ || ೭೨

ವೃ||ಪರರಾಜಾಶೇಷತೇಜಸ್ಸ್ಥಿತಿ ಕೆಡೆ ಕಮಳಾಮೋದಮಿಂಬಾಗೆ ಧಾತ್ರೀ|
ಪರಿತೋಷಂ ಪೆರ್ಚೆ ಪೂರ್ವಕ್ಷಿತಿಭೃದಧಿಕರಾಗಂ ಸಮಂತಾಗೆ ಸನ್ಮಾ ||
ರ್ಗರುಚಿ ಪ್ರಸ್ಫೂರ್ತಿ ಚೆಲ್ವಾಗಿರೆ ಕರಮುದಯಂಗೊಂಬ ಬಾಲಾರ್ಕನಂ ಮ|
ದ್ವರಚೇತಃಪದ್ಮ ಮಿಗೆ ಬಯಸಿದಪುದು ಕೇಳ್ಭೂಮಿಪಾಲಾವತಂಸಾ ||೭೩||

ಕಂ|| ಗಿಳಿವರಿ ಮೆರೆಯದ ನಂದನ |
ಮಳಿಶಿಶು ವಿಹರಿಸದ ಪೂಗೊಳಂ ಕಳರವದಿಂ ||
ದೆಳ ಅಂಚೆ ಯಡಿಯಿಡದ ತ |
ಣ್ಬೆಳಿ ಲರ್ಭಕ ನಾಡದಂಗಳಂ ಮಂಜುಳಮೇ || ೭೪

ಎನೆ ನೃಪನೆಂದಂ ಕೇಳಂ |
ಗನೆ ನೀನೆಂದಂತೆ ತನಯನಂ ಪಡೆಯದೆ ಬಾ ||
ಳ್ವನ ಸಂಸಾರಮಸಾರಂ |
ತೆನೆಯಿಲ್ಲದ ನವ ಪಲಾಲದಂತಿರೆ ಧರೆಯೊಳ್ || ೭೫

ಸುರತರುವಿರೆ ಸಿರಿವಡೆವುದು |
ಪಿರಿದೆ ಸರೋಜಾಕ್ಷಿ ಮದ್ಗುರೂತ್ತಮ ನೊಲ್ದೊ ||

ಪ್ಪಿರೆ ತತ್ಪ್ರಸಾದಬಲದಿಂ |
ಪಿರಿದು ಮದಿಷ್ಟಮನೆ ಪಡೆಯಲಕ್ಕುಮಮೋಘಂ || ೭೬

ಅದರಿಂ ಚಿಂತೆಯ ನುಳಿವುದು |
ಸುದತಿ ಸುಧಾಕರ ಧರಾಂಘ್ರಿಯಂ ಪೂಜಿಪುದ ||
ಭ್ಯುದಯಕರ ಧರ್ಮವಂ ಮಾ |
ಳ್ಪುದು ದೊರೆತಪುದಲ್ತೆ ಭವದ ಭೀಪ್ಸಿತಮುಬಲೇ || ೭೭

ಇಂತೆಂದು ತಿಳಿಪೆ ಧರಣೀ |
ಕಾಂತಂ ಬಗೆವಿಡಿದು ಚಿಂತೆಯಂ ತಾನುಳಿದಳ್ ||
ಕಾಂತೆ ಬಿಡದಾಪ್ತವಚನದಿ |
ನೇಂ ತಿಳಿವೊಡೆ ಚಿಂತೆಗೌಷಧಂ ಪೆರತುಂಟೇ || ೭೮

ವ|| ಅನಿತರೊಳ ವರ ಮನೋರಥಮಂ ನಿಮಿರ್ಚಲೆಂದು ಸೈಪು ಸಾಕಾರತವೆತ್ತು ಬ
ಪ್ಪರಂತೆ—

ವೃ|| ಘನಮಹಿಮ ಸ್ಫುರ್ವೃತ್ತ ರಭವಾರ್ಚಕ ರುಜ್ಜ್ವಲಲಿಂಗಸಂಗ ಸ |
ಜ್ಜನ ವಿನುತ ಶ್ರೀವಾಗಮ ವಿಶಾರದ ರಾರ್ಯರು ದಾತ್ತಕೀರ್ತಿ ಮಂ ||
ಡನ ರುಚಿತಜ್ಞ ರಪ್ರತಿಮ ವೇದಶಿರೋಮಣಿ ಪಂಚವರ್ಣ ಚಿಂ |
ತನ ನಿಜಚಿತ್ತ ಚಿದ್ಘನ ಶಿವಾರ್ಯ ಗುರೂತ್ತ ಮರೆಯ್ದೆ ಸಾದರಂ || ೭೯

ಮಣಿಮಯ ತೋರಣಂ ಮುಕುರ ತೋರಣ ಮೊಪ್ಪಿರೆ ಮಂಗಳಧ್ವಜಂ
ಕುಣಿಯೆ ಗಜವ್ರಜಂ ರಥಪದಾತಿ ತುರಂಗಮ ಸಂಘಮಲ್ಲಿ ಸಂ ||
ದಣಿಗೊಳೆ ಭೂರಿಭೇರಿಯ ಘನಸ್ವನ ಮೊಂದೆ ದಿಗಂತಮಂ ಗುರು |
ಪ್ರಣತಿ ಸಮುತ್ಸುಕಂ ಮುದದಿ ನಂದಿದಿಗೊಂಡ ನವಂ ನರಾಧಿಪಂ || ೮೦

ವ|| ಅಂತಿದಿರ್ಗೊಂಡು ಕಟ್ಟದಿ ರೊಳ್ಕೊಂಡು ಪುಷ್ಪಾಂಜಲಿಗೆದರ್ದು ಸಾಷ್ಟಾಂಗ ಪ್ರ ಣತನಾಗಿ ಸಾತ್ವಿಕಂ ಮಿಗೆ ನಿರೀಕ್ಷಿಸಿ ನಿಜಹೃದಯ ನಳಿನಮಿನ್ನವರ ಮಿಂತಿರ್ದ ದೆಂದರಿಪು ವಂತೆ ಕರಕಂಜಮಂ ಮುಗಿದು ನಲವಿಂ ನುತಿಗೈದು ಪರಮಾನಂದಂ ಮಿಗೆ ಪರಕೆಯಂ ಕೈ ಕೊಂಡು ಕೃತಾರ್ಥತೆಯ ನಪ್ಪೈದು ಕನಕಮಯ ಸುಖಾಸನದೊಳ್ಕುಳ್ಳಿರೆಗೊಟ್ಟು ಮೂರ್ತಿ ಗೊಳಿಸಿ, ಮಕುಟವರ್ಧನಬ್ಬೆಗಳಸಿ ಬರೆ ಮಹೋತ್ಸವಂ ಬೆರಸು ಧರ್ಮಮಂ ತಪ್ಪದ ದಾನ ದಂತೆ ಜಸಮಂ ತಪ್ಪದ ಜಯದಂತೆ ಸುಖಮಂ ತಪ್ಪದ ಸುಕೃತದಂತೆ ಸಾಹಸಮಂ ತಪ್ಪದ ಸತ್ಯ ದಂತೆ ವಿನಯಮಂ ತಪ್ಪದ ವಿವೇಕದಂತೆ ಪರಿಮಳಮಂ ತಪ್ಪದ ಪವಮಾನನಂತೆ ಶಿವನೊಲವಂ ತಪ್ಪದ ಶಿವಯೋಗದಂತೆ ಗುರುಕುಲೋತ್ತಂಸನಂ ನೃಪಕುಲೋತ್ತಂಸ ನಂತಃಪುರಕ್ಕೊಡಗೊಂ

ಡು ಬಂದು, ಮಣಿಖಚಿತ ದಿವ್ಯ ಸಿಂಹಾಸನ ದೊಳ್ಮೂರ್ತಿಗೊಳಿಸಿ ಪರಿಮಳೋದಕದಿಂ ಪಾದ ಪ್ರಕ್ಷಾಳನಂ ಗೆಯ್ದು ಸಾದರಂ ಮಿಗೆ ಪಾದತೀರ್ಥಮಂ ತಳೆದು ವಿವಿಧೋಪಚಾರಂ ಗೈದು ಸಚಿವನುಂ ತಾನುಂ ಸಮುಚಿತಾಸನ ದೊಳ್ತದನುಜ್ಞೆಯಿಂ ಕುಳ್ಳಿರ್ದುರ್ ಬಳ್ಳಿವರಿವ ಭಕ್ತಿಗಡ ಪಾರ್ಗಿ ತದೀಯಕಟಾಕ್ಷ ರುಚಿರ ರುಚಿ ಸಾಂದ್ರಚಂದ್ರಿಕೆಯಿಂ ದಾನಂದ ಸುಧಾಬ್ಧಿ ತೆರೆ ಮಸಗಿದಂತೆ ಪಲ್ಲವಿಳಗು ಪಸರಿಸೆ ಮೆಲ್ಲನಿಂತೆಂದಂ—

ವೃ|| ಪಾವನ ದೇಶಿಕಾನ್ವಯ ಪಯೋಜ ದಿನೇಶ್ವರ ನಿಮ್ಮಪಾದ ಸಂ |
ಸೇವನೆಯಿಂದರಲ್ದುದು ಮದೀಯ ಮನಃಕಮಳಂ ವಿವೇಕಮೆಂ ||
ಬಾ ವಿಮಳಾಕ್ಷಿ ಗಾದುದಖಿಳಾರ್ಥನಿರೀಕ್ಷಣ ಮಿಂದು ಧನ್ಯಸ |
ದ್ಭಾವ ಮನಾಂತೆ ನನ್ನವೊಲದಾ ಕೃತಕೃತ್ಯರಿಳಾ ತಳಾಗ್ರದೊಳ್ || ೮೧

ಕಂ|| ಎನೆ ಕೇಳ್ದು ಹರಿಸವೊಗೆತರೆ |
ಮನಕ್ಕೆ ಕರುಣಾವಲೋಕನಂ ಗೈದೆಲೆ ಭೂ ||
ವನಿತೇಶ ನಿನ್ನ ಮನದಿ |
ಷ್ಟನಿಯೋಜನೆಗೆಯ್ವ ವಾವುದದನರಿಪೆಂದರ್ || ೮೨

ವ|| ಎನೆ ಮುದಂಬಡೆದು—

ಕಂ|| ದೇವ ಬಯಸಿರ್ದ್ದಪುದು ಮ |
ದ್ಭಾವಂ ಭವದೀಯ ವದನದಿಂ ತಿಳಿದಪೆನೆಂ ||
ದಾ ವಿಮಳವೆನಿಪ ಶಿವಲೀ |
ಲಾವಳಿಯಂ ಪೇಳ್ವುದೆ ನಗದಂ ದಯೆಯಿಂದಂ || ೮೩

ವ|| ಎಂದು ಭಕ್ತಿಭರದಿಂ ಪುತ್ರವರಮಂ ಬೇಳ್ಪುದಂ ಮರೆದಿಂತೆಂದು ಬಿನ್ನಪಂ ಗೆಯ್ದು ನರೇಂದ್ರನ ಬಗೆಗೆ ಮೆಚ್ಚಿ ಸಂತಸಂಬಟ್ಟು ನೀಡುಂ ನಿರೀಕ್ಷಿಸಿ ನಿಖಿಳ ಶ್ರುತಿ ಪುರಾಣಾಗಮ ಸಾರಮಪ್ಪ ಶಿವಲೀಲೆಯಂ ಪೇಳಲುಜ್ಜುಗಿಸಿ—

ಕಂ|| ಹೃದಯ ಕಮಳದೊಳೆ ನೆಲಸಿದ |
ಮದನಾರಿಯ ಮಕುಟದಗ್ರದೆಳವೆರೆಗದಿರು ||
ಣ್ಮಿದುದೆನೆ ಪಸರಿಸೆ ವಿಳಸ |
ದ್ರದನದ್ಯುತಿ ಮೊಗದೊಳಾ ಗಳವರಿಂತೆಂದರ್ || ೮೪

ವೃ|| ಮೊದಲೊಳ್ನಿಷ್ಕಳಮಾಗಿ ನಿರ್ವಿಕೃತಿಯಿಂ ತಾನೊಂದೆ ಸಚ್ಚಿತ್ಸುಖಾ|
ಸ್ಪದ ಲಿಂಗಂ ಸತಮಾಗಿ ಪೂರ್ಣ ಮುರು ಷಟ್ತ್ರಿಂಶತ್ಸ್ವರಂ ಶಕ್ತಿಯಂ ||
ಗದ ಸಂಪರ್ಕದೆ ಗಟ್ಟಿಗೊಂಡ ತಿಳಿನೆಯ್ಯಂತಾಮಹೇಶತ್ವ ಮಾಂ |
ತದು ತದ್ದೇಹದೊಳೊಲ್ದು ತಾಳ್ದುದುರುಲೀಲಾ ಜಾಲಮಂ ಭೂಮಿಪಾ ||

ವ|| ಅದೆಂತೆಂದೊಡೆ—

ವೃ||ಸುರಗೌರ್ಯೀರೊರ್ವರನಿತ್ತು ದಕ್ಷನೊಸೆದಿರ್ಪರ್ತ್ತೇಳ್ತನೂಜಾತೆಯ|
ರ್ಸರಿಯೆಂಬಂತಿರೆ ಕೂಡಿರೆಂದು ಕುಡೆ ಮಾರುತ್ತೊರ್ವಳೊಳ್ಪ್ರೀತಿ ಸಂ ||
ದಿರೆ ಶಾಪಂಗುಡೆ ಕಂದಿ ಕುಂದಿ ತಪಮಂ ತಾನಾಂತಿರ ಲ್ಮೆಚ್ಚಿ ಶಂ |
ಕರ ನಾಕಾಶನದೀ ಮೃಣಾಳಮೆನೆ ತಚ್ಛಂದಾರ್ಧಮಂ ನೋಡಿದಂ || ೮೬

ಮಂದಾರಾಮಳ ಪುಷ್ಪದೊಳ್ಪರಿಮಳಂ ಶ್ರೀದೇವಸದ್ರತ್ನದೊ |
ಳ್ಚಂದಂಬೆತ್ತೆಸೆದಿರ್ಪಕಾಂತಿ ನೆಲೆಗೊಂಡಿರ್ಪಂತೆ ತನ್ನೊಳ್ಸದಾ ||
ನಂದಂ ಬೆತ್ತೆಸೆದಿರ್ಪ್ಪಮಾ ರಮಣಿಯೊಳ್ಕೂಡಿರ್ದ್ದ ಜಾಂಡಂಗಳಂ |
ಕಂದರ್ಪಾರಿ ನಿಮಿರ್ಚ್ಚಿ ಸಾರ್ಚ್ಚಿ ಸುಮನಸ್ಸಂಪ್ರೀತಿಯಂ ಮಾಡಿದಂ|| ೮೭

ಒರ್ಮ್ಮೆ ಜಗತ್ತ್ರಯಕ್ಕೆ ಲಯಮಂ ರಯದಿಂದೆ ನೆಗಳ್ಚಿ ತನ್ನ ಚಿ |
ದ್ಧರ್ಮಮನಕ್ಕರಿಂ ನೆನೆಯೆ ತಾಂ ವೃಷಭಾಕೃತಿಗೊಂಡು ಮುಂದಿರಲ್ ||
ಕೂರ್ಮೆಯೊಳೇರಿ ನಿಂದನಿದು ಚಿತ್ರಮಿಳಾತಳದಲ್ಲಿ ಧರ್ಮ ಮೇ |
ಣ್ಧರ್ಮ ದೊಳಿರ್ಪ್ಪದೆಂದು ವಿಬುಧರ್ಪ್ಪೊಗಳುತ್ತಿರೆ ಪಾರ್ವತೀಶ್ವರಂ|| ೮೮

ಸ್ಫೂರ್ಜದ್ಗರ್ಜದ್ಧ್ವನಾಡಂಬರ ರವಡಮರುಧ್ವಾನ ಮಿಂಬಾಗೆ ಗಂಗಾ |
ವಾರ್ಜಂಗಳ್ಸೀಕರಂಗಳ್ಸುರಿಯೆ ಮೊರೆಯೆ ಸರ್ಪಾಳಿ ಚಂಡೇಭಚರ್ಮಂ ||
ಪರ್ಜನ್ಯಾಭಂ ಕಟೀಮಂಡಳದೆ ಪೊಡರೆ ಕಾಲಾನಲಾಕ್ಷಿಸ್ಫುರದ್ರೋ |
ಚಿರ್ಜಾಲಂ ಪೊಣ್ಮೆ ದಿಗ್ಭಿತ್ತಿಗಳೊಡೆಯೆ ಹರಂ ತಾಂಡವಂಗೆಯ್ಯುತಿರ್ದ್ದಂ ||

ತಪ ಮಿರ್ಪ್ಪದ್ರಿಜೆಯಲ್ಲಿ ಗಿಮ್ಡಿ ವಟುವೇಷಂಬೊತ್ತು ನಾನಾಪ್ರಪಂ |
ಚ ಪರಾಲಾಪಮನಾಡಿ ನೋಡಿ ಮನಮಂ ಮೆಚ್ಚುತ್ತೆ ಪೋಗೆಂದು ತ ||
ದ್ವಿಪುಳಾವಾಸ ಕಲಂಪಿನಿಂ ಕಳುಪಿ ಬಂದಾನಂದದಿಂ ನಿರ್ಜರಾ |
ಧಿಪ ರೇಳ್ತಂದಿರೆ ಶಂಭು ಕೂರ್ತ್ತು ಪಸೆನಿಂದಂ ತನ್ಮಹಾದೇವಿಯೊಳ್|| ೯೦

ಅಧರಿತ ಮನ್ಮಥಾಕೃತಿ ಮನೋಹರಮೂರ್ತಿ ವಿಳಾಸಮಾಂತು ಬಂ |
ದಧಿಗತ ರೂಪ ಯೌವನಸುರೇಂದ್ರಪುರೀಸುದತೀ ವಿತಾನಮಂ |
ಮಧುಸಖ ಬಾಣಪಾತಕೊಳಗಾಗಿಸಿ ಭಿಕ್ಷೆಯನಲ್ಲಿ ಬೇಡುತಂ |
ವಿಧುಧರ ನೊರ್ಮ್ಮೆ ತಾಳ್ದ ನಧಿಕೋತ್ಸುಕ ಭಿಕ್ಷುಕಲೀಲೆಯಂ ನೃಪಾ||೯೧

ಅಂಬಿನ ಶತ್ರು ಸತ್ತಿಗೆಯು ದರ್ಕ್ಕಗಿದಿರ್ಪ ರಥಂ ನಿಜಾಶ್ವಮಾ |
ಲಂಬಿಸೆ ಕೋಡೊಳಿಟ್ಟು ಪೊರೆವಾನೆಯದಂ ಮದವೇರಿ ಪಾಠನೇ ||
ನಂಬುಗೆ ವೆತ್ತ ಮಂತ್ರಿ ಗುಣಮಂ ಪರಿಪಾಲಿಪ ಬಿಲ್ಬಲಂ ತದ |
ಸ್ತ್ರಾಂಜಕಿಯಾಗಲೆಚ್ಚ ಮುಗುಳಂಬನ ನೀಕ್ಷಿಸಿ ಸುಟ್ಟ ನೀಶ್ವರಂ || ೯೨

ಶ್ವೇತನೆನಿಪ್ಪ ಪಾತಕಿ ಪಣಾಂಗನೆಗೆಂ ದರಲಂ ತರುತ್ತೆ ಧಾ |
ತ್ರೀತಳದಲ್ಲಿ ಬೀಳೆ ಗಿರಿಶಂಗೆ ಸಮರ್ಪಣಮೆಂದ ಸೈಪು ರಂ ||
ಭಾತರುಣೀರತಂ ಗುಡಲ ವಳ್ಮಿಗೆ ಬೋಧಿಸೆ ತನ್ನನರ್ಚ್ಚಿಸಿ |
ಪ್ಪಾತನ ನೊಯ್ಯಲೈದಿದ ಕೃತಾಂತನ ನರ್ದ್ದಿಸಿದಂ ಮಹೇಶ್ವರಂ || ೯೩

ನಾರಿ ಶರಂ ತದಂಗಜನೆ ಸಾರಥಿ ತತ್ಪದ ಶತ್ರುಮಿತ್ರರೇ |
ಸೇರಿದ ಗಾಲಿಗಳ್ತದಹಿತಂ ಪೆದೆ ತದ್ಧೃತಮೇ ರಥಂ ತದಾ ||
ಧಾರವೆ ಬಿಲ್ತದಗ್ರ ಚರಶ್ಮಪ್ತಿ ವಿಧಾಯಕ ಮಶ್ವಮಾಗೆ ತ |
ಚ್ಛೋರ ಸಜಾತಿ ಜಾತಪುರಮಂ ಪುರವೈರಿ ಕನಲ್ದು ಚುರ್ಚ್ಚಿದಂ || ೯೪

ವರಕಂಜೋದ್ಭವನಿಂ ವರಂ ಬಡೆದು ದಿಕ್ಪಾಲಕ್ಕಳಂ ಪೊಯ್ದು ತ |
ತ್ತರುಣೀ ವೃಂದಮ ನೆಯ್ದೆ ತಂದು ಸೆರೆಯಂ ದೈತ್ಯಾರಿಯಂ ಕಟ್ಟಿಮೇ ||
ಲಿರದಿಟ್ಟಂದು ಜಲಂಧರಂ ಬರೆ ಜಯಾರ್ಥಂ ವಾರ್ಧಿಯೊಳ್ಚಕ್ರಮಂ |
ಬರೆದಂಗುಷ್ಠದಿನೆತ್ತಿಸುತ್ತೆ ತಲೆಗೊಯ್ದಂ ಶರ್ವನಾಚಕ್ರದಿಂ || ೯೫

ಪುಟ್ಟಿಪೆ ನೀಜಗತ್ರಯಮ ನೆನ್ನೊಳೆ ವಿಶ್ವಮಿದಿರ್ಕ್ಕೆ ಮಾಗಳುಂ |
ನೆಟ್ಟನೆ ಬೊಮ್ಮ ಮಾನೆನುತಹಂಕರಿಸುತ್ತಿರೆ ವಿಷ್ಣು ವೇದಮಂ ||
ಪುಟ್ಟಿಸಿದಾತನೆಮ್ಮ ನಭವಂ ಪರಬೊಮ್ಮ ಮೆನಲ್ಕನಲ್ದು ಬೊ |
ಬ್ಬಿಟ್ಟೊಡೆ ಬೊಮ್ಮನೊಂದು ತಲೆಯಂ ಪರಿದಾಂತನಮಂ ಸದಾಶಿವಂ || ೯೬

ದಕ್ಷನೊ ಡರ್ಚ್ಚೆ ಮಾರಣಮಹಾ ಮಖಮಂ ನಿಜವೈರದಿಂದೆ ಕೇ |
ಳ್ದ ಕ್ಷಯರೂಪೆ ತತ್ಸುತೆಯೆನಿಪ್ಪುದನಂಬಿಕೆ ಪೋಗಿ ನೀಗೆ ಕೇ ||
ಳ್ದಕ್ಷಣ ಮುಗ್ರಮೂರ್ತಿದಳೆದೆಯ್ದಿ ತದಾಪ್ತರ ನಿಕ್ಕಿ ಸೊರ್ಕ್ಕಿದಾ |
ದಕ್ಷನ ಮಸ್ತಕಂ ಗಡಿದು ವೀರಸಮಾಹ್ವಯ ನಾದನೀಶ್ವರಂ || ೯೭

ಘೋರಹಿರಣ್ಯ ಕಾಕ್ಷ ರುಧಿರೋನ್ಮದಿರಾ ಮದ ಮತ್ತನಾಗಿ ದೈ |
ತ್ಯಾರಿ ನೃಸಿಂಹಮೂರ್ತಿ ದಳೆದರ್ದಿ ಸುತಂತಿರೆ ಲೋಕಮಂ ಮನೋ ||
ಚಾರಿ ವಿಚಾರಿಸುತ್ತೆ ಶರಭಾಕೃತಿ ದಾಳ್ದಿರದೈದಿ ಸೀಳ್ದು ರ |
ಕ್ತಾರುಣ ಚರ್ಮಮಂ ತಳೆದತಿದ್ಯುತಿ ತತ್ತ್ವಮುಮಂ ಕಳಲ್ಚಿದಂ || ೯೮

ಕ್ಷೀರಾಂಭೋರಾಶಿಯೊಳ್ಶ್ರೀಪತಿಯಿರೆ ಬಿದಿಯೇಳ್ತಂದುಯುದ್ಧಂಗುಡಲ್ತ
ಳ್ತೋರೋರ್ವ್ವರ್ಪ್ಪಾಶುಪತ್ಯಾಸ್ತ್ರದಿನಿಡೆಶಿಖಿಯಿಂಬೇಯೆಲೋಕಂಕೃಪಾಕೂ
ಪಾರಂ ವಾರಾಶಿ ಯೊಳ್ಪಜ್ಜಳಿಸಿ ಬಳೆದು ತನ್ಮಧ್ಯದೊಳ್ಲಿಂಗರೂಪಂ |
ಸಾರುತ್ತಂದರ್ಧನಾರೀಶ್ವರ ನವರ್ಗಖಿಳಗ್ಗರ್ಳ್ಕರಿಂ ತಣ್ಪುಗೈದಂ || ೯೯

ಮಗಳಿಂದೀಕ್ಷಿಸ ದಂಟೆ ಭಾರತಿ ಮೃಗೀರೂಪಿಂದವಳ್ಗಾರೆ ತಾಂ |
ಮಿಗೆ ತನ್ನೊಂದು ಪಶುತ್ವಮಂ ಪ್ರಕಟಿಪಂತಾಂತಲ್ಲಿ ತದ್ರೂಪನುಂ ||
ಬಗೆಗೊಂಡಟ್ಟಲವಳ್ಕಿವಂಗವಿದಿಡಲ್ಕಾಶ್ವಕಾರದಿಂ ವೇದಮಂ |
ಘ್ರಗಳಂ ಘ್ರಾಣಿಸುತೆಯ್ದೆ ತಚ್ಛಿರಮನೆ ಚ್ಚಂಕೇಳ್ಕಿರಾತೇಶ್ವರಂ || ೧೦೦

ಆರಡಿಗೊಂಡು ಮೂರಡಿಯ ನಾಬಲಿಯಿಂ ಬಲಿಗೊಂಡು ಭೂಮಿಯಂ |
ಮೂರಡಿಯಾಂತು ಮಿಾರಿ ಬಳೆದಿತ್ತನ ನಿಕ್ಕಿ ರಸಾತಳಕ್ಕೆ ನಿಂ ||
ದಾರಡಿವಣ್ಣದಾಗಸಕೆ ಕಾಲಿಡೆ ಖಂಡಿಸೆ ಬೊಮ್ಮ ನಿಟ್ಟನೀ |
ರ್ಮ್ಮಾರಡಿಯಿಂದೆ ಕೊಲ್ವನನೆ ಕೊಂದವ ನಸ್ಥಿಯ ನಾಂತನಾಹರಂ || ೧೦೧

ಸುಣ್ಮಣಲಿಂದೆ ಮಾಡಿ ಶಿವಲಿಂಗಮ ನರ್ಚಿಸಿ ಧೇನುವೃಂದಮಂ |
ಜಾಣ್ಮೆಗೆ ತಂದು ಪಾಲ್ಗರೆಯೆ ಕಂಡೊದೆಯುತ್ತಿರೆ ತಂದೆ ಬಂದದಂ ||
ಪೊಣ್ಮೆ ಕನಲ್ಕೆ ಕೈಗೊಡಲಿಯಿಂದ ವನಂ ಪೊಡೆದಿಕ್ಕಿ ಮಿಕ್ಕು ಕೈ |
ಗಣ್ಮಿದ ಚಂಡನೆನ್ನ ಸುತನೆಂದು ಗಣೇಶತೆ ಯಿತ್ತನೀಶ್ವರಂ || ೧೦೨

ದೂರ್ವಾಸಂ ಶಂಭುನಿರ್ಮ್ಮಾಲ್ಯ ಮನಮರವರಂಗೀಯೆ ತಾನೊಲ್ಲದಿರ್ಪಾ
ಗರ್ವಂಗಂಡಬ್ಧಿಯೊಳ್ಮೀಣ್ಣೆರಪಿ ಸಿರಿಯ ನೀಶಾಜ್ಞೆಯಿಂ ಶೇಷನಂ ತಂ ||
ದುರ್ವೀಧ್ರಕ್ಕುರ್ವಿ ಸುತ್ತುತ್ತೊಡನೆ ಕಡೆಯೆ ದೇವಾದಿ ದೇವರ್ಮ್ಮಹಾಶಾ|
ಪೂರ್ವಂ ಪುಟ್ಟಿರ್ದ್ದಮೃತ್ಯು ಪ್ರಭವಿಷಮನದಂ ಕಂಠದೊಳ್ಳರ್ವ ನಾಂತಂ||

ಸುರರಿಪು ಬಾಧೆಗಳ್ಕುತೆ ಮುರಾರಿ ಪುರಾರಿ ಪದಾರವಿಂದಮಂ |
ಸರಸಿಜದಿಂ ಸಹಸ್ರದೆ ಸಮರ್ಚಿಪ ವೇಳೆಯೊಳೊಂದು ಕುಂದೆ ಕ ||
ಣ್ಮರಲ ನನೂನ ಭಕ್ತಿಭರದಿಂ ತೆಗೆದೇರಿಸೆ ಮೆಚ್ಚಿ ಚಕ್ರಮಂ |
ಸುರಚಿರಲೋಚನಾಬ್ಜ ಮನಮರ್ತ್ಯನದೀಧರ ನಿತ್ತನುರ್ವಿಪಾ || ೧೦೪

ವಾರಣ ದೈತ್ಯ ವೈರಿ ವರವಾರಣ ವಕ್ತ್ರನನೊಲ್ದು ಪೆತ್ತು ದಿ |
ವ್ಯಾರುಣರತ್ನ ಮಂಡನಮನಿತ್ತು ಚತುರ್ದಶವಿದ್ಯೆಗಳ್ಗಿವಂ ||
ಕಾರಣನೆಂಬವೋಲ್ನೆಗಳ್ದು ಕಟ್ಟಿ ಗಣಾಧಿಪಪಟ್ಟಮಂ ಭವೋ |
ತ್ತಾರಣ ಪಂಚವಕ್ತ್ರನೆಸೆದಂ ಕನಕಾದ್ರಿಯೊಳದ್ರಿಜಾನ್ವಿತಂ || ೧೦೫

ಅಸುರನ ಬಾಧೆಗಳ್ಕಿಶಿಖಿಯುಂ ಕರೆದಟ್ಟೆ ಮೃಡಂ ಮೃಡಾನಿಯೊ |
ಳ್ಸಸಿಲೆಸಪಲ್ಲಿಗೆಯ್ದುತೆ ತದುದ್ಧನವೀರ್ಯಮನೀಂಟಿ ವಹ್ನಿವ ||
ಕ್ತ್ರಸಮಿತಿ ಗರ್ಭವಾಂತು ಶರದೊಳ್ಬಸಿರಂಕೊರೆದಿಕ್ಕೆ ಕೃತ್ತಿಕಾ |
ವಿಸರವಿವರ್ಧಿತಂ ಗುಹನಮಾಹ್ವಯನೊಪ್ಪಿದನಾ ಮೃಡಾಂಕದೊಳ್ ||೧೦೬

ಪದಕಟಕಾಹಿಗಳ್ಕೆ ಕಳೆಗುಂದೆ ರವೀಂದುಗಳಲ್ಲಿ ಕಿಳ್ತು ಸೂ |
ಸಿದ ನವರಾಪ್ಯ ಕಿಂಕಿಣಿಗಳಂತಿರೆ ತೋರೆ ಪೊದಳ್ದ ತಾರೆಗಳ್ ||
ವಿದಿತ ನಭಃಕಟಾಹ ತಟಮಂ ಬಗಿದುರ್ವ್ವಿ ಶಿವೈಕ ಪಾದಮಾ |
ಳ್ದುದು ಬಹಿರಂಬುಸಂಭವ ನವಾಂಬುಜ ಮೆಂಬ ಬೆಡಂಗೆ ನುರ್ವ್ವಿಪಾ || ೧೦೭

ತಿಳಿಯದೆ ಮುಕ್ತಿ ತನ್ನ ಪದಭಕ್ತಿಯಿ ನಪ್ಪುದೆನಿಪ್ಪುದಂ ಕಳಂ |
ಕಳಿಯದೆ ಚಿತ್ತದೊಳ್ನೆಗಳ್ದ ಕರ್ಮಕಲಾಪಮ ನನ್ಯಮಾರ್ಗದೊಳ್ ||
ತೊಳಲಿ ಭವಕ್ಕೆ ಬರ್ಪ್ಪಪಶು ವರ್ಗಕೆ ಬೋಧಿಸಿ ಮೋಕ್ಷವೀಯ ಲೆಂ |
ದೆಳಸಿ ಕೃಪಾಳು ತಾಳ್ದ ನೆಲೆಚೋಳ ಸುಖಾವಹಮೂರ್ತಿ ಲೀಲೆಯುಂ|| ೧೦೮

ವಿಳಸದ್ವಿದ್ಯುಜ್ಜಟಾ ಮಂಡಳಮ ಮರನದೀ ಚಂದ್ರಖಂಡಾನ್ವಿತಂ ಮಂ |
ಜುಳಗಂಡಂ ಸರ್ಪಕರ್ಣಾಭರಣ ಕಲಿತಮಾಸ್ಯಂ ಮೃದುಸ್ಮೇರ ಮಿಂದೂ ||
ಜ್ಜ್ವಳ ಮಂಗಂ ಕಣ್ಗೆ ಚೆಲ್ವಾಗಿರೆ ವಟತರುಮೂಲ ಸ್ಥಿತಂ ಜ್ಞಾನಮುದ್ರಾಂ
ಗುಳಿಯಂ ಶಿಷ್ಟಪ್ರಬೋಧ ಪ್ರದನೆಸೆದ ನವಂ ದಕ್ಷಿಣಾಮೂರ್ತಿ ದೇವಂ ||

ಹರಿಬೊಮ್ಮ ರ್ಜಗದೀಶ ರಾವೆನುತೆ ಹಂಕಾರಕ್ಕೆ ಪಕ್ಕಾಗುತಿ |
ರ್ಪ್ಪರೆ ಕಾದುತ್ತಿರೆ ಕೋಟಿ ಸೂರ್ಯರುಚಿಯಿಂ ತನ್ಮಧ್ಯದೊಳ್ಮೂಡಿ ತಾ ||
ನುರುಲಿಂಗಾಕೃತಿಯಾಗೆ ಸೂಕರ ಮರಾಳಾಕಾರದಿಂ ಪೋಗಿಯುಂ |
ವರಪನ್ಮೂಲಮ ನಾನನಾಬ್ಜಮ ನವರ್ಕಾಣಲ್ಕದೇ ನಾರ್ತರೇ || ೧೧೦

ಕಳೆ ಸಿರಿ ಧರ್ಮವುತ್ಸವ ಮಭೀಪ್ಸಿತ ಮಂಗಳ ಮಂದಮಾತ್ಮ ನಿ |
ರ್ಮಳತೆ ಚಿರಾಯುಉ ವೈರಿಪುರ ಶೂನ್ಯತೆ ತಜ್ಜಯ ಮೇಳ್ಗೆ ಯಾರ್ಪ್ಪನ ||
ಗ್ಗಳಕೃತಿ ಶಾಂತಿಯೊಳ್ಪು ಬಲಮಾಶ್ರಿತರಕ್ಷಣೆ ಪೆರ್ಮೆ ಕೂರ್ಮೆ ವ |
ತ್ಸಳತೆ ಜಸಂ ಸುಲೀಲೆ ಸುಖ ಮುಜ್ಜ್ವಳವಿದ್ಯೆ ವಿಮುಕ್ತಿಯೆಂಬಿವಂ || ೧೧೧

ಕಂ|| ಪಡೆವಂ ಪ್ರಮೋದದಿಂ ಕೇ |
ಳ್ದೊಡೆ ಕೇಳ್ನರನಾವ ನಾದೊಡಂ ಪೊಡವಿಯೊಳೀ ||
ಮ್ಮಡನ ಘನ ಪಂಚವಿಂಶತಿ |
ವಡೆದೀ ಲೀಲೆಗಳ ಸಲೆ ನರೇಂದ್ರ ಲಲಾಮಾ || ೧೧೨

ವೃ|| ಎನೆಕೇಳ್ದಾನಂದದುಗ್ಧಾಂಬುಧಿ ಯೊಳೆ ಮುಳುಗುತ್ತೇಳ್ದವೊಲ್ಕಂಪ
[ಮಂ ಜುಂ |
ಮನೆ ರೋಮಾಂಚಂಗಳುಂ ಸಂಜನಿಸೆ ಬಗೆಗಡಪ್ಪಾರ್ಗೆ ಕೌತೂಹಲಂಭೋಂ

ಕನೆ ತಾನೇಳ್ದಂಘ್ರಿಪದ್ಮಕ್ಕಮರ್ದು ಮಣಿದು ಬಾಳ್ದಿಂ ಕೃತಾರ್ಥಾತ್ಮನಾದೆಂ
ಮುನಿ ಮುಖ್ಯಾರಾಧ್ಯ ನಿಮ್ಮಿಂದೆನುತೆ ನುತಿಸುತುಂ ಮಂತ್ರಿಯುಂ
ತಾನುಮಿರ್ದರ್ ‖ ೧೧೩

ಸಾರಸಾ ರಸಮಾನಲೋಚನ ಕಾಂತ ಕಾಂತಿ ಯುತಾನನೇ |
ಭೂರಿ ಭೂರಿಪು ಸಂಘ ಸಂಹೃತಿ ಶಕ್ತಿಶಕ್ತಿಸಮನ್ವಿತೇ ‖
ಮಾರ ಮಾರಣ ದಕ್ಷ ದಕ್ಷಮದಾ ಪಹಾಂಕ ವಿರಾಜಿತೇ |
ಧೀರ ಧೀರತಿಪಾಲ ಪಾಲನಶೀಲೆ ಪಾಲಿಪು ದಂಬಿಕೇ ‖ ೧೧೪

ಇದು ವಿನಮದಮರವರ ಮಕುಟತಟ ಘಟಿತ ಮಣಿಗಣ ಮಹಾಪ್ರಭಾ ಪಟಲ ಪರಿವೃತಪರ
ಶಿವ ಶ್ರೀಪಾದ ನಖಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯ
ಮಾನ ಸರಸಜನಮಾನಿತೋಭಯ ಕವಿತಾವಿಶಾರದ ಶ್ರೀಷಡಕ್ಷರ
ದೇವವಿರಚಿತ ಮಪ್ಪ ರಾಜಶೇಖರ ವಿಳಾಸ ವಿಪುಳಪ್ರಬಂಧ
ದೊಳ್ ಕಥಾವತರಣ ಶಿವಲೀಲಾವರ್ಣನಂ
ತೃತೀಯಾಶ್ವಾಸಂ ಸಂಪೂರ್ಣಂ,



## ಚತುರ್ಥಾಶ್ವಾಸಂ.

(ರಾಜಶೇಖರಾಭ್ಯುದಯವರ್ಣನಂ)

---

ಕಂ‖ ಶ್ರೀಶರ್ವಾಣೀ ಹೃದಯಕು |
ಶೇಶಯ ಹಂಸಂ ನಿಜಾಂಘ್ರಿಸೇವಕ ಜನತಾ ‖
ಪಾಶಹರಂ ಪಶುಪತಿ ಪರ |
ಮೇಶಂ ಪೊರೆಗೆಮ್ಮ ನಾವಗಂ ಶಿವಲಿಂಗಂ ‖ ೧

ವೃ‖ ಮುಡಿಗಂಪಿಂ ಗಾದ್ದ್ರ್ರ ಸಾತ್ತ್ರಂ ದೆರಗೆ ಪರಮೆ ಗಳ್ಮಂಜು
ಮಂಜೀರನಾದ |
ಕ್ಕೊಡನೊಂದೊಂದಾಗಿ ಪಿಂದೈತರೆ ವಿಮಳಮರಾಳಂಗಳಾಳೀಜನಂ ಪಿಂ ‖
ಗಡೆ ಯೊಳ್ಳುತ್ತೈರ್ದೆ ಶೋಭಾವತಿ ಮೃದುಗತಿಯಿಂ ಬಂದುಪೂವಿಲ್ಪಿನಮ್ಮಂ
ಬಡೆವಂತಂಗಂ ಬಳುಂ ಕಲ್ಮಣಿದಳವರ ದಿವ್ಯಾಂಘ್ರಿಯೊಳ್ದೇವಿಯಾಗಳ್‖ ೨

ಕಂ|| ಪರಸಿ ದರಧಿಕೋತ್ಸವದಿಂ |
ಗುರು ಗಳ್ಮಗುಳ್ದವಳ ಮನದಭೀಷ್ಟಮ ನಿಂತೆಂ ||
ದಿರ ದರಿದರ್ ಶಿವಶಿವ ಶಂ |
ಕರ ಶರಣರ ಮಹಿಮೆ ಮಹಿಗೆ ಸಾಧಾರಣಮೇ || ೩

ಧರಣಿಪನುಂ ಸಚಿವನು ಮ |
ಚ್ಚರಿವಡುತಿರೆ ಮಗಳೆ ಬಾರೆ ನುತ್ತೀಕ್ಷಿಸಿ ಶಂ ||
ಕರ ನಡಿದಳಿರಂ ಜಾನಿಸಿ |
ತರಳೆಗೆ ಪಂಚಾಕ್ಷರೋಪದೇಶಂ ಗೆಯ್ದರ್ || ೪

ತರುಣಿ ಭವದೀಯ ಪುಣ್ಯೋ |
ದರದೊಳ್ಪುಟ್ಟುಗು ಮಿನಾನ್ವಯಾಂಬುಧಿ ಚಂದ್ರಂ ||
ಹರಮಂತ್ರಮಿದನೆ ಜಪಿಸು |
ತ್ತಿರೆ ತಪ್ಪದಿದೆಂದು ದೇಶಿಕಂ ಕರುಣಿಸಿದಂ || ೫

ಎನೆ ನಂಬಿ ನಲಿದು ಮನದೊಳ್ |
ನನೆ ಕೊನೆ ವೋದನ್ ಗುರೂಕ್ತಿಯಂ ಬಗೆಗೊಂಡಳ್ ||
ಜನಪತಿಯ ವದನಮಂ ಕ |
ಣ್ಗೊನೆಯಿಂ ನಡೆನೋಡಿ ನಾಡೆ ಮುದಮಂ ತಳೆದಳ್ || ೬

ವಚನ|| ಅನಂತರಂ—

ಕಂ|| ಆದಂಪತಿಯ ಸಪರ್ಯೆಯ |
ನಾದಂ ಕೈಕೊಂಡು ನೆನೆದುದಂ ನೆಗಳ್ದು ಮಹಾ ||
ಮೋದಂ ಮಿಗೆ ನಿಜದೇಶಕೆ |
ವೋದಚ್ಛೇದ್ಯನ ಶಿವಾರ್ಯ ರುತ್ತಮಕಾರ್ಯರ್ || ೭

ವಚನ|| ಅಂತವರ್ಪೋಗಲೊಡ ನಿತ್ತಲ್—

ವೃ|| ಶಿವಲಿಂಗಾರ್ಚನೆ ಗೆಯ್ಯುತುಂ ಶಿವಕಥಾ ಪೀಯೂಷಮಂ ಕರ್ಣದಿಂ|
ಸವಿಯುತ್ತುಂ ಶಿವಯೋಗಿ ವೃಂದ ಚರಣಾಂಭೋಜಂಗಳಂ ಪೂಜಿಸು ||
ತ್ತವರಿರ್ವರ್ಗುರು ವಿತ್ತಮಂತ್ರಮನದಂ ಚಿತ್ತಾಂತ ದೊಳ್ಧ್ಯಾನಿಸು |
ತ್ತೆ ವಧೂವಲ್ಲಭ ರಿರ್ದ್ದರುತ್ಸವ ಯುತ ನ್ನಾನಾ ವಿನೋದಂಗಳಿಂ || ೮

ವಚನ|| ಅಂತಿರ್ಪಿನ ಮೊಂದು ದಿವಸಂ—

ವೃ|| ಮೊಗದೊಳ ಗೊಂದೆರಳ್ಕೊಡವಿ ಮೂಡೆ ಬೆಮರ್ನ್ನಸುದೋರೆ ಕಾಂತಿಕೈ
ಮಿಗೆ ಕದಪುಜ್ಜ್ವಳಂ ಬಡೆಯೆ ಮೆಲ್ಲನೆ ಲಜ್ಜೆಯನೊತ್ತುಗೊಂಡು ತಾ ||

ನೊಗೆಯೆ ಘನಸ್ತನಂ ಬಿಗಿಯೆ ಸುಯ್ಬಿಸುಪಾಂತಿರೆ ಲೋಚನಾಂಚಲಂ |
ಸೊಗಯಿಸೆ ಕೆಂಕಮಾಗಿ ಸತಿ ಪುಷ್ಪಿತೆಯಾದಳ ದೊಂದು ಬಿಂಕದಿಂ ‖ ೯

ಕರತಳದಲ್ಲಿ ತಾಳ್ದಸೆಳೆ ಯುಟ್ಟಿಳಿಗೆಂಪಿನಸೀರೆ ರನ್ನದಾ |
ಭರಣ ಮುರೋಜ ದೊಳ್ತಳೆದ ಕುಂಕುಮಲೇಪನಮಂದವೀಯೆ ಬಿಂ ‖
ಬರುಚಿರ ದಂತವಾಸೆ ವನಿತಾಮಣಿ ಮಾಣಿಕವಾಂತು ನೋಳ್ಪಭೂ |
ವರನ ವಿಲೋಚನಕ್ಕೆ ಪೊಸಮಾಣಿಕಪುತ್ತಳಿಯಂತಿರೊಪ್ಪಿದಳ್ ‖ ೧೦

ವಚನ‖ ಅಂತೆಸೆದು ಕಾಂತೆ ಚತುರ್ಥದಿವಸ ದೊಳ್ಕೆಳದಿಯ ರ್ಸೂಸುವ ಸುಗಂಧ ಸಲಿಲ ದಿಂ ಮಂಗಳಮಜ್ಜನಗೈದನಂತರಂ—

ಕಂ‖ ಪರಿಪೂರ್ಣ ಚಂದ್ರ ಬಿಂಬದ |
ಸಿರಿ ಕೆಂಗೆದಿರಂ ಕಳಲ್ಚಿ ತಳೆವಂತಿರೆ ಬಂ ‖
ಧುರ ಚಂದ್ರಿಕೆಯಂ ರಾಗಾಂ |
ಬರಮಂ ತಾನುಳಿದು ತಳೆದಳಮಳಾಂಬರಮಂ ‖ ೧೧

ವೃ‖ ವಿಳಸತ್ಕರ್ಪೂರ ಸಂಮಿಶ್ರಿತ ಮಳಯಜ ಲಿಪ್ತಾಂಗಿ ಮುಕ್ತಾವಳೀಮಂ
ಜುಳ ಭೂಷಾಭೂಷ್ಯೆ ಮಲ್ಲೀಕುಸುಮ ಮಿಳಿತ ಧಂಮಿಲ್ಲೆ ಶುಭ್ರಾಂಬರಶ್ರೀ ‖
ಕಲಿತಶ್ರೋಣೀ ತಟಪ್ರೋಜ್ಜ್ವಳೆ ಭಸಿತ ಲಲಾಮಾಭಿರಾಮಾರ್ಧಚಂದ್ರಾ |
ಭ ಲಲಾಟಸ್ಥಾನೆ ಚಂದ್ರೋಪಳದ ಪರಿಜಿದೆಂಬಂತೆ ಕಣ್ಗೊಪ್ಪುತಿರ್ದ್ದಳ್ ‖ ೧೨

ವ‖ ಆಸಮಯದಲ್ಲಿ—　　(ರಾಗಾಂ

ವೃ‖ ವರರಾತ್ರೀ ಕಾಂತೆ ಸೂರ್ಯಾಸ್ತಮಯ ಸಮಯದೊಳ್ಸಂಜೆ ಗೆಂಪೆಂಬ
ಬರಮಂ ತಾನುಟ್ಟು ತೊಟ್ಟೊಪ್ಪುವ ನವಭಗಣ ಸ್ವಚ್ಛಮುಕ್ತಾಳಿಯಂ ಸಿಂ‖
ಗರಿಸುತ್ತುಂ ಪದ್ಮಕೋಶಸ್ತನೆ ಚಪಲ ಚಕೋರಾಕ್ಷಿ ನಿಂದಿರ್ದ್ದೊಡಂ ದಿಂ |
ದಿರ ದಿಕ್ಕೆಂಬಾಳಿ ತೋರ್ಪ ಮುಕುರಮೆನೆ ಕರಂ ಮೂಡಿದತ್ತಬ್ಜಬಿಂಬಂ ‖

ವಚನ‖ ಅಂತುಮಲ್ಲದೆಯುಂ—

ವೃ‖ ತನಗಿದಿರ್ವಂದು ನಿಂದರಜನೀ ವಧುವಂ ನಸು ಸೋಂಕಿದಾಕ್ಷಣಂ|
ಘನ ತಿಮಿರಾಸಿತಾಂಬರಮು ದೊಯ್ಯನೆ ಜಾರೆ ಸುಧಾಂಶು ವಲ್ಲಭಂ |
ಮನದೊಲವಿಂದೆ ತನ್ನ ವಿತತಾಂಶುಕಮಂ ಪೊದಿಸುತ್ತೆ ಕೂಡುತಿ |
ರ್ಪ್ಪ ನಿತರೊಳಲ್ಲಿ ಚಲ್ಲಿದಳಕಾಳಿಯ ಮೊಗ್ಗೆಗಳಲ್ತೆ ತಾರೆಗಳ್ ‖ ೧೪

ವಚನ‖ ಎನಿಸಿ ರಂಜಿಸುತ್ತು ಮಿಪ್ಪಿನ ಮಾಗಳಮೃತಮುತಿ ಮಹಾದೇವಿ ಪರ್ಬ್ಬಿದ

ಬೆಳ್ದಿಂಗಳೊಳ್ಬೆಳ್ದಿಂಗಳಧಿದೇವಿಯಂತೆ ಬೆಳ್ವಸದನಂ ಬಡೆದಿರ್ದ್ದ ಮಂಗಳಾಂಗಿ ಲಿಂಗಪೂಜಾಗೃಹಂ ಬೊಕ್ಕು ಸಾಂಗಮೆನೆ ಲಿಂಗಪೂಜೆಗೆಯ್ದು ನಿಜೇಶ್ವರನೊಡನೆ ಹರಪ್ರಸಾದ ಸುಧಾಸ್ವಾದನಂ ಗೆಯ್ದು ಪರಿತುಷ್ಟಿವಡೆದು ಪರಿಮಳಿಪ ಕೈಗಟ್ಟಿಯುಂ ಕೊಂಡು ಕರ್ಪೂರ ಪರಿಮಳಂ ಬೆರೆದ ಸರಸ ತಾಂಬೂಲಮಂ ಸಖಿ ನೀಡೆ ತಳೆದು ವಿವಿಧ ವಿನಿಯೋಗದ ವಿಳಾಸಿನಿ ಯರ್ಬ್ಬಳಸಿ ಬರೆ ಮಣಿಪಾವುಗೆಯಂ ಮೆಟ್ಟಿ ವಿಳಾಸಂ ಮಿಗೆ ವಿದಗ್ಧಸಖಿಯ ಕರತಳಮಂ ಪಿಡಿದು ಮುಡಿಗಂಪಿಂಗೆ ಪರಮೆ ವರಿಗಳೆರಗಿ ನೇವರಿಸಿ ದಳಕಮಂ ಕೆದರದಂತೆ ಕೆಳದಿ ಪಿಡಿದ ಕೆಂಡೆಸಂಪಗೆಯ ಬಿರಿಮುಗು ಳಾಲವಟ್ಟಂ ಬಟ್ಟಮೊಗಕ್ಕೆ ಕಟ್ಟಿದಿರೊ-ಳೆಸೆವ ಬಟ್ಟವೆರೆಯ ದಿಟ್ಟಿತಾಗದಂತೆ ಮರೆಗೈದ ಪೋಲ್ಮೆರೆಯೆ ಮಿರುಪ ಸುಲಿಪಲ್ಲ ನುಣ್ಬೆಳಗು ಕಿರುವೆಳ್ದಿಂಗಳಂ ಕರೆಯೆ ಕಡೆಗಣ್ಣ ಕಾಂತಿ ಕಾವ ನಲರಂಬಂ ಕೆದರೆ ಬಿಂಬಾಧರದ ಕೆಂಬೆಳಗು ಮುಂಬರಿದು ಕುಂಭಕುಚಕ್ಕೆ ಕೆಂಬೆರಲ ಸರಮಂ ಕೆಳೆಗೊಳಿಸೆ ಉಡೆ ನೂಲೊಳೊತ್ತೆಡಚ್ಚಿರ್ದ ವಿವಿಧ ನವರತ್ನ ಕಿರಣ ಮುಟ್ಟ ಧವಳಾಂಬರಮಂ ಚಿತ್ರಾಂಬರಮ ನೊಡರ್ಚ್ಚೆ ಮಂಜು ಮಂಜೀರ ಸಂಜನಿತಧ್ವನಿ ಪದನಖ ಮಯೂಖ ಮಾಲಾ ನರ್ತನಕ್ಕೆ ಜತಿಗುಡೆ ಮಂದಯಾನದಿಂ ನಡೆತಂದು ಮುನ್ನಂ ಕೈಗೆಯ್ದು ತನ್ನ ಬರವಂ ಬಯಸುತ್ತೆ ಮನೋರಮಣನಿರ್ದ್ದ ಮಣಿಭವನಮಂ ಸಾರ್ವ್ವಲ್ಲಿ ನೆವಂಗೊಂಡು ಕೆಳದಿಯತೊರ್ತ್ತಲಂಗೆ ವಿಳಾಸದಿಂ ದೊಳಪೊಕ್ಕಳ ವಿಗಳಿದ ಸಂತಸದಿಂ ಕಾಂತ ನಿರ್ದ್ದ ಸಿರಿಮಂಚ ದಂಚೆ ದುಪ್ಪುಳ ಡಿಕಿಲ್ವಾಸಿ ನೊಳ್ಮೆಲ್ಲನೆ ಚೆಲ್ವಿಂ ಕುಳ್ಳಿರ್ದ್ದ ಬಳ್ಳಿವರಿವ ನೇಹದಿಂ ದೊಡನೆ ಸಡಗರಿಸಿ ಗಾಡಿಮಿಗೆ ನೋಡುತ್ತು ಮಿಪ್ಪರ್ಗಳ್—

ಕಂ|| ಮೊಳೆದೋರ್ಪ್ಪ ಪುಳಕ ವಂಗದೊ |
ಳೆಳಸುವ ಕರಣಂಗಳುಣ್ಮೆ ವಿನಿವಾತು ಸುಖಂ ||
ದಳೆವ ಬಗೆ ಮೃದುಹಸಿತ ಮಂ |
ಜುಳ ವದನಂ ಮೆರೆಯೆ ಸಾರ್ದ್ದರೊರ್ವ್ವರ ನೊರ್ವ್ವರ್ ||

ಕಾರಿರುಳ ತರಳ ತಾರಗೆ |
ಗೋರಗೆಯೆನೆ ಕುರುಳೊಳೆಸೆಯೆ ಮಲ್ಲಿಗೆ ಮಿಗೆ ಸೀ ||
ಹಾರ ಕರವದನೆ ಮದನಾ |
ಕಾರ ಮನೋರಮಣ ನಂಕದೊಳ್ಕುಳ್ಳಿರ್ದ್ದಳ್ || ೧೬

ವೃ|| ನಿಮಿರ್ದ್ದಂಗಂ ಕಡುಚೆಲ್ವನೀಯೆ ವಳಿಗಳ್ಮೈಗುಂದೆ ಮಧ್ಯಂ ಬಳಂ|
ಕೆಮರಲ್ದಕ್ಷ್ಣಿ ವಿಳಾಸಮಂ ಕರೆಯೆ ಕಕ್ಷಸ್ಥಾನದೊಳ್ಗಂಪು ತೀ ||
ಡೆಮನೋಜ್ಞಸ್ತನಮುರ್ಬ್ಬೆ ಕಂಕಣ ಝಣತ್ಕಾರಂ ಕರಂ ಪೊಣ್ಮೆ ಸಂ |
ಭ್ರಮದಿಂ ತೋಳ್ಗಳ ನೆತ್ತಿ ಕಂಚುಕಮನಾಗಳ್ಪಾಣಿಯಿಂ ನೂಂಕಿದಳ್|| ೧೭

ವ|| ಅನಂತರಂ—

ವೃ|| ಪದೆದಾಲಿಂಗಿಸಿ ಮುದ್ದುಗೈದು ಮೊಗದೊಳ್ವಕ್ತ್ರಾಬ್ಜಮಂ ಸಾರ್ಚಿಸಾ
ರ್ಚಿದರಾಗಾಧರಮಂ ಕರ್ದುಂಕಿ ರತಿರಾಗಾಂಭೋಧಿ ಮೈವೆರ್ಚ್ಚೆವಂ ||
ದದೆ ನಾನಾಕಳೆಗೂಡಿ ತಳ್ತು ತನುವೊಂದೆಂಬಂತೆ ಸಂಭೋಗ ಸಂ |
ಪದಮಂ ತಾಂ ಪಡೆದಂ ಪಯೋಜಮುಖಿ ಯೊಳ್ಭೂಪಾಲಪುಷ್ಪಾಯುಧಂ||

ಜನಿತಾನಂದಾಶ್ರು ಪೂರ್ಣಂ ನಯನಮಧಿಕಘರ್ಮಾಂಬುಕೀರ್ಣಂಕಪೋಲಂ
ತನುರೋಮಾಂಚಪ್ರಯುಕ್ತಂ ಮೃದುಹಸಿತಸುಧಾಸಿಕ್ತಮಾಸ್ಯಾಂಬುಜಂಚುಂ
ಬನ ಕಿಂಚಿನ್ಮುಕ್ತರಾಗಂ ಲಸದಧರದಳಂ ಚಿತ್ತ ಮಾತ್ಮಾನುರಾಗಂ |
ಸ್ತನ ಮಾಲುಪ್ತಾಂಗರಾಗಂ ರಸಭರ ಜಘನಾಭೋಗ ಮನ್ಯೋನ್ಯಯೋಗಂ||

ತನುಲತೆ ಘರ್ಮವಾರಿ ಕಣಕುಟ್ಮಳ ಮಾಂತಿರೆ ವಕ್ತ್ರಪದ್ಮದೊ |
ಳ್ಜನಿಯಿಸೆ ಸೊಂಪು ಕಂಪು ವೆರಸಿರ್ದ್ದೆಳಸುಯ್ಯೆಲರುರ್ವ್ವಿ ತೀಡೆ ಭೋಂ ||
ಕನೆ ಕುರುಳೆಂಬ ತುಂಬಿ ಸಲಿದಾಡೆ ತಳರ್ತಿರೆ ರಾಗವಾಂತು ತ |
ನ್ಮನವೆಸಿಸಿರ್ಪ್ಪವಾವು ರತಚೈತ್ರದೊಳೊಪ್ಪಿದ ರೊಲ್ದು ಕಾದಲರ್ || ೨೦

ವಚನ|| ಇಂತು ಸಮಾನುರಾಗ ಸಂಜನಿತ ಸಮರತಿ ಸುಖಾನುಭವ ಪರಿಣತಾಂತಃಕರ
ಣರಾಗಿ ಕಾದಲ ರ್ಸುಖನಿದ್ರೆಗೈಯುತ್ತುಮಿರೆ ಯಿರೆ ನಿಶಾವಸಾನ ಸಮಯದಲ್ಲಿ—

ವೃ|| ಮದವದ್ಭದ್ರಗಜೇಂದ್ರಮಂ ಸುರಸರಿತ್ಸಂಜಾತ ಕಂಜಾತಮಂ |
ಸದಲಂಕಾರ ವೃಷೇಂದ್ರನಂ ವಿತತರೋಚಿರ್ಗಾತ್ರನಂ ಮಿತ್ರನಂ ||
ಬಿದುಗಲ್ಗನ್ನಡಿಯಂ ಸುಧಾಬ್ಧಿಯ ನಮುತ್ತುರ್ಯಾಧಾರಮಂ ಮೇರುವಂ |
ಮುದದಿಂ ಸ್ವಪ್ನದೆ ಕಂಡಳಾ ವಧು ಕಳಾಶ್ರೀ ಸಾಂದ್ರನಂ ಚಂದ್ರನಂ||೨೧

ವಚನ|| ಮತ್ತ ಮಾಗಳ್—

ವೃ|| ನೆರೆಯೊಳ್ನೈದಿಲೆ ನಾಣ್ಚಿ ಪಂತೆ ನಗೆ ತಾರಾನಾರಿಯರ್ನೋಡೆ ಬಂ|
ದಿರುಳೆನ್ನಂ ಕರದಿಂದೆ ಮುಟ್ಟಿದ ನಿವಂ ದೋಷಾಕರಂ ವಕ್ತ್ರಮಂ ||
ಭರದಿಂ ಮುಚ್ಚಿದೆ ಸಂದಿನಂಗಳಿ ನಿನಾದವ್ಯಾಜದಿಂ ಪೇಳೆ ತಾ |
ವರೆ ಪಾದಾಗ್ರದೆ ನೂಂಕಿದಂ ಮುಳಿದವಂ ವಾರಾಶಿಯೊಳ್ಚಂದ್ರನಂ || ೨೨

ಕಂ|| ದಿನಮಣಿ ನೀನೆಲೆವನಿತಾ |
ಜನಮಣಿ ಯಾನೆಂದು ಚುಂಬಿಸಿದ ಪೂರ್ವದಿಶಾಂ ||
ಗನೆಯ ಮುಖಕುಂಕುಮಂ ನೆ |
ಟ್ಟನೆ ತಳ್ತಂ ತೆಸೆದುದ ರುಣರುಚಿ ದಿನಕರನಾ || ೨೩

ವಚನ|| ಮತ್ತಂ—

ಕಂ|| ಭುವನಜಭವಾಂಡಭವನಕೆ |
ಸವೆದುರು ರವಿಬಿಂಬ ಮೆಂಬ ಬಾಂದಣದೊಳ ವೊ ||
ಕ್ಕವಿರಳ ತದಂಡದ ಬಹಿ |
ಸ್ಸುವರ್ಣರುಚಿ ಪರ್ಬಿದಂತೆ ಕೆಂಬಿಸಿಲೆಸೆಗುಂ || ೨೪

ವೃ|| ಪರೆದಿರೆ ಸುಣ್ಣುಗುರುಳ್ಗೊಸಲೊಳಾಳ್ದಿರೆ ಕಣ್ಗಡೆ ಕೆಂಪನಿಟ್ಟಕ |
ಸ್ತುರಿಯ ಲಲಾಮ ಮಚ್ಚಳಿಯದಂತಿರದೊಪ್ಪಿರೆ ಕೇಶಬಂಧ ಮೊಂ ||
ದಿರೆ ಶಿಥಿಲತ್ವಮಂ ನಸುಬೆಮ ರ್ಕುಚಮಧ್ಯದೊಳುಣ್ಮೆ ಸುಯ್ಯೆಲ |
ತ್ತರ್ತರಹರ ಮಾಂತು ಸೂಸೆ ಸತಿಯುಪ್ಪವಡಂ ಬಡೆದೊಪ್ಪಿ ತೋರಿದಳ್ ||೨೫

ವಚನ|| ಅಗಳ್—

ಕಂ|| ಜಳಪಕ್ಷಿಗಳುಲಿಯಿಂದಂ |
ಕಳಹಂಸಂ ಕಮಳತಳ್ಪದಿಂದೇಳ್ವವೊ ಲೊ ||
ಲ್ದಿಳೆಯರಸನೆಳ್ದನಾಮಂ |
ಗಳ ಪಾಠಕರುಲಿಯಿ ನಮಳ ತಳ್ಪಸ್ಥಳದಿಂ || ೨೬

ವಚನ|| ಅಂತೆರ್ವರುಮೆಳ್ದು ಶಿವಸ್ಮರಣ ಪರಿಣತಾಂತಃಕರಣರು ಮಪೂರ್ವ ಸುರಭಿ ಜಲ ಪರಿರಚಿತಸ್ನಾನರುಂ ಪರಿವೃತಧೌತವಸನ ಸಮುಂಚಿತ ಕೋಮಳಕಳೇವರರುಂ ವಿರಚಿತ ಶಿವಲಿಂಗಪೂಜಾನೂನ ವಿಧಾನರುಂ ತತ್ಪದಾಂಬು ಪ್ರಸಾದಾಸ್ವಾದನಾ ನಂದಕಂದಳಿತ ಹೃದಯರುಂ ಯಥೋಚಿತ ಪ್ರಧಾನ ನಾನಾದಾನ ವಿಧಾನ ಸನ್ಮಾನ ಮಾನಿತಾ ಸಮಾನ ಮಹೇಶ್ವರ ಪ್ರತಾನರು ಮಭಿನವಾ ಭರಣಗಣ ಪರಿಕಲಿತ ದಿವ್ಯಾಂಗರು ಮತಿಸುಗಂಧ ತಾಂಬೂಲ ಮಧುರತರ ಮುಖಾಂತರ್ವಳಯರು ಮಮೃತಮತಿ ಸತ್ಯೇಂದ್ರ ನರೇಂದ್ರ ರತ್ಯಂತ ಪ್ರಮೋದದಿಂ ರತಿಮದನರಂ ಪಳಿವ ವಿಳಾಸದಿಂ ಕತಿಪಯಾಪ್ತ ಸಖೀಜನಂಬೆರಸು ಕೇಳೀ ನಿಳಯದ ಕನಕತ್ಕನಕ ಪರ್ಯಂಕ ಪೀಠಮ ನಳಂಕರಿಸಿ ಕುಳ್ಳಿರ್ದಾಗಳ್—

ಕಂ|| ಮೊಗಸಸಿ ತಿಳಿಜೊನ್ನಮ ನೊ |
ಳ್ಪುಗುವಂತಿರೆ ತುಳ್ಕೆ ರದನರುಚಿ ರಮಣಂಗಾ ||
ಮೃಗಲೋಚನೆ ಪೇಳ್ದಳ್ ಮುದ |
ಮೊಗೆತರೆ ತಾಂ ಕಂಡಕನಸ ನೆಲ್ಲಮನಾಗಳ್ || ೨೭

ಕೇಳ್ದದ ನೊಂದಿನಿಸುಳಿಯದೆ |
ತಾಳ್ದತಿಮುದಮಂ ತನೂರುಹಂ ಗುಡಿಗಟ್ಟ ||

ತ್ತಿಳ್ದಿರೆ ತನುವೊಳ್ ತರುಣಿಗೆ |
ಪೇಳ್ದಂ ತತ್ಫಳವ ನಂಸೆನಿಂತೆಂದಾಗಳ್ || ೨೮

ವೃ|| ಕರಿಯಿಂ ಭದ್ರಯುತಂ ಸರೋಜದೆ ಗುಣಾಧಾರಂ ವೃಷಾಧೀಶನಿಂ|
ಹರಭಕ್ತಂ ಕಮಳಾಪ್ತನಿಂ ಪ್ರಬಳತೇಜೋಯುಕ್ತ ನಾದರ್ಶದಿಂ ||
ಪರಸಂಪ್ರೀತಿದ ನಬ್ಧಿಯಿಂದತಿ ಗಭೀರಂ ಮೇರುವಿಂ ಭೂವಿಭೃ |
ದ್ವರ ನಬ್ಜಾಹಿತನಿಂ ಕಳಾನಿಧಿ ಕುಮಾರಂ ಪುಟ್ಟುವಂ ನಿಶ್ಚಯಂ || ೨೯

ವ|| ಎಂದು ಮನೋರಮಣನ ಮಾತಂ ಮನದೇಗೊಂಡು ಮನೋರಥಂ ಕೈಸಾರ್ದಂತೆ ನಂಬಿ ನಲವೇರಿ ಮಿಾರಿ ಪರಮಹರ್ಷಮ ನೊಳಕೊಂಡಿ ರುತ್ತುಮಿರೆ ಯಿರೆ—

ಕಂ|| ಹೃದಯದೊ ಳೊದವಿದ ಶಿವಮಂ |
ತ್ರದ ಕಳೆ ಸುಮುಹೂರ್ತದೊಳ್ಶಿವಪ್ರೇರಣೆಯಿಂ ||
ಸುದತಿಯ ಪುಣ್ಯೋದರದೊ |
ಳ್ಪದಪಿಂ ದಿಳಿತಂದು ನೆಲಸೆ ಬಳೆದುದು ಗರ್ಭಂ || ೩೦

ವೃ||ವಳಿಗಳ್ಪಿಂಗಿದು ವಾಸ್ಯಮಿಂದು ರುಚಿಯಂ ಕೈಕೊಂಡುದಾ ನಾಭಿ ಗು
ಣ್ಪಳಿದೊಪ್ಪಿತ್ತು ವಿಲಾಸಯಾನಮದು ಮಾಂದ್ಯಂಬೆತ್ತು ದಂಭೋಜಕು ||
ಟ್ಮಳ ವಕ್ಷೋರುಹ ದಗ್ರ ಮಾಳ್ದುದೆಳಗಪ್ಪಂ ನುಣ್ಗದಿರ್ದೇಹದೊಳ್ |
ಕಳೆ ಗೊಂಡತ್ತು ತನೂದರಂ ಬಳೆದುದಾ ತನ್ವಂಗಿಗಾ ಗರ್ಭದೊಳ್ || ೩೧

ಕಂ|| ಎಳೆಮುತ್ತಿನಂತೆ ಬೆಮರು |
ಜ್ಜ್ವಳಬಿಂದುಗಳಿರೆ ಬೆಳರ್ತ ತರುಣೀವದನಂ ||
ಸೆಳದುದು ಕಾವನ ಕಯ್ಯೊ |
ಳೊತ್ತಳಗುವ ಶಶಿಮಣಿಯ ಮಣಿಯ ಮುಕುರದ ಚೆಲ್ವಂ||೩೨

ತೊಲಗೆ ರಜಂ ತಮಮದು ಪೊರ |
ತೊಲಂಗುವಂತೆಸೆಯೆ ಮೇಚಕಂ ಚೂಚಕ ಮಾ ||
ಲಲನೆಗೆ ತನುವೊಳ್ಸತ್ವಂ |
ಬಲಿದಂತೆ ಬೆಳತ್ತು ದುದರದಮಳಾರ್ಭಕನಿಂ || ೩೩

ಶೃಂಗಾರವಸ್ತು ತೀವಿದ |
ಗಾಂಗೇಯ ಕರಂಡಮೆನಿಸೆ ಮೊಲೆ ಚೂಚಕಮೇಂ ||
ಕಂಗೊಳಿಸಿದುದೊ ತದಗ್ರದೆ |
ಸಂಗಳಿಸಿದ ನೀಲಮಣಿಯ ಕಿರುಮುಚ್ಚುಳವೊಲ್ || ೩೪

ಜನದೃಷ್ಟಿ ತಾಗಿ ಸಡು ಬಡ |
ವೆನಿಸುತ್ತಿರೆ ಕಾವನಿಟ್ಟ ಕಾಪಿಸ ಗೆರೆಯೆಂ ||
ದೆನೆ ಏಸುಗೆ ಬಾಸೆಯುದರಿಂ |
ಘನಮೆನಿಸಿತಿದೆನಿಸಿ ತೀವಿ ಬಳೆದುದು ಗರ್ಭಂ || ೩೫

ಎನಿತೆನಿತು ಪದನವಿಧು ಬೆ |
ಳ್ಪನೆ ತಳೆದುಜ್ಜ್ವಳಿಸಿದುದು ಪಯೋಧರ ಚಕ್ರಾ ||
ನನಮನಿತನಿತು ಕರಂಗಿದು |
ದೆನೆ ಪಗೆಗಾದಧಿಕತೇಜಮಂ ಸ್ವೈರಿಪರಾರ್ || ೩೬

ವೃ|| ತರುಣಮರಾಳಮಂ ತಳೆದು ಕೊರ್ಬ್ಬಿದ ಕೋಶಮನಾಂತಪದ್ಮಿನೀ
ತರುಣಿ ತರಂಗದಿಂ ನೆಗೆವ ಸೀರ್ಪ್ಪನಿ ತಳ್ತಿರೆ ಭೃಂಗಮಾಲೆ ಮೇ ||
ಲಿರೆ ಮೆರೆವಂತೆ ಪುತ್ರನೆಡೆಗೊಂಡುರುಗರ್ಭಮ ನಾಂತು ಜಾಡ್ಯಮೊಂ |
ದಿರೆ ಬೆಮರುಣ್ಮೆ ಬಾಸೆ ಕಡುಗಪ್ಪಿಡಿದೊಪ್ಪಿರೆ ನೀರೆ ತೋರಿದಳ್ || ೩೭

ಕಂ|| ಬಳೆದುದು ಪೊಡೆಯುಂ ಜಘನಾ |
ಚಳಮುಂ ಕಪ್ಪಿಡಿದುದಳಕಮುಂ ಚೂಚಕಮುಂ ||
ತಳೆದುದು ಮಾಂದ್ಯಮ ನತಿಪಂ |
ಜುಳ ಗತಿಯುಂ ನುಡಿಯುಮಾ ಮೃದುಸ್ಮಿತಮುಖಿಯಾ ||

ಮುಂ ಬಯಕೆಯಾಂತುದವಳಮ |
ನಂ ಬಾಲಕನೊಲ್ದುಬಯಕೆಯೆನೆ ಮೃಡಲೀಲಾ ||
ಡಂಬರ ಕಥಾಸುಧಾರಸ |
ಮಂ ಬಿಡದೀಂಟಲ್ಕೆ ಶೈವನಿಧಿ ಶಶಿಮುಖಿಯಾ || ೩೯

ಪುರಹರಪುರಾಣಮಂ ಶಂ |
ಕರಚರಿತಮ ನಭವ ಕಾವ್ಯಮಂ ಭವಹರಭಾ ||
ಸುರಕೃತಿಯಂ ಗಿರಿಜಾವರ |
ವರಚರಿತಮ ನಬಲೆ ಕೇಳ್ದು ಮುದಮಂ ತಳೆವಳ್ || ೪೦

ವೃ|| ಪರಿಮಳವಾರಿಯಿಂ ಜಳಕಮಾಗಿಪ ನಲ್ಲುಣಿಸಿಕ್ಕುವಂಗರಾ |
ಗ ರಚನೆಗೈವ ಮಾಲ್ಯಮನೆ ಸೂಡುವ ಸಿಂಗರಗೈವ ವೇಣಿಯಂ ||
ವಿರಚಿಪ ದರ್ಪಣಂ ಬಿಡಿವ ಬೆಳ್ಳಿಲೆಯಂ ಮಡಿದೀವ ದಿವ್ಯಚಾ |
ಮರಮನೆ ಬೀಸುವಗ್ಗದ ವಿದಗ್ಧೆಯ ರೊಪ್ಪಿರೆ ದೇವಿ ರಂಜಿಪಳ್ || ೪೧

ಸಚಿವನಸತ್ನಿ ತುಂಬಿದರುದಿಂಗಳ ಗರ್ಭದೊಳೊಲ್ದು ಬಂದು ತಂ |
ದುಚಿತ ಸುವಸ್ತು ವಿತ್ತು ಕಲಸೋಗರಮಂ ನಲಿದಿಕ್ಕಿ ಭೂಷಣ ||
ಪ್ರಚಯಮ ನಿಟ್ಟು ಪೇರೊಸಗೆಗೈದು ಸಖೀಜನದೊಂದು ಗೂಡಿ ಸ|
ದ್ರುಚಿ ಮಿಗೆ ಮಾಡಿ ಸತ್ಕ್ರಿಯೆಯ ಸಂಗನೆಗಾವಧು ಪೋದಳಕ್ಕರಿಂ || ४೨

ಮಲಯಜದಣ್ಪು ಮಲ್ಲಿಗೆಯ ಚೊಲ್ಲೆಯು ಮಬ್ಜಗುಣಾಂಬರಂ ಸಮು |
ಜ್ಜ್ವಲತರ ಚಂಪಕಪ್ರಸವ ಕಾಂಚಿ ಸರೋರುಹ ಕರ್ಣಪೂರ ಮು ||
ತ್ಪಲಕಟಕಂ ಮೃಣಾಳವಲಯಂ ಸುರಹೊನ್ನೆಯ ಹಾರಮಿಂದುಮಂ |
ಡಲಮಧುರಾಸ್ಯೆ ಗೊಪ್ಪಿದುದು ನಿರ್ಭರಗರ್ಭೆ ವಿಳಾಸ ದೇಳ್ಗೆಯೊಳ್|| ४३

ವಚನ|| ಇಂತೊಪ್ಪುತ್ತು ಮಿರೆ ಯಿರೆ—

ಕಂ|| ಒಂದುದಿನ ಮವನಿಪಂ ಪದ |
ಪಿಂದಿನಿಯಳ ಗರ್ಭದಂದಮಂ ನೋಡಲ್ ಚಿ ||
ತ್ತಂ ದಳವೇರುತ್ತಿರೆ ಬಂ |
ದಂದೊಳಪೊಕ್ಕಂ ತದೀಯ ಮಣಿಮಯ ಗೃಹಮಂ || ४४

ವೃ|| ಕರಗತ ಕಂಕಣ ಕ್ವಣಿತ ಮುಣ್ಮಿರೆ ಪೊಂದೆರೆಯಂ ಸವೇಗಮೋ |
ಸರಿಸೆ ಸಖೀಜನಂ ಶಶಿಕಳಾಕೃತಿಯಂ ಸತಿಯಂ ನರೇಂದ್ರನಾ ||
ದರಿಸಿ ನಿರೀಕ್ಷಿಗೆಯ್ವ ನಿತರಲ್ಲಿದಿರೆಳ್ವಳ ನೇಳಲೀಯದಂ |
ತಿರಿಸಿ ಸಮೀಪದೊಳ್ ನೆಲಸಿದಂ ಮಣಿಕಾಂಚನ ಮಂಚತಳ್ಪದೊಳ್ || ४೫

ಕುವಲಯಮಿತ್ರಗರ್ಭೆ ಪುರುಹೂತ ದಿಶಾವಧು ಬೆಳ್ಪನಾಂತಿರಲ್ |
ತವಕದೆ ನೋಡಿನೋಡಿ ನಲಿವಂತೆ ಚಕೋರಯುಗಂ ಮೃಗಾಕ್ಷಿ ಸ ||
ತ್ಕುವಲಯ ಮಿತ್ರ ಗರ್ಭೆಯೆನಿಸುತ್ತೆ ಬೆಳತ್ತಿರೆ ನೋಡಿ ನೋಡಿ ಭೂ |
ಧವನ ವಿಲೋಚನದ್ವಯ ಮದೇಂ ಮುದವಾಂತುದೊ ರಾಗರಂಜಿತಂ ||४೬

ಕಂ|| ಇನಿಯಳ ಮೃದುಕರತಳಮಂ |
ವಿನಯದೆ ಪಿಡಿದಾಸ್ಯಮಂ ನಿರೀಕ್ಷಿಸಿ ಕುರುಳಂ ||
ಕೊನೆಯುಗುರಿಂ ತಿದ್ದುತ್ತೆ ಮೆ |
ಲ್ಲನೆ ಪಲ್ಗದಿರುರ್ವೆ ನಗುತೆ ನೃಪನಿಂತೆಂದಂ || ४೭

ಬರಿದೆ ಪಯೋಧರನಾಮಂ |
ಮೆರೆಯುದೆನುತಾಂತುದೊಳಗೆ ಪಯಮ ನುರೋಜಂ ||
ಸೆರೆವಿಡಿದುದ ದರಬಣ್ಣಮ |
ನುರೆ ಚೂಚಕದೊಳ್ಸರೋರುಹಾಯತನಯನೇ || ४೮

ಮದನ ಗುಣರುಚಿಯ ನಾಂತುದು |
ಮದನಾರಿ ಶರಾಸನಾಗ್ರಮ ಮಂಾರ್ಧ್ವಂ ತೋ‌ೕ ||
ಪ್ಪರ್ದು ನಳಿನಂ ಶಶಿರುಚಿ ದಾ |
ಳ್ದುದು ನಿನ್ನೊಳ್ ಕಾಂತೆ ಪೇಳಿದೇಂ ಕೌತುಕಮೋ || ೪೯

ವಚನ|| ಎಂದು ನುಡಿವರಸನ ಸರಸೋಕ್ತಿಗೆ ಮನದೊಳ್ಮುದಮಂ ಮಾತಿನೊಳ್ಮಾಧುರ್ಯಮಂ ಮೊಗದೊಳ್ಲಜ್ಜೆಯಂ ಕಟಾಕ್ಷದೊಳ್ಕಟ್ಟಳ್ಕರಂ ತಳೆದು ವಿಳಾಸಂಬಡೆದೊಪ್ಪುತ್ತುಮಿರೆಯಿರೆ—

ಕಂ|| ನವಮಾಸಂ ನೆರೆದುದು ಮಾ |
ನವಪತಿ ಪತ್ನಿಯ ಪೊದಳ್ದ ಗರ್ಭಕೆ ಸಖಿಯರ್ ||
ನವಹರ್ಷಂ ದಳೆದಿರ್ದರ್ |
ನವಗ್ರಹಂ ಸುಕರವೃತ್ತಿ ದಾಳ್ದತ್ತಾಗಳ್ || ೫೦

ನಳಿನಿ ಮರಾಳಮನೆಸೆವು |
ತ್ತಳಿನಿ ಸುಗಂಧಮ ನುದಾರಕೃತಿ ಸಿತಯಶಮಂ ||
ತಿಳಿಜೊನ್ನಮ ನಿಂದೂಜ್ಜ್ವಳ |
ಕಳೆ ಪಡೆವವೊಲಬಳೆ ಪಡೆದಳಮಳಾರ್ಭಕನಂ || ೫೧

ನಳಿನಂಗಳಂತೆ ಸಖಿಯರ |
ವಿಳಸಿತವದನಂಗಳಲರೆ ಗಭಾರ್ಕಲದಿಂ ||
ದೆಳನೇಸರಂತೆ ರಾಗೋ |
ಜ್ಜ್ವಳರುಚಿ ತಾನುದಿಸಿ ತೊಳಗಿದಂ ನೃಪತನಯಂ || ೫೨

ವೃ|| ಬಲಗಣ್ಕೆತ್ತಿದು ದೀಶ್ವರಾರ್ಚಕರ ಕೈಲಾಸಾದ್ರಿಯೊಳ್ಯಂಕರಂ |
ನಲಿದಂ ಭೂರಮೆ ಯುತ್ಸವಂ ಬಡೆದಳಿಂದ್ರಾದ್ಯ ಮ್ಮರ್ದಂ ಬಟ್ಟರೀ ||
ನೆಲದೊಳ್ಬಾಳ್ವ ಜನಾಳಿ ಕೇಳ್ದು ಗುಡಿಗಟ್ಟಿತ್ತಲ್ಲಿ ಬಂಧುಕ್ಷಿತೀ |
ಶಲಸನ್ಮಾನಸವಾರ್ಧಿ ಪೆರ್ಚಿದುದು ತತ್ಪುತ್ರೋದಯೋತ್ಸಾಹದೊಳ್||೫೩

ವಚನ|| ಆಗಳ್ಸಂಭ್ರಮಂ ಬೆರಸು—

ಕಂ|| ಕಳೆಯೇರಿ ನಳಿಸಖ ನು |
ಜ್ಜ್ವಳಿಸಿದನಿಳೆ ಪುಳಕವಾಂತು ದಖಿಳರ್ ಮುದಮಂ ||
ತಳೆದರ್ ಕೆಳದಿಯರೊಸಗೆಯು |
ನಿಳಾಧಿಪ ಗ್ಗರಿಪಿ ಸೆಳೆದ ರುಚಿತಮನಾಗಳ್ || ೫೪

ವಚನ|| ಆಗಳ್ಸಂಭ್ರಮಂಬೆರಸು—

ವೃ|| ವಿಳಸತ್ಕಾಶ್ಮೀರ ರಾಗಂ ಬಡೆದ ತನು ಬೆಡಂಗಾಗೆ ಮಂದಸ್ಮಿತಂ ಮಂ
ಜುಳವಕ್ತ್ರಾಂಭೋಜದೊಳ್ಕಂಗೊಳಿಸೆ ಕುಣಿಯೆವಕ್ಷೋಜಕೋಕದ್ವಯಂಮೇ
ಲಳಿವಿಂಡಂ ಗಾಂಗರಾಗಕ್ಕೆಳಸಿ ಬಳಸೆ ಬಂದಳ್ಪ್ರತೀಹಾರಿ ಸಂಧ್ಯೋ |
ಜ್ಜ್ವಳೆ ಪುತ್ರಾದಿತ್ಯಬಿಂಬೋದಯಮ ನರಿಪುವೊಂದುಜ್ಜುಗಂ ಬೆತ್ತುಬೇಗಂ||

ವಚನ|| ಅಂತು ಸತ್ವರಂ ಪರಿತಂದು ನಿಂದು ವಿಮಳಹಾರಾಂಶು ಚಂದ್ರಿಕೆಯಂ ಕರಾರುಣಸರಸಿಜಂ ಮುಗಿದು ದೆಂಬಂತಂಜಲಿಪುಟಂ ರಂಜಿಸೆ ಬಿಂಬಾಧರದ ಕೆಂಬೆಳಗ ನೊತ್ತರಿಸಿ ವಿಶದ ದಶನ ರುಚಿ ನಿಚಯಂ ಪಸರಿಸುತ್ತಿರೆ ಕಣ್ಗದಿ ರ್ತಗ್ಗದಿರಂತೆ ಸಭಾಸದರ ನಯನ ಕುಮುದಮ ನಲರ್ಚೆ ನಲವಿನಿಂದೊಡ್ಡೋಲಗಂಗೊಟ್ಟು ಪಟ್ಟವಣೆಯೊಳ್ಕುಳ್ಳಿರ್ದನರೇಶ್ವರಂಗೆ ದೇವಾ ಪಿರಿಯೊಸಗೆ ಯಿಂದಿಂತೆಂದಳ್—

ವೃ||ಅವನಿಪಸಾರ್ವಭೌಮ ಭವದೀಯ ಮನೋರಮೆ ಸನ್ಮುಹೂರ್ತದೊ |
ಳ್ಕುವರನನೀಗಳೊಲ್ದು ಪಡೆದಳ್ಗಡಿಗಟ್ಟಿಪುದೆಂದು ಪೇಳ್ದತೆ ||
ದ್ಯುವತಿ ಗನರ್ಘ್ಯಮಂಡನಮ ನೊಲ್ದು ಚಿತಂಗುಡುತೀಕ್ಷಿಸಲ್ಮಹೋ |
ತ್ಸವ ಮನದೆಲ್ದನೇಳೆ ಪುಳಕಾಂಕುರ ಮಂಗದೊಳಾ ನರಾಧಿಪಂ || ೫೬

ವ|| ಅಂತೇಳ್ದು ನಡೆಗೊಳ್ವಾಗಳ್ಜಯರವ ಮುಖರ ಮುಖನಿಖಿಲ ವಂದಿವೃಂದಪಠಿತ ಸರಸಕವಿ ರಚಿತ ರುಚಿರತರ ನಿಜಬಿರುದ ಗದ್ಯಪದ್ಯ ಸಮುದಯ ಸಮುದ್ಘೋಷ ಸಹಚರಿತ ಮೃದುಮೃದಂಗ ಪಟು ಪಟಹ ಶಂಖ ಕಾಳ ಕಹಳಾ ವೇಣು ವೀಣಾದ್ಯನೇಕ ಲೋಕಕರ್ಣಕೌತುಕಕರ ವಿತತಾನವದ್ಯವಾದ್ಯರವಂ ದಶದಿಶೆಯೊಳ್ಪರ್ಬಿ ಪಸರಿಸೆಯುಂ, ಪರಿವೃತ ಮಕುಟವರ್ಧನ ನಿಕರ ಮಕುಟತಟ ಘಟಿತ ಮಂಜುಮಾಣಿಕ್ಯ ಮಂಜರೀ ಸಂಜನಿತ ತೇಜಃಪುಂಜಂ ಕಂಜಸಖಕರ ನಿಕರದಂತೆ ತಳತಳಿಸಿ ಪೊಳೆಯೆ ಯುಂ ಶುಂಭನ್ನಿತಂಬ ಬಿಂಬಕುಂಭಿಕುಂಭಸ್ಥಳೀ ಪಲಂಬಿತ ಕೌಸುಂಭಾಂಬರ ಚುಂಬಿತ ಜೃಂಭನ್ಮಣಿಮಯ ಮೇಖಲಾವಲಯ ಕಲಿತ ಕಲಕಿಂಕಿಣೀಗಣ ಝಣಝಣ ರಣಿತ ಸುಕರ ಕಂಕಣ ರವ ಸುರುಚಿರ ಕರಸರಸಿಜ ಬಾಲಾಚಯ ಲೀಲಾ ಚಾಲಿತ ಚಾರು ಚಾಮರಂ ಪಾರ್ಶ್ವಯುಗದೊಳ್ಪರಿ ರಂಜಿಸೆಯುಂ, ನಡೆತಂದು ಪರಿವರ್ಜಿತಾಶೇಷ ಪರಿಜನಂ ನಿಜಕರ ಗೃಹೀತಾ ಮಾತ್ಯಕರಪಲ್ಲವ ನುಲ್ಲಸಿತ ಹೃದಯಂ ಪ್ರಸನ್ನಮುಖಂ ಪ್ರಸೂತಿ ಸದನಾಭಿಮುಖನಾಗಿ ಬರ್ಪ್ಪಲ್ಲಿ ನಿಜಾಂತಃಪುರದೊಳ್ಸಡಗರಿಪ ವಿಳಾಸಿನಿಯರಿಂ ಗುಡಿಗಟ್ಟುವ ಪೌರಜನದಿಂದೆಡೆಯಾಡುವ-ಬಂಧುವರ್ಗದಿಂ ಪೊಡೆವ ಮಂಗಳವರೆಗಳಿಂ ಮಿಳಿರ್ವಕೇತನಂಗಳಿಂ ತಳಿವ ಲಾಜೆಗಳಿಂ ಪೊಳೆದೆತ್ತುವಾರತಿಗಳಿಂ ಕೆಳೆಗೊಳಿಪ ರಂಗವಲ್ಲಿಗಳಿಂ ಬೆಳಗುವ ಮಣಿದೀಪಗಳಿಂ ದಿಳಿಪಿದಫಲಾವಳಿಗಳಿಂ ಗೃಹರಕ್ಷೆಗೈವ ಸಹಚರಿಯರಿಂ ವಿಹರಣಂಗೊಂಬ ವಿದಗ್ಧೆಯರಿಂ ನೆರಪುವ ರಕ್ಷಾಸಾಧನಂಗಳಿಂ ಪರಪುವ ಧೂ

ಪಧೂಮಂಗಳಿಂ ಹರಗೃಹಕ್ಕೊಯ್ವ ಬಾಯಿನಂಗಳಿಂ ಪರಸುವ ಮಾಹೇಶ್ವರರಿಂ ದತಿಸಂಭ್ರಮವನಪ್ಪುಕೈದು ಕಣ್ಗೆ ಕೌತುಕಮಂ ಮನಕ್ಕೆ ಸಂತಸಮ ನೀಯುತ್ತಿರೆ ನಿರೀಕ್ಷಣೆಗೆಯ್ಯುತಿಳಸಿಗಳಿಲ ನೈತಂದು ಕುಲವೃದ್ಧೆಯರ್ತೋರೆ ಕುಮಾರನಂ ನೋಡಿ ಸುಧಾಕರನಂ ಕಂಡಸುಧಾಬ್ಧಿಪೆರ್ಚುವಂತೆ ಮೈವೆರ್ಚಿ ಶಿವಪ್ರಸಾದ ಮಹಿಮೆಯಂ ಬಗೆದು ಬಗೆಯೊಳ್ಮುದಂದಳೆದಿರ್ಪನ್ನೆಗಂ—

ವೃ|| ಗುರುಗಳ್ಬಂದು ಶಿವಾಂಘ್ರಿವಾರಿ ಪರಿಷೇಕಂಗೈಸಿ ಕಾರುಣ್ಯದಿಂ |
ಪರಸುತ್ತಿಟ್ಟು ವಿಭೂತಿಯಂ ಪಣೆಯೊಳಾಗಳ್ಶೈವಮಂತ್ರಂಗಳಿಂ ||
ಪರಿಶುದ್ಧಪ್ರಭಲಿಂಗಮಂ ಧರಿಸಿ ಬಾಲಂಗೊಲ್ದು ಮಾಹೇಶ್ವರಾ |
ವರಣಮ್ಮಾಡಿಸಿದರ್ಮ್ಮಹೋತ್ಸವದಿ ನೊಪ್ಪಲ್ಜಾತಕರ್ಮಂಗಳಂ || ೫೭

ಹರಮಂತ್ರೋದ್ಭವ ನೀತ ನಿನ್ನುಮದನೇ ಸಂಲಕ್ಷಿಪಂ ತಪ್ಪದೆಂ |
ದಿರದಾ ಳೋಚಿಸಿ ಮಂತ್ರಲಕ್ಷ್ಮವೆಸರಂ ಭೂಕಾಂತ ಸಂತಾನದೊಳ್ ||
ದೊರೆವೆತ್ತಗ್ಗದ ಕೀರ್ತಿವೆತ್ತೆಸೆವನೆಂದನ್ವರ್ಥಮಂ ರಾಜಶೇ |
ಖರನೆಂದಿತ್ತಭಿಧಾನಮಂ ತಳೆರ್ದರಾಚಾರ್ಯರ್ಮ್ಮಹೋತ್ಸಾಹದಿಂ || ೫೮

ವಚನ|| ಅನಂತರ ಮರಸನತಿಪ್ರಮೋದದಿ ನಪರಿಮಿತ ಧನ ಕನಕ ವಸನ ಮಾಲ್ಯಮಣಿಭೂಷಣಂಗಳಿಂ ಮಾಹೇಶ್ವರಾ ರಾಧನಂಗೈದು ಸಾನುರಾಗಂ ನಾನಾದಾನಂಗಳ ನನೂನಮನೆ ನೆಗಳ್ದು ಪೆರ್ಮ್ಮೆವೆತ್ತ ಕೂರ್ಮೆಯಿಂ ಶಿವಕಥಾ ಕಮನೀಯ ಮಾಣಿಕ್ಯಮಂಜರೀಕರ್ಣಪೂರಂ ಶಿವಚರಣ ಸಮರ್ಚನ ಸಾಮ್ರಾಜ್ಯಧುರಂಧರಂ ಶಿವಲಿಂಗ ಪತಂಗ ಸಂಗತಮಂಗಳ ಹೃದಯನಳಿನಂ ಶಿವಧರ್ಮ ಕಮಳಾಕರ ವಿಮಳ ಮರಾಳಂ ಶಿವಶರಣಜನ ಮನೋವನ ವಸಂತಂ ಸತ್ಯೇಂದ್ರ ಚೋಳ ಧರಣೀಶ್ವರಂ ಸಚಿವ ಸಮೇತಂ ಸಕಲಧರಣೀಪಾಲರೋಲೈಸುತ್ತಿರೆ ಸಾಮ್ರಾಜ್ಯಸಂಜನಿತ ಸುಖಮನನುಭವಿಸುತ್ತು ಮಿರೆಯಿರೆ—

ಕಂ|| ಪನ್ನೆರಡುದಿನದೊಳಿಟ್ಟ |
ಸ್ವರ್ನ್ನುತ ಸುಕುಮಾರಕಂಗೆ ಮಣಿದೊಟ್ಟಿಲನೆ ||
ತ್ತಂ ನೆಗಳ್ದಿರೆ ವಾದ್ಯರವಂ |
ಕನ್ನೆಯ ರಿರದ್ಯೈದೆ ಮಾಡಿದರ್ಮ್ಮಂಗಳಮಂ || ೫೯

ವಚನ|| ತನ್ಮಹೋತ್ಸವಾ ನಂತರಂ—

ವೃ|| ತೊಳಗುವ ರನ್ನದೊಟ್ಟಿಲೊಳೆ ಪಟ್ಟಿರಿಸುತ್ತೆ ಕುಮಾರನಂ ಮುದಂ|
ದಳೆದೆಳವೆಣ್ಗಳೊಲ್ದು ರಸನಾಂಚಲದೊಳ್ದನಿದೋರಿ ಕಂದ ಜೋ ||
ವಿಳಸಿತರೂಪ ಜೋ ವಿನಯಭೂಷಣ ಜೋ ಸುಕುಮಾರ ಜೋ ಸುಧಾ |
ನಿಳಯ ಸುವಾಣಿ ಜೋ ಸುಭಗಜೋ ವಿಭು ಜೋ ಯೆನುತೊಪ್ಪಿ ತೂಗಿದರ್||

ಮಂಗಳಾಕರ ಜೋ ಮನೋಹರ ಜೋ ಮಹೇಶ್ವರ ಜೋ ಮಹಾ |
ಲಿಂಗಸಂಗತ ಜೋ ಮುದನ್ವಿತ ಜೋ ಮೃದುಸ್ಮಿತ ಜೋ ಜನೋ ||
ತ್ತುಂಗವಂದಿತ ಜೋ ಜಗನ್ನುತ ಜೋ ಜಯೋನ್ನತ ಜೋ ಎನು |
ತ್ತಂಗನಾ ಜನವೆಯ್ದೆ ಪಾಡುತೆ ಜೋಗುಳಂ ಮಿಗೆ ತೂಗಿದರ್ ||  ೬೧

ಕಂ|| ಅರಿನೃಪರ ಸಿರಿಯ ಸೆರೆಯಂ |
ತರಳಂ ತಾನಿಂತು ಪಿಡಿವೆನೆಂದರಿಪುವವೋಲ್ ||
ಸರಳಕರಾಂಗುಲಿಯಿಂದಂ |
ತರುಣೀಜನದಳಿಕದ ಳಕವುಂ ಬರಸೆಳೆವಂ ||  ೬೨

ನಿರುಪಾಧಿಕ ಪ್ರಕಾಶಾಂ |
ತರ ಚಿಜ್ಜ್ಯೋತಿಗೆ ಸಮಾನಮಲ್ತೆಂದು ಕರಂ ||
ಪರಿಹಾಸಂಗೆಯ್ವಂತಿರೆ |
ತರುಣಂ ಮಣಿದೀಪಮಂ ನಿರೀಕ್ಷಿಸಿ ನಗುವಂ ||  ೬೩

ಶಿವನ ಜಡೆಮುಡಿಯ ಶಶಿಕಳೆ |
ಭುವನದೊಳೀ ಕುವರನರಿಜು ವಡೆದು ದಯಿಸಿತೆಂ ||
ಬವೊಲೆಸೆದು ಕಳೆಗಳೊಡವೆರೆ |
ಯೆ ವಿಳಾಸಂಬೆತ್ತು ಬಳೆದನವನಿಪ ತನಯಂ ||  ೬೪

ದರಹಸನಾ ಮೃತ ವರವ |
ಲ್ಲರಿ ಯಂಕುರದಂತೆ ತೋರೆ ವೊಳೆವಲ್ಲದ ಕಂ ||
ಬುರುಹಮುಖಿ ಸುರಿವವೋಲ್ಕ್ವ |
ಲ್ಪರಿಯ ಪಯೋಧರದಿ ಸಮೃತಮಂ ಪದೆದಿತ್ತಳ್ ||  ೬೫

ವಚನ|| ಮತ್ತಮತಿಸ್ನೇಹಂ ಬೆರಸು—

ವೃ|| ಬರೆ ತೆಗೆದಪ್ಪಿ ಚೀನವಸನಾಂಚಲಮಂ ನಸು ನೂಂಕಿ ಹಾರಮಂ |
ಕರತಳದಿಂ ಕೆಲಕ್ಕೆ ತೆಗೆದೊಯ್ಯನೆ ಸೋಗಿಲೊಳಿಟ್ಟು ನೇಹದಿಂ ||
ತೊರೆದಿರದೆಚ್ಚು ಪಾಯ್ವವೊಲೆವಾಲ್ಗಳ ನಕ್ಕರೊಳೂಡಿ ನೋಡಿ ಭಾ |
ಸುರ ಸುಕುಮಾರನಂ ನಲಿದಳಂಗನೆ ಪೂರ್ಣವಿಳಾಸದೇಳ್ಗೆಯಿಂ ||  ೬೬

ಕಂ|| ಈತೋಳೊಳಾಂತು ತೋರ್ಪ್ಪೆನಿ |
ಳಾತಳಮಂ ಶತ್ರುಭೂಪರಂ ಜಯಿಸುವೆ ನೆ ||
ನ್ನೀ ತೋಳೊಳೆಂದು ತೋರ್ಪ್ಪವೊ |
ಲಾ ತೋಳಾಡಿಸುವ ನವನಿಪಾಲಕ ತನಯಂ ||  ೬೭

ಕಂ|| ಸವಿ ನಗೆಯೆಂಬಮರ್ದಿನ ಸೊನೆ |
ಕವಿತರ್ಪವೊಲಾಗೆ ಸುರಿವಲಾಲಾಜಳ ಮು ||
ಣ್ಮುವ ಮೊಳೆವಲ್ಮಿಸುಗುತ್ತಿರೆ |
ಕುವರಂ ಕುಳ್ಳಿರ್ದು ಜನನಿಯೊಳ್ಬಿನಟಿಸುವಂ || ೬೮

ವಚನ|| ಅಂತುಮಲ್ಲದೆ—

ಕಂ|| ನಲವೆಚ್ಚುವ ಪೆಣ್ಗಳ ಕರ |
ತಳದಿಂ ಕರತಳಕೆ ಬರ್ಪ ಬಾಲಕನಾಗಳ್ ||
ಗೆಲೆವಂದಂ ಕೆಂದಾವರೆ |
ಯಲರಿಂದ ಲರ್ಗೆಯ್ದೆ ತಳರ್ವ ಹಂಸಾರ್ಭಕನಂ || ೬೯

ವೃ||ನಗಿಸುತ್ತಿಕ್ಕೈಗಳಿಂ ಮಸ್ತಕಮನೆಳವಿ ಮುದ್ದೀವುದೆಂದಪ್ಪಿ ಶಿಷ್ಟೋ |
ಕ್ತಿಗಳಂ ತಾಂ ಪೇಳ್ದು ಪೇಳ್ವಂತಿರೆ ಕಲಿಸಿ ತೊದಳ್ವಾತು ಚೆಲ್ವಾಗೆ ಮಾಮಾ ||
ಕ್ಷಿಗೆ ಪುರ್ಬ್ಬಿಂ ಜಬ್ಬಿ ನೀಂ ನೋಡೆ ಸುತರುಪಿ ನೃಪಂ ಯತ್ನದಿಂ ಪಂಚವರ್ಣ
ಪ್ರಗತಾಂಬಾಪಾಣಿ ಕೀರಪ್ರಭತನಯ ನಿನಾನಂದಮಂ ತಾಳ್ದನಾಗಳ್ ||೭೦

ತರಳಂ ಗೊಪ್ಪಿದ್ದ ದೊಳ್ಮಾಣಿಕದರಳೆಲೆ ನೀಲಂಗಳಿಂ ತಳ್ತಕರ್ಣಾ |
ಭರಣಂ ಸುಣ್ಮುತ್ತಿನೇಕಾವಳಿ ಮಿಸುಪ ಹರಿದ್ರತ್ನಮೊಂದಿರ್ದ ಮುಂಗೈ ||
ಸರ ಮುದ್ಯತ್ಸ್ವರ್ಣದಿಂ ಕೀಲಿಸಿದ ಪುಲಿ ಯುಗುರ್ಪ ಷ್ಯರಾಗಾಂಗದಂ ಬ|
ಜ್ಜರದಿಂ ದಿಂಬಾದಪೊಂಗೆಜ್ಜೆ ಗಳೊಡನೆ ಬೆಡಂಗಾದ ಮಂಜೀರಯುಗ್ಮಂ ||
ಎಳನಗೆಯುಣ್ಮೆ ಮುದ್ದುಮೊಗದೊಳ್ಮರಿಯಂಚೆಯು ನಟ್ಟಲೆಂದು ಮಂ |
ಜುಳತರ ಮಾಗೆ ದಟ್ಟಡಿಯನಿಕ್ಕುವ ಬಾಲಕ ನಂಗದೊಂದು ಮಾ ||
ರ್ಪೊಳಪಿರೆ ನೀಲಕುಟ್ಟಿಮ ದೊಳುರ್ವರೆ ತಜ್ಜನನೀ ಸಪತ್ನಿ ತಾಂ |
ತಳೆದಳೊ ತತ್ಸಮಾತ್ಮಭವನಂ ಪುರುಡಿಂದೆನೆ ಕಣ್ಗೆ ರಂಜಿಕುಂ || ೭೧

ಪೊಳೆ ಏಂದೂಪಳಕುಟ್ಟಿ ಮಸ್ಥಳ ದೊಳೆತ್ತಂ ಸೂಸೆ ತೀವಿರ್ದ ನಿ |
ರ್ಮಳ ಕರ್ಪೂರ ರಜಂಗಳಿಂ ತಳೆದು ಧೂಳೀ ಕೇಳಿಯಂ ಗಂಡದೊಳ್ ||
ಮಿಳಿರ್ದಾಡುತ್ತಿರೆ ಕುಂಡಲಂ ಝಣರೆನಲ್ಪೊಂಗೆಜ್ಜೆಯೊಂದೊಂದು ಪ |
ಲ್ಮೊಳೆ ಚೆಲ್ವಾಗಿರೆ ಮುದ್ದು ಏರಿ ನಗುತೇಳ್ತಂದಪ್ಪುವಂ ಮಾತೆಯಂ || ೭೨

ಕಂ|| ಅರಳೆಲೆ ನೊಸಲೊಳ್ಘಲಿಸು |
ತ್ತಿರೆ ಮಣಿಮಾಗಾಯ್ಗಳೊಲೆಯೆ ಕಿರುಗೆಜ್ಜೆಗಳಾ ||
ವರಿಸಿ ದನಿಗುಡೆ ಮೃದುಸ್ಮಿತ |
ಮಿರೆ ಮೊಗದೊಳ್ಮುದ್ದು ಏರಿ ಕುಣಿವಂ ಕುವರಂ || ೭೪

ವಚನ|| ಇಂತನಂತ ವಿಳಾಸಮಂ ಮೆರೆದು—

ವೃ||ವಿಳಸತ್ಪೂರ್ವಾದ್ರಿಯೊಳ್ಬಾಸುರತರುಣದಿನಾಧೀಶ ಬಿಂಬಂಸುಧಾಬ್ಧಿ
ಸ್ಥಳದೊಳ್ಬಾಲಂ ಮರಾಳಂ ಮಳಯಜ ವನದೊಳ್ಕುಂಜರೇಂದ್ರಾರ್ಭಕಂ ಮೇ
ಣ್ಬಳೆ ವಂತತ್ಯಂತತೇಜಂ ವಿಮಳತೆ ವಿಸರದ್ಭದ್ರ ಮೊಂದಾಗಿ ತನ್ನೊ |
ಳ್ಬಳೆಯಲ್ಸತ್ಯೇಂದ್ರ ನಂತಃಪುರದೊಳೆ ಬಳೆದಂ ಸತ್ವಸಾರಂ ಕುಮಾರಂ || ೭೫

ವಚನ|| ಇಂತು ಬಳೆಯುತ್ತುಮಿರೆಯಿರೆ—

ವೃ|| ಜನಪತಿಪುತ್ರನಂ ಶುಭಮುಹೂರ್ತದೊಳೋರಗೆ ಗೊಂಡಮಂತ್ರಿಪು|
ತ್ರನೊಳೊಡಗೂಡಿ ಮಂಗಳ ವಿಳಾಸಮೊಡಂಬಡೆ ಸರ್ವವಿದ್ಯೆ ಸಂ ||
ಜನಿಪವೊಲೋದಲಿಟ್ಟು ಮುದಮೊಂದಿರೆ ಕಲ್ಪರನೂನ ವಿದ್ಯೆಯಂ |
ಘನತರ ಶಸ್ತ್ರಶಾಸ್ತ್ರ ಹಯ ಹಸ್ತಿ ವಿಶೇಷಕವಾಹಕತ್ವಮಂ || ೭೬

ವಚನ|| ಇಂತು ಪರಿಣತಾಖಿಳ ರಾಜವಿದ್ಯಾ ವಿಶಾರದರೆನಿಸಿ—

ಕಂ|| ಕಲಿಪಂಗೆ ನೆರೆಯದಧಿಕೋ |
ಜ್ಜ್ವಲಕಲೆ ಕೈಸಾರ್ದುದಮಳನುತಿ ಮತಿಗೆ ಸುಧಾ ||
ಜಲನಿಧಿ ಗಿಲ್ಲದಕಳೆ ಗ |
ಳ್ಪಲೆಗೊಳ್ವವೊಲಮಳ ಕಮಲರಿಪು ಕಳೆಗಾಗಳ್ || ೭೭

ವಚನ|| ಎಂದಧಿಕ ಬುಧಕದಂಬಂ ಪೊಗಳುತ್ತುಮಿರೆ—

ಕಂ|| ಸಮಚರಿತ ಸ್ಸಮವಿನಯ |
ಸ್ಸಮಾನವಯಸ ಸ್ಸಮಪ್ರಭಸ್ಸಮವಿದ್ಯರ್ ||
ಸಮರೂಪ ಸ್ಸಮಗುಣ ರು |
ತ್ತಮನೃಪಸುತ ಮಂತ್ರಿಪುತ್ರ ರಿರ್ವರ್ಬ್ಬಳೆದರ್ || ೭೮

ಅವರಿರ್ವ್ವ ರಿರವ ನುರ್ವರೆ |
ಯವರೀಕ್ಷಿಸುತುಂ ಸಹೋದರ ನ್ನಿಜಮೆಂಬರ್ ||
ವಿವಿಧವಿಳಾಸದಿನಾ ನೃಪ |
ಯುವತಿಯು ಮಾನೃಪನು ಮಕ್ಕರಿಂ ಸರಿಗಾಣ್ಬರ್ || ೭೯

ನಡೆ ನಗೆ ಪುಗೆ ಮಾಂದ್ಯದೊಳೊ |
ಳ್ನುಡಿ ನುಡಿ ಕಡುನುಣ್ಪನಾನೆ ರಾಗದೊಳೆ ಮನಂ ||
ಕಡೆ ಗಣ್ತೊಡರ್ದಿರೆ ಜವ್ವನ |
ಮಡಿಯುಟ್ಟುದು ಮಂತ್ರಿಪುತ್ರ ಸಂಗದೊಳಾಗಳ್ || ೮೦

ವೃ|| ಜಾಣ್ಮೆಗೆ ಜೌವನಂ ನೆರೆದುದುಣ್ಮಿದ ಜೌವನಕೆಯ್ದೆ ಜಾಣ್ಮೆ ಕೈ |
ಗಣ್ಮಿದು ದೇಳ್ಗೆವೆತ್ತ ಸೊಬಗಿಂಗಳ ವಟ್ಟುದು ಚೆಲ್ವು ಚೆಲ್ವುವಂ ||
ಕಣ್ಮನಕೊಪ್ಪುವಂತೆ ಸೊಬಗೊಂದಿದು ದಗ್ಗದ ಲೀಲೆಗುತ್ಸವಂ |
ಪೊಣ್ಮಿದು ದುತ್ಸವಕ್ಕೆಸದು ದಗ್ಗದ ಲೀಲೆ ತದಂಗ ಸಂಗದಿಂ || ೮೧

ವಚನ|| ಆಗಳಾ ಮಿತವಚನ ನತಿವಿತತ ಕೌತುಕಾವಹ ಮೆನಿಸಿ—

ವೃ|| ಶತಪತ್ರಾಯತಲೋಚನಂ ನಗೆಮೊಗಂ ಬಿಂಬಾಧರಂ ವಜ್ರರಂ |
ಜಿತದಂತಾವಳಿ ದೀರ್ಘಬಾಹುಯುಗಳಂ ದಿವ್ಯತ್ಕಪೋಲದ್ವಯಂ ||
ವಿತತೋರಸ್ಥಳ ಮುನ್ನತಾಂಸ ಮರುಣಾಂಭೋಜಸ್ಫುರತ್ಪಾಣಿ ರಂ ||
ಜಿತ ರಂಭೋರು ಬೆಡಂಗು ಮೀರೆ ತಳೆದಂ ಸೌಂದರ್ಯ ಸೌಭಾಗ್ಯಮಂ || ೮೨

ವಚನ|| ಇಂತು ಸಮಾರೂಢ ಪ್ರೌಢ ಯೌವನಾಲಂಕೃತ ಸಹಜಸೌಂದರ್ಯ ಮಾಧುರ್ಯ ಧುರಂಧರತೆಯ ನಪ್ಪುಳ್ಕೈದಾರ್ಯ ಜನವಿನುತ ಗುಣಗಣಾಭರಣ ಭೂಷಿತನುಂ ವಿತತ ಸಿತಯಶಸ್ಸುಧರ್ಮ ಸಮುದಿತ ದಯಾನ್ವಿತ ನಿರ್ಮಲಾಂತಃಕರಣ ನುಮಮಿತ ಶೌರ್ಯಧೈರ್ಯ ಚಾತುರ್ಯ ಗಾಂಭೀರ್ಯ ಪ್ರಕಟಿತ ನಿಜಪ್ರಭಾವನುಂ ಪರಮಶಿವ ಚರಣಾರವಿಂದಾ ಮಂದ ಮಕರಂದ ಪಾನ ಮತ್ತಮಧುಕರಾಯ ಮಾನ ಮಾನಸನು ಮಖಿಳಕಳಾ ನೈಪುಣ್ಯ ಜನವರೇಣ್ಯನು ಮೆನಿಸಿ ಪೊಗಳ್ತೆವಡೆದು ರಂಜಿಪಾ ಮಿತವಚನನೊಡನೆ ಕೆಳೆಗೊಂಡು ಶೈಶವದಶೆಯಂ ವಿಸರ್ಜಿಸಲುಪಕ್ರಮಿಸಿ ರಾಜಶೇಖರ ಕುಮಾರನೋಜೆಯಿಂ ರಾಜಿಸುತ್ತು ಮಿರ್ಪಾಗಳ್—

ವೃ|| ಅನುಪಮ ಚಿದ್ಘನಾರ್ಯ ಗುರುಗಳ್ಪಿರಿದುತ್ಸವದಿಂವೆ ಬಂದು ತ |
ಜ್ಜನಪತಿಪುತ್ರನಂ ಸಚಿವಪುತ್ರನುಮಂ ನಡೆನೋಡಿ ಚಿತ್ತದೊ ||
ಳ್ಪನೆಕೊನೆವೋಗಿ ರಾಗಿಸಿ ಮಹಾಶಿವದೀಕ್ಷೆಯ ನೊಲ್ದು ಮಾಡಿ ಪಾ |
ವನ ಶಿವತತ್ವಮಂ ತಿಳಿಪಿ ಲಿಂಗಸಮರ್ಚಕರಂ ನಿಮಿರ್ಚಿದರ್ || ೮೩

ವಚನ|| ಅಂತು ಶಿವದೀಕ್ಷೆಯಂ ರಚಿಸಿ ಶಿವಮಂತ್ರೋಪದೇಶಂ ಗೈದು ಕೃಪಾರಸ ಭರಕಟಾಕ್ಷದಿ ನಭೀಕ್ಷಿಸಿ ಮತ್ತಮಿಂತೆಂದರ್—

ವೃ|| ಇದು ಶಿವಮಂತ್ರಕೋಟಿಗೆ ತವರ್ಮನೆ ನೋಡಿದು ಶೈವಶಾಸ್ತ್ರಭೂ
ಜದ ಘನಮೂಲ ಮಿಂತಿದು ಚಿದಂಗನೆಯುಜ್ಜ್ವಳ ದರ್ಪಣಂ ಪೊದ ||
ಳ್ದಿದು ಪರಮುಕ್ತಿಕಾಂತೆಯ ಶಿರೋಮಣಿ ತಾನಿದು ಮುನ್ನಿನಾರ್ಯರ |
ಗ್ಗದನಿಧಿ ನೋಳ್ಪೊಡಿಂತಿದು ಮಹಾಮುನಿಚಿತ್ತಸರೋಜ ಷಟ್ಪದಂ || ೮೪

ನಿರಯಾಂಭೋರಾಶಿಯೊಳ್ಮೇಣ್ಮುಳುಗಿ ಬಹುತರಕ್ಲೇಶದಿಂ ಬೇವಪಾಪಾ |
ತ್ಮರ ನಂದೈತಂದು ನೋಡುತ್ತಮಿತ ಮಹಿಮ ಸಾನಂದಯೋಗೀಂದ್ರ ನೊಲ್ದು
ದ್ಧರಿಪನ್ನಂ ಕರ್ಣಮಂ ಸೋಂಕಿದ ನಿತರೊಳ ವಗ್ಗಿರ್ತ್ತು ರುದ್ರತ್ವಮಂ ತಾಂ|
ಪೊರೆದತ್ತೀ ಮಂತ್ರಕೋಟಿ ಸ್ಫಟ ಮಕುಟ ಮಹಾರತ್ನ ಷಡ್ವರ್ಣ ಮಂತ್ರಂ||

ತನುಕೃತ ತಾಪನಾಗ ದತಿದೂರಕೆ ಪೋಗದೆ ಯತ್ನದಿಂ ಮರು |
ನ್ಮನಮ ನೊರಲ್ದು ಕಟ್ಟದೆ ಮಹಾದ್ರಿಯ ಮೆಟ್ಟದೆ ಕಂದಮೂಲಮಂ ||
ಮನದೊಲವಿಂದೆ ಮೆಲ್ಲದೆ ವನಾಂತದೆ ನಿಲ್ಲದೆ ಸುಮ್ಮನೊಮ್ಮೆ ಮ |
ಲ್ಲನೆ ನುಡಿದಂಗೆ ಮುಕ್ತಿಗುಡು ತಿಪ್ಪುದಿದೆಂದೊಡದಾರೊ ಬಣ್ಣಿಪರ್ || ೮೬

ಕಂ|| ಹರವದನ ಚಂದ್ರಬಿಂಬದಿ |
ಸಿರದೊಗೆದುದ ನೂನ ವೇದವಟತರು ಪಂಚಾ ||
ಕ್ಷರಬೀಜ ದಿಸುರುಶಾಖಾ |
ವಿರಾಜಿತಂ ಪಲ್ಲವಾಂಚಿತಂ ಫಳಮಿಳಿತಂ || ೮೭

ಸ್ಮೃತಿವಿತತ ಪುರಾಣೌಘದೊ |
ಳತಿಶಯ ಮಾಶ್ರುತಿ ಸಮೂಹ ಮದರೊಳ್ನಿಸದಂ ||
ಶತರುದ್ರೀಯ ಮದತಿಶಯ |
ಮತಿಶಯ ಮದರೆಲ್ಲಿ ಪಂಚಮುಖ ಪರಮಂತ್ರಂ || ೮೮

ಅಮೃತಪ್ರದ ಮಾನೆಂಬುದ |
ನಮರ್ತ್ಯ ಮರ್ತ್ಯಾಳಿ ಗರಿಪುವಂತಿತ್ತುದು ತಾ ||
ನಮಮ ಶತಮನ್ಯು ಗುಪಮು |
ನ್ಯು ಮುನಿಗಮೃತಮಂ ಷಡಕ್ಷರಂ ಶಿವಮಂತ್ರಂ || ೮೯

ವೃ|| ಕಾಮಿತ ವಸ್ತುವಂ ನೆಗೆಳಲಾಪ್ಪುದು ಕಾಮದುಘಂ ಸುರಗ್ಗೆ ಚಿಂ
ತಾಮಣಿ ಚಿಂತಿತೇಷ್ಟ ಮನಮಚ್ಚುಗು ಮಾರಯೆ ಕಲ್ಪಿತಾರ್ಥಮಂ ||
ನೇಮಿಪುದಲ್ತೆ ಕಲ್ಪತರು ಕಾಮಿತಚಿಂತಿತ ಕಲ್ಪಿತೇತರೋ |
ದ್ದಾಮ ಮಹಾಪದಪ್ರದ ಮಿದೆಂದೊಡಿದರ್ಕ್ಕೆಣೆ ಬಪ್ಪುದಾವುದೋ||೯೦

ಕಂ|| ಘನಮುಕ್ತಿ ಕಾಂತೆಗಿದು ತಾಂ |
ಜನನಿ ಲಸದ್ಭಕ್ತಿಯುವತಿಗಿದು ಕೆಳದಿ ಪುರಾ ||
ತನರ ಮತದಿಂದೆ ಶರಣಾಂ |
ಗನೆ ಗಭವನ ನೆಳೆದು ತರ್ಪ್ಪದೂದವಿ ಪೆರತೇಂ || ೯೧

ವೃ|| ದುರಿತೌಘಧ್ವಾಂತ ವಿಧ್ವಂಸನ ಖರಕರ ಮತ್ಯುಗ್ರಮೃತ್ಯುಗ್ರಹಾದಿ|
ಸ್ಫುರ ದುದ್ಯದ್ವಜ್ರಮುಜ್ಜೃಂಭಿತ ಭವನಿವಹಾಂಭೋಧಿಕುಂಭೋದ್ಭವಂ ದು||
ರ್ಧರ ದುರ್ಮಂತ್ರಾಭ್ರ ವಿಭ್ರಂಶನ ಪಟುಪವನಂ ದಂಡಭೃಚ್ಚಂಡ ಕಾಕೋ |
ದರ ಮೇಘಜ್ಯೋತಿ ಪಂಚಾಕ್ಷರಮಿದು ಶಿವತಂತ್ರೋದಿತಂ ದಿವ್ಯಮಂತ್ರಂ ||

ಕಂ|| ಈಮಂತ್ರ ದಮಿತಮಹಿಮೆಯ |
ನೀಮಹಿತ ಮಹೀತಳಾ ಗ್ರದೊಳ್ಬಣ್ಣಿಸಲಾರ್ ||
ಸಾಮರ್ಥ್ಯಸಮೇತ ಶ್ರೈರ್ |
ಷಾಮರಗುರು ತಾಮರಸ ಭವ ನ್ನೆರೆದಪರೇ || ೯೩

ತನುವಿಲ್ಲದ ತನು ವಿಧ್ವಂ |
ಸನಂಗೆ ತನು ಪೇಳಲೊಂದು ಪೆಸರಿಲ್ಲದ ಚಿ ||
ದ್ಘನಲಿಂಗಕ್ಕಿದು ಪೆಸರೆಂ |
ದೆನೆ ಬಣ್ಣಿಪರಾರೊ ಪಂಚವರ್ಣದ ಘನಮಂ || ೯೪

ಅದರಿಂದೆ ನಂಬಿ ಜಪಿಸಿದೊ |
ಡಿದರಿಂ ದೊರೆಕೊಳ್ಗು ಮಮಳ ಶಿವಪದ ಮಿಂತ ||
ಲ್ಲದೆ ಪೆರತು ಮಾರ್ಗದಿಂದ |
ಪ್ಪುದು ತಾನೆಂಬುದು ನಭಃಪಯೋಜಪ್ರಾಯಂ || ೯೫

ವೃ|| ಚರಚರಣಾಂಬುವಂ ತಳೆದು ತದ್ಘನಶೇಷಮ ನೆಯ್ದೆ ಕೊಂಡು ತಂ |
ಕರಶರಣರ್ಕಳಂ ಸವಿನಯಂ ಮಿಗೆ ಮನ್ನಿಸಿ ಪೊಪ್ಪುವೆತ್ತು ಭಾ ||
ಸುರ ಭಸಿತಾಕ್ಷಮಾಲಿಕೆಯ ನಂಗದೊಳಾಂತು ನಿಜಾರ್ಯ ಪೂಜೆಯಂ |
ವಿರಚಿಸಿ ಲಿಂಗಮಂ ಭಜಿಸಿದಂಗಿದು ಸಿದ್ಧಿಪುದೀಶ್ವರಾಜ್ಞೆಯಿಂ || ೯೬

ವಚನ|| ಎಂದು ಸಾಂಗಮೆನೆ ತಿಳಿಪಿದಾಗಳ್—

ಕಂ|| ಹೃದಯಪಯೋಜದ ಪರಿಮಳ |
ಮಿದು ಚೇತಸ್ತಂಭದಗ್ರಮಣಿದೀಪಿಕೆ ಮೇ ||
ಣಿದು ಮಾನಸಮುಕುರದ ಪೊಳ |
ಪಿದು ತಾನೆನಿಸಿದುದು ಗುರುನಿರೂಪಿತ ಮಂತ್ರಂ || ೯೭

ಬಗೆಗೊಗೆದುದಧಿಕ ಮುದಮುರೆ |
ನೆಗೆದುದು ರೋಮಾಂಚ ಮಂಗದೊಳ್ಸುಖಜಳಮು ||
ಕ್ಷ್ಣಿಗಳಿಂ ಕಳಿದಿಳಿದುದು ಮೆ |
ಲ್ಲಗೆ ಬೆಮರುಣ್ಮಿದುದು ಸಚಿವಸುತ ನೃಪಸುತರಾ || ೯೮

ವಚನ|| ಇಂತೊಗೆದ ಸಾತ್ವಿಕಂ ಬೆರಸು ನಿತ್ಯಸತ್ಯ ಸಮುಗ್ರೋದಗ್ರ ಪ್ರಭಾವರಾ ಶ್ರೀಗುರು ಚರಣ ನಖ ಚಂದ್ರನಂ ನೊಸಲ್ವೆರೆಯಿ ನಾಲಿಂಗಿಪಂತೆ ಪದೆದೆರಗಿ ನಿಂದು ಕರಾಬ್ಜಮಂ ಮುಗಿದು—

ಕಂ|| ಜಯಜಯರವ ಮುಣ್ಮಿರೆ ಸಂ |
ಶಯರಹಿತಾಶಯ ಸಮೇತರಾನಂದಯುತರ್ ||
ಭಯಭಕ್ತಿವೆರಸು ನುತಿಸಿದ |
ರಯ ಕರಣಕರ ಕ್ಕರ್ಮಾರರಾಗುರುವರನಂ || ೯೯

ದುರಿತಾಬ್ಜ ಸುಧಾಕರ ಭೀ |
ಕರ ಭವ ಬಂಧನ ತಮೋ ದಿವಾಕರ ಮಹಿಮಾ ||
ಕರ ವಿಶತ ಕೃಪಾಕರ ಕೇ |
ಕರ ಜಯ ಜಗತೀಜನೋತ್ತಮ ಸ್ತುತಿ ಪಾತ್ರಾ || ೧೦೦

ತನುವಂ ಮನಮಂ ಘನಜೀ |
ವನಮುಂ ಪರಿಶುದ್ಧಿಗೊಳಿಸಿ ಶಿವಚಿತ್ಕಳೆ ಪಾ ||
ವನ ಪಂಚಾಕ್ಷರಮಂತ್ರಮ |
ನನುಗೊಳಿಸಿದಿ ರಾರ್ಯಕುಲ ಕುಶೇಶಯ ಮಿಹಿರಾ || ೧೦೧

ನಿಗಮಾಂತ ಭೂಮಿ ಕಾಂತಃ |
ಪ್ರಗತ ಶಿವಾದ್ವೈತ ಚಿನ್ಮಹಾನಿಧಿಯ ನಿದಂ ||
ವಿಗತಾಂಜನ ನರಿದೆಮಗುರೆ |
ತೆಗೆದಿತ್ತುದು ಚಿತ್ರಮಲ್ತೆ ನೀಂ ಗುರುವರ್ಯಾ || ೧೦೨

ವಚನ|| ಎಂದು ವಿಪುಳತರ ಭಕ್ತಿಯಿಂ ವಿವಿಧಸ್ತುತಿಗಳಿಂ ಪೊಗಳ್ದು ಸಾಷ್ಟಾಂಗ ಪ್ರಣಾಮಂ ಗೈದು ನಿರತಿಶಯ ವಸು ವಸನ ಮಣಿಭರಣಂಗಳಿಂ ಪೂಜಿಸಿ ಪೂರ್ಣ ಮನೋರಥಂ ಬಡೆದು ಮಗುಳ್ದು ಪೊಡಮಡಲೊಡನೆ—

ಶ್ಲೋ|| ಯಾಭ್ಯಾಮುಮಾಸ್ಯ ನೇತ್ರಾಬ್ಜ ನೀಲಂಬ್ಜೇ ಸುವಿಕಾಸಿತೇ |
ಸದಾ ಶಂಭೋಃ ಖರತ್ನಾಬ್ಜನೇತ್ರೇ ತೇ ಪೋವತಾಚ್ಚಿರಂ || ೧೦೩

ವೃ|| ಪ್ರಾಂಚತ್ಪಂಚ ಮರುದ್ವಿಹಾರ ನಗರೀ ಪಂಚಾಸ್ತ್ರಹೃದ್ಭೀಕರೀ |
ಪಂಚಾಚಾರ ಪರಾಕ್ಷ ಸಂಚಯಚರೀ ಪಂಚಾನನಾಂತಃಪುರೀ ||
ಪಂಚೀಭೂತ ಜಗತ್ಪ್ರಪಂಚಲಹರೀ ಪಂಚಪ್ರಮಾ ಮಂಜರೀ |
ಪಂಚಬ್ರಹ್ಮಧರೀ ಮಹಾಸುಖಕರೀ ಪಂಚಾಕ್ಷರೀ ಪಾತು ವಃ || ೧೦೪

ವಚನ|| ಎಂದಮೋಘ ಪ್ರಭಾವ ರಾಶೀರ್ವಾದಂ ಗೈದು ತತ್ಪಿತೃಗಳಿಂ ಪೂಜೆಗೊಂಡೆ ಖಂಡವಿಭವಂ ಮಿಗೆ ನಿಜದೇಶಕ್ಕೆ ತಳರ್ದರನ್ನೆವರ ಮಿತ್ತಲ್ —

ವೃ|| ವಿತತಮಹೋತ್ಸವಂ ಬೆರಸು ಸತ್ಕುಲ ಸದ್ಗುಣ ಸದ್ವಯಸ್ಸಮು |
ನ್ನತಮತಿಯುಕ್ತೆಯಂ ಕಮಳಲೋಚನೆಯೆಂಬ ಮನೋಜ್ಞಕನ್ಯೆಯಂ ||
ಮಿತವಚನಂಗೆ ಚೋಳಧರಣೀಪತಿ ಮಾಡಿ ವಿವಾಹಮಂ ಸಮು |
ನ್ನತಿ ಪೃಥುಸಂಪದಂಗೊಳಿಸಿ ರಂಜಿಸಿದಂ ಬುಧಕಲ್ಪಭೂರುಹಂ || ೧೦೫

ವಚನ|| ಅಂತೆಸಗಲೊಡನೆ—

ವೃ||ಸುದತೀಸಸ್ಮೇರ ವಕ್ತ್ರಾಂಬುಜ ಪರಿಮಳಮಂ ಘ್ರಾಣದಿಂ ತದ್ವಚಸ್ಸಂ
ಪದಮಂ ಶ್ರೋತ್ರಂಗಳಿಂ ತನ್ಮೃದುಳತರ ತನುಸ್ಪರ್ಶಮಂ ದೇಹದಿಂ ತ ||
ದ್ವಿದಿತೋದ್ಯದ್ರೂಪಮಂ ನೇತ್ರದಿ ನಧರಸುಧಾಸಾರಮಂ ಜಿಹ್ವೆಯಿಂ ಸ |
ಮ್ಮದದಿಂದಂ ಸೇವಿಸುತ್ತುಂ ಮಿತವಚನ ಕುಮಾರಂ ಕರಂ ರಂಜಿಸಿರ್ದ್ದಂ ||

ವಚನ|| ಇಂತತಿಪ್ರಮೋದದಿ ನವನಭಿನವ ಸಂಸಾರ ಸುಖಮ ನನವರತ ಮನುಭವಿಸುತ್ತು ಮಿರ್ದ್ದ ನಿಪ್ಪನ್ನಿಗಂ—

ವೃ|| ಕರತಳಪಲ್ಲವಕ್ಕೆ ನವರಾಗತೆ ನೇತ್ರಸರೋರುಹಕ್ಕೆ ಭಾ |
ಸುರತೆ ಮುಖೇಂದುಬಿಂಬಕಮಳಾಂಶುವಿಳಾಸತೆ ಕೋಮಳಾಂಗ ಬಂ ||
ಧುರಹರಿಚಂದನಕ್ಕೆ ಕಮನೀಯತೆ ಸಾರ್ದ್ರರೆ ಯೌವನೋದಯ |
ಸ್ಫುರಿತ ವಸಂತಮೆಯ್ದಿದುದು ತನ್ನೃಪನಂದನ ರಂಜನಾಸ್ಪದಂ || ೧೦೭

ವಚನ|| ಅಂತೈದಿದ ನರುಜೌವನದ ಸಿರಿಯಂ ಮೈಸಿರಿಯೊಡನೆ ಕೇಳಿಯಿಂ ಕೆಳೆಗೊಳಿಸಿ—

ವೃ|| ನಿಡುಗಣ್ಪಂಕಜಪತ್ರಮಂ ಪಳಿಯೆ ವಕ್ತ್ರಂ ವಾರಿಜಾರಾತಿಯಂ |
ಜಡಿಯಲ್ಬಾಹುಸುತಾ ತರಂಗತತಿಯಂ ತಳ್ಪೊಯ್ಯೆ ಬಾಹುದ್ವಯಂ ||
ಕುಡುಪುರ್ವ್ವಿ ಕ್ಷುಧನುರ್ಲ್ಲತಾ ಲಲಿತಮಂ ಕೀಳ್ಮಾಡೆ ಪೊಂಬಾಳೆಯಂ |
ತೊಡೆ ರೋಡಾಡೆ ನರೇಂದ್ರಸೂನು ತಳೆದಂ ತಾರುಣ್ಯಲಾವಣ್ಯಮಂ ||೧೦೮

ಆನರನಾಥ ಚಂದ್ರನ ಮುಖೇಂದುವ ನೀಕ್ಷಿಸಿ ಗಾಡಿಕಾರ್ತಿಯ |
ರ್ಮಾನಸಮಧ್ಯದೊಳ್ತಳೆಯೆ ತನ್ನವಮೂರ್ತಿಯ ನಂದುಕಾಣುತುಂ ||
ಮಾನಸಪತಾಕ ನೃದುಶರದಿಂ ಪುರುಡಿಂದಿಸೆ ನೊಂದು ಬೆಂದು ಕಾ |
ಮಾನಲನಿಂ ಲತಾಭವನ ದೊಳ್ಪೊರಳ್ವನ್ನವ ನಂದನಂಗಳೊಳ್ || ೧೦೯

ವಚನ|| ಅಂತುಮಲ್ಲದೆಯುಂ—

ಕಂ|| ಅಮೃತಾಂಬುಧಿಯ ಗುಣಂಗಳ |
ನಮೃತಕರಂ ತಾಳ್ದ ತೋರ್ಪವೋಲ್ಕ್ರಮದಿಂ ತಾ ||
ನಮಮ ತಳೆದೊಪ್ಪಿದಂ ಸಕ |
ಳಮನೋಜ್ಞಂ ಜನಕ ನಮಳತರ ಗುಣಗಣಮುಂ || ೧೧೦

ಕಂ || ಪಿರಿದುಸಿರಿ ಯಿರೆಯುಮವನೀ |
ಶ್ವರತನಯಂ ವಿಮಳಗುಣಮ ನೊಳಕೊಂಡೆಸೆದಂ ||
ಸರಸಿಜಮೆನೆ ಮಿತ್ರರುಚಿ |
ಸ್ಫುರಿತಾಮೋದಾವಹಂ ಸದಾಳಿನಿಷೇವ್ಯಂ || ೧೧೧

ವೃ|| ವಿತರಣದಿಂದೆ ದಿವ್ಯನಗಮಂ ನಗಮಂ ಘನಧೈರ್ಯದಿಂದೆ ವಿ |
ಶ್ರುತಯಶದಿಂದೆ ಪದ್ಮರಿಪುವಂ ರಿಪುವಂ ನಿಜತೇಜದಿಂದೆ ಮಂ ||
ಡಿತಮತಿಯಿಂದೆ ಪದ್ಮಜನಿಯಂ ಜನಿಯಂ ಶಿವಮಂತ್ರದಿಂದೆ ೞಂ |
ಜಿತಗುಣರಾಜಿ ರಾಜಿತನವಂ ಜಯಿಸಿರ್ದ್ದನುದಾತ್ತ ವೈಭವಂ || ೧೧೨

ವಚನ||ಇಂತು ಮಾಮಹೀಶಕಾಂತಸುತಂ ಪೊಗಳ್ತೆವಡೆದೊಪ್ಪುತ್ತು ಮಿರ್ದ್ದೊಂದುಶುಭದಿನದಲ್ಲಿ

ವೃ|| ಬರೆ ಧರಣೀಶ ಪುತ್ರರೊಡನುಗ್ಗಡಿಸುತ್ತಿರೆ ವಂದಿವೃಂದಮೇ |
ಳ್ತರೆ ಬಳಿಯೊಳ್ಮಹಾಸಚಿವ ಸಂತತಿ ರತ್ನವಿಭೂಷಣಾಂಶು ನೇ ||
ತ್ರರುಚಿ ಮುಖಪ್ರಕಾಶವೊಡನೊಪ್ಪಿರೆ ಮುಪ್ಪುರಿಗೊಂಡು ರಾಜಶೇ |
ಖರ ನತುಳೋತ್ಸವಂ ಜನಕನೋಲಗಮಂ ಪುಗುತಂದನಕ್ಕರಿಂ || ೧೧೩

ವಚನ|| ಅಂತು ತತ್ಪಾದಸೇವೆಗೆಯ್ಯ ಲೆಂದೊಯ್ಯನೆ ಬಪ್ಪಾಗಳ್—

ವೃ|| ಇದಿರೊಳ್ಕಂಡಿರದೇಳ್ವ ಮಂಡಲಿಕರಂ ಕೈಸನ್ನೆಯಿಂದೇ ಳಲೀ |
ಯದೆ ಹೋ ಸಂಮುಖಮೆಂಬ ವಂದಿಜನಮಂ ಕಣ್ಸನ್ನೆಯಿಂದೊತ್ತಿಸ ||
ವ್ಮದಮಂ ತಾಳ್ದುಮದಕ್ಕೆ ಪಕ್ಕ ಗುಡದಾ ಸತ್ಯೇಂದ್ರಚೋಳೇಂದ್ರಸ |
ತ್ಪದ ಪದ್ಮಕ್ಕೆ ಮರಂದಮಂ ಪಡೆದು ಮೌಲಿದ್ಯೋತಿಯಿಂ ಮಳ್ಗಿದಂ|| ೧೧೪

ವಚನ|| ಅಂತುಪೊಡಮಡಲೊಡನೆ—

ಕಂ|| ತೆಗೆದು ಬಿಗಿಯಪ್ಪಿ ಪರಸು |
ತ್ತಗಣಿತ ಸಂಭ್ರಮದೆ ನೃಪತಿಯರ್ಧಾಸನದ ||
ಲ್ಲಿಗೆ ಸೆಳೆಯ ವಿನಯದಿಂ ಮೆ |
ಲ್ಲಗೆ ಜಗುಳ್ದು ತದಂಘ್ರಿ ಯೊತ್ತಿನೊಳ್ಕುಳ್ಳಿರ್ದ್ದಂ || ೧೧೫

ವಚನ|| ಆಗಳ್—

ಕಂ|| ಪರಿಮಳಮನುಂಡು ವಿಕಚಾಂ |
ಬುರಹ ದೊಳೆರಡೊಂದುಗೂಡಿ ಸುಳಿವಳಿಗಳ ವೆಂ ||
ಬಿರವ ನನುಕರಿಸಿ ಯುವಮುಖ |
ಸರಸಿಜದೊಳ್ನೃಪನ ಕಣ್ಗಳೆಂ ತೊಳಗಿದುವೋ || ೧೧೬

ವಚನ|| ಅಂತು ನಿಡುನೇಹದಿಂ ನಿರೀಕ್ಷಿಸಿ ಮಹೀಪತಿ ಪತಿಮೋಹಿಮಂತ್ರಿಪತಿಯೊಡನಿಂತೆಂದಂ—

ಕಂ|| ಧರಣೀತಳಭಾರಮನೀ |
ತರುಣಂ ತಳೆಯಲ್ಕೆ ನೆರೆದ ನೀತನ ಭುಜಭೂ ||
ಧರದೊಳಿದ ನಿಳಿಪಿ ಪುರಹರ |
ಚರಣೈಕ ಧ್ಯಾನಮನಾಂತು ಸುಖದಿಂದಿರ್ಪೆಂ || ೧೧೭
ಎಂದೊಡಮಾತ್ಯ ನೊಡಂಬ |
ಟ್ಟಂದ ನಿಳಾರಮಣ ಕಜ್ಜಮಿದು ಲೇಸು ಸದಾ ||
ನಂದನಿಧಿ ನಂದನಂ ಗೊಲ |
ವಿಂದಂ ಬಗೆದಂತೆ ಮಾಳ್ಪ ದತುಳೋತ್ಸವಮಂ || ೧೧೮

ವಚನ|| ಎಂಬ ಹಿತೋಕ್ತಿಯ ನವಧರಿಸಿ ಮೌಹೂರ್ತಿಕರ್ಸಮಕಟ್ಟಿದ ಸುಮುಹೂರ್ತದೊಳತುಳ ತರ ಸಂಭ್ರಮಂ ಬೆರಸು—

ವೃ|| ಧರಣೀಕಾಂತೆಗೆ ಸಂತಸಂ ರಿಪುಮಹೀಕಾಂತರ್ಗೆ ಸಂತಾಪಮಿಂ |
ದಿರೆ ಗಾನಂದರಸಂ ಬುಧಪ್ರಕರ ದಾರಿದ್ರ್ಯಕ್ಕೆ ವಿಚ್ಛೇದಮೀ ||
ಶ್ವರಭಕ್ತರ್ಗತಿ ಸಂಮುದಂ ನೆಗಳೆ ಸತ್ಯೇಂದ್ರಕ್ಷಿತೀನಾಥ ನಾ |
ದರ ದಿಂದಾತ್ಮಭವಂಗೆ ಪಟ್ಟಮನಮಂದೋತ್ಸಾಹದಿಂ ಕಟ್ಟಿದಂ || ೧೧೯

ಸಕಳೋರ್ವೀಪಾಲರೆಲ್ಲರ್ನೆರೆದು ಪಿರಿದು ಸತ್ಪ್ರೇಮದಿಂ ಬಂದು ಸಂದು|
ತ್ಸುಕಮಂ ಮುಂದಿಟ್ಟು ಕಪ್ಪಂಬಿಡಿದು ಕರಿ ತುರಂಗಂಗಳಂ ಪೊಂಗಳಂ ಮೌ||
ಳಿಕಳಾಪದ್ಯೋತಮೆತ್ತಂ ಪಸರಿಸೆ ಮಣಿದಂಘ್ರಿದ್ವಯೋಪಾಂತ ದೊಳ್ನಿಂ |
ದ ಕಳಂಕರ್ಸೇವಿಸುತ್ತೊಪ್ಪಿರೆ ಮೆರೆದ ನಿಳಾಭೃತ್ಸುತಂ ಪಟ್ಟಬದ್ಧಂ || ೧೨೦

ವಚನ|| ಅಲ್ಲಿಂಬಳಿಯಿಂ—

ವೃ|| ಶಿವಲಿಂಗಾಂಘ್ರಿ ಸಮರ್ಚನೈಕಸುಖದಿಂ ದೊರ್ಮೊರ್ಮೆ ವಿಖ್ಯಾತಶಾಂ|
ಭವಲೀಲಾ ಕಥನಪ್ರಸಂಗ ರಸದಿಂದೊರ್ಮೊರ್ಮೆ ಮಾಹೇಶ್ವರ ||
ಪ್ರವಿ ರಾಜತ್ಪದಪದ್ಮ ಸೇವನದಿ ನಂದೊರ್ಮೊರ್ಮೆ ಸತ್ಯೇಂದ್ರಭೂ |
ಧವ ಬೃಂದಾರಕ ನಿಂತು ಪೊಳ್ತು ಗಳೆದಂ ಸನ್ಮಾರ್ಗಸಾರೋದಯಂ || ೧೨೧

ವಚನ|| ಅಂತುಮಲ್ಲದೆಯುಂ—

ವೃ|| ಮದಮುದವದ್ಗಜವ್ರಜಮನಿಕ್ಕಿ ದುರೀಷಣಭೀಷಣಾಹಿಯಂ |
ಸದೆದ ತನುಗ್ರಹಾಗ್ರಹಮನರ್ದಿಸಿ ಮರ್ದಿಸಿ ರಾಗರೋಗಮಂ ||

ಕೆದರ್ದುದ್ವಿರೋಧಿಸಾಹಸಮನುನ್ನತಸನ್ನುತ ವೃತ್ತಿವೆತ್ತು ತಾ |
ಳ್ದಿದ ನವನೀಶ ನೀಶಪದಮಂ ಪದಪಿಂ ಹೃದಯಾಂತರಾಳದೊಳ್ || ೧೨೨

ವಚನ|| ಅಂತು ಮಾಸತ್ಯೇಂದ್ರ ನರೇಂದ್ರನುಪೇಂದ್ರ ವಂದ್ಯನ ಸಾರಾಧಿಸುತ್ತು ಮಿರೆಯಿರೆ—

ಕಂ|| ಅನುರಕ್ತತೆಯಂ ಪ್ರಕೃತಿಯೊ |
ಳನುವರ್ತನೆಯಂ ಸ್ವಕೀಯಜನಬೃಂದದೊಳಂ ||
ದನುಕೂಲತೆಯಂ ಶರಣರೊ |
ಳನುಗೊಳಿಸಿದ ನಹಿತ ತಿಮಿರಮಿಹಿರಂ ಕುವರಂ || ೧೨೩

ವಚನ|| ಅಂತುಮಲ್ಲದೆಯುಂ—

ವೃ|| ಜಿತಶತ್ರುಪ್ರಕರಂ ಸಮಾಹಿತ ಹಿತೋದ್ಯೋಗಂ ಕ್ಷಮಾಧಾರಣೋ|
ಚಿತ ಕೃತ್ಯಂ ನದುಪಾಯತಂತ್ರ ನಿಪುಣಂ ಮಂತ್ರಪ್ರವೀಣಾ ವಶೀ ||
ಕೃತಸತ್ವಂ ಸದಯಸ್ವಭಾವ ನನಿಶಂ ಶಕ್ತಿಪ್ರಯುಕ್ತಂ ಶಿವಾ |
ನ್ವಿತ ನಿರ್ದ್ವಂ ಪಿತನಂತೆ ಪೂರ್ಣವಿಭವಂ ವಿಶ್ವಂಭರಾ ವಲ್ಲಭಂ || ೧೨೪

ಸಿರಿಯೊಳ್ಶ್ರೀಕಾಂತ ನೆಂತಂ ತತುಳ ಕಳೆಗಳೊಳ್ಕಂಜಸಂಜಾತ ನೆಂತಂ |
ತರಿವರ್ಗಧ್ವಂಸ ದೊಳ್ಧೂರ್ಜಟಿಯ ತನುಜನೆಂತಂತೆ ಗಾಂಭೀರ್ಯದೊಳ್ಪಾ||
ಸುರಪಾರಾವಾರಮೆಂತಂ ತಧಿಕವಿಭವ ದೊಳ್ಶಕ್ರನೆಂತಂತೆ ದಾನೋ |
ತ್ಕರದೊಳ್ಮಂದಾರಮೆಂತಂತೆ ಸೆದನಭಿನವಂ ಭಾರತೀಭಾಗಧೇಯಂ || ೧೨೫

ಕಂ || ಶ್ರೀಮತ್ಕಳಾಧರ ಕಳಾಧರೆ ದಿವ್ಯದೇವ |
ರಾಮಾ ರಮಾ ರಮಸಮರ್ಚಿತ ಪಾದಪದ್ಮೇ ||
ಕಾಮಪ್ರಿಯಾಪ್ರಣತೆ ಪಾರ್ವತಿ ಪಾಲಿ ಸೆನ್ನಂ |
ಭೀಮಾಘಮರ್ದಿನಿ ಭವಾರ್ದಿನಿ ನೀಂ ಭವಾನೀ || ೧೨೬

ಗದ್ಯ|| ಇದು ವಿನಮದ ಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿವೃತ ಪರಿಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡಕ್ಷರದೇವ ವಿರಚಿತ ಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್

ರಾಜಶೇಖರಾಭ್ಯುದಯವರ್ಣನಂ

ಚತುರ್ಥಾಶ್ವಾಸಂ

ಸಂಪೂರ್ಣಂ



# ಪಂಚಮಾಶ್ವಾಸಂ.

(ಕಿರಾತದೂತ ಮೃಗಯಾವರ್ಣನಂ)

ಕಂ|| ಶ್ರೀಗೌರೀ ಕುಚ ಘುಸೃಣಪ |
ರಾಗಾರುಣ ವಕ್ಷ ಸುಕ್ಷುಲಕ್ಷ್ಮಂ ವಿಳಸದ್ಭೋ ||
ಗೀಂದ್ರ ಕಂಕಣಂ ಗುಣ |
ಸಾಗರ ನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವಚನ|| ಮತ್ತ ಮಾನರೇಂದ್ರಕುಮಾರ ನಗಣಿತ ಗುಣಮಣಿ ಗಣರೋಹಣಧರಣೀಧರ ನುಂ ಶಿವಶರಣಚರಣ ಚಾಮೀಕರಾರವಿಂದ ಸಂದೋಹ ಪರಾಗ ಸಾರ ಕಾಶ್ಮೀರ ಲಲಾಮ ಲಲಾಟ ತಟನು ಮಭಿನವ ವಿಭವಾತಿಶಯ ತಿರಸ್ಕೃತ ಭರತ ಭಗೀರಥ ದಶರಥ ಪ್ರಮುಖ ನಿಖಿಳಪಾರ್ಥಿವ ಸ್ರತಾನನುಂ ಸಮಧಿಗತ ಸಂಪೂಜ್ಯ ರಾಜ್ಯಲಕ್ಷ್ಮೀ ರಕ್ಷಣ ವಿಚಕ್ಷಣ ದಕ್ಷಿಣ ದೋಸ್ತಂಭ ಸಂರಂಭೋತ್ತಂಭಿತಾಸಿ ದಂಭೋಳಿ ದಳಿತಾರಿ ಕುಂಭಿಕುಂಭಿನೀಧರ ಶುಂಭತ್ಕುಂಭ ತಟಗಳಿತ ವಿಪುಳವಿಮಳ ಮುಕ್ತಾಫಳಾವಳೀ ಪರಿಷ್ಕೃತಮಹಿತ ಮಹಾಮಹೀ ಮಾನಿನೀಕನುಂ ಸಮದ ಸಮಸ್ತಸಾಮಂತ ಸೀಮಂತಿನೀ ಸೀಮಂತ ಸಿಂದೂರ ಪೂರಪಲ್ಲವ ಪ್ರಸರ ರಸ ಹರಣ ಚರಣ ವಿತತಪ್ರತಾಪ ತಪನಕರ ನಿಕರ ಪರಿವೃತ ಪದ್ಮಸದ್ಮಾಂಡಭಾಂಡ ಬಹಿಸ್ತಮಸ್ತೋಮ ನುಮಮಂದ ಕುಂದ ಮಂದಾರ ಚಂದ್ರಿಕಾ ಡಿಂಡೀರ ಪಿಂಡ ಪುಂಡರೀಕ ಪಾಂಡುರಾಖಂಡ ಯಶಶ್ರೀ ಖಂಡ ಮಂಡಿತ ನಿಖಿಳ ದಿಕ್ಕಾಮಿನೀ ಸ್ತನಕಳಶ ಕನತ್ಕಪೋಳ ಮಂಡಳನುಂ ಸುಕವಿನಿಕರ ದಾರಿದ್ರ್ಯ ವಿದ್ರಾವಣ ದ್ರವಿಣ ಧಾರಾಧರ ಕರಾಗ್ರ ಪರಿಹಸಿತ ಸುರಧರಾರುಹ ಪ್ರಭಾವನುಂ ಬುಧಕದಂಬ ಹೃದ್ಯಾನವದ್ಯ ವಿದ್ಯಾನಘ್ಯಾಶ್ರಯ ಕ್ಷೀರಪಾರಾವಾರನುಂ ಅಮಂದ ಸೌಂದರ್ಯ ಸಂದೋಹ ಮಂದೀಕೃತ ಕಂದರ್ಪ ದರ್ಪನುಂ, ಅನವರತ ವಿನಮದವನಿ ಧವನಿವಹ ಮಕುಟತಟ ಘಟಿತ ಮಣಿಕಿರಣ ಪಟಲ ಪಾಟಲಿತ ಪದನಖ ಸುಧಾಕರನುಂ, ಅಖರ್ವ ಶೌರ್ಯ ಧೈರ್ಯ ಚಾತುರ್ಯ ಮಾಧುರ್ಯ ಸಾಕುಮಾರ್ಯ ಸ್ಥೈರ್ಯ ಗಾಂಭೀರ್ಯ ಪರಿಷ್ಕರಣ ಗಣ ಭೂಷಿತನುಂ, ಅಭಿನವ ಶಿವಭಕ್ತಿ ಸಂಪದಾಮೋದ ಸಮುದಯ ಮಧುರತರ ಹೃದಯ ಪಯೋಜನುಮೆನಿಸಿ ಪೊಗಳ್ತೆವಡೆದು—

ಕಂ|| ಬಲವತ್ಪ್ರತಾಪನಿಧಿ ಜಿತ |
ಬಲಪ್ರಭುಂ ವಿತತರಣದೆ ವಿತರಣದೆ ಮಹಾ ||
ಬಲಯುತರ ನರ್ಥಿಜನಮಂ |
ತಲೆವಾಗಿಸುವಂ ಸಮಂತು ತಲೆ ದೂಗಿಸುವಂ || ೨

ವೃ|| ಶಶಿ ಶಂಖಂ ತಾರಕಾಮೌಕ್ತಿಕ ಮಮರನದೀಸಂಗತಂ ಪೂರ್ವದಿಕ್ಸ|
ವ್ಯತಿಖಾವದಾಭ್ಭಾಡಬಂ ದಿಗ್ಗಜಜಲಗಜ ಮುರ್ವೀಧರವ್ರಾತ ಭೀತಾ ||
ದ್ರಿಶತಂ ನಾಗಾಂಬುನಾಗಂ ಮನುಜ ಜಳಮನುಷ್ಯಂ ಮಹಾಕೂರ್ಮ ಕೂರ್ಮಂ
ವಿಶದಂ ತತ್ಕೀರ್ತಿದುಗ್ಧಾಂಬುಧಿ ಗಗನಘನಶ್ರೀಶನಂ ತಾಳ್ದು ತೋರ್ಕುಂ || ೩

ವಚನ|| ಅಂತುಮಲ್ಲದೆ—

ಕಂ|| ಎಸಳೆ ದೆಸೆ ಮಿಸುನಿವೆಟ್ಟಂ |
ಪೊಸಕರ್ಣಿಕೆ ಶರಧಿ ಮಧು ಮಧುವ್ರತಮೆ ಮುಗಿಲ್ ||
ನಿಸದಮೆನೆ ಭುವನ ಭುವನಜ |
ಮೆಸೆದುದು ಭೂಧವನ ಕೀರ್ತಿ ಕಮಳಾಕರದೊಳ್ || ೪

ವೃ|| ತುರಗ ಖುರಾಗ್ರ ಘಾತ ಕೃತಭೂತಳರಂಧ್ರ ವಿನಿರ್ಗತಾಹಿರಾ |
ಜ ರುಚಿರ ಶೀರ್ಷರತ್ನ ದೃಢಬೀಜಕರಾಂಕುರತತ್ಪ್ರತಾಪ ವ ||
ಲ್ಲರಿ ರವಿರೋಚಿಯೆಂಬ ವಿಷದಿಂ ದಶದಿಕ್ಕನೆ ಪರ್ಬಿ ಪೆತ್ತುದಾ |
ಖರಕರ ಪುಷ್ಪಮಂ ಕನಕ ಭೂಧ್ರ ಬೃಹತ್ಫಳಮಂ ಮಹೀಶನಾ || ೫

ವಚನ|| ಮತ್ತಂ—

ಕಂ|| ಅಮಮ ಮಹೀರಮಣನ ತೇ |
ಜಮ ನೇನೆಂಬೆಂಪೊದಳ್ದ ರವಿಶತರುಚಿಯಿಂ ||
ದಮದರ್ಿ ಪೊರವಳಯಮಂ ಹೇ |
ಮಮಯ ಮಿದೆನಿಸಿತ್ತ ಜಾಂಡ ಮಂಡಳ ಮನಿತಂ || ೬

ವೃ|| ಪಟುತದೊರ್ದ್ದಂಡ ಚಂಡೋದ್ಭಟ ವಿಕಟಮಹಾರಾಹು ಶತ್ರುಕ್ಷಿತೀಶ
ಸ್ಫುಟಕೀರ್ತ್ಯದ್ಯತ್ಪ್ರತಾಪ ಪ್ರಬಳ ಕಮಳರಿಪ್ವಾಪ್ತಬಿಂಬಂಗಳಂ ಸಂ ||
ಘಟಿಸುತ್ತೋರೊರ್ಮ್ಮೆನುಂಗಿತ್ತಚಳ ಜಳಧರ ಜ್ಯೋತಿ ಖಡ್ಗೋಗ್ರಜಿಹ್ವೋ|
ತ್ಕಟನೋಜಃಕ್ಷ್ವೇಡ ವೈಶ್ವಾನರ ಸಹಿತಮಹಾಭೀಕರಂ ಕಂಚುಕಾಢ್ಯಂ || ೭

ಕಂ|| ರಿಪುಬಳ ಕಮಳಾಕರಮಂ |
ನೃಪದ್ವಿಪಂ ಮಿಕ್ಕುಪೊಕ್ಕು ಕಿಳ್ತಿತ್ತು ||
ಗ್ರಪರಶಿರಃಪದ್ಮಂಗಳ |
ನಪರಿಮಿತಮದಂ ಕರಾಗ್ರದಿಂ ಭದ್ರಗುಣಂ || ೮

ವೃ|| ಕುಚಕಾಶ್ಮೀರವಿಲೇಪನಂ ಬಿರಿಯೆ ಹೃತ್ಕಾಮಾಗ್ನಿಯಿಂ ಮೌಕ್ತಿಕ |
ಪ್ರಚಯಂ ಪಾರೆ ಸಿಡಿಲ್ದು ತಾಳ್ದುದು ಘನಗ್ರೀಷ್ಮಾತಪಂ ಪೊಯ್ಯೆ ಸೀ ||
ಳ್ದಚಲದ್ಗಂಧ ಗಜೇಂದ್ರ ಕುಂಭದ ಗಳನ್ಮುಕ್ತಾಫಳ ಶ್ರೀಯನಾ |
ಖಚರಸ್ತುತ್ಯ ನರಾಧಿನಾಯಕನ ವೈರಿವ್ರಾತಕಾಂತಾಳಿಯಾ || ೯

ಸುಡಿಯೆ ಶುಕವ್ರಜಂ ಜಡಿದು ಮುತ್ತುಗಃ ಪಿಾಗಳೆನುತ್ತೆ ಮೌನದಿಂ |
ನಿಡುಜಡೆಗಾಣೆ ಕೇಳಿ ಕವಿದೆಯ್ದುಗು ಮೆಂದು ಮುಸುಂಕಿ ಮೇಲುದಂ ||
ನಡೆಯೆ ಮೃಗೇಂದ್ರನಿಂದು ನೆಡೆತಂದಪುದೆಂದು ಬಿಗುರ್ತು ನಿಂದು ಪಾ |
ವಡರ್ದಳಿ ವಂದೆಯಂ ತಿರಗಿವ ಸ್ಸರ್ಗಿವ ರ್ತದರಾತಿ ಕಾಂತೆಯರ್ || ೧೦

ಕಂ|| ಸರಸಿಜಸಖನಾ ನರಪತಿ |
ಯರಿಗಳ ಸೌಧಾಗ್ರದಲ್ಲಿ ಮೊಳೆ ತೆಳೆವುಲ್ಗಾ ||
ತುರಿಪ ತುರಂಗವು ನರುಣಂ |
ಬರಸೆಳೆದು ಮುರಳ್ವೆ ನಡೆವ ನೆಡದೊಳ್ಬಲದೊಳ್ || ೧೧

ವೃ|| ಸೌಂದರಿ ಬಾರ ಸಾರಸ ದಳಾಯತ ಲೋಚನೆ ನೋಡದಿಪ್ಪುದೇ |
ನಿಂದೆಲೆರಾಜಪತ್ನಿ ಪೊಸಪಣ್ಗಳ ನಲ್ಗುಟುಕಿಕ್ಕು ಪಂಚಬಾ ||
ಣಂದ ಯೆಗೆಯ್ಗೆ ಕೇಳ್ನಗೆ ಬಿಂಬಫಳಾಧರೆಯೆಂದು ಶಾರಿಕಾ |
ಬೃಂದಮರಾತಿ ಮಂದಿರದೊಳೆಂಬುದು ಬಂದಪುಳಿಂದಿಯಕ್ಕರ್ಗಳಂ || ೧೨

ಕನಸಿನೊಳೈದೆ ಕಂಡು ವೃಷಭೀಷಣಮೂರ್ತಿಯನಲ್ಲಿ ಭೀತಿಗೊಂ |
ಡ ನುಡಿಸುತೆಳ್ವ ವೇಳೆಯೊಳೆ ತದ್ವನದೊಳ್ಮೃಗರಾಜ ನೆಯ್ದೆ ಗ ||
ರ್ಜನೆಗುಡೆ ತದ್ರಣಾದ್ಭುತ ವಿಜೃಂಭಿತ ಗರ್ಜನೆಗೆತ್ತು ತೀವ್ರಕಂ |
ಪನ ಮೆರ್ದೆಗಾಗೆ ತಲ್ಲಳಿಸಿ ಮಲ್ಲಳಿಗೊಳ್ವ ರರಾತಿಭೂವರರ್ || ೧೩

ಕೃತಪದ್ಮಾನಂದನಾ ಲಂಬಿತ ರುಚಿವಿಭವಂ ಮಂಡಲಂ ಗೊಂಡು ಧಾತ್ರೀ|
ಪತಿ ಮಾರ್ತಾಂಡಂ ಸುಗೋತ್ರಸ್ಥಿತ ನೆಸೆಯೆ ರಿಪುಸ್ತ್ರೀಜನಾಕ್ಷ್ಯುತ್ಪಲಂ ದು||
ಸ್ಥಿತಿಯಿಂ ಸಂಕೋಚಮಂ ತಾಳ್ದಿರೆ ಕಳಿದಿಳಿವಿಂದಿಂದಿರಂ ಬೋಲ್ಪದಾಬ್ಜ |
ಚ್ಯುತ ಮೊಪ್ಪಿತ್ತನ್ಯ ರಾಜಾಸ್ಯಮಯ ಸಮಯದೊಳ್ಕಂಕಣಂ ಕಜ್ಜಳಾಂಕಂ ||

ಕಂ|| ಸುರಧೇನು ಪಯೋಧರಮಂ |
ಸುರುಕುಜ ದೆಳೆದಳಿರ ನಮರಮಣಿಯಂ ಬೆರಲುಂ ||
ಕರಮುಂ ನಖಮುಂ ಪರಿಜಿಂ |
ವರವಿತರಣದಿಂದೆ ಪಳಿಗು ಮಾನೃಪಸುತನಾ || ೧೪

ವಚನ|| ಎಂಬತಿಶಯಂ ಬಡೆದು—

ವೃ|| ಪ್ರಣತಪ್ರತ್ಯರ್ಥಿಪೃಥ್ವೀಧವನಿವಹ ಕಿರೀಟಾಗ್ರ ಮಾಣಿಕ್ಯಮಾಲಾ|
ಘೃಣಿ ಚಂಚಚ್ಚಂಚಲಾಂಚತ್ಸ್ವರಪ ಮಣಿ ಮಹಾಪೀಠಮೇಘಸ್ಥ ಪಾದಂ ||
ಗುಣಭಾಸ್ವದ್ರತ್ನರತ್ನಾಕರ ನಭವಲಸದ್ಭಕ್ತನಾ ರಾಜಚೂಡಾ |
ಮಣಿ ಪೆಂಪಂ ತಾಳ್ದು ಕಣ್ಗೊಪ್ಪಿದ ನಮಮ ಕಳಾಕಾಮಿನೀ ಜೀವಿತೇಶಂ||

ವಚನ|| ಇಂತೊಪ್ಪುತ್ತು ಮಿರ್ದೊಂದುಸುವಾಸರದ ಸುಪ್ರಭಾತ ಸಮಯದೊಳೀಶ್ವರಾರ್ಚನಂ ಗೈವನಂತರಂ—

ವೃ||ಮಣಿಕೋಟೀರಾಂಶುಮೆತ್ತಂ ಕುರುಳ್ಗೆಮಿರುಗೆಹಾರಾಂಶುಗಂಡಂಗಳೊಳ್ಮೀ
ಙ್ಕುಣಿಯುತ್ತಂತೋರೆಕರ್ಣಾಭರಣಕಮನಮುಕ್ತಾಂಶುದಂತಾಂಶುಕೋದ್ಯ
ನ್ಮಣಿಯಂ ದಂತಾಂಶು ತೀವೃತ್ತಿಸೆಯೆ ಮಿಸುಗೆ ವಕ್ತ್ರಾಂಶು ವಜ್ರಾವಳೀಕಂ
ಕಣ ವಿಸ್ಫಾರಾಂಶು ವಿಭ್ರಾಜಿಸೆ ಕನಕಲಸತ್ಪೀಠದೊಳ್ಭೂಪನಿರ್ದಂ || ೧೭

ಪಾಡುವಗಾಯಕರ್ಕ್ಕಣಿವನಚ್ಚಣಿಯರ್ಕ್ಕರಮೆತ್ತಿ ಕೀರ್ತನಂ |
ಮಾಡುವ ಮಾಗಧರ್ಸ್ತುತಿಪ ಸತ್ಕವಿಗಳ್ಮಣಿದೇಳ್ದು ಕಪ್ಪಮಂ ||
ನೀಡುವ ಮನ್ನೆಯರ್ಜಯ ಸುಖೀಭವ ವಾದಕ ಶೈವಕೋವಿದ |
ರ್ಕ್ಕೂಡಿರೆ ಚೆಲ್ವುವೆತ್ತುದು ಸಭಾಸದನಂ ವಸುಧಾಧಿನಾಥನಾ || ೧೮

ಕಂ|| ಚರಣಾರಣನ್ಮಂಜೀರ |
ಸ್ವರ ಮುಣ್ಮಿರೆ ಬಂದು ನಿಂದು ಸುಂದರಿಯರ್ಕೈ ||
ಕರ ಕರರುಹ ರುಚಿ ಬೆರಸು |
ತ್ತಿರೆ ಬೀಸಿದ ರೆಸೆವ ಧವಳತರ ಚಾಮರಮಂ || ೧೯

ವಚನ|| ಮತ್ತಮಾಮಣಿಗಣ ಖಚಿತ ರುಚಿರತರ ಕನಕಮಯ ದಿವ್ಯಸಿಂಹಾಸನ ದಿಕ್ಕೆಲದೊಳ್ಬಂಸದಿಂ ಕೊಂಕಿ ನಿಂದು ಕಂಕಣಝುಣತ್ಕೃತಿ ಪೊಣ್ಮೆ ಜಾಣ್ಮೆಯಿಂ ದೆಳಗಾಳಿಯ ಲೆಪದಿಂ ಲಲಿತರಸಾಲ ಲತೆ ನೆಗೆದು ಮಂಜು ಮಂಜರಿಯಂ ಪಸರಿಪಂತೆ ಸೂಳಯಿದು ತೋಳಂ ನೆಗಪಿ ಚಾಮರಮಂ ಬೀಸುವ ಚಾಮರಗ್ರಾಹಿಣಿಯರಿಂ ಪರಿವಿಡಿಯಿಂ ತರಂಬಿಡಿದು ಕಂದರ್ಪನಂ ಪಿಂದುಗಳೆವಂದಮಂ ತಳೆದು ನಿಂದ ರಾಜಪುತ್ರರಿಂದೆಡೆಯಾಡುವ ಪಡಿಯರತಿಯರ ಕಡೆಗಣ್ಣ ಕುಡಿವೆಳಗೆಂಬ ಬಳ್ಳಿಮಿಂಚಿಂಗೆ ಭಯಂ ಬಡೆದು ಪೆಡಂಮೆಟ್ಟುವ ರಾಜಹಂಸ ಸಮಾಜಮಂ ನೋಡಿಯಿಂ ಕರೆದುಚಿತ ಸ್ಥಾನದೊಳ್ನಿಲಿಪ ವೇತ್ರಧರರಿಂ ಮತ್ತಂ ನುಡಿಯೊಳಿಟ್ಟ ಮುಗುಳ ಮಾರೆಯ ಪಣೆಗಮರ್ಚಿದ ಮೃಗಮದ ತಿಲಕದ ಪರಿಮಳಕ್ಕೆ ಬೆರಸಿ ಪರಿಮಯ್ಯಾಡುವ ಮರಿದುಂಬಿಗಳ ಬಂಬಲಂ ಪೊಡೆವ ಕರತಳಂ ಕಳ್ತಲೆಯಂ ಬೆಂಕೊಳ್ವ ಕಮಳದಂತೆ ಕಮನೀಯಮಾಗೆ ಬಿಂಬಾಧರದ ಕೆಂಬೆಳಗು ಸುಲಿಪಲ್ಲ ಸೂಸುವೆಳಗಿ ನೊಡವೆರೆದು

ವದನವಿಧುಮಂಡಳದ ಪಾಟಲದ್ಯುತಿಯಂತೆ ಪಸರಿಸಿ ಬೀದಿವರಿಯೆ ಕುಡಿನಿವಿರ್ದ ಕಡೆಗಣ್ಗಳ್ಕರ್ಣಪೂರಮಾಡ ಕಂನೈದಿಲೊಳ್ಪೊಳಂಚುವಂತೆ ಥಳಥಳಿಸಿ ಪೊಳೆಯೆ ತೊಳಪನಾಸಿಕೆಯೆಂಬ ಸಂಪಗೆಯ ಬಿರಿಮುಗುಳ ಪರಿಸರದೊಳರಿಯದೆರಗಿ ಭಯಂಬಡೆದು ಬೆಮರ್ತ ಮೃಗಮದ ತಿಲಕಮೆಂಬ ಮರಿದುಂಬಿಯ ನುಣ್ಬೆಮರ್ವನಿಯುದರಬೆಂಬಳಿಯೊಳಿಳಿದಾಲಂಬಿಪಂತೆ ನಾಸಾಮಣಿ ಮನೋಜ್ಞಮಾಗೆ ವಿಾಂಬಳವಿಗೆಯಂ ಚೆಂಬೊನ್ನ ಕುಂಭಮಂ ಸಂಭ್ರಮದಿ ನರ್ಚಿಸಿದ ವಿಚಕಿಲಮುಕುಳ ಮಾಲೆಯಂತೆ ಕುಚತಟದೊಳ್ಕಂಠಮಾಲೆ ಲೀಲೆವಡೆಯೆ ಅಳಿವೆದೆಯಂ ಸಡಿಲ್ಚಿ ನಿಲಿಸಿದ ತನುಚಾಪಲತೆಯಂತೆ ತನುಲತೆ ನಿಡುಜಡೆಯಿಂ ಕಡುಬೆಳಂಗು ವಡೆಯೆ ಬಿಸಿನಿಬಿಸಿವಿಸಿಲ ನುಟ್ಟಳೆಂಬಂತೆ ಬಿಗಿದುಟ್ಟ ವಿಸುನಿವಟ್ಟೆ ವಿಸುಗುತ್ತಿರೆ ವಿಸಟಂಬರಿದು ಕುಸುಮಶರ ವಿಸರಮಂ ಪಸರಿಪ ಕಟಾಕ್ಷರೋಚಿಯಿಂ ರಾಜಪುತ್ರರಂ ಮರುಳ್ಗೊಳಿಸಿ ಸಾಲ್ಗೊಂಡು ನಿಂದವಾರಾಂಗನೆಯರಿಂ ಮತ್ತಂ ಮೊಳಗುವ ಮದ್ದಳೆಯ ಮೋಹಿಪಾ ವೃಜದಿಂಚರಂಗರೆವ ಬಂಚರದ ಪಾಂಗರಿದು ಪಾಡುವ ಸಂಗೀತದ ಸೊಳರಿದೊಪ್ಪುವ ತಾಳ ಮಧುರತರ ನಿನದಂಬೆರದು ಮೇಳಂಗೊಂಡ ವೇಳೆಯೊಳ್ಸಮಯ ಸಮುಚಿತ ನೈಪಥ್ಯಂ ಗೈದು ಝುಗಝುಗಿಪ ಜವನಿಕೆಯ ಮರೆಯೊಳ್ಕಂದರ್ಪ ವಿವಾಹದೊಳಂದಂ ಬಡೆದ ಪೊಂದೆರೆಯಂ ಮರೆಗೊಂಡು ನಿಂದರತಿಯಂ ಪೋಲ್ತು ನಿಂದಿರ್ಪುದುಂ ನಾಂದಿಯಂನೋದಿ ಸೂತ್ರಧಾರಂ ಭೋಂಕನೆ ತೆರೆದೆಗೆಯೆ ಶೃಂಗಾರರಸಮಂಗಂ ಬಡೆದಂತೆ ಕಂಗೊಳಿಸೆ ನಿಂದಂಗಪ್ರಭೆ ಮುಗುಳ್ದು ತೆರೆವಿಡಿದಂತಾಗೆ ನಿಜಕಟಾಕ್ಷಶರ ವಿದ್ಧರಂತೆ ಮುಗುಳ್ಗಣೆಗಳೇ ಪಾಳ್ತಯೆಂದು ಕಾವನ ಕರತಳದಿ ನನಂ ಕವರ್ತಗೊಂಡು ಚೆಲ್ಲುವಂತೆ ಪುಷ್ಪಪುಟಹಸ್ತದಿಂ ಪುಷ್ಪಾಂಜಲಿಯಂ ಕೆಡದ್ದರ್ ಮೊದಲೊಳ್ಮೋಹಿಸಿ ಸಭಾಸದರಂಗ ರಂಗದೊಳಪಾಂಗಪ್ರಭೆ ನರ್ತಿಸುತ್ತಿರೆ ಮಂದಾನಿಲ ನಿನಾಂದೋಳಿಪ ಕನಕಲತೆಯಂ ತಾಂ ದೋಳನ ಶೋಭೆದೋರಿ ಮಡುಗಟ್ಟಿದ ಮುಖರಸದೊಳ್ತೇಂಕಿತೇಲ್ವ ಚಪಲತ ಫರಂಗಳೆಂಬಂತೆ ಚಂಚಲಾಕ್ಷಿಗಳೆಸೆಯೆ ಮಿಂಚು ನಚ್ಚಣಿವರಿಜು ವಡೆದು ನರ್ತಿಪುದೆಂಬಂತೆ ಚಮತ್ಕೃತಿ ವೀರಿ ಮಂಜುಸಿಂಜಿತಂ ನೆಗೆಳೆ ಭಾಯೊಳ್ಗಾನಮಂ ಕೈಯೊಳಭಿನಯಮಂ ದೃಷ್ಟಿಯೊಳ್ರಸಮಂ ಪದತಳದೊಳ್ತಾಳಮಂ ಬೀಸರಂ ಬೋಗಲೀಯದೆ ಸೆರೆವಿಡಿದು ರೂಪುನೇರು ಲಾಗು ಲವಣಿ ಯಡವು ತಿರುವು ಕೈಮರೆ ಕಳಾ ಸಕೂಟಮಾನಂಗಳಂ ಸಂಗಳಿಸಿ ರಸಭಾವಂ ತಪ್ಪದೆ ಗಾಡಿ ಗಮಕಂ ಗುಂದದೆ ಬೆಡಂಗು ಬಿನ್ನಣಂ ಬೇರ್ಸಡದೆ ಓಜೆ ಪ್ರೊಯ್ಯಾರ ಮೋಸರಿಸದೆ ಶುದ್ಧದೇಶೀಯಕ್ರಮದಿಂ ಚತುರ್ವಿಧ ನರ್ತನಮಂ ಚತುರ ಜನಂ ಮಚ್ಚುವಂತೆ ತೋರ್ಪ ನರ್ತಕಿಯರಿಂ ಮತ್ತಂ ರಸವಿಸರಂ ಪಸರಿಸೆ ಸೊಂಪು ಪೊಂಪುಳಿವೋಗೆ ರೀತಿ ಕೌತುಕಮ ನೀಯೆ ಜಾತಿ ಜಾಣ್ಬಡೆಯೆ ಭಾವಂ ಭಾವಜನ ಹೂವಿನಂಬಿನಂತೆ ಮನಮಂ ನಾಂಟೆ ಯಲಂಕೃತಿ ಚಮತ್ಕೃತಿ ವೀರೆ ಗುಣಗಣಮಣಿಯಂತ ಮೆನಿಸೆ ವೃತ್ತಿ ಬಿತ್ತರಂ ಬಡೆಯೆ ಪಾಕಂ ಲೋಕೋತ್ತರ ಮೆನಿಸೆ ಶಯ್ಯೆ ರಯ್ಯ ಮಾಗೆ ಬಂಧಮ ಗುಂದಲೆವಡೆಯೆ ದೋಷಮಂ ದೂರೀಕರಿಸಿ, ಭಾಷಾಭೇದದಿಂ ನವೀನಮೆನಿಸಿ ಸವಿನುಡಿಗಳಿಂ ಸರಸತರ ಮೆನಿಸಿ ಗದ್ಯಪದ್ಯ

ತಿಃಪೂ ಪ್ರಮುಖಪ್ರಬಂಧಂಗಳಂ ಪೇಳ್ದು ಕೇಳ್ವರಚಿತ್ತಮಂ ಕವರ್ತ್ತೆಗೊಳ್ವ ಕವೀಂದ್ರ ವೃಂದದಿಂ ಮತ್ತಂ ಮಧುರ ಮಂದ್ರ ತಾರ ಸ್ವರಗಳಿಂ ಶ್ರುತಿವೆರಸಿ ಕೇಳ್ವರ ಕಿವಿಗೆ ಸವಿಯಂ ಸೈಗರೆದು ರಂಗು ರಕ್ತಿದೋರಿ ಶುದ್ಧ ಮಿಶ್ರ ಸಂಕೀರ್ಣರಾಗಂಗಳಿಂ ರಂಜಿಸಿ ಪಾಡಿ ಮೋಹಿಪ ಸಂಗೀತವಿಶಾರದರಿಂ, ಅನೀಶ್ವರಾ ನ್ಯೇಶ್ವರಾ ನೇಕೇಶ್ವರಾಭಿ ಮತವಾದಿ ವಿವಾದಮಂ ಶ್ರುತ್ಯುಕ್ತಿ ಯುಕ್ತಿಗಳಿಂ ನಿರಾಕರಿಸಿ ನಿಜಶಿವಾಧಿಕ್ಯ ಸ್ಥಾಪನಂಗೈವ ವೇದವೇಧಾಂತಾದಿ ಕೋವಿದರಾದ ವಾದಿಗಳಿಂ ಮತ್ತಂ ಪದಪದಾರ್ಥ ವಿಭಾಗಂ ಗೈದು ಮೃದು ಮಧುರೋಚ್ಚಾರಣಂಗಳಿಂ ವ್ಯಕ್ತಿಗೈದು ಸೂಕ್ತಿ ಸುಧಾಬ್ಧಿಯೊಳ್ಮನಮ ನವಗಾಹಂ ಗೈಸುವ ವಾವದೂಕವರೇಣ್ಯರಿಂ, ಮತ್ತಂ ಮಣಿಮಕುಟಂ ಗಳೊಂದೊಂದ ನೊರಸೆ ಸಂದಣಿಗೊಂಡು ಮಿಸುಪ ನೊಸಲ್ವೆರೆಯಂ ಪದಕಮಳದೊ ಳ್ಸಂತಂಗೈಸುವಂತೆ ಮಣಿಮಣಿದನರ್ಘ್ಯ ಕರಿ ತುರಗ ರಥ ರತ್ನಾದಿಗಳಂ ಕಪ್ಪಂಬಿಡಿದು ಕರುಣಂ ಬಡೆಯಲೆಂದು ನಿಂದಂಗ ವಂಗ ಕಳಿಂಗ ತ್ರಿಲಿಂಗ ಮಗಧ ಮಾಳವ ಗೌಳ ಪಾಂಚಾಳ ನೇಪಾಳ ಹಿಂದೂಳ ಕೇರಳ ಕಾಶ್ಮೀರ ಸೌವೀರ ವಿದರ್ಭ ಬರ್ಬರ ಘೂರ್ಜರಾದಿ ದೇಶಾಧೀಶ್ವರರಿಂ ಶಕ್ತಿತ್ರಯ ಚತುರೋಪಾಯ ಪಂಚತಂತ್ರ ಷಡ್ಗುಣ ಸಪ್ತಾಂಗ ಕ್ರಮವಿಚಕ್ಷಣರೆನಿಸಿ ಮಂತಣಂಗೊಂಡ ಮಂತ್ರಿಗಳ ಸಂತತಿಯಿಂ ಕೈಯೆತ್ತಿ ರಯ್ಯಮೆನೆ ಪೊಗಳ್ವವಂದಿವೃಂದದಿಂ, ಪೊಗಳ್ವ ಪಾಠಕಪ್ರತಾನದಿಂ, ಸೇರಿ ನಿಂದ ವೀರ ಭಟವಾರದಿಂ, ತರಂಗೊಂಡ ತುರಂಗಿಸಂಘದಿಂ ಓರಣಿಸಿ ನಿಂದ ವಾರಣಾರೋಹಕ ವ್ಯೂಹದಿಂ ಕಿಷ್ಕಿಂಧ ಕೆಯ ನಪ್ಪುಗೈದ ಮಂದಸೌಂದರ್ಯಮನೊಳಕೊಂಡು ಸುರೇಂದ್ರಸಭೆಯಂತೆ ವಿಬುಧಾಲಂಕೃತಮುಂ ವಿರಿಂಚಿಸಭೆಯಂತೆ ರಾಜಹಂಸ ರಾಜಿತಮುಂ ರಾಮಸಭೆಯಂತೆ ಸುಪ್ರವೀರವಿಳಸಿತಮುಂ ಹರಿಸಭೆಯಂತೆ ಮೋಲ್ತ್ರೀಧರಾರಾಜಿತಮುಂ ಶಿವಸಭೆಯಂತೆ ಸದಾನಂದಿ ಬಂಧುರಮೆನಿಸಿ ನರೇಂದ್ರ ನೊಡ್ಡೋಲಗ ಮಾಲೋಕಕ್ಕೆ ಕೌತುಕಮ ನಿತ್ತೀಲೋಕಕ್ಕಿದೇ ಕಿರಿದೆನಿಸಿ ಪರಿರಂಜಿಸುತಿರ್ದ್ದ ದಂತುಮಲ್ಲದೆ—

ವೃ|| ಮರುದಾಕೀರ್ಣ ಲಸದ್ಘನ ಪ್ರಸವತಾ ರಾರಾಜಿತಂ ಹಂಸಬಂ |
ಧುರಪಾಪಾಳಿ ರುಚಿಪ್ರಧಾನ ಕವಿರಾಜಾಲಂಕೃತಂ ದಿವ್ಯಸಿಂ ||
ಧುರ ಸತ್ವಾವಹ ರಮ್ಯಮಾತ್ರ ಕಮಲಾಪಾಂಗ ಪ್ರಭಾ ಭಾಸುರಂ |
ಸೆರದಂ ತಂಬರದಂತೆ ರಂಜಿಸಿದುದಾ ರಾಜೇಂದ್ರನೊಡ್ಡೋಲಗಂ || ೨೦

ಪೆರಸಾ ಘೂರ್ಜರ ಕುಳ್ಳಿರಿಲ್ಲಿ ಮಗಧ ಕ್ಷ್ಮಾಪಾಲ ನೀಂ ಕಾಣ್ಕೆಯಂ |
ನೆರೆ ನೀಡಂಗೆ ಕಳಿಂಗ ಪಿಂಗು ಕಡೆನಿ ಲ್ಕರ್ಣಾಟಕಾಧೀಶ ಬಂ ||
ದೆರಗೈ ಕೇರಳ ಪಾಂಡ್ಯ ನೀಂ ಗಳಪದಿ ಪಾಂಚಾಳ ಲಾಳಂಗೆ ನೀಂ |
ತೆರಪಂ ಮಾಡೆನುತಲ್ಲಿ ಕಂಚುಕಿ ಗಳಾಗಳ್ಗರ್ಜಿಸುತ್ತೊಪ್ಪಿದರ್ || ೨೧

ಇದು ಕಾಶ್ಮೀರ ಮಹೀಶನಿತ್ತ ಮದವನ್ಮಾತಂಗ ಸಂಘಾತಮಿಂ |
ತಿದು ಕಾಂಭೋಜ ನರೇಂದ್ರನಟ್ಟಿದ ಹಯವ್ರಾತಂ ಧರಾಧೀಶ ಸೋ ||
ಱಿದು ಪಾಂಚಾಲ ನಲಂಪಿನಿಂ ಕಳುಪಿದುದ್ಯದ್ರಕ್ಷಸಂತಾನ ಮಿಂ |
ತಿದು ನೇಪಾಳ ನೃಪಾಳದತ್ತ ವಿಳಸನ್ಮುಕ್ತಾವಳೀ ಭೂಷಣಂ || ೨೨

ವಚನ|| ಎಂದು ದೂತರ್ಬೇರೆಬೇರೆ ಚಪ್ಪನ್ನ ದೇಶದರಸರ್ಕಳುಪಿದ ಕಪ್ಪಂಗಳ ನೊಪ್ಪಿಸುತ್ತು ಮಿರ್ಪನ್ನೆಗಂ—

ವೃ||ಪ್ರಾಂಚತ್ಕಾಂಚನ ವೇತ್ರಮಂಜುಳಕರಂ ಕೂರ್ಪಾಸ ವಿಭ್ರಾಜಿತಂ |
ಚಂಚತ್ಕುಂಡಲ ಮಂಡಿತಂ ಗತ್ರಿಚ್ಚಲತ್ಪೀನೋದರಂ ದೀರ್ಘದೇ ||
ಹಂ ಚಿತ್ರಾಂಬರ ಸಂವೃತೋರು ಪೃಥುಮಧ್ಯಂ ಮಸ್ತಕಾವೇಷ್ಟಿತೋ |
ದಂಚತ್ಪೀತಪಟಂ ಪ್ರಸನ್ನವದನಂ ಬಂದಂ ಪ್ರತೀಹಾರಕಂ || ೨೩

ವಚನ|| ಅಂತು ಬಂದು ನಿಂದು ನಿಜ ನಿಟಿಲ ತಟಘಟಿತ ಕರಪುಟನಾಗಿ ದೇವಾ ಬಿನ್ನಪ ಮೀಗಳೊರ್ವ್ವ ನಪೂರ್ವಾಗತ ಕಿರಾತ ದೂತನ ಭಿನವಕಾರ್ಯ ವಿಜ್ಞಾಪನೋತ್ಸುಕಂ ದ್ವಾರದೇಶ ದೊಳ್ಬಂದಿರ್ದ್ದಪ ನೆಂಬುದು ಮವನಿಪನ ಪಾಂಗಪ್ರೇರಣೆಯಿಂ ಬರವೇಳೆಂಬುದು ಮವಂ ಪೋಗಿ ತಳ್ವದಾಕ್ರವ್ಯಾದನಾಮ ವ್ಯಾಧನಂ ಪುಗಿಸಿದಾಗಳ್—

ಕಂ|| ತಳಿರ ತಲೆಗಟ್ಟು ದಂತದ |
ಒಳೆ ಕತ್ತುರಿಬೊಟ್ಟು ಮುಕ್ತಿನೇಕಾವಳಿ ಬಿಲ್ ||
ಪೊಳೆವಂಬು ಬೆನ್ನ ನಿಡುಂಬ |
ತ್ತಳಿಕೆ ವಿರಾಜಿಸೆ ಪುಳಿಂದ ನಂದೊಳಪೊಕ್ಕಂ || ೨೪

ವಚನ|| ಅಂತೊಳಪೊಕ್ಕು ಮಹಾಸ್ಥಾನಮಂ ಕಂಡು ಕೌತುಕಂ ಬಟ್ಟವನತ ಶಿರಸ್ಕಂ ಮೆಲ್ಲನೈತಂದ ನತಿದೂರದೊಳ್ಮೆಯ್ಯಿಕ್ಕಿ ಮಣಿದು—

ಕಂ|| ಕತ್ತುರಿವೀಣೆಯ ನಿಭದಲೆ |
ಮುತ್ತಂ ಫಣಿಮಣಿಯ ನಮರ್ದ್ದಜೇಂಗೊಡಮಂ ಕಂ ||
ಪೊತ್ತರಿಸುವ ಬಾವನ್ನ ಮ |
ನಿತ್ತಂ ಕಾಣ್ಕೆಯ ನಿಳಾಧಿಪಂಗೆ ಪುಳಿಂದಂ || ೨೫

ವಚನ|| ಅಂತಿತ್ತು ತನ್ನ ಕಕ್ಷತಳದೊಳಿರುಂಕಿದ ಪೊಂಬುಲಿಯ ಚರ್ಮದ ಕಕ್ಷಪಾಳಿಕೆ ಯೊಳಳವಟ್ಟ ನಿಗ್ಗವದ ಕರಂಡಕ ದೊಳಗೆ ಮುದ್ರಿಸಿರ್ದ ನರ್ಘ್ಯವಮಣಿಯಂ ಬಾಲದಿನಮಣಿಯುಮಂ ತುಡುಂಕುವ ರಾಹುವೆನಿಸಿ ನಿಜಕರಮೊಸೆಯೆ ತುಡುಂಕಿ ತೆಗೆದು ತತ್ಪಾದಪೀಠದೊಳಿಳಿಪಿದಾಗಳ್—

ಕಂ|| ಆವಮಣಿ ಮೆರೆದುದು ತರುಣನ |
ಭೋಮಣಿ ನಿಜಸುಪ್ರತಾಪ ವಿಜಿತಂ ಪರಿತಂ ||
ದಾ ಮಹಿತ ರಾಜಶೇಖರ |
ಭೂಮೀಶ್ವರ ನಂಘ್ರಿಕಮಳಮಂ ಸೇವಿಪವೋಲ್ || ೨೬

ವಚನ|| ಮತ್ತಂ—

ಕಂ|| ಹರಿಯುರದೊಳೆಸೆವ ಕೌಸ್ತುಭ |
ದಿರವಂ ಪರಿಭವಿಸಿ ಮೆರೆದುದದು ಹರಿನೀಲ ||
ಸ್ಫುರಿತ ಪದಾಂಬುಜ ಪೀಠೋ |
ಪರಿಸ್ಥಿತಮರುಣ ರುಚಿರ ರುಚಿಪರಿಮಿಳಿತಂ || ೨೭

ವಚನ|| ಇಂತೆಸೆವನರ್ಘ್ಯಮಣಿಯುಂ ನೃಪಶಿರೋಮಣಿ ನಿರೀಕ್ಷಿಸಿ ಕೌತುಕಮನಾಳ್ದತಿಪ್ರಸನ್ನ ಮಧುರದೃಷ್ಟಿಯಿಂ ನೋಳ್ಪಾಗಳಾ ಕಟಾಕ್ಷಮ ಭಯಂ ಗುಡೆ ಕೈಂಕರ್ಯಮನಪ್ಪುಗೈದವಂ ನಿಜಾಗಮನ ವಿಜ್ಞಾಪನೋತ್ಕಂಠತೆಯಿಂ ದಿಂತೆಂದಂ—

ವೃ|| ಸೊಗಯಿಪ ದಕ್ಷಿಣಾಂಬುಧಿಯ ತೀರದೊಳಿರ್ಪುದು ಬೇಡರೊಗ್ಗಿನಿಂ
ನಗರಮದೊಂದು ಸಂದಪೆಸರಿಂದೆ ಪುಳಿಂದಪುರಂ ಪೊಡಪ್ಪಿನಿಂ ||
ದಗಣಿತ ಭಾಗ್ಯದಿಂ ಮೆರೆವ ನಾಪುರದೊಳ್ಕಲಿಕಾಲಮೇಘ ನಾ |
ಮಗತ ಕಿರಾತನಾಥ ನವನೀಶ್ವರ ನಿನ್ನ ಪದಾಬ್ಜ ಕಿಂಕರಂ || ೨೮

ಕಂ|| ಶೂರ ನನವರತ ಘನಕಾಂ |
ತಾರಾಂತರ ಚಾರಿ ಕರ್ಕಶಾಂಗಂ ಮೃಗಯಾ ||
ಧೀರಂ ಧೀವರ ವರ ನವ |
ನೋರಂತೊಪ್ಪಿರ್ದ ನಿರ್ಪ ಸಮನಂತರದೊಳ್ || ೨೯

ವೃ|| ಘನಸಮಯಾತ್ಮನಾಥ ವಿರಹಾತುರೆ ಭೂವಧು ಭೂಮಿಭೃದ್ಘನ |
ಸ್ತನೆ ಶಿಶಿರೋಪಸೇವನೆಯ ನೊಂದಿರೆ ಬಂದಿರೆ ಚೈತ್ರನಾಗಳಾ ||
ತನ ಬರವಿಂದೆ ಕಾಮಶಿಖಿ ಪೆರ್ಚಿರೆ ತಾಪಮನಾಂತಳೆಂಬ ಭಾ ||
ವನೆಯನೊಡರ್ಚಿಕಾಯ್ಪೆಸಗಿ ಬೇಸಗೆ ಪರ್ಬಿತು ಲೋಕಮೆಲ್ಲಮಂ || ೩೦

ಹರಿ ರಂಭಾಪರಿರಂಭಿ ಯಾದನ ನಿಲಾಪ್ತಂ ಪುಂಡರೀಕಾಶ್ರಯ |
ಸ್ಥಿರನಾಛಾಯೆ ಯೊಳೊಂದಿದಂ ಯಮ ನಮರ್ತ್ಯಾರಾತಿ ನಾಥಂ ನಿಶಾ ||
ಚರ ಸಂಭೋಧಿಗತಂ ಜಲಾಧಿಪತಿ ಯುದ್ಯಾನಾನ್ವಿತಂ ವಾಯು ಶಂ |
ಕರಮಿತ್ರಂ ಹಿಮವದ್ದಿಶಾ ನಿಲಯನೀಶಾನಂ ಧೃತೇಂದ್ವಾಪಗಂ || ೩೧

ವಚನ|| ಅಂತುಮಲ್ಲದೆಯುಂ—

ಕಂ|| ದೆಸೆವೆಣ್ಗಳ್ಬಿಸುಪಿಸಲಿಂ |
ಬಸವಳಿದುಃಪೆಂದು ಸುಯ್ದು ಬಿಸುಸುಯ್ಯೆಲರಿಂ ||
ಬೆಸಕಮು ನೊಡರ್ಚೆ ಬೀಸಿದು |
ದ ಸದೃಶ ಸೋಷ್ಣ ಪ್ರಭಂಜನಂ ಬೇಸಗೆಯೊಳ್ || ೩೨

ಪೊಡವಿ ಯರೆತ ಖಿಳಜಳಮುಂ |
ಕುಡಿದುಂ ತೃಷೆಯುಡಗದಾ ಮರೀಚೀಜಳಮುಂ ||
ತಡೆಯದೆ ಕುಡಿಯಲ್ಮಿಗೆ ಬಾ |
ಯ್ವಿಡುವಂತಿರೆ ಬಿರಿದ ಬೀಟೆಗಳ್ಬಿಡ ದೆಸೆಗುಂ || ೩೩

ಪುಡಿ ತನಗೆಂಡದ ಬೂಡಿಯ |
ಪಡಿ ನೆಲಮಟ್ಟೊಲೆಯು ತೊಳೆಯೆಲರ್ಬಿರಯಿಯ ಬಾ |
ಯೆಡೆಯೆಲರ್ಗೆಣೆ ಯುರಿಗಿದು ಸರಿ |
ಕಡು ವಿಸಿಲೆನಿಸಿರೆ ನಿದಾಘಮೇಂ ಪಸರಿಸಿತೋ || ೩೪

ದಿನಮಣಿ ಮಣಿಶಾಣೋಪಲ |
ವಿನಿಹಿತ ಘೃಷ್ಟಾರ್ಕ ಕಿರಣ ಖರ್ಬಡ್ಗಲತಾ ||
ಜನಿತ ಸ್ಫುಲಿಂಗ ಸಂಘಮಿ |
ದೆನೆ ತದ್ವಿಸ್ಫುರಿತ ವಹ್ನಿ ಕಣತತಿಯೆಸೆಗುಂ || ೩೫

ವೃ|| ಇಳೆ ಕಾಯ್ದೇರಿದುದಬ್ಧಿ ನೀರ್ದೆಗೆದು ದಾಶಾದಂತಿ ಬಾಯ್ವಿಟ್ಟುದು
ರ್ಕ್ಕಳಿದ ದ್ವಿಗ್ವರ ರಂಜಿದ ದ್ವಿಪವಿಜರುರ್ವೀಧ್ರವ್ರಜಂ ಸೀಳ್ದುದು ||
ಜ್ವಳ ಮಾದತ್ತಿನಬಿಂಬ ಮಂಬುಚರ ಮೆಲ್ಲಂ ಬೇಗೆಗೊಂಡತ್ತು ಬಾಂ |
ದೊಳೆ ಬತ್ತಿತ್ತು ಮರೀಚಿ ಪೊಣ್ಮಿದು ದರಣ್ಯಂ ಬೆಂದುದಾ ಗ್ರೀಷ್ಮದೊಳ್ ||

ವಚನ|| ಅಂತುಮಲ್ಲದೆ—

ಕಂ|| ಅಗಶಿಖರಂ ಛಿಳಿಛಿಟಿಲೆನೆ |
ಮಿಗೆಸಿಡಿಮುದು ಧಗಧಗಸ್ವನಂ ನಿಮಿರೆ ವನಂ ||
ಘುಗಿಲ ನುರಿದುದು ಖಗವ್ರಜ |
ಮೃಗತತಿ ಗರಿಘರಿಲನೆಯ್ದೆ ಬೆಂದುದು ಬಿಸಿಲೊಳ್ || ೩೭

ಕೊಳದಂಬು ಬತ್ತೆ ಜುಯ್ಯೆಂ |
ದೊಳಗಣ ನಳಿನಾಳಿ ಕರಿಕುವರಿಗು ಮೆನುತ್ತಂ ||

ಜಳಜಸಖಂ ಜಳಕಿರಣಾ |
ವಳಿಯಂ ಪಿಳಿದಂತೆ ಪೊಲ್ಮರೀಚಿಕೆ ಮೆರೆಗುಂ || ೩೮

|| ಮತ್ತಮಲ್ಲಿ—

ವೃ|| ನೋಡಿ ಮರೀಚಿಕಾಜಲಮನಂಬು ವಿದೆಂದೆಳಸುತ್ತೆ ಬಂದು ಕೈ |
ನೀಡಿ ಕಲಂಕಿ ಪೊಕ್ಕು ತೆಗೆದಿಕ್ಕುತೆ ಪುಷ್ಕರಮಂ ನಿಜಾಸ್ಯದೊಳ್ ||
ಬಾಡಿ ಬಳಲ್ದು ಬಲ್ಪಳಿದು ಘೀಳಿಡುತಂ ಗದೊಳೆತ್ತಲುಂ ಪುಗು |
ಳ್ಮಾಡಿರೆ ಬೀಳ್ದುದರ್ಕಕರ ಕಲ್ಪಿತ ಸಂಜ್ವರ ನೊಂದು ಕುಂಜರಂ || ೩೯

ಕಂ|| ಬಾಯ್ದಿಡು ತೃದಿದ ಮರಿಯಂ |
ತಾಯ್ವಿಡಿ ನಡೆನೋಡಿ ಬಾಡಿ ತಾಪಂ ಮೊದಲಿಂ ||
ದಯ್ವಡಿ ನೆಗಳ್ದಿರೆ ತೆಗೆದೇಂ |
ಕಯ್ವಿಡಿ ದೂದಿದುದೊ ನೋಷ್ಮಜಳಮಂ ಬಸಿರಿಂ || ೪೦

ನಡುನೆತ್ತಿ ಸಿಡಿದು ಮುತ್ತುಗ |
ಳೊಡೆದು ಚ್ಚಳಿಸುತ್ತೆ ಪಾರೆ ಪನಿಗೆತ್ತು ನವಿಲ್ ||
ತುಡುಕಿ ನಿಜಚಂಚುವಂ ಸುಡೆ |
ಮಿಡುಕಿದುದು ನಿದಾಘತಪ್ತಕರಿ ಸಂಕುಳದಾ || ೪೧

ತಳಮಂ ಸುಡೆ ನೆಲನಡಿಯಿಡ |
ಲಳವಲ್ಲದೆ ನಿಂದ ಸಿಂಧುರಂಗಳ ನೆಳಲೊಳ್ ||
ಬಳಿಗೊಂಡು ನಿಂದು ಬಿಸಿಲುಪ |
ಟಳಮಂ ಕಳೆಗುಂ ಕ್ಷಣಂ ಮೃಗೇಂದ್ರಕದಂಬಂ || ೪೨

ಕಡುಗಾದ ಪೆಡೆವಣಿಗೆ ತಲೆ |
ಗೊಡಪುತ್ತುಂ ಭಯಮನುಳಿದು ಪುಗೆ ನೋಗೆಯ ನೊಂ ||
ಪಡರ್ದ ಪೊಸಪೀಲಿಯೊಳ್ಫಣಿ |
ಬಿಡದುರಿದುದ ದೆಂದೊಡದ ನದಾರ್ಬ್ಬಣ್ಣಿಸುವರ್ || ೪೩

ಪೆಡೆಯುಂ ಕೊಡೆಯಂತಿರೆ ಪಿಡಿ |
ದಡಿಯೊಳ್ನೆರೆ ನಿಂದ ಮರಿಯ ನಾನನದೆಲರಿಂ ||
ಬಿಡೆದಾಶ್ವಾಸಿಸಿ ಮರುಕಂ |
ಬಡೆದೋವುತ್ತಿರ್ದ್ದುದುರಗಿ ಪರ್ಬ್ಬಿದ ಬಿಸಿಲೊಳ್ || ೪೪

ಅಳುರ್ವ ಬಿಸಿವಿಸಿಲ ಬೇಗೆಯ |
ನಿಳೆ ಸೈರಿಸಲಾರ ದಭ್ರಗಂಗಾಜಳದೊಳ್ ||
ಮುಳುಗಲಿರದೇಳ್ದ ವೋಲ್ಕಂ |
ಗೊಳಿಸಿತು ಸುಟ್ಟುರೆ ಸರೇಣು ಪಸರಿಸಿ ನಭದೊಳ್ || ೪೫

ವೃ|| ಸಿಡಿದುದು ದಂತಿ ದಂತವೊಡೆದು ಸಂಗೆಡ ಮಾಗಿರೆ ಕುಂಭಮೌಕ್ತಿಕಂ |
ಪೆಡೆವಣಿ ಪಾರೆ ನೆತ್ತಿ ಬಿರಿದತ್ತಹಿ ವೃಂದದ ಸಿಂಹಕೇಸರಂ ||
ಬಿಡ ದುರಿದತ್ತು ಪಕ್ಕಿಗಳ ಸುಣ್ಗರಿ ಸೀದು ದರಣ್ಯದಲ್ಲಿ ಸಂ |
ಗಡಿಸಿ ದಮುಕ್ಷುರೋಮತತಿ ಬೆಂದುದು ಬೇಸಗೆಯುಗ್ರಮೆಂತುಟೋ || ೪೬

ಹಿಮ ತಾಂಬೂಲ ರಸಾರುಣಾಧರಮುಂ ದಂಚದ್ಘರ್ಮ ವಾರ್ಬಿಂದು ವಿ |
ಶ್ರಮುಖಂ ಕೌಸುಮ ತಾಲವೃಂತ ಪವನವ್ಯಸ್ತಾಳಕಂ ಚಂದನಾಂ |
ಕಮಹೋತ್ತುಂಗಕುಚಂ ನಿತಂಬ ಶಿಥಿಲ ಕ್ಷೌಮಾಂಬರಂ ಸನ್ಯವು |
ಷ್ಪ ಮನೋಜ್ಞಾಭರಣಂ ನಿದಾಘದೊಳೆ ಕಣ್ಗಿಂಬಾಯ್ತು ಕಾಂತಾಜನಂ ||

ಕೊಳದಬ್ಜವ್ರಜಮಂ ಕರಂ ಕೊರಗಿಪಂ ಸೂರಂ ಸಖಂ ತಾಪವಿ |
ತ್ತಿಳೆಯೊಳ್ ತ್ರಾಸಿದು ಕಾಲದೊಂದು ಗುಣಮುಕ್ಕುಂ ನೋಡಿಮೆಂ ದಾಯುವಾ||
ಸ್ಯಳ ಸತ್ಪಂಕಜವಕ್ಕಿ ಬಂದು ನವಯೋಷಿದ್ವಕ್ತ್ರಪೂರ್ಣೇಂದುವಂ |
ಕೆಳೆಗೊಂಡತ್ತೆಸೆ ಮಿತ್ರನಾದೊಡ ಮದೇಂ ಕಾಯ್ದಾತನಂ ಕೂರ್ಪರಾರ್ ||

ಹಿಮಕರ ಕಾಂತಿ ಕಾಂತ ಹಿಮ ಮಿಶ್ರಿತ ಚಂದನಲೇಪ ಲಿಪ್ತ ಕುಂ |
ಕುಮ ನವಕರ್ದಮಾರ್ದ್ರ ರಮಣೀ ಕಮನೀಯ ಘನಸ್ತನಂಗಳಂ ||
ಸಮುದಿತಮಾನ ಮಾನಸರೊರಲ್ದು ಮದರ್ಪ್ಪಿ ತದಂಗಯಷ್ಟಿ ಸಂ |
ಕ್ರಮಿತ ನಿಜಾಂಗರಲ್ಲಿ ಕಳಿವ ರ್ಪ್ರ್ವಸ ಬೇಸಗೆ ಯೊಂದುಬೇಗೆಯಂ || ೪೯

ಗಿರಿಶೃಂಗೋತ್ತುಂಗ ಚಂಚಚ್ಚಟುಲ ಖರರುಚಿ ಗ್ರಾವ ದಗ್ರಂ ಗಳೊಳ್ಳಿಂ |
ದುರು ಕಾಂತಾರಾಂತರಾಳ ಪ್ರಭವ ದವಭಯ ಭ್ರಾಂತನಾನಾ ಮೃಗೌಘಂ||
ನೆರೆದೆತ್ತಂ ನಿಂದು ತಾಪಂಗಳೆದಿರೆ ಬಳಿಯೊಳ್ತತ್ತಪಸ್ತೇಜ ಮೆಂಬಂ |
ತಿರೆ ಪರ್ಬ್ಬಿದ್ದರ್ಕತೇಜಂ ಮೆರೆದರಘ ಹರಧ್ಯಾನ ಸಾಂದ್ರ ಮ್ಮುನೀಂದ್ರರ್

ವಚನ|| ಇಂತಳವಿ ಗಳಿದಳುರ್ದ್ದ ಘನನಿದಾಘ ಕಾಲದೊಳ್ಕಾಲನಿಭ ಕಾಲಮೇಘಂ ಕಾಲಮೇಘಂಗಳೆ ಮನುಜರೂಪು ವಡೆದಂತೆಸೆವ ಶಬಳರೆನಿಪ ಕಿರಾತವರ್ವ್ಗರಸು ಬೇಂಟೆ ವೋಗೆ ಲೆಂದು ಸಮದ ಸಮುತ್ಸುಕ ಚಿತ್ತನಾಗಿ—

ವೃ||ಸುಲಿಪಲ್ಕೊಂಕಿದ್ದರ್ಪುರ್ಬ್ಬರ್ಂಬುದನಿಭ ತನು ಕೆಂಗಣ್ಗಳೊಳ್ಮೀಸೆಜೆಲ್ವಾ
ಗೆ ಲಸನ್ಮತ್ತೇಭ ಮುಕ್ತಾಭರಣ ಮೆಸೆಯೆ ಕೂರ್ಪಾರ್ಸನುಂ ತೊಟ್ಟು ಕಟ್ಟು||
ತ್ತೆ ಲತಾಸಂದೋಹದಿಂ ಕೇಶಮನವುರೆ ಧನುರ್ಬಾಣಮುಂ ತಾಳ್ದು ಕೆಪ್ಪರ್ಂ
ನಲವಿಂ ಮೆಟ್ಟುತ್ತೆ ಕೂರ್ನಾರ್ಯ್ವೆರಸಿ ಶಬರರೊಂದಾಗಿ ಬಂದಂ ಪುಳಿಂದಂ||

ವಚನ|| ಮತ್ತಮಾಗಳ್—

ವೃ||ಬಿಡುವಲೆ ಸೊರ್ಕ್ಕುರ್ವುದ್ದುರ್ ಪದವಿಲ್ಮಿಡಿ ಎಲ್ಲೆಲೆಯುಂಬು ಮಿಟ್ಟಿ ಪೇ
ರಡಿ ಬಡಿಕೋಲುತ್ತಾಕ ಮಿಡುಗಲ್ಲೆರೆ ಪೆರ್ಬ್ಬುಲೆ ಕೂಳಿ ಗಾಳ ಮಂ ||
ಟಿಡುವಲೆ ದೀಪ ದೇಣ ನುಡಿಯಲ್ಲಿ ಯಡಾಯುಧ ಮಡ್ಡಣಂ ಸೊಡ |
ಗ್ಗಿರ್ಡಿಗ ಮೆನಿಪ್ಪಿವಂ ಪಿಡಿದು ಬೇಂಟೆಗೆ ಸಂದ ಪುಳಿಂದರೈದಿದರ್ || ೫೨

ವಚನ|| ಇಂತೈತರೆ ಪುಳಿಂದಪತಿ ಪುಳಿಂದ ಪುರದುತ್ತರ ದಿಶಾಭಾಗದ ಜೀಮೂತ ವಸನ
ಮೆಂಬ ಗಿರಿಯಸಾರ್ಕ್ಕೆರ್ ಗೈತಪ್ಪಿರ್ನ ಮಾಗಿರಿಯ ತಪ್ಪಲಲ್ಲಿ—

ವೃ|| ಹರಹಸ್ತಾಗ್ರದ ಮೋಲಹೀನ ಕಟಕೋಪೇತಂ ಮರುನ್ಮಾರ್ಗದಂ
ತಿರೆ ಚಂಚತ್ಖಗ ರಾಜಯುಕ್ಷ ಯುತ ಮಂಭೋರಾಶಿಯಂ ತಾತ್ತಸಿಂ ||
ಧುರಸಾಟೋಪ ಹರಿಪ್ರಯುಕ್ತ ಮದು ಯಜ್ಞಾಗಾರದಂತುತ್ಕಟ |
ಸ್ವರ ಸಂದೀಪ್ತ ಶಿಖಿದ್ವಿಜಂ ಗಹನಮೊಂದೊಪ್ಪಿತ್ತದೇಂ ಬಣ್ಣಿಪೆಂ || ೫೩

ವಚನ|| ಅಂತು ಮಲ್ಲದೆಯುಂ—

ವೃ||ಪಟುಪಂಚಾಸ್ಯಾಗ್ರಪಾದೋಸ್ಮಖನಖ ಮುಖ ನಿರ್ಭಿನ್ನ ಗಂಧೇಭಕುಂಭ
ಸ್ಫುಟ ಕುಂಭೋನ್ಮುಕ್ತಮುಕ್ತಾಕಣಗಣ ಕಟದಾನಾಂಬು ಸಂಮಿಶ್ರ ರಕ್ತೋ||
ತ್ಕಟ ಧಾರಾ ಪಾತಪಂಕ ಪ್ರಗತಮೃಗ ಪದಪ್ರೇಕ್ಷಣೋಲ್ಲಾಸ ಭಿಲ್ಲೋ |
ದ್ಭಟ ಭಾಷಾ ಘೋಷ ಮಿಶ್ರಶ್ರುತಿ ಕಟುವಿಹಗ ಧ್ವಾನ ಕಾಂತಂ ವನಾಂತಂ||

ಕಟ ಕಂಡೂತಿ ನಿವಾರಣೈಕ ಮತಿ ಮತ್ತೇಭೌಘ ಸಂಘೃಷ್ಟತ |
ತ್ಕಟದಾನ ದ್ರವಚಿಹ್ನ ಚಂದ್ರಮಣಿ ಚಂದ್ರದ್ಯೋತ ಸದ್ಯಸ್ಸ್ಫುರ ||
ತ್ಕಟಕೋಪಾಂತ ಚರತ್ಕಿರಾತ ವನಿತಾ ಕರ್ಣೋತ್ಪಲಾ ಕರ್ಷಿಮ |
ರ್ಕಟ ಶಾಖಾಶ್ರಿತ ಶಾಖಿಪಾದಪಯುತಂ ಕಣ್ಗೊಪ್ಪಿತಾ ಕಾನನಂ || ೫೪

ವಚನ|| ಅದಲ್ಲದೆಯು ಮಡಸಿ ನಿಡಿದೆನಿಸಿ ಕಡುವೆಳೆದುದ್ಭಂತ ತಾಳತರುಗಳ ಚೂಳಿ
ಕೆಯಿಂ ಗಾಳಿಯುಲಿಪದಿಂ ಗಳಿಲನೆ ಪಾಸರೆಯೊಳೊಡನೆ ಬೀಳ್ದೊಡೆದ ಮಧುಘಟ ಪಟಲ ಪಕ್ವ
ಫಳ ಪ್ರತಾನದ ರಸಂಗಳ್ಸಂಗಳಿಸಿ ಪರಿದಾ ಗಳದಂ ಕುಡಿಕುಡಿದು ನಕ್ಕಿ ಮಿಕ್ಕು ಸೊ
ಕ್ಕೇರಿ ಪಡಿನೆಳಲಂ ಪಳಿಕಿನೊಡ್ಡಂ ಗಲ್ಲೊಳ್ಕಂಡು ಪೆಣ್ಗೋಡಗಮೆಂದು ಪತ್ತೆ ಸಾದ್ದರ್

ರುಗಿಸಿ ನೋಡಿ ಬರಿಯಂ ಬೆರಂಟಿ ಪುರ್ಬ್ಬಿಕ್ಕಿ ಪಲ್ಲಂ ಕಿರಿದು ಹರ್ರೆಂದು ಝುಂಕಿಸಿ ಸಮಾನ ವಿಕೃತಿಗಂಡು ಸರಸರನೆ ಸಾರೆವಂದು ಕೆಲದೊಳೊಕ್ಕಿರ್ದ್ದಾನೆ ದಲೆಯು ನೆತ್ತರ್ಪ್ಪುದಿದ ಮುತ್ತಂ ದಾಳಿಂಬ ಬೀಜಂಗೆತ್ತತ್ತಿ ಕಳ್ಕನೆ ಮುಕ್ಕಲೊಡನೆ ಪಲ್ಗಳ್ಮುಕ್ಕುಪ್ಪೋಗೆ ನೋಡಿ ಮೆಂಬಂತೆ ಬೋಡುವಾಯುಂ ತೆರೆದೇಡಿಪ ಕೋಡಗಂಗಳಂ ನೀಡುಂ ನೋಡಿ ನಗೆಗಡಲೊಳೋಲಾಡುವ ಬೇಡವೆಣ್ಗಳಿಂ, ಕರಿಕರಾಗ್ರದಿಂ ಮುರಿದ ಕಳಿರ ತದುಕಿನ ಮರದ ನಿಡುಗೋಡೊಳರಿಯ ದೆರಗಿ ಮುರಿವೆರಸಿ ಕುಳ್ಳಿರ್ದು ಪಸಿಯ ಪಗಿನದೊಳ್ಕಾಲ್ಜಿಗಿಲ್ತು ತಳ್ಪಂಕೆ ಗೊಳ್ವ ಸಮಯದೊಳ್ತುತ್ತತುದಿವರೆಗಂ ಸುರ್ಬ್ಬುಗೊಂಡು ಪರ್ಬ್ಬಿದ ಕರ್ಬ್ಬಳ್ಳಿಯ ಪೆರ್ಬ್ಬಳ್ಳಿಯ ಬಳಿಯ ನಡರ್ದ್ದು ಪಿಡಿಯಲೆಳಸಿ ಗಳಿಲನೆ ಸಾರೆವರ್ಪ್ಪ ಘೋರಲುಬ್ಧಕನಂ ಕಂಡಗಿದು ನಗೆಯಲುಜ್ಜುಗಿಸಿ ಪಕ್ಕವಂ ಬಿದಿರ್ದ್ದು ಪಾರಲಳವಲ್ಲದೆ ನಡನಡನೆ ನಡುಗಿ ಸಿಡಮಿಡಿ ಗೊಂಡೆರಂಕೆಗಳೆಳಲಿ ಕೊರಲ್ಕುಸಿಯೆ ಜೋಲ್ದು ನೇಲ್ವ ಪರ್ಬ್ಬಕ್ಕಿಗಳಿಂ, ಮತ್ತೊಂದೆಡೆ ಯೊಳ್ಮರೆಯ ನೆರೆಗೊಳ್ವ ಪಿರಿಯಪಾವಂ ಪಿಡಿದ ಕರಿಯಂ ಸೀಳ್ವ ಸಿಂಹಮಂ ಪೋಳ್ವಶರಭಮಂ ಮಾಟಾಕಾರದಿಂ ಸಾಲ್ಗೊಂಡೆತ್ತಿ ನಭೋಮಂಡಲಕ್ಕೆ ಚಿಗೆದೊಗೆದು ನೆಗೆವ ಭೇರುಂಡಂಗಳಿಂ ಪೊಲಂಬುದಪ್ಪಿದ ಮರಿಯಂ ನೆನೆದು ನೇಹಂ ಮಿಗೆ ಕೆಚ್ಚಲುರ್ವ್ವಿ ಪೊಲೆತೊರೆದೆಚ್ಚು ಪಾಯ್ವ ಗುತರ್ಪ್ಪವನ ಮಹಿಷಿಗಳ ಪಾಲಧಾರೆಯಂ ಮಿಕ್ಕು ನಕ್ಕು ತೊಡವರ್ಪ್ಪ ಕಾನನ ಬಿಡಾಲಂಗಳಿಂ ವನತರು ಗಳೊಂದೊಂದನೊರಸೆ ಪುಟ್ಟಿದನಲ ನಳವಿಗಳಿ ದೊಗೆದ ಪೆರ್ವ್ವೊಗೆಗೆ ಪುಳುಗಳೊಳ್ಪೊಗೆ ವಟ್ಟಗೊಂಬಿನೊಳ್ಮಿಸುಪ ಜೇನವುಟ್ಟೆಗಳ ಮಧುರಸಮಂ ಬಳಿಯನಡರ್ದು ಪೀರ್ವ್ವ ಮರವಾನರಂಗಳಿಂ, ಪುಲ್ಲಂ ಮೇಯಲೆಳಸಿ ಬಂದು ಮೆಯ್ಯ ತೀಂಟೆಗೆ ಪುಲಿ ಪೊರಳ್ದು ಪೋದತಾಣದೊಳ್ನಿಂದು ಗರ್ಬ್ಬಂ ಗಗಿದುರ್ಬ್ಬುಗುಂದಿ ಹಂಮದಂ ಬೋದ ಹರಿಣಗಳಿಂ ಪೂಗೊಯ್ವ ಪುಳಿಂದಿ ಪಾಡುವ ಸಂಗೀತದಿಂಚರಕ್ಕೆ ಸುತಿಗುಡುವಂತೆ ಸೆವಪವನ ಪೂರಿತಕೀಚಕ ರಂಧ್ರನಿನದಕ್ಕೆ ಪೆಡೆಯೆತ್ತಿ ನಿಲುಂಬಿ ನಲಿವ ಫಣಿಗಳಿಂ ಕೋಳ್ಕುಟ್ಟಿ ದಾಡೆಯಂ ಮಸೆದು ಮಸಕಂ ಮಿಗೆ ಮೊಗಮಂ ನೆಗಪಿ ತೃಣಮಂ ತುಂಡಿಸಿ ಬಾಲಂ ನಿಮಿರೆ ಕಾಲಂ ತೂಗಿ ಮರವಾಯ್ದು ಪರಿದಿದಿರ್ಚ್ಚಿ ಕಡುಗಮಂ ಪಿಡಿದು ಜಡಿದು ಝುಂಕಿಸಿ ದಂಡೆಗೊಂಡ ಶಬರನಂ ಮಿಡಿಯಿಂ ಬರಿವರೆಗಮೆತ್ತು ವಸಮುತ್ತುಂಗ ವರಾಹಂಗಳಿಂ ಅಳವಿಗರಿಯ ದೈತರೆ ನೆಗೆದೆರಗಿ ಗಜರಿ ಗರ್ಜಿಸಿ ಕುಂಭಿ ಕುಂಭಸ್ಥಳಮಂ ಕೂರುಗುರ್ಗ್ಗಳಿಂ ಸೀಳ್ದು ಸಿರುಂಬುಳಾಡಿ ಸಿಡಿಲ್ಸಿಡಿವಂತೆ ನಗಾಧಿತ್ಯಕಕ್ಕೆ ನೆಗೆವ ಮೃಗೇಂದ್ರಂಗಳಿಂ ವಿಜೃಂಭಿಸಿ ಕಣ್ಗೆ ಕೌತುಕವಹಮಾಗಿರ್ದ್ದುದಲ್ಲಿ—

ವೃ॥ಎಲವಂ ಸಂಪಗೆತ್ತಿಹೊನ್ನೆ ಚೆನ್ನೆ ಕವಳಂ ಕಾರಾಜಮಾಜಂ ಪುಲಿಂ ।
ಗಿಲೇರಂ ಗುಗ್ಗುಳ ಮತ್ತಿ ಮತ್ತಿ ಮಧುಕಂ ಮಗಾ್ಗರೆ ಪಚ್ಚಾರಿ ದಿಂ ॥
ಡಲ ಮಾಲಂ ಬೆಳಮಿಂಗಳಂ ಪುಣಿಸೆ ಜಾಲಂ ಬೇಲಮಂಕೋಲೆ ಬೊ ।
ಬ್ಬುಲಿ ಮಾವಂ ಬಟಿ ಕಕ್ಕೆ ಬಿಕ್ಕೆ ಬಕುಳಂ ಬೇವೆತ್ತ್ರಕಂ ಕಿಂಶುಕಂ ॥ ೫೬

ವಚನ|| ಮತ್ತಂ—

ವೃ|| ವರುಣನೆ ಕುಂತ ದುತ್ಕರದ ಕೇತುವ ಕೇಕಿ ವಿಳಾಸದರ್ಭ ಕೋ |
ದರೆಯು ವಿಲೂನ ನಾಸೆಯ ಸುರೂಪೆಯು ಪಾಣ್ಬೆಯ ಮೇಘನಾದದಿಂ ||
ದಿರೆಯು ಪಟೀರದೇಳ್ಗೆಯ ಕಪೋತದ ಬೊಟ್ಟಿನ ಕೆಂಡದಬ್ಜಿನೀ |
ವರ ಸಭಿಧಾನಮಂ ತಳೆದ ಭೂರುಹವೊಪ್ಪುಗು ಮಾ ವನಾಂತದೊಳ್||೫೭

ಕಂ|| ಅರಳಿ ಕಡವೊಡವು ತಂಡಸಿ |
ಯರಸಲ್ಲಿ ಬಿದಿರ್ಪ್ಪತಂಗಮರುಟಾಳಂ ಪಾ ||
ದರಿ ಬಾಗೆ ತೇಗು ಪನೆ ಕಂ |
ಮರ ಮೆಸಳೆಯೆ ನಿಪ್ಪುವಿಪ್ಪುವಾ ಪೇರ್ಗಾಡೊಳ್||೫೮

ವೃ|| ಗರುಡಂ ಗೀಜಗ ಸಂಚೆ ಕೊಂಚೆ ಗಿಡುಗಂ ಕರ್ಬಕ್ಕಿ ಪಾರಾವತಂ
ಸರಪುಟ್ಟಂ ಚರಣಾಯುಧಂ ಶಕುನಿ ಕಂಕಂ ತೊಂಡಿಗಂ ಸೋರೆ ತಿ ||
ತ್ತಿರಿ ಕೋಕಂ ಪಿಕಳಂಬಕಂ ಶಿಖಿ ಶುಕಂ ಬಾನಾಡಿ ಪೆರ್ಬಕ್ಕಿ ಹಂ |
ಗುರು ಕಾಕಂ ಚಿಲುಕೂಲಿ ರತ್ನಖಗ ಮಿಕ್ಕರ್ಕಂ ತದ್ವನಾ ಗಾಢದೊಳ್||೫೯

ಕಂ|| ಸುರಪತಿಯ ಬೆಳ್ಗಡಿಯ ರಥ |
ಚರಣದ ಪಾವಕನ ಮುನಿಯ ಧರ್ಮಜನ ಲಸ ||
ತ್ತುರಗದ ಗಜಗಂಡದ ಭಾ |
ಸುರ ವಾದ್ಯದ ಪೆಸರ ಖಗಕುಳಂ ಕರಮೆಸೆಗುಂ || ೬೦

ಹರಿ ಕರಿ ಶಶ ಜಂಬುಕ ವೃಕ |
ರುರು ಮಾರ್ಜಾಲೋಷ್ಟ್ರ ಶರಭ ಸೃರಿಭ ಶಾಖಾ ||
ಚರ ಗವಯ ವರಾಹೋರಗ |
ತರಕ್ಷು ಋಕ್ಷಾದಿ ಸತ್ವಗಣ್ಯಾ ಮರಣ್ಯಂ || ೬೧

ಜರದಜಗರ ಘೂತ್ಕೃತಿ ಕೇ |
ಸರಿ ಭಾತ್ಕೃತಿ ಕರಿಕರಾಗ್ರಸೀತ್ಕೃತಿ ಶಾಖಾ ||
ಚರ ಕೀತ್ಕೃತಿ ವಿಹಗ ಸಮು |
ತ್ಕರ ಚೀತ್ಕೃತಿ ತೀವಿ ವಿಪಿನ ದೊಳ್ಬಿಡದೆಸೆಗುಂ ||

ವಚನ|| ಮತ್ತಂ—

ವೃ|| ಕೋಡಿಡು ವಾನೆಗಳ್ಪರಿವಪುಲ್ಲಿಗ ಳೊಲ್ದೊಡಗೂಡಿ ಮೇದು ಮೆ|
ಲ್ಮ್ಕಡುವ ಸೈರಿಭಂಗಳ್ಗರೆ ಲಂಘಿಪ ಕೇಸರಿ ಗಳ್ಧರಿತ್ರಿಯಂ ||
ತೋಡುವ ಸೂಕರಂ ಗಳಡಿಯಿಟ್ಟಿಸೆ ವೆಂಟಡಿಗಳ್ಕನಲ್ಕೆಯಿಂ |
ನೋಡಿ ಕಡಂಗಿ ಗರ್ಜಿಪ ತರಕ್ಷು ಗಳೊಪ್ಪುಗು ಮಾವನಾಂತದೊಳ್|| ೬೩

ವಚನ|| ಮತ್ತ ಮಾಪೇರಡವಿಯಲ್ಲಿ—

ಕಂ|| ನೆಲವೊರೆಯುಂ ತಾಂ ತಳೆದೆ |
ಮ್ಮಲಸತೆಯುಂ ಕಳೆದು ಪೊರೆದು ದೀಗಿರಿಯೆಂದಾ ||
ನೆಲದಳೆದ ಕರಿಗ ಳೇಳ್ತಂ |
ದಲಸದೆ ಸೇವಿಪವೊಲ ದರೊಳಾನೆಗಳೆಸೆಗುಂ || ೬೪

ವೃ|| ಮರಿ ಪಸಿದೈದೆ ತಾಂ ವೊಲೆಗುಡಲ್ಕೆರೆದಿರ್ಪ್ಪುದು ಮಂಗ ಸಂಗಮ |
ಕ್ಕೆರಗ ಲೊಡಚ್ಚ್ಗ ಹಸ್ತಿ ಜವದಿಂ ಪಿಡಿ ಮುಂದೆಸೆಗಾಂತು ನಿಂದು ಬಾ ||
ಯ್ದೆರೆ ದದರಗ್ರ ಪಲ್ಲವಮ ನಾಂತಣ ಲೊಳ್ದಳಿರೂಡಿ ನೇಹಮಂ |
ಮೆರೆದದ ಕಿತ್ತುದಂತೆ ವೊಲೆಯಂ ಪತಿಯಿಂ ಸುತನಲ್ತೆ ವೆಗ್ಗಳಂ || ೬೫

ಕೊಳದೊಳೆ ಮಿಂದು ಪಂಕಜ ರಜಂಗಳ ಸಂಗದೊಳೊಟ್ಟೆ ಕೊಂಡು ಮಂ|
ಡಳಿಸಿ ಮದಕ್ಕೆ ಸಾರ್ವ್ವ ಮರಿದುಂಬಿಯ ನೀಲದ ಮಾಲೆಯಾಂತು ಮಂ ||
ಜುಗಳಗತಿ ಮತ್ತಹಸ್ತಿ ಪಿಡಿಯಿರ್ಪ್ಪೆಡೆಗೈದಿ ಭುಜಂಗಲೀಲೆಯುಂ |
ತಳೆದೆಳಮುತ್ತಿನೊತ್ತೆ ಗುಡುವಂತಿರೆ ಸೂಸಿತು ವಾಃಕಣೌಘಮಂ || ೬೬

ವಚನ|| ಅದಲ್ಲದೆಯುಂ—

ಕಂ|| ಒಳಗಿದು ತಳೆದುದು ಮುಕ್ತಾ
ಫಳಮಂ ಪೊರಗಿಂದ್ರ ನೀಲಮಣಿಗಣಮ ನೆನು ||
ತ್ತಿಳೆ ಪೊಗಳೆ ಕಟತಟದ ಮದ |
ಕಳಿ ಮಿಂಡೆಗಿರೆ ಕರೀಂದ್ರಮೇಂ ರಂಜಿಸಿತೋ || ೬೭

ವೃ|| ಕರಿ ಪೆಬರ್ಬ್ಬವನಮುಚ್ಚ್ಗ ಪುಷ್ಕರದೆ ಬೀಸುತ್ತಿಟ್ಟೊಡಾ ಕಾಶದೊ|
ಳ್ಗರಳಾಗ್ನಿ ಸ್ಫುಟ ವಿಸ್ಫುಲಿಂಗತತಿ ಸೂಸುತ್ತಿರ್ಪ್ಪವೋ ಲ್ತೋರೆ ಮು ||
ನ್ನೆರೆ ಗೊಂಡಾಮಿಷಖಂಡ ಸಂಹತಿ ತಮೋವಿಭ್ರಾಂತಿಯಿಂ ತಳ್ತ ಭಾ |
ಸ್ಕರನೇಳ್ತಪ್ಪುದ ನೊತ್ತಿ ಖಂಡಿಸಿ ಖಗೇಶಂ ರಕ್ಷಿಸಿತ್ತರ್ಕನಂ || ೬೮

ಸುರುಚಿರಪುಷ್ಕರಾಕರ ಜಲಾಂತರಮುಗ್ನ ಕರೀಂದ್ರ ರುಂದ್ರ ಪು |
ಷ್ಕರಮದು ಪುಷ್ಕರಾಬೊಲಿರೆ ತದ್ಭ್ರಮೆಯಿಂದಳಿ ಪಾಯೆ ಪೊಣ್ಮೆ ಪೂ ||
ತ್ಕರಿಸೆ ಸಿಡಿಲ್ದ ಸೀರ್ಪನಿಗಳೊಪ್ಪಿರೆ ಧೂಮದ ಪೋಲ್ವಿರಾಜಿಸಿ |
ತ್ತರರೆ ಕುಪಾಕದಿಂ ಸೆಗೆವ ಗುಂಡಿನ ಪೋಲ್ಝಷಕೇತುವೀರನಾ || ೬೯

ಕಂ|| ಕರಿ ಮುರಿಯೆ ನಳಿನಮಂ ಪಂ |
ಕರುಹಾಕರದೊಳ್ಮದಾಳಿ ರವಿಗವಿದಿಡುವಂ ||
ತಿರೆ ಮೊರೆದು ನೆಗೆಯೆ ಕಕ್ಸರ |
ಮಿರದಳ್ವಂ ತೂರ್ವಿರ್ ರವದಿನೇಂ ರಂಜಿಸಿತೋ || ೭೦

ಬವರಂಗೈದ ಗಜಂಗಳ |
ನಿವಹಟ ನಿಗ್ಗವಮುದುಡಿದು ಸೂಸಿರೆ ನೆಲದೊಳ್ ||
ತವೆ ಪಸಿದಪಲ್ಲವುರಿಗ |
ಳ್ತವಕದೆ ಬಿಸಮೆಂದು ತುಡುಕುಗುಂ ತದ್ವನದೊಳ್ || ೭೧

ಒಡವರ್ಪುದು ಕಡೆವೋಪುದು |
ನಡೆಸೋಳ್ಪುದು ಪಿಂದೆ ನಿಲ್ಪುದತ್ತಿತ್ತಂ ಕೈ ||
ದುಡುಕುವು ದಂತಿಂತೊಲೆವುದು |
ಪಿಡಿಗೆ ಮುದ್ದಂ ಒಡೆದುದೊಂದು ಕಳಭಂ ಬನದೊಳ್ || ೭೨

ವಚನ|| ಮತ್ತೊಂದು ಮಳಯಜ ಮಹೀಜದಲ್ಲಿ—

ವೃ||ಮರಗೇಂಬಂ ಮುರಿವಲ್ಲಿ ತಳ್ತು ಮೆರವಾವೊಂದಾತ್ಮ ಶುಂಡಾಗ್ರದೊ|
ಳ್ಭರದಿಂ ಪೊಕ್ಕೊಡೆ ಬೀಸಿಪೂತ್ಕರಿಸಿ ಕೊಂಬಂ ಪುಷ್ಕರಾಗ್ರಕ್ಕೆ ಸಂ ||
ಸರಿಪಂತಿಟ್ಟು ಕುಸುಂಗಿ ಬಲ್ಪಳಿದು ಘೀಳಿಟ್ಟಳ್ಕಿ ಬಾಯ್ವಿಟ್ಟು ಶೋ |
ಕರಸಂ ದಾಳ್ದುದಿಭಂ ವೃಥಾಸ್ಯ ಪರಿಭಂಗಂ ಭಂಗಮಂ ಸಾರ್ದುದೇ || ೭೩

ಕಂಮೆಸೆದತ್ತು ತಳ್ತ ಸರಿಯಿಂ ದರಿಯಿಂ ಜರಿಯಿಂ ಮೃಗಂಗಳಿಂ |
ತರತರಮಾಗಿ ತೋರ್ಪಮರದಿಂ ಸರದಿಂಸೆರೆದಿಂಬು ಗೊಂಡ ಭೀ ||
ಕರತರ ಲುಬ್ಧಕ ಪ್ರಕರದಿಂ ಝುರದಿಂ ಪರಿದಿಂಪ ನಾಳ್ದಭಾ |
ಸುರ ಸದಿಯಿಂ ಪೊದಳ್ದಮರೆಯಿಂ ಹರಿಯಿಂ ಕರಿಯಿಂದೆ ಕಾನನಂ || ೭೪

ವಚನ|| ಮತ್ತಮಾವನಂ ಘನಾಗಮದಂತೆ ಘನಕ ದಂಬ ಮುಕ್ತಳವಿ ಲಸಿತಮುಂ ವಸುದೇವ ಭವನದಂತೆ ನಿರುದ್ಧ ಬಲ ಕೃಷ್ಣ ಸಾರಸನುಚಿತಮುಂ ದಾನಧಾರೆಯಂತೆ ಪುಂಡರೀಕ ಗಂಡಕ ಮಂಡಿತಮುಂ ಯುಧಿಷ್ಠಿರ ಸದ್ಮದಂತೆ ವೃಕೋದರ ವಿಲಸ ದರ್ಜುನ ನಕುಲಾಧಿಷ್ಠಿತಮುಂ ಸುಜನ ಹೃದಯದಂತ ನೇಕಪರಿಪೂರ್ಣ ಗುಣ ಸಮನ್ವಿತಮುಂ ಕೆಂಜಾಶಿ

ಸಮೃದ್ಧವಾಗಿಯುಂ ದ್ವಿಜಾತಿ ಮನೋಜ್ಞಮುಂ ಪರಿಗತ ಶಬರೋಪಯುಕ್ತವಾಗಿಯು ಮವಿಗ್ರಹ ಸಮಗ್ರಸ್ಥಳಮುಂ ದ್ವಿಪ ವಿಲಸಿತವಾಗಿಯು ಮಗಣಿತ ವಜ್ರೋಪರಂಜಿತಮುಂ ವಿತತಕರಾರ್ಕೋಪ ಲಸಿತವಾಗಿಯುಂ ಬಹುಲತಾ ರಾರಾಜಿತಮುಂ ಕತ್ತ ತ್ರಾಪಸಮುಚ್ಚಯ ಮಾಗಿಯು ಮಶೋಕ ಸಂಗತ ಮುಮೆನಿಸಿ ದುದಂತುಮಲ್ಲದೆ—

ವೃ॥ ಹರಿಣೀಮತ್ತೇಭ ವಿಕ್ರೀಡಿತ ಲಲಿತಮಯೂರಾನ್ವಿತಂ ಛಂದಮಂ ಶಂ
ಬರ ಭಾಸ್ವತ್ಪುಂಡರೀಕ ಸ್ಫುರಿತ ಹರಿ ಮರುದ್ವಾಭ್ರಾಜಿತಂ ವಾರ್ಧಿಯಂ ಬಂ॥
ಧುರ ಭಾರದ್ವಾಜ ಶಾಂಡಿಲ್ಯಕ ಶುಕ ವಿಮದಾಗಸ್ತ್ಯಕಂ ತಾಪಸ ಪ್ರೋ।
ತ್ಕರಮಂಸೋಮಾರ್ಕಮುಕ್ತಾಂಚಿತಮದುನಭವಂಪೋಲುತ್ತಚೆಲ್ವಾಯ್ತರಣ್ಯಂ॥

ವೃ॥ ವರತರು ವಲ್ಲರೀಪ್ರಕರದಿಂ ಕರದಿಂ ಕರೆದಿಂಬುವೆತ್ತು ಸಂ।
ಚರಿಸುವ ಕಿನ್ನರಪ್ರಸರದಿಂ ಸರದಿಂ ಸರದಿಂದುಕಾಂತಿ ನಿ॥
ರ್ಝರ ಸಲಿಲಂಗಳಿಂ ಬದರಿಯಿಂ ದರಿಯಿಂ ದರಿಯಿಂದಗಲ್ದ ನಿಂ।
ದು ರುಮುನಿವೃಂದದಿಂದೆ ಹರಿಯಿಂ ಹರಿಯಿಂ ಹರಿಯಿಂ ದದೊಪ್ಪುಗುಂ॥ ೭೬

ವಚನ॥ ಸಂತತ ಮಿಂತೊಪ್ಪುವಾ ಕಾಂತಾ ರಾಂತರಾಳದಲ್ಲಿ—

ವೃ॥ ಪಡಿನೆಳಲಂ ಮೃಗೇಂದ್ರನುರೆ ಚಂದ್ರಶಿಲಾತಳದಲ್ಲಿ ಕಂಡು ಕಾ।
ಯ್ಪಡರಲಿದಿರ್ಚ್ಚ ಮತ್ತದು ಮಿದಿರ್ಚ್ಚರೆ ಗರ್ಜಿಸೆ ಮೇಘನಾದದಿಂ॥
ದೊಡನದು ಗರ್ಜಿಸುತ್ತಿರೆ ಪಳಂಚಿ ವಿಲಂಘಿಸಿ ಪಾಯ್ದು ಪೊಯ್ದು ತಾಂ।
ಮಡಿದುದು ಶುದ್ಧರಲ್ಲಿ ನಿಜದೋಷಮ ನೊಂದಿಸೆ ಕೆಟ್ಟುಪೋಗರೇ॥ ೭೭

ವೊಳೆವುಲ್ಲಂ ಮೇದು ಮಧ್ಯಂದಿನದ ಬಿರುವಿಸಿಲಾತ್ತಗೆ ಬೆನ್ನಂ ಭರಂಗೊಂ।
ಡೆಳಸುತ್ತುಂ ಪಲ್ವಲಾಂಭಃ ಪ್ಲವದೆ ಮುಳುಗಿ ತತ್ಕರ್ದಮಂ ಪತ್ತೆನಿಂದ॥[ಪ್ಪಂ
ವ್ವಳಿಸುತ್ತೊಂದೊಂದ ರೊಳ್ಕೋಡಿಡುತೆಮಗುಳ್ದುಮೆಲುಕ್ಕಾಡುತಂ ಕಾಡೊಳೊ
ದಳೆದಿರ್ದತ್ತ ಭೃಕಾಯಂ ಪೃಥುಮಹಿಷ ನಿಕಾಯಂ ಕರಂಪ್ರೋತ್ಸುಕಾಯಂ॥

ಕಡುಪಸಿವೆತ್ತು ಪುತ್ತಿ ನೆಡೆಯೊಳ್ಮೊಗ ಮಿಕ್ಕು ತಿರುಂಪೆಗೆಂದು ನು।
ತ್ತೆಡೆವಿಡ ದೂದು ತಿಪ್ಪಿನ ಮದೊಂದು ಮಹೋರಗ ಮಾಸನಾಗ್ರಮಂ॥
ಪಿಡಿದಡದಲ್ಲಿ ಸೇಲುತಿರೆ ಸುಂಡಿಲವೋಲ್ಸೊರೆ ಪಾಯೆ ಪಲ್ಗಳಂ।
ತೊಡನೆಸೆದತ್ತು ಬಲ್ಗರಡಿ ಕಾನನದೊಳ್ಕರಿಪೋತದಂತೆ ವೋಲ್॥ ೭೯

ಕಂ॥ ಮಿಡಿಮಿಲ್ವಿಡಿದು ಪುಳಿಂದಿಯ।
ರಿಡೆ ಗಜಮೌಕ್ತಿಕದ ಮಿಂಟೆಯುಂಬರ ದೆಡೆಯೊ॥
ಳ್ನಡೆದು ಪಗಲು ವೀಳ್ಳವೊ।
ಲೊಡನೆ ಸೆದುದು ಮೃಗದ ಕೇಡಸರಿಸಲ್ಬನದೊಳ್॥ ೮೦

ವಚನ|| ಇಂತಸದಳ ಮೆಸೆವಾ ಪೇರಡವಿಯಂ ಬೇಂಟೆಯಾಡಲೆಂದು ಬಿಯದಸ್ಸರ್ಂದಣಿಸಿ ಪೊಕ್ಕು ಮಿಗೆ ಸಂಭ್ರಮಿಸಿ ಸರುವಿಡಿದು ಹಣೆ ಯಿಪ್ಪೆರ್ಡೆಗೈತಂದು—

ವೃ|| ಇದುಕರಿಪೋದ ತಾಣಮಿದು ಸೈರಿಭನೈದಿದ ದಾರಿ ಸೋಳ್ಪೊಡಿಂ |
ತಿದು ಪುಲಿಯಿರ್ದ್ದ ಬಲ್ಮೆಳೆ ಯಿದೆ ಕ್ಕಲನೇಳ್ವಡಿ ಯಿಟ್ಟಬಟ್ಟೆ ನೋ ||
ಡಿದು ಹರಿ ನಿಂದಪಜ್ಜೆ ಯಿದೆ ಪೊಕ್ಕಮದಾಂಬು ಮದಾಸ್ಯ ಫೇನಮಿಂ |
ತಿದೆ ಶನಿಗರ್ಬ್ಬ ತಳ್ತಿದೆ ಕೆಸರ್ಪ್ಪರಿಗೊಂಡಿದೆ ಹಸ್ತಿಮೌಕ್ತಿಕಂ || ೮೧

ವಚನ|| ಎಂದು ಕುರುಪುಗೊಂಡ ನುಮಿಸುತ್ತೆ ಮತ್ತೆ ಮಾಣದೆ—

ವೃ|| ಮರಗೊಂಬಂ ಪರಿದೇರಿ ನೋಳ್ಪ ಮೆಳೆಯಿಂದಂ ಸೋವುತಲ್ಲಲ್ಲಿ ಬೇ |
ಹರಿಸುತ್ತುಂ ಪೊದರಿಂ ತೆರಳ್ಚು ಪಡಿಗಂಡಾರೈವ ಸೀದರ್ದ್ದಣ ದೋ ||
ವರಿಯೊಳ್ಕ್ಕವ ಕಡಂಗಿ ಕಂಡು ಮಿಗಮಂ ಬೆಂಕೊಂಬ ಬೇಡರ್ನ್ನರೇ |
ಶ್ವರ ಕೇಳ್ಪಬ್ಬರದ ರಣ್ಯದೊಳ್ಪರಿದ ರೇನೆಂಬೆಂ ತದಾಟೋಪಮಂ || ೮೨

ಸರಳಿಪ ಪುಲ್ಲೆ ಯೋಡುವ ಮೊಲಂ ಬಿಡದಾಲಿಪ ಹಸ್ತಿ ನಿಲ್ವ ಸೂ |
ಕರ ನಡಿಗೊಳ್ವ ಪೆರ್ಮ್ಮರೆ ಯಡಂಗುವ ಪೆರ್ಬ್ಬುಲಿ ಪಾರ್ವ ಪಕ್ಷಿಗಳ್ |
ಕೊರಗುವ ಖಡ್ಗಿ ಲಂಘಿಪವೃಕಂ ಮುರಿದೇಳ್ವ ಮೃಗೇಂದ್ರ ನೆತ್ತಲುಂ |
ನೆರೆದಿರೆ ಕಾಡೊಳುಣ್ಮಿದುದು ಬೇಡರ ಬೇಂಟೆಯ ವಾದ್ಯದಬ್ಬರಂ || ೮೩

ನಡೆ ಬಿಡು ನಾಯ್ಗಳಂ ತುಡು ಸರಲ್ಗಳ ನಾರ್ದ್ದಿಸು ಸುತ್ತು ಪತ್ತು ಬೊ|
ಬ್ಬಿಡು ಬಡಿಕೋಲ್ಗಳಿಂದಿಡು ಮೊಲಂಗಳ ನೇಳ್ಬಲೆವೀಸಿ ಪುಲ್ಲೆಯಂ ||
ಕೆಡಪು ಕಡಂಗಿ ಪೊಯ್ಪುಲಿಯ ನಿಟ್ಟೆಯೊಳಾಂತಿಡು ಪಂದಿಯಂ ಪಡ |
ಲ್ವಿಡಿಸು ಗಜಂಗಳಂ ಕುಳಿಯೊಳೆಂಬರವಂ ಪಿರಿದಾಯ್ತರಣ್ಯದೊಳ್ || ೮೪

ವಚನ|| ಆಗಳಲ್ಲಿ ಪೆರತೊಂದು ತಾಣದಲ್ಲಿ—

ವೃ|| ಚಮರಿ ಮಿಗಕ್ಕೆ ನುಣ್ಗುರುಳ ನಗ್ಗದಹಸ್ತಿಗೆ ನೀಳ್ದಹಸ್ತಮಂ |
ಕವಲಿರಿದಿರ್ದ್ದ ಕೊಂಬಿನ ಮೃಗವ್ರಜ ಕಿರ್ಬ್ಬೆರಲಂ ದ್ವಿಪಾರಿ ಗು ||
ಣ್ಮಮರಸನಾಗ್ರಮಂ ಪುಲಿಗೆ ಕೈಯೆರಡಂ ನಿಮಿರ್ದೆತ್ತಿ ಪಂದಿಗೊ |
ಪ್ಪುವ ಮೊಳಕೈಯ ತೋರ್ಪ್ಪರರೆಬರ್ಬ್ಬಿಯದ ಸ್ಸರ್ಲೆ ಸನ್ನೆ ವೇಂಟೆಯೊಳ್ ||

ವಚನ|| ಆಗಳವರೊಳೊರ್ವ್ವ ಪುಳಿಂದಂ ತನ್ನ ಪೆಸರ ಪೇರಡಿಯ ಹಾಸಮಂ ಕಳೆದು ಮೈದಡವಿ ಕೈಚಿಟುಂಕು ಗೈದು ಪುಲ್ಲೆಯಂ ತೋರಿ ಬಿಡಲೊಡನೆ—

ಕಂ|| ಬೆದರ್ವಮನಂ ಬೆರ್ಚ್ಚುವ ಕ |
ಣ್ಣಾದಿರ್ವಂಗಂ ಸಟ್ಟಕಿವಿಗೆ ಳೊಡನೊಡನಿಳಿವ ||
ಗ್ಗದ ಸುಯ್ಯೊಪ್ಪಯ್ವಳ್ಳೆ ಪೊದ |
ಳ್ದೊದವೆ ಜವಂಗುಂದ ದೆಂಳೆ ಸರಳಿಸಿತಾಗಳ್ || ೮೬

ನೆಗೆದ ಕುಡಿವಾಲ ಮುಣ್ಮುವ |
ಬಗೆ ಬಳ್ಕುವ ನಡು ಮಗುರ್ವ್ವಿಪಾನನ ಮಿರೆ ತ್ರ ||
ನ್ಮೃಗಮಂ ಬಳಿವಿಡಿದಟ್ಟು |
ತ್ತ ಗಲದೆ ಪಿಡಿದತ್ತು ಜಾಯಿಲಂ ತದ್ವನದೊಳ್ || ೮೭

ವಚನ|| ಅಲ್ಲಿ ಕೆಲಂಬ ರ್ಕ್ಕಿರಾತೆಯು ರ್ನ್ನೆರೆದು—

ಕಂ|| ವದನಾಬ್ಜ ವಿರೋಧಿಯ ನಾ |
ಬಿದುವಂ ಕಳೆಗೊಂಡುದಲ್ಲದೆ ವಿಮ್ಮೇಕ್ಷಣ ದಂ ||
ದದ ಕಣ್ಣುಂಟೆಮ ಗೆಂದಿ |
ಪ್ಪುರ್ದಿ ದೆಂದಿಸುವಂತೆ ಪುಲ್ಲೆಯಂ ಪದೆದೆರ್ಚ್ಚರ್ || ೮೮

ವಚನ|| ಅದಲ್ಲದೆಯುಂ—

ವೃ|| ಕಿಡಿಪುಟ್ಟುತ್ತಿರೆ ದಾಡೆಯಂ ಮಸೆದು ಕಿಗ್ಗಣ್ಣಿಕ್ಕಿ ನೋಡುತ್ತೆ ಮೈ |
ಗೊಡವುತ್ತು ಬ್ಬರ ಮಾಲಿಸುತ್ತೆ ಮೊಗಮಂ ತೂಗುತ್ತೆ ವಾಲಾಗ್ರಮಂ ||
ಮಿಡುಕುತ್ತುಬ್ಬರಿಸುತ್ತೆ ರೋಮಚಯಮಂ ಮೀಂಟುತ್ತೆ ಕಂಡಂಗಳಂ |
ಕೆಡುಪುತ್ತಂ ಗದೊಳುರ್ದ್ದ ಬಲ್ಮರಗಳಂ ಬಂದತ್ತ ದೊಂದೆಕ್ಕಲಂ || ೮೯

ವಚನ|| ಅಗಳ್—

ವೃ|| ಪೋಗದಿರೆಂದು ಗರ್ಜಿಪ ಕಿರಾತನ ಮಾತದು ತನ್ನ ಕರ್ಣಮಂ |
ತಾಗದಮುನ್ನಮುಣ್ಮೆ ಕಿಡಿ ಕಣ್ಗಡೆಯೊಳ್ಕಿಡಿ ದಾಡೆಗಟ್ಟಿ ತಾಂ ||
ತಾಗಲಿದಿರ್ಚ್ಚ ಕೋಡುಡಿದಕಾಲನ ಸೈರಿಭದಂತೆ ಒಪ್ಪಿರ್ಸಂ |
ತೂಗಿ ಕರಾಗ್ರದಿಂದೆ ಪೊಳೆವಿಟ್ಟಿಯೊಳಿಟ್ಟನದಂ ವನೇಚರಂ || ೯೦

ಕಂ|| ಇಡೆ ಪಣೆಯುನಡಸಿ ಕಂದಮು |
ನೊಡೆದುಚ್ಚಳಿಸಿರೆ ಸರೋಷಮತಿ ಮುಗುಳ್ದಿರಂ ||
ನಡೆದದರಣಸಿನ ಮೊಸೆಯಿಂ |
ದೊಡನಿಕ್ಕಿತು ಪಾಯ್ದು ಪಂದಿಯವನಂ ವನದೊಳ್ || ೯೧

ವೃ|| ಕುಸಿದಸರಾಂಗಮುಜ್ಜ್ವಳಿತಪಿಂಗಳಲೋಚನಮುಗ್ರದಂಷ್ಟ್ರಮಾ |
ರ್ಪ್ಪಸೆವಮನಂ ಧರಿತ್ರಿಯೊಳೆ ಚಾಲಿಪಜಾಲಮುಗುರ್ವ್ವಿಪಾನನಂ ||

ನಸುನೆಗೆದಿರ್ದರ್ತೋರತಲೆ ಮುಂಗಡೆ ಸಾಚ್ಚ್‌ದಕಾಲರಲ್ದಮೂ |
ಗೆಸೆಯೆ ತರಕ್ಷು ದಂಶಶತಸಂವೃತಮಿರ್ದುದದೊಂದುತಾಣದೊಳ್ || ೯೨

ವಚನ|| ಇಂತತಿಭಯಾವಹಮಾಗಿತೋರ್ಪ್ಪ—

ವೃ|| ಪುಲಿ ಪೊರಮಟ್ಟು ಕಟ್ಟಿದಿರೊಳಬ್ಬರಿಸುತ್ತಿರೆ ಬೊಬ್ಬೆಗೊಟ್ಟು ಗಂ |
ಡುಲಿವೆರಸುತ್ತೆ ಪತ್ತಿ ಜಡಿದಾಯುಧದಿಂ ಪೊಡೆದಿಕ್ಕಿ ಮಿಕ್ಕು ನಿ ||
ಶ್ಚಲನೆನಿಸುತ್ತೆ ನಿಂದಿರೆ ಪುಳಿಂದನನಪ್ಪಿದಳಾಗಳಾತನಾ |
ಲಲನೆ ತದೀಯದಕ್ಷಿಣಭುಜಾಗ್ರಮನಾ ಜಯಲಕ್ಷ್ಮಿಯೆಂಬಿನಂ || ೯೩

ವಚನ|| ಮತ್ತಮೊಂದೆಡೆಯಲ್ಲಿ—

ವೃ|| ಮೆಳೆಯೊಳಗಿರ್ದ್ದಮೇವಮಿಗೆಮಂಮಿಗೆಪೆಬ್ಬುಲಿಕಂಡುಕಾಣದಂ|
ತಳವಿಗೆ ತಗ್ಗಿ ಕುಗ್ಗಿತುಸಿರಿಕ್ಕದೆ ಬಂದು ಹಣುಂಗಿ ಪಾರ್ವತ |
ನ್ನಳವನಭೀಕ್ಷಿಸುತ್ತೆ ಸಲೆ ಗರ್ಜಿಸಿ ಕಾಯ್ದು ಕಡಂಗಿ ಪಾಯ್ದು ಪೊ ||
ಯ್ದಳೆಗಿರದಿಕ್ಕಿ ಘುರ್ಘುರಿತಕಂಠಮದೀಂಟಿತು ರಕ್ತವಾರಿಯಂ || ೯೪

ವಚನ || ಅದಲ್ಲದೆಯುಂ—

ವೃ|| ಕಟ್ಟಿದಿರಲ್ಲಿ ಗರ್ಜಿಸೆ ತರಕ್ಷುತರಂ ತರಳಾಯತಾಕ್ಷಿ ಕಂ |
ಗೆಟ್ಟ ಮದರ್ಪ್ಪ ಲಂಜದಿರೆನುತ್ತವಳಂ ಬಿಗಿದಪ್ಪುತಿರ್ಪ್ಪನಂ ||
ತೊಟ್ಟನೆ ಪಾಯೆ ಪಜ್ಜೆ ಯಿಡದಲ್ಲಿಯೆ ನಿಂದು ಕಡಂಗಿ ಖಡ್ಗದಿಂ |
ದಟ್ಟೆ ನೆಲಕ್ಕೆ ಬೀಳ್ವಿನಮದಂ ಸದೆದಂ ಶಬರಾಧಿನಾಯಕಂ || ೯೫

ವಚನ|| ಅಲ್ಲಿ ಮತ್ತೊರ್ವ್ವ ನೆಳೆ ಜೌವನದ ಪುಳಿಂದಂ—

ಕಂ|| ಮುನಿದಿ ರ್ದ್ದನಿಯ ಳ್ಪುಲಿ ಗ |
ರ್ಜನೆಗುಡೆ ಭಯಮುತ್ತು ಕೊರಲ ನಮದರ್ಪ್ಪಿರೆ ತೊ ||
ಟ್ಟನೆ ಬಿಟ್ಟಂಬದ ನುಚ್ಚ್‌ರೆ |
ಮನದೊಳ್ಮುದಮಂ ವಿಷಾದಮುಂ ಕೈಕೊಂಡಂ || ೯೬

ವಚನ|| ಮತ್ತಮೊರ್ವ್ವಂ—

ಕಂ|| ಎಳವೇಡಿತಿಯ ಕುಚಂಗ |
ಳ್ಬಳೆಯೆ ಬಳಂಗುಂದಿ ಮಾಣ್ದನೆಂಬೀ ನೆವಮಂ ||
ತಳೆದವನೆ ಪೋಲ್ತ ಕುಂಭಂ |
ಗಳ ನಾಂ ತಾನೆಗಳ ನೈದಿ ಕೊಲ್ಲಂ ಭಿಲ್ಲಂ || ೯೭

ವೃ॥ಬಲಗಾಲ್ಪಿಂದೆಸೆಗಾಗೆ ವಾಮಪದಮಂ ಮುಂದಿಟ್ಟು ದೋರ್ಮೂಲಮ
ಮೊಲೆಯುಗ್ರಂ ತಲೆದೋರೆ ತೆಳ್ನಡು ಬಳುಂಕಲ್ಕೊಗ್ಗಿರಲ್ಕೊಂಕೆ ಕೋ ॥
ಮಲೆ ನಿಂದಂಬಕ ದಗ್ರಮಂಬುದುದಿ ಲಕ್ಷ್ಯಂ ಮುಟ್ಟಿಯೊಂದಾಗೆ ತೋಂ॥
ಳ್ವಲಮಂ ತೋರಲೊಡಚ್ಚುರ್ಗತಿಚ್ಚಳಿಸಿಯಂಭಾಪೆಂಬಿನಂ ದ್ವೀಪಿಯಂ ॥ ೯೮

ಪೊದರಿಂದಂ ಪೊರಮಟ್ಟು ಕಟ್ಟಿದಿರೊಳಾರ್ಪಿಂ ಗರ್ಜಿಸುತ್ತಿರ್ಪ ಬ|
ಗ್ಗದ ಬಲ್ಗಂಡಿಕೆ ಗಂಡು ಗಂಡುಗಲಿ ಬೇಡಂ ದಂಡೆಯಂ ಕೊಂಡು ನಿಂ ॥
ದಿದಿರೊಳ್ಪಾಯ್ದುದಕಿತ್ತು ಕೈಮುರಿಗೆಯಂ ಕೈಗಣ್ಮೆ ಪೊಕ್ಕೆತ್ತಿ ಖ |
ಡ್ಗದೆ ಬೆನ್ನೊಳ್ಮೊನೆದೋರೆ ಏರಿ ತಿವಿದಂ ತತ್ಕಾಳ ಮೇಘಾಹ್ವಯಂ॥೯೯

ತೆಗೆ ನೆಗೆ ದರ್ಧಚಂದ್ರಶರದಿಂ ಶಬರಂ ಕರಿಕಂಠಮೂಲಮಂ |
ಬಗಿದಿಸೆ ರಕ್ತಸಿಕ್ತಮದು ಮೌಕ್ತಿಕ ಮೊಂದಮದೊರ್ಪ್ಪೆ ನೆತ್ತಿಯೊಳ್ ॥
ನೆಗೆದೆಸೆದತ್ತು ಪಶ್ಚಿಮ ನಗಾಗ್ರದೊಳೊಂದಿರೆ ಸಂಜೆಗೆಂಪು ತ |
ಳ್ತೊಗೆದ ಕುಜಪ್ರಯುಕ್ತ ಮೃಗಲಾಂಛನ ಲೇಖೆಯಿದೆಂಬ ಮಾಳ್ಕೆಯಿಂ॥೧೦೦

ವಚನ॥ ಅದಲ್ಲದೆ ಪೆರತೊಂದು ಪಥಪ್ರದೇಶದಲ್ಲಿ—

ವೃ॥ ಸುಸಿಲೆಸಗುತ್ತೆ ಸೇದೆದಳೆದಾಗಳೆ ಭಿಲ್ಲಿಯುಮಲ್ಲಿ ಭಿಲ್ಲನುಂ |
ಪೊಸ ಪಿಡಿಗೂಡಲೆಂದು ನಡೆತಂದ ಮದೇಭದ ಕುಂಭಮೌಕ್ತಿಕ ॥
ಪ್ರಸರದ ಲೋಭದಿಂದಿಸ ಲೆರಳ್ಪರಿಯೊಳ್ಗರಿಯಂಬು ತುಂಬಿ ಕ |
ಣ್ಗೆಸೆದು ದದುಣ್ಮಿದೊಳ್ಗರಿಗಳಂ ತಳೆದಂಜಸ ಶೈಲಮೆಂಬಿನಂ ॥ ೧೦೧

ವಚನ॥ ಅಲ್ಲಿ ಪೆರತೊಂದೆಡೆಯೊಳ್—

ವೃ॥ ಕರಿ ನೀಲಾಚಲದಗ್ರದೊಳ್ಕರೆಯೆ ಬಲ್ಪಿಂ ಕಾಲಮೇಘಂ ಶರೋ |
ತ್ಕರಮಂ ಗರ್ಜಿಸಿ ಜಿಷ್ಣುಚಾಪಮನಮಂ ಕೈಕೊಂಡು ತದ್ಘಾತುನಿ ॥
ರ್ಝರಮಾಗಳ್ಪರಿವಂತೆ ರಕ್ತರಸಪೂರಂ ಸೂಸೆ ಮತ್ತಲ್ಲಿ ಸೀ |
ಕರಮೆತ್ತಂ ಸಿಡಿವಂತೆ ತಳ್ತು ಸಿಡಿದತ್ತಾರಕ್ತ ಮುಕ್ತಾಫಳಂ ॥ ೧೦೨

ಪಸಲೆಗೆ ಬಂದಪುಲ್ಲೆಯನೆರೆಳ್ದೆಸೆಯೊಳ್ಕಿರುಮೇಡರಿರ್ವರಾ |
ದ್ದಿರ್ಸೆ ಸರಿಸಕ್ಕೆ ನಿಂದು ನೆಗೆದತ್ತದು ಸತ್ವರಮಾಗಸಕ್ಕೆ ಬೆ ॥
ಕ್ಕಸಮೆನೆ ತಳ್ತು ಪಾಯ್ವ ಕಣೆಗಳ್ಕೊರೆದಿಕ್ಕಿ ದುಮಿರ್ವ್ವರಂ ನಿರೀ |
ಕ್ಷಿಸೆ ಪರನಿರ್ನಿಮಿತ್ತ ಹನನೋದ್ಯಮ ಮಾತ್ಮವಿನಾಶ ಕಾರಣಂ ॥ ೧೦೩

ಎಲೆವರೆಯಲ್ಲಿ ಪೂದಿರಿಯಲೆಂದಿರೆ ನಿಂದು ಪುಳಿಂದಿ ಕಂಡು ಬ |
ಲ್ಮೊಲೆಯ ನದೊರ್ವ್ವ ಬಾಲಶಬರಂ ಕರಿಕುಂಭಮಿದೆಂದು ಬಾಣಮಂ ॥

ನಲಿದಿಸೆ ಮಧ್ಯದೊಳ್ಪೊಡೆ ಯಲಂತದ ನಾಕ್ಷಣಮೆಳ್ದ ಸಿಂಹಮಂ |
ತಲೆಗಡಿದಲ್ಲಿ ಬಿಳ್ದುದೆನೆ ಸದ್ವಿಧಿಯುಕ್ತರ ನಾರೊ ಕೊಂದಪರ್ ‖ ೧೦೪

ನಸೆ ಮಸಪೊಂದೆ ಸುಣ್ಬಸಲೆಯೊ ಳ್ಸಸಿಲಾಂತೆಸೆವೇಣಸಂ ವಿಲಂ |
ಬಿಸ ದಿಸಲೆಂದು ಬಂದನ ಪುಳಿಂದನ ವಕ್ಷಮ ಸುದ್ಗಮಾಸ್ತ್ರದಿಂ ‖
ದಿಸೆ ಕುಸುಮಾಸ್ತ್ರನಾರ್ಪ್ಪಳಿದು ಕೂರ್ಪ್ಪಳ ಕೈವಿಡಿದೆಯ್ದಿ ಪಲ್ಲವ |
ಪ್ರಸರ ಸಮೇತಮಾದ ಮೆಳೆಯೊಳ್ಪೊಸ ಪೂವಸೆಯಲ್ಲಿ ಕೂಡಿದಂ ‖ ೧೦೫

ಕಂ‖ ಪಂಕದ ಶಂಖದ ಮೇಲಣ |
ಪಂಕಜರಿಪು ಬಿಂಬದಮೃತಫಳದಿನಿರಸಮಂ ‖
ತಾಂ ಕುಡಿದು ಮಿಕ್ಕಮಧುರಸ |
ಮಂ ಕನಸಿನೊಳಾ ದೊಡಂಟಿ ನೋಡಂ ಬೇಡಂ ‖ ೧೦೬

ವಚನ‖ ಮತ್ತಮೊರ್ವಂ—

ವೃ‖ ಕಾಡಲ ಗೊರ್ಂಚಲಂ ಮುರಿದುಸೋಮಮ್ಮುರ್ಡಿಗಿಟ್ಟುಮರಂದದೊಳ್ಪದಂ
ಗೂಡಿ ಕುರಂಗ ನಾಭಿಯನು ರೋಜಕೆ ಲೇಪಿಸಿ ಪಲ್ಲವಾಗಳಂ ‖
ಜೋಡಿಸಿ ಕಟ್ಟಿ ಪೆರ್ಚಿದ ನಿತಂಬಕೆ ಸಾರ್ಚ್ಚಿ ಕರೀಂದ್ರ ಕುಂಭದೊ |
ಳ್ಮೂಡಿದ ಮುತ್ತನೆತ್ತಿ ಸರದಿಂ ಸರಗಟ್ಟಿ ಕೊರಲ್ಗೆ ಕೂರ್ಮೆಯಿಂ ‖ ೧೦೭

ತುಡಿಸುತ್ತಂ ನಡೆನೋಡಿ ಗಾಡಿ ಮಿಗೆ ಬೇಡಂ ಬೇಡಿದೊಳ್ವಣ್ಣನಿ |
ತ್ತಡಿಯೊಳ್ಮೆಳ್ಮೆನೆ ನಾಂಟದಂತೆ ನಡೆಸುತ್ತಲ್ಲಲ್ಲಿ ಸಲ್ಲೀಲೆಯಿಂ ‖
ದೊಡಗೂಡುತ್ತೆ ಮಡಲ್ವ ಪೆರ್ಮೆಳೆಗಳೊ ಳ್ಚೆಲ್ವಾದರಲ್ವಾಸಿನೊ |
ಳ್ಪಡೆದಂ ಸಂಮದಮಂ ನಿಜಾಂಗ ಜಿತಜಂಜದ್ವಲ್ಲಿಯೊ ಳ್ಭಿಲ್ಲಿಯೊಳ್ ‖ ೧೦೮

ವ‖ ಅಲ್ಲಿ ಮತ್ತೊಂದೆಡೆಯೊ ಳ್ತೀರ್ತ್ಥ ಶೋಕೆಯ ತಳೆದ ತಣ್ಣೆಳಲ ಪಳಿಕಿನಪಾಸರೆಯಲ್ಲಿ—

ವೃ‖ ತೊಳಗುವ ದಂತದೋಲೆ ಸುಲಿಪಲ್ತಳಿರೊಳ್ಪುಡೆ ಹಸ್ತಿಮಸ್ತಕ |
ಸ್ಥಳ ದೆಳಮುತ್ತಿನೆಕ್ಕಸರ ಮಬ್ಜಪರಾಗದ ಬೊಟ್ಟು ಸೂಡಿದು ‖
ತ್ಪಳದಳ ಮಾಲೆ ಗುಂಜಿದೊಡಮೊಪ್ಪುವ ಪುಲ್ಗಳ ಕಂಕಣಂ ಕರಂ |
ಪೊಳೆವಲರ್ಗಣ್ಮೊಗುಳ್ಮೊಲೆಗಳೊಪ್ಪೆ ಪುಳಿಂದಿಯ ರೊಪ್ಪಿತೋರಿದರ್ ‖ ೧೦೯

ವಚನ‖ ಮತ್ತಂ—

ವೃ‖ ನೆಲೆವೊಲೆಗಳ್ಕವಕ್ಕದಿಸೆ ತಾಳ್ದ ತಳಿಮ್ಮುರ್ಡಿಯಿಂದೆ ಸೂಸೆ ಕ |
ಣ್ಮಲ ಗರ್ಳಕಾಂತಿ ಸಂದಣಿಸೆ ನರ್ತಿಸುತಂತಿರೆ ದಂತದೋಲೆಗ ‖
ಲ್ಗಲಕೆನೆ ಕೈಯನುಣ್ಬಳೆ ಪುಳಿಂದಿಯ ರಾದದೆ ನಿಂದು ಸುಮ್ಮಿ ಯು |
ಜ್ಜ್ವಲ ರವಮೊಪ್ಪಿರಲ್ಬಳಿಸಿದ ರ್ಬ್ಬಿಧಿರಕ್ಕಿಯನಲ್ಲಿ ರಾಗದಿಂ ‖ ೧೧೦

ವಚನ|| ಅವರೊಳೊರ್ವ್ವ ಕಿರುವೇಡಿತಿ—

ಕಂ|| ತಳಿರಂ ಸುತ್ತಿ ವನೇಚರಿ |
ವಿಳಾಸದಿಂ ಗಿರಿನಿತಂಬ ದೊಳ್ಮುತ್ತುಗಳಂ ||
ತಳೆದೆಸೆದ ಳಪರದಿಗ್ವಧು |
ತಳೆವಂತಿರೆ ಸಂಜೆವೆರಸಿ ತಾರಾಗಣವಂ || ೧೧೧

ವಚನ|| ಪೆರತೊಂದೆಡೆಯೊಳ್—

ವೃ|| ಮುಡಿಯೊಳ್ಮಲ್ಲಿಯ ಸೂಡಿ ಗುಂಜಿದೊಡವಂ ಕೈಗೆಯ್ದು ಕಸ್ತೂರಿಯಂ
ತೊಡೆ ದುದ್ಯತ್ಕುಚ ಕುಂಭದೊಳ್ತಳಿರ್ಗಳಂ ತಾನುಟ್ಟು ಪಚ್ಚೋಲೆ ದಾ ||
ಳ್ದೊಡನಾಂತೊಳ್ಗರಿಯಂಬುಮಂ ಬಿದಿರಬಿಲ್ಲಂ ಬೇಡವೆಣ್ಬಂದು ಸಿಂ |
ದೆಡೆ ಯೊಳ್ನಿಂದ ನನಂಗನಾಂತು ಮುಗುಳಂಬಂ ಪುಷ್ಪಕೋದಂಡಮಂ|| ೧೧೨

ವಚನ|| ಇಂತನಂತ ವಿಳಾಸದಿಂ ಪುಳಿಂದಸುಂದರಿಯ ರ್ವ್ವಿಹರಿಸುತ್ತು ಮಿರೆ—

ವೃ|| ತಿವಿದು ಮೃಗಾರಿಯಂ ಸದೆದು ಬಲ್ಮರೆಯಂ ಪೊಡೆದಿಕ್ಕಿ ಸಿಂಹಮಂ |
ಕವಿದಿಸುತಾನೆಯಂ ತರಿದು ಸೈರಿಭಮಂ ಪರಿದಿಟ್ಟು ಪಂದಿಯಂ ||
ತವಿಸಿ ವೃಕೌಘಮಂ ಬಡಿದು ಬಲ್ಮೊಲನಂ ಬಲೆಗಿಟ್ಟು ಪುಲ್ಲೆಯಂ |
ಬವರಿಗೊಳುತ್ತೆ ಬೇಡವಡೆಯಾಡಿದು ದಗ್ಗದ ಬೇಂಟೆಯಂ ನೃಪಾ || ೧೧೩

ವಚನ|| ಇಂತು ಬೇಂಟೆಯಾಡಿದ ನಂತರಂ—

ವೃ|| ಪೊಂಬುಲಿ ಸಮ್ಮಮಾನೆದಲೆ ಮುತ್ತು ಮೊಲಂಗಳ ಬಿಕ್ಕು ಪೂತಿವೆ |
ಕ್ಕಂಬರಗಾಳಿ ಜೇನ್ಪುಣಿಸೆಮಣ್ಪೊಸನಾಕ್ಕಿರ್ಡಿದಾಡೆ ನಿಗ್ಗಮಂ ||
ಶಂಬರ ಮಿಂಬುಮೆತ್ತ ಚಮರಂ ಜತಿ ಪೇರುಡು ಪೀಲಿಯೆಂಬಿವಂ |
ತುಂಬಿದ ಕಂಬಿಯಂ ತಳೆದದೇಂ ತಳರ್ದತ್ತೊ ಪುಳಿಂದ ಸಂಕುಳಂ || ೧೧೪

ವಚನ|| ಇಂತು ಪನ್ನತಿಕೆಯಿಂ ಪಲವೇಂಟೆ ಯಾಡಿ ಕಾಡೊಡೆಯಂ ತೋಡಿಲ್ಲದ ತೊರೆವೇಂಟೆ ಯಾಡಲೆಳಸುತಿರಿಗೂಳಿ ಹಂಜರಗೂಳಿಡುಗಾಣಂ ಸೊಕ್ಕುಸಿಲ್ಕಿರಿಲ್ಕಿರುಗೊಳಿಪೆಗೊರ್ಳಿ ಕೊಡಂಬೆ ಯಿಡಿಗ್ಗಿರು ಗೆಟ್ಟಿಗೆಯರೆಮುಡ್ಡ ಸೂಸುಗೂಳ್ಗಳೆಂಬಿವಂ ಕೊಂಡು ಪೊಳ್ತಿಂ ಸಂನೆಯಂ ಜಾತಿಯಂ ಜವಂ ಗೆಡದರಿವ ಬಿನ್ನಣಂ ಬಡೆದ ಬೇಡರೊಡವರೆ ನೀಡುಂ ಪರಿವ ಪೆದ್ದೊರ್ರೆ ಗೈದಿ ಸಾದ್ದುರ್ ಪೆದ್ದರ್ಪ್ಪಮ ನೇರಿ ನಿಂದು ನಿರೀಕ್ಷಿಸಿ ತಾಣಮರಿದು ಪರೀಕ್ಷಿಸಿ ಸೂಸುಗೂಳಂ ತಳಿದು ತಳ್ವದೆ ಬರ್ಪ್ಪ ಬರವುನರಿದು ಮೂಸಿದೊಡೆ ನಾಸಾಗ್ರಮ ನುಚ್ಚುರ್ವ, ನಕ್ಕಿದೊಡೆನಾಲಿಗೆ ಯೊಳ್ನಡುವ, ಪೊಳೆದೊಡೆ ಬೆನ್ನೊಳ್ಮೂಡು ಪೊರಸಿದೊಡೆ ಬರಿಯಂ ಕೊರೆವುಗುಳ್ದೊಡೆ ಕೀಳ್ದಾಳಿಗೆಯೊ ಳ್ನಾಂಟುವ ಪಲವುಂ ಬಗೆಯ ಗಾಣಂಗಳಂ ಬಿಚ್ಚುರ್ವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ ಬೀಸರ್ಕಂ ಬೊಗದೆ ಬಿಚ್ಚಿರ್ ಬೀಸಿದಾಗಳ್—

ವೃ|| ಗರಿಮೀ ನ್ನೀಗುಡಿ ಗೆಂಡೆಮೀ ನ್ನವಳವಾಯಂ ಬಾಳೆಮೀ ನ್ನಾವುಮೀ |
ನ್ನಿರುಮೀ ನ್ಕಂಗರಿಯಚ್ಚೆ ಕುಚ್ಚಲತಿಗಂ ಕಾಗೊಡೆ ಕೆಂಕಲ್ಸರಿ ||
ಲ್ಕೊರವಂಚೇಳ್ಪಸಿಗಂ ಸಸಿಲ್ಗೊದಳೆ ಮೀನ್ಪೊಂಬೊವ್ವುಮೀನ್ಪಂದಿ ಮೀ ||
ನ್ನೆರೆಮೀನ್ಪಗ್ಗಡೆ ಬಣ್ಣಮೀಸನಿಸಿವೆಲ್ಲಂ ಬಿಳ್ದುವಾ ಶಾಣದೊಳ್ || ೧೧೫

ವಚನ|| ಅಂತವೆಲ್ಲಮಂ ಗುದಿಗೈದು ಕಾಳಮೇಘಂ ತಡಿಗೈದಿ ನಿಂದಿರ್ಪಿನ ಮಾಗ ಳೊಂದುದ್ದಂಡ ಪ್ರಚಂಡ ಕಂಠೀರವಂ ಗೆಂಟಿನೊಳ್ವಿಲಯಾಗ್ನಿ ಮೈವೆತ್ತುದೆಂಬಗುರ್ವ್ವಿನೊಳ ಕೊಂಡು ಗರ್ಜಿಸಿ ನಿಂದು—

ವೃ|| ಘನನಿನದಕ್ಕಿದರ್ಗ್ಗಳ ಮೆನಿಪ್ಪ ವೊಲಿಂದ್ರಗಜೇಂದ್ರ ಮಳ್ಕೆ ಗ |
ರ್ಜನೆ ಗುಡುತೆಳ್ದು ಲಂಘಿಸಿ ವಿಜೃಂಭಿಸಿ ಕುಂಭಿಶಿರಃ ಪ್ರದೇಶಮಂ ||
ಕೊನೆಯುಗುರಿಂದೆ ಸೀಳ್ದು ರುಧಿರೋನ್ಮದ ಕೃನ್ಮಧುವೀಂಟಿ ಗೆಂಟಿನೊ |
ಳ್ಮೊನೆದು ಕುಸುಂಗಿ ಕುಪ್ಪಳಿಸಿ ಕಣ್ಗಿಡಿ ಸಾಲಿಡೆ ನೋಡಿ ಬೇಡರಂ ||೧೧೬

ನೆಗೆದುದು ಪಾಯ್ದು ಪೊಯ್ದುದೊಡಲಿಕ್ಕಡಿಯಾಗಿರೆ ಖಂಡದಿಂಡೆಯಂ |
ತೆಗೆತೆಗೆದಿಟ್ಟು ದೊಟ್ಟಜೆಯಿ ನೊಟ್ಟಿದು ದಟ್ಟಿಯ ನಟ್ಟಿ ಗಂಡು ಗೊಂ ||
ಡುಗಿ ಬಗಿಮಾಡಿ ಮಾಮ್ರಲೆತ ವೀರಕಿರಾತರ ನೊಕ್ಕಲಿಕ್ಕಿ ಧಾ |
ತ್ರಿಗೆ ಪೊಸರಕ್ತ ಪೂರಮೆಸಗಿತ್ತದು ಕೇಸರಿ ಕೇಳ್ಧರಾಧಿಪಾ || ೧೧೭

ವಚನ|| ಅಗಲ್—

ವೃ|| ನಡುಗುವ ಕಾಲ್ಗಳುಬ್ಬರಿಸಿ ಸೂಸುವ ಸುಯ್ಯೆಮರೇರಿ ದಾನನಂ |
ಪೊಡರ್ವೆರ್ದೆ ಪೊಯ್ವಕಿಬ್ಬರಿ ಸಿಡುಂಬಿನ ಮುಳ್ಗಳ ಗಾಯ ಮಂಗದೊಳ್||
ಬಿಡೆ ಬೆದರ್ಕ್ಷಿ ಚೆಚ್ಚರವ ಮನಸ್ಸ್ಥಿತಿ ತೋರೆ ಪುಳಿಂದ ನೈದುತೆ |
ನ್ಮೊಡೆಯನ ಮುಂದೆ ಕೈಮುಗಿದು ನಿಂದವನೆಂದ ನಿದಂಧರಾಧಿಪಾ || ೧೧೮

ಎಲೆಶಬರೇಶ ನೋಡಿದೆ ಯಿದೇಳ್ತರುತಿರ್ದ್ದಪುದಿತ್ತ ನಿನ್ನ ಪೆ |
ರ್ಬ್ಬಲ ಮುಡಿದಸ್ಥಿಯಿಂ ಸುರಿವ ರೋಹಿತದಿಂ ಕಡಿವೋದ ಕಾಲ್ಗಳಿಂ ||
ತೊಲಗಿದ ತೋಳ್ಗಳಿಂ ಪರಿದ ಪೆರ್ಗ್ಗರುಳಿಂ ಪೊರವಟ್ಟ ಖಂಡದಿಂ |
ವಿಲಯದ ಮೃತ್ಯುವಂತೆ ತವೆಕೊಂದುದು ತಿಂದುದುದೊಂ ದಿಭಾಂತಕಂ||೧೧೯

ವಚನ|| ಎಂದ ಕಿರಾತ ದೂತೋಕ್ತಿಯಂ ಕೇಳ್ದು—

ವೃ|| ಘನಕೋಪಾಟೋಪಮಂ ತಾಳ್ದರುಣತರ ಶರತ್ತಾರನೇತ್ರಂ ತತಸ್ಪಂ |
ದನಯುಕ್ತೋಷ್ಠಂ ಪ್ರಬದ್ಧ ಭ್ರುಕುಟಿನಿಟಿಲ ಸುತ್ಕೀರ್ಣಘರ್ಮಾಂಬು ಭೀಷ್ಮಾ
ನನ ಸುದ್ಯತ್ಖಡ್ಗ ಮೊಂದಂ ಪಿಡಿದು ಜಡಿದದೇಂ ಧೀರನೋ ಧೀವರಂ ಭೋಂ|
ಕನೆ ಬಂದಂ ದೇವ ಕೇಳ್ಭೀಕರ ಕರಿರಿಪು ವಿಪ್ರ್ವಲ್ಲಿಗಾ ಕಾಳಮೇಘಂ || ೧೨೦

ವಚನ|| ಅಂತು ಪರಿತ್ರಾಸ ನಿರಾತ್ಯ ಕಿರಾತ ಸಂಜಾತವೊಡವರೆ ಪಂಸತಿಕೆಯಿಂ ಬಪ್ಪರ್ಗಳ್ಮುಂದೆ ಮುಂದ್ಮೆಸಿ ಮುಡುಗಟ್ಟಿದ ನೆತ್ತರ ಪೆರ್ಪೊವಲಿಂ ಕುಪ್ಪಳಿಸಿ ಗುಪ್ಪೆಗೊಂಡ ದೊಂಡೆ ಗರುಳ್ಗಳಿಂ ಪಿಂದು ಗೊಂಡು ಜೊಂಡೇಳ್ದ ಕಾಳ್ಮಿದುಳ ಕೋಳ್ಗಿಸಿಂ ದರೆದೆರೆದ ಕಣ್ಗಳಿಂ ಕೆದರ್ದ ತಲೆನವಿರಿಂದೆ ಜಗಿಜಗಿಯಾದ ಪೊಡೆಯಿಂ ದರೆ ಗಚ್ಚಿರ್ದ ನಾಲಗೆಯಿಂ ಕೆಲದೊಳೊಕ್ಕ ಬಿಲ್ಲರಲ್ಗಳಿಂ ಕಡಿವಡೆದ ತೋಳ್ಗಳಿಂದುಡಿದ ನಡುಗಳಿಂ ಜರಿದ ಮುಡುಪಿಂ ಪಾಸಿ ಪರಪಿದಂತೆ ಬಿಳ್ದ ಪೆರ್ಣಂಗಳಿಂ ದತಿಭಯಾವಹವಾದ ಬಟ್ಟೆಯಂ ನಿಟ್ಟಿಸುತ್ತಿರೆ ತೊಟ್ಟನೆ ಕಟ್ಟಿದಿರೊಳತಿಭೀಕರಾಕೃತಿವೆತ್ತು ಮುರಿದೇಳ್ದುರಿಗೆದರ್ವ ಕಣ್ಗಳಿಂ ನುಂಗುವಂತೆ ನಿರೀಕ್ಷಿಸಿ ಸಂಧ್ಯಾರುಣಿತ ಪಶ್ಚಿಮಾಚಲ ಗುಹಾವಿವರದಂ ತಿಪ್ಪ ಬಾಯಂ ತೆರೆದು ಕಲ್ಪಾಂತಕಠೋರ ಘನಘನಧ್ವನಿಯು ನೇಳಿಪಂತೆ ಗಜರಿ ಗರ್ಜಿಸಿ ನಿಂದವ್ವಳಿಸ ಲುಜ್ಜುಗಿಪಾಗಳ್—

ಕಂ|| ನಡೆನಡೆ ಯಿದಿಚ್ಚ ದಿಶೆಚ್ಚ |
ಗ್ಗೊಡೆಯ ದಿರೊಗ್ಗೊಡೆಯ ದಿಕ್ಕರಂ ಕರವಾಳಿಂ ||
ಪೊಡೆಪೊಡೆ ಯೆನುತ್ತೆ ನಾಲ್ಕುಂ |
ಕಡೆಯೊಳ್ಕವಿದ ಕ್ಕಿರಾತರ ವನೀನಾಥಾ || ೧೨೧

ವಚನ|| ಅಗಳ್ವಿಲಯಾಗ್ನಿ ಮೈವೆತ್ತಂತೆ ಮಾಮುಸಕಂ ಮುಸಗಿ—

ವೃ|| ಜಲಮಂ ಪೊಕ್ಕ ಲುಲಾಯಮಂ ಪರಿದು ಪುತ್ತೇರಿರ್ದ ಭಲ್ಲೂಕಮಂ|
ಸೆಲೆಪುಲ್ಗಚ್ಚಿರ್ದ ಪುಲ್ಲೆಯಂ ಕುಜದ ಕೊಂಬಂ ಸಾರ್ದ ಸತ್ವಕ್ಷಿ ಸಂ ||
ಕುಲಮಂ ಕುಂದದೆ ಕೊಂದಪುಕ್ಕಿದೆ ಫಲಂ ನೋಡೆಂಬವೋಲ್ಬೇಡರಂ |
ಬಲಿಗೊಂಡತ್ತು ಬಲಾಹಕಧ್ವನಿಮಿಳತ್ಕಂಠೋಗ್ರ ಕಂಠೀರವಂ || ೧೨೨

ವಚನ|| ಅಂತದಂ ಕಂಡು ಕಾಲಮೇಘಂ ಪ್ರಳಯಕಾಲ ಮೇಘದಂತೆ ಗಜರಿ ಗರ್ಜಿಸಿ ಕೆರಳ್ದು ಕಿಡಿಕಿಡಿವೋಗಿ ನೋಡಿ—

ವೃ|| ಜಡಿದಸಿಯಂ ಝಳುಂಪಿಸಿ ಕರಾಗ್ರದೊಳೆತ್ತಿ ಕಡಂಗಿ ಸಾರ್ದು ಬೊ |
ಬ್ಬಿಡುತೆ ಪಳಂಚಿ ದಂಡೆಗುಡುತಾರೆವುಳಿಂದರ ಮುಂದಸತ್ವದಿಂ ||
ಕೆಡೆಕೆಡೆಯೆಂದು ಪೊಯ್ದನದ ನಿಕ್ಕಡಿಯಾಗಿರೆ ನಿನ್ನಭೃತ್ಯನಾ |
ಕಡುಗಲಿ ಕಾಳಮೇಘ ನವನೀಶ್ವರಶೇಖರ ರಾಜಶೇಖರಾ || ೧೨೩

ವಚನ || ಅಂತು ಪೊಯ್ದನಂತರಂ—

ವೃ|| ಸೀಳ್ದು ತದೀಯಮಸ್ತಕದ ಮಾಣಿಕಮಂ ನಡೆ ನೋಡಿ ಕೌತುಕಂ |
ದಾಳ್ದಿದನರ್ಘ್ಯಮೆಂದು ಬಗೆಯುತ್ತಿರೆ ಬಂದುದಿದೆಮ್ಮ ದೇಶದಿಂ ||
ಕೇಳ್ದಿಟ ಮೆಮ್ಮದೀಮಣಿಯೆನುತ್ತಿರದೈದಿ ತೊಡಂಕಿ ಸಿಂಹಳ |
ಕ್ಕಾಳ್ದನ ಭಂಟರುರ್ವಿ ಮಿಗೆ ಕಾಳಗಮಂ ತೆಗೆದರ್ಧರಾಧಿಪಾ || ೧೨೪

ವಚನ|| ಅಗಳ್—

ವೃ|| ಕರೆದೆಸ್ನಂ ಕಲಿಕಾಲಮೇಘಸಲೆ ನೀಂ ಪೋಗಲ್ಲಿಗಾ ರಾಜಶೇ |
ಖರನೆಮ್ಮಾಳ್ದನವಂಗೆ ಕಾಣ್ಕೆಗುಡು ಕೊಳ್ಳೆಂದಿತ್ತು ತದ್ರತ್ನಮಂ ||
ಭರದಿಂದಂ ಕಳಿಪುತ್ತೆ ಮತ್ತವರೊಳಿನ್ನುಂ ಕಾದುತಿರ್ದಪ್ಪ ನೀ |
ಪರಿಯಂ ನಿಮ್ಮಡಿಗಿಂದು ಬಿನ್ನವಿಸಲಾಂ ಬಂದೆಂ ನೃಪಾಲೋತ್ತಮಾ|| ೧೨೫

ವಚನ|| ಮತ್ತಮಾ ಸಿಂಹಳಂ—

ಕಂ|| ಈಮಣಿಗೋರಗೆಯೆನಿಪಮ |
ಹಾಮಣಿಯೊಳವೆಂಬ ಬಿಂಕದಿಂ ದಂಬುಧಿಯೊಳ್ ||
ಶ್ರೀಮಹಿಮೆಯಾಂತೆ ನಾಸೆಂ |
ಬೀಮದದಿಂ ದೆನಗೆ ದೊರೆಯದಾ ದ್ದೊರೆಯೆಂಬಂ ||೧೨೬

ವಚನ|| ಎಂದು ಸಿದ್ಧರ್ ಮತ್ತಮಿರದೆ—

ಕಂ|| ದೇವರಡಿಗಂಡು ಕಪ್ಪಮ |
ನೀವಚ್ಚರ್ಪ್ಪನ್ನ ದೇಶದರಸ ವ್ವರ್ಸುರ ||
ತ್ನಾವಳಿಯ ನತುಳಸಿಂಹಳ |
ನೇವೇಳ್ವೆಂ ಗಣಿಸದಾಗಳುಂ ಬೆರೆತಿಪ್ಪರ್ಂ || ೧೨೭

ವಚನ|| ಎನೆ ನಿರೀಕ್ಷಿಪರಸಂಗೆ ದೇವಾ ಸಿಂಹಳೇಂದ್ರನೆಂದುಂ ಕಪ್ಪಮಿತ್ತನಲ್ಲೆಂದು ಗಣಕಗಣ ಮಣಿಯರಂ ನಿಂದು ಕೈಮುಗಿದು ಪೇಳೆ ಕೇಳ್ದು ಕೆರಳ್ದು—

ಕಂ|| ಸೊಕ್ಕೊರ್ಗೆದಬ್ಧಿಯಮಧ್ಯದೊ |
ಳುಕ್ಕಿರ್ದ ಸಿಂಹಳನ ಮದಕಿದೌಷಧ ಮೆನಿಕುಂ ||
ತೋಕ್ಕೆರ್ವಡೆದೆಸೆವ ಬಾಳುಪೊ |
ಣಕ್ಕೆರ್ಗೆ ಪೊಡಯಿಪುದು ಭೇರಿಯಂ ಭರದಿಂದಂ || ೧೨೮

ವಚನ|| ಎಂದು ನಿಜಮಂತ್ರಿವದನಮಂ ನೋಡಿ ಮತ್ತಮಿಂತೆಂದಂ—

ಕಂ|| ಜಳನಿಧಿಯೊಳಿಪ್ಪರ್ನೆಂಬ |
ಗ್ಗಳಿಕೆಯ ದಂತಿಕ್ಕೆರ್ ಮಿಕ್ಕಲೋಕಾಂತರದೊಳ್ ||
ಬಳವೆರಸಿ ಸಿಂದೊಡಂ ತ |
ನ್ನಳವಂ ಬರಿಕೈದು ತೋರ್ಪ್ಪರ್ ಸೆನ್ನಯ ಬಲವಂ || ೧೨೯

ವೃ|| ಇಂತೆನೆ ದೇವ ದೇವಪತಿ ಮುಖ್ಯದಿಶಾಧಿಪ ರಳ್ಕುತಿರ್ಪ್ಪರೋ |
ರಂತೆ ಭವತ್ಪ್ರತಾಪ ವಿಭವಕ್ಕೆನೆ ಗಣ್ಯನೆ ಸಿಂಹಳಂ ಮಹಾ ||
ದಂತಿಗಳಂ ಬೆಗಳ್ಗೊಳಿಪ ಸಿಂಹಕೆ ಲಕ್ಷ್ಯಮೆ ಪುಲ್ಮಿಗಂ ಮಹೀ |
ಕಾಂತವರೇಣ್ಯ ಮಾಳ್ಪುದೆನ ಗೀಬೆಸನಂ ಸೆರೆಗಟ್ಟಿ ತಂದಪೆಂ || ೧೩೦

ವಚನ|| ಎಂದು ನುಡಿದ ವಿತವಚನ ಕುಮಾರನ ವದನಾರವಿಂದಮಂ ನೋಡಿ—

ಕಂ|| ವಿತತ ಚತುರಂಗಬಳ ಸಂ |
ಯುತ ನತಿಸಾಹಸಿ ಸರೋಧಿ ಮಧ್ಯಸ್ಥಿತನು ||
ದ್ಧತ ನಾ ಸಿಂಹಳನಲ್ಲದೊ |
ಡಿತರರವೋಲ್ಕಪ್ಪ ಮಿತ್ರದೇಂ ಸೇವಿಸನೇ || ೧೩೧

ವಚನ|| ಇಂತೌದ್ಧತ್ಯ ಸಾಹಸ ಸಮಗ್ರನಾಗಿರ್ಪ್ಪ ನಾದೊಡಂ—

ಕಂ|| ನಿಶ್ಚಿಂತೀರದ ಕಜ್ಜಮ |
ದಿನ್ನೆನಗೊಂದುಂಟೆ ನಿಜದಿ ನಂತಾದೊಡಮೇ ||
ನೆನ್ನಯ ಭುಜಕಂಡೂಹೃತಿ |
ಯಂ ನೆಗಳ್ವೆಂ ತೋರ್ಪ್ಪೆ ನೆನ್ನ ಸಾಹಸ ದಿರವಂ || ೧೩೨

ವೃ||ಎಂದಲ್ಲಿಂದೇಳ್ದ ಮಾತ್ಯಂಬೆರಸು, ಭರದಿನೈತಂದು ತದ್ರತ್ನಮಂ ತಾಂ |
ಮುಂದಿಟ್ಟಾದ್ಯಂತ ಕಾರ್ಯಸ್ಥಿತಿಯ ನೊಸೆದು ವಿಜ್ಞಾಪನಂ ಗೈದಮಂದಾ|
ನಂದಂ ಬೆತ್ತಂಘ್ರಿಕಂಜಕ್ಕೆರಗಿ ಪರಕೆಯಂ ಕೊಂಡು ಚೋಳೇಂದ್ರನಿಂ ತಾ |
ಳ್ದಂ ದೊಲ್ದಾದೇಶಮಂ ತದ್ರಣಕೆ ತೆರಳಲುದ್ಯುಕ್ತನಾದಂ ಕುಮಾರಂ|| ೧೩೩

ಮಾತೆ ಮಹೀಧ್ರಜಾತೆ ಮಹನೀಯ ಸುರಾಸುರಸೇವ್ಯಪಾದಕಂ |
ಜಾತೆ ಕಳಾಪ್ರಣೀತೆ ಕಮನೀಯಕಟಾಕ್ಷ ಸುರಕ್ಷಿತಾಮರ ||
ವ್ರಾತೆ ರಸಾಧಿಭೂತೆ ರಮಣೀಯ ರಮಾರತಿ ಮುಖ್ಯಶಕ್ತಿವಿ |
ಖ್ಯಾತೆ ವಿನೀತೆ ಭೂತಪತಿವಲ್ಲಭೆ ಪಾಲಿಪುದೆನ್ನ ನಂಬಿಕೇ || ೧೩೪

ಗದ್ಯ|| ಇದು ವಿನಮದ ಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿ
ವೃತ ಪರಶಿವ ಶ್ರೀಪಾದ ನಖ ಚಂದ್ರ, ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚ
ಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡ
ಕ್ಷರದೇವ ವಿರಚಿತ ಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್
ಕಿರಾತದೂತಾಗಮನ ಮೃಗಯಾವರ್ಣನಂ
ಪಂಚಮಾಶ್ವಾಸಂ
ಸಂಪೂರ್ಣಂ



# ಷಷ್ಠಾಶ್ವಾಸಂ

(ರಾಜಶೇಖರವಿಜಯ ವರ್ಣನಂ)

---

ಕಂ|| ಶ್ರೀನಗರಾಜಸುತಾಮಧು |
ರಾನನ ವಿಧುಬಿಂಬ ಚುಂಬನಸ್ವೀಕೃತಪಂ ||
ಚಾನನ ನಘಮದಗಜ ಪಂ |
ಚಾನನ ನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವ|| ಆಗಳಾರಾಜಶೇಖರ ನರೇಂದ್ರನ ವಿಜಯಯಾತ್ರೆಗೆ ಸಹಾಯಂ ಬಪ್ಪಂತೆ ಶರದಂ ಬರಲೊಡನೆ—

ವೃ|| ಮೊಳೆ ಮೋದತ್ತಬ್ಜಕಂದಂ ಕೊಳದೊಳೆ ಬೆಳೆದಾಳ್ದತ್ತಿಳಾಮಂಡಳಂಮಂ
ಡಳಿಗೊಂಡಾಗೆಳ್ಮರಾಳಾವಳಿ ನಗದಬಿಲದ್ವಾರದಿಂದೆಳ್ದುದಾಶಾ ||
ವಳಯಂ ತೋರ್ಪ್ಪಟ್ಟುದಬ್ಜಂ ಪಳಚನಲದುರ್ದಬ್ಜಾರಿಬಿಂಬಂ ಕಳಂಕಂ |
ಕಳಿದತ್ತೆಂಬಂತೆ ನೀಡುಂ ತೊಳಗಿತು ತಿಳಿದತ್ತಾಪಗಾ ವಾರಿಪೂರಂ || ೨

ವಚನ|| ಅಂತುಮಲ್ಲದೆಯುಂ—

ಕಂ|| ಅತಿನಿರ್ಮಲತೆಯನೀಮಲಿ |
ನತೆಯಾಂತ ಪಯೋದಮಾಲೆಗಾಗಿಪ ಶರದಂ ||
ವಿತತಸಿತದ್ಯುತಿತತಿರಂ |
ಜಿತ ಚಂದ್ರಂಗೀವನೆಂಬುದೊಂದಚ್ಚರಿಯೇ || ೩

ವೃ|| ಘನನಾಮಂ ಲೋಕದೊಳ್ಪೆರ್ಗೆಗೆಡಿಯೆನಿಸಿತ್ತಕ್ಕಟಾಕೆಮ್ಮನೀಮಿ|
ತ್ರನ ತೇಜಕ್ಕಡ್ಡಲಾದೆಂ ದ್ವಿಜಗತಿ ಗೆಡಿಸಿದ್ದೆಂ ಜಗತ್ಪಂಕಮೆನ್ನಿಂ ||
ಜನಿಸಿತ್ತಾ ರಾಜಹಂಸಾಹಿತ ನೆನಿಸಿದೆ ನೆಂದುಂ ಜಡಗರ್ಭಿಯಾನಾ |
ದೆನೆಸುತ್ತುಂ ಚಿಂತೆಯಿಂ ಬೆಳ್ಪಡದುರ್ದೆನೆ ತದಬ್ದಂ ಶರನ್ಮೇಘ ಮಿಕ್ಕುರ್ಗೆಂ ||೪

ವಚನ|| ಮತ್ತಂ—

ಕಂ|| ಅಡ್ಡಮಿರೆ ಕಾರಕಾಮ್ಮುಗಿ |
ಲೊಡ್ಡಣಮಿಳಿಗಿಳಿಯದೊತ್ತರಿಸಿ ಮಂದೈಸು ||
ತ್ತೊಡ್ಡಮೆನೆ ನಿಂದಚಂದ್ರಿಕೆ |
ಯೊಡ್ಡನೆ ಬೆಳ್ಮುಗಿಲದೇಂ ಮನಂಗೊಳಿಸಿದುದೋ || ೫

ಕಂ|| ಬಾಂಬೊಳೆ ಯೊಳಗಿದು ಮುಳಿಗಿ |
ರ್ದ್ದಂಬುದ ಮದು ತೊಲಗೆ ನೆಗೆದು ನಿಂದಂಚೆಯ ಪಿಂ ||
ಡೆಂಬಂತಿರೆ ಬೆಳ್ಮುಗಿಲದ |
ರಿಂ ಬೀಳ್ವತುಷಾರಮುದರ ಗರಿವನಿಯೆನಿಕುಂ || ೬

ವೃ|| ನಾಕಪುಂಡರೀಕ ಮಂಬರಾಪಗಾ ಪಯಸ್ಸ್ಥಿತಾ |
ನ್ನೋಕಪುಂಡರೀಕ ರಾಜಿಯಂ ಕರಾಗ್ರದಿಂದೆ ಕೀ |
ಳ್ತೀಕಕಾಲದಲ್ಲಿ ಚೆಲ್ಲಿದಂತೆವೋಲ್ಮೃಣಾಳನಾ |
ಳೀಕ ದಂಬ ಶುಭ್ರಮಭ್ರ ಮಭ್ರದೊಳ್ವಿರಾಜಿಕುಂ || ೭

ಹರಿದಶ್ವಾಶ್ವಾಸ್ಯದಿಂದಂ ಸುರಿದು ಪರೆದು ಪೆಂಪಾಳ್ದಫೇನೌಘಮೋನಿ |
ರ್ಜರ ಗಂಗಾತೀರ ರಾಜದ್ಧವಳ ವಿಪುಳ ಕಂಜಾತ ಸಂಜಾತಮೋ ವಿ ||
ಸ್ಫುರಿತಾನಂತ ಪ್ರಮುಕ್ತ ಪ್ರವಿತತ ಸಿತನಿರ್ಮೋಕಮೋ ವ್ಯೋಮಲಕ್ಷ್ಮೀ |
ಪರಿವೀತಶ್ವೇತಚೇಲಾಂಚಲಮೊ ಎನೆ ದಲಿಂಬಾಯ್ತು ಶುಭ್ರಾಭ್ರಜಾಲಂ|| ೮

ತಡಿವಿಡಿದೇಕ ಪಾದದೊಳೆ ನಿಂದರೆಗಣ್ಮುಗಿದಾತ್ಮಚಂಚುವಂ |
ನಿಡುಗೊರಲಿಂ ಮರಲ್ಚಿ ನಿಜಪಕ್ಷದೊಳೊಯ್ಯನೆ ಸಾರ್ಚಿ ಮೌನಮಂ ||
ಪಿಡಿದೆಡೆಗೈದಿ ದಂಬುಚರಮಂ ಜವದಿಂ ತವೆ ನುಂಗಿ ಸಾರ್ದು ಸಾ |
ಲ್ವಿಡಿ ದೆಡೆಗೊಂಡನೇಕ ಬಕಪಙ್ಕ್ತಿಗಳಿಂ ಕೆರೆ ತಳ್ತು ರಂಜಿಕುಂ || ೯

ಪರಿದೈತಂದರಸಂಚೆಯಂ ಕರೆದು ಭೃಂಗೀನಾದದಿಂದಿತ್ತು ಗಂ |
ಧರಜಃಪೂರ್ಣ ಮರಂದ ದರ್ಘ್ಯಮನ ಮರ್ಚ್ಯತ್ತಂಬುರುಟ್ಪೀಠಮಂ ||
ಮರುದಾನೀತ ದಳಾಂಬರಂ ಬೊದಿಸುಣಲ್ಕಿತ್ತಬ್ಜ ಬೀಜಂಗಳಂ |
ಶರದಂಭೋಜಿನಿ ಮಾಡಿದಳ್ದ್ವಿಜವರಂಗಾತಿಥ್ಯಸತ್ಕಾರಮಂ || ೧೦

ವಚನ|| ಇಂತೊಗೆತಂದ ಶರದೃತುವಿನೊಳಾ ಕುಮಾರಂ ವಿಜಯ ಯಾತ್ರೆಗೆ ಪೋಗಲು ಜ್ಜುಗಿಸಿ ಪೊರಮಟ್ಟು ಪೊರಗಿಕ್ಕಿದ ಪಟ್ಟವಣೆಯ ನಳಂಕರಿಸಿ ಕುಳ್ಳಿರ್ದ್ದು ಮಾತ್ಯವದನಾರವಿಂದ ಮಂ ನಡೆನೋಡಿ ಸಮರ ಪ್ರಸ್ಥಾನಭೇರಿಯಂ ಪೊಡೆಯಿಸೆಂಬುದು ಮವಂ ತಂತ್ರಾಧ್ಯಕ್ಷನಪ್ಪ ಮೇಘನಾದನಂ ಬರಿಸಿ ಬೆಸೆಸುವುದು ಮವಂ ಬಂದು ಕನತ್ಕನಕ ಕೋಣಮಂ ಪಿಡಿದಡಸಿ ಪೊಡೆದಾಗಳ್—

ವೃ|| ಕಡೆಲೇಳುಂ ಕದಡೇಳ್ದು ತುಳ್ಕೆ ಫಣಿರಾಜಂ ಬಳ್ಕೆ ದಿಕ್ಪಾಲಕ |
ರ್ಸ್ಸಡೆಯಲ್ದಿಕ್ಕರಿ ವೃಂದಮುಳ್ಕೆ ಭಗಣರಿ ಪಾಯ್ದುಳ್ಕೆ ಭೂಭೃತ್ಕುಳಂ ||
ಕಡುಪಿಂ ಕಂಪಿಸೆ ಪದ್ಮಜಾಂಡ ಘಟಮಂ ತುಂಬಿತ್ತು ಕಲ್ಪಾಂತ ದು |
ಗ್ಗಡ ದಂಭೋದರವಂ ಬೊಲಿಂಬುವಡೆದಾ ಗಂಭೀರಭೇರೀರವಂ || ೧೧

ವಚನ ॥ ಅದಂ ಕೇಳ್ದು ಕಡುಸಡಗರಂ ಮಿಕ್ಕು ಮಾರಂಕಮಾವುತಂಗಿಕ್ಕಿದ ಬಿರುದಿನ ತೊಡರ್ಝುಣಝುಣಿಸಲೇಳ್ದು ಸಪ್ತಮದಾವಸ್ಥೆಯಿಂ ಮುಂದುಗಾಣದೆ ಬಲ್ಗಂಬಮಂ ಮುಱಿದು ನಿಗಳಮಂ ಪಱಿದು ನಿಟ್ಟೋಟದಿಂ ಬೀದಿವಱಿದಾರೆಕಾರರ ನರೆಯುಟ್ಟ ಕೆಂಗಣ್ಣಸಗಿ ಕೇರ್ಗಳಂ ನುರ್ಗ್ಗಿ ಸಿಲ್ಕಿದರಂ ಸೀಳ್ದು ಕಂಡರಂ ಕಾಲ್ಗೆಡಿಸಿ ಪೊಡೆದು ಕಡಂಗಿ ಕಾಯ್ಪೇಱಿ ದಿಕ್ಕುಂಭಿಗಳಳ್ಕೆ ಬೃಂಹಿತಂಗೈದಂಗಡಿಗಳನಣೆದು ಪೊಯ್ದು ಮಾಮುಸಕಂ ಮುಸಗಿ ಕೋಲಾಹಲಮ ನೆಸಗಿ ಬಾಳೆಮೀನಂತೆ ಭಱಿಕಯ್ಯ ನೆಳಲೊಳ್ಪರಿವ ಕುಸಿದಿಟ್ಟ ಚಕ್ರದಂತೆ ಕುನುಂಗಿ ಪಱಿವ ಸುಟ್ಟುರೆಗಾಳಿಯಂತೆ ಸುಳಿಸುಳಿದು ಪಱಿವ ತೋರಣದೊಳ್ನುಸುಳ್ವಂತೆ ತಲೆದರ್ಗ್ಗಿ ಪಱಿವ ಕಳಕಳಮ ನಾಲಿಸುತಡ್ಡಮಱಿಯೊಳಾಂತು ನಿಂದಿದಿರ್ಚ್ಚಿ ಪಱಿವೊಟ್ಟಜೆಯಿಂ ಸಿಲ್ಕಿದರಂ ಪಿಡಿವ ಜಡಿವ ಜಾಡಿಸುವ ತುಡುಂಕಿ ತೆಗೆವ ತೊಡಂಕಿಪಾಯ್ವ ಕಡಂಗಿ ಪೊಯ್ದೊತ್ತಿಯಿಳಿವುಷ ಪೊತ್ತು ಪಱಿವ ಸುತ್ತಿ ತೆಗೆವ ಮೆಟ್ಟಿ ಸೀಳ್ವ ಕಟ್ಟುಬ್ಬಟೆಯ ದುಷ್ಟಗಜಂಗಳಂ ಸರಿಸದೊಳ್ನಿಂದು ಸರಂದೋಱಿ ಸಂಮುಖಂಗೈದು ಗಜಾರಿ ಗರ್ಜನೆಯಿಂ ಗಜರಿ ಗರ್ಜಿಸಿ ನೆರೆದು ನೋಳ್ಪ ಪುರಜನಮಱಿದಱಿದೆನೆ ಸರಸರನೆ ಪಱಿದು ಬಱಿಕಯ್ಯಿಂ ಪಿಡಿದಡರ್ದ್ದು ಬಿದುವ ನಪ್ಪಳಿಸಿ ಚಪ್ಪರಿಸಿ ಕೂರಂಕುಶಮನಿಕ್ಕಿ ಸೆಳೆದೆಳೆ ದಂಗುಟದ ತುದಿಯಿಂ ಕರ್ಣಮೂಲಮನಣೆ ದಲೆದು ನೂಂಕಿ ಶಂಕೆಯಿಲ್ಲದೆ ಪಿಂಡಾನೆಗಳೊಂದುಗೂಡಿ ಶಿಕ್ಷೋಪಕರಣಂಬೆರಸು ಸುಳಿದೇರುವ ಸುತ್ತಂ ಮೆಟ್ಟಿಸುವ ವಿಸಟಂ ಬಱಿಯಿಪ ಡ್ಡತರದೊಳಿಕ್ಕುವ ಘಟ್ಟಮಱಿಯಿಪ ತೇರ್ಕೈಪ ಬೋಳ್ಕೈಸ ಜೋಹರದೊಳ್ಸೆರೆಗೈವ ಚೌಪಟದೇರಾಟದೊಳ್ದುರಂ ತೋರ್ಪ್ಪ ಕೈಗೊಲೆ ಬಾಯ್ಗೊಲೆ ಮೈಗೊಲೆ ಕಾಲ್ಗೊಲೆ ಕೋಳ್ಗೊಲೆಯಂ ಕಲಿಪ ಕಡುಬಿನ್ನಣಂ ಬಡೆದು ಕಟ್ಟಾಳ್ತನಂ ಬೆತ್ತಿಂತು ಗಜಾರೋಹಣ ಧುರೀಣ ರಾದಾಧೋರಣರ್ನೆರೆನೆರೆದು ಪಱಿಪಱಿದು ಬೇಱೆಬೇಱೆ ನಿಜಗಜಂಗಳಂ ಪಣ್ಣಿ ಕೈಗೈದು ಪೂರ್ವಾಸನಮನವಷ್ಟಂಭಿಸಿ ಸಂಭ್ರಮಂಮಿಗೆ ನೆರಪಿದಾಗಳ್ಕೋಡ ಮೊನೆಯೊಳ್ತಗುಳ್ಚಿದ ಸೂನಗಿಗತ್ತಿಯ ಕೊನೆಗೊಡಂಕೆ ಯೊಳ್ತೊನೆವ ಬಿಳಿಯ ಚಾಮರದ ಬಿದುಮೋಳ್ಬರೆದು ಬರ್ಚ್ಚಿಸಿದ ಸಿಂದೂರದ ಬರ್ಚ್ಚಣೆಯ ಪಣೆಮಾಸೆರೆ ನೆಲೆಯೊಳಮರ್ಚ್ಚಿ ರಚಿಸಿದ ತಮಾಲರೇಖೆಯ ತಲೆವಳಸಿ ನೆಲೆಗೊಳಿಸಿದ ಮಾಣಿಕ್ಯದ ತಲೆಮಾಲೆಯ ಪರಿಸರದೊಳೆಳಲೆ ವಿಟ್ಟಕನಕದರಳೆಲೆ ಮಾಲೆಯ ಕಟಿತಟದೊಳಿಳಿಪಿದಾಣಿ ಮುತ್ತಿನಚ್ಚುಕುಚ್ಚುಗಳ ಕನಕಘಂಟೆಗಳ್ಮೆಳಿರ್ವ ಕೊರಲ ಮಿಸುನಿಯ ತೊಂಗಲ್ವರಜಿಯ ಚಿನ್ನಮಣಿ ಪುದಿದ ಪಕ್ಕಘಂಟೆಯ ಬೆನ್ನೊಳೆತ್ತಿದ ಕದಳೀಸ್ತಂಭದ ಋಕ್ಷಚರ್ಮದ ಪಕ್ಷರಕ್ಷೆಯ ಮೇಲೆ ಪೊದೆವ ಬೀರಡೌಡೆಯ ಪಿಂಗಾಲೊಳೆಳಲ್ವ ಭಾರಿಸಂಕಲೆಯಝುಣಝುಣಿಪಪೊನ್ನಂದುಗೆಯವಿಳಾಸಮುಳವಡೆ ಬಳವೈರಿ ಯೊಳ್ಪಳಂಚಲೆಂದು ನೀಲಾಚಲಂಗಳಾಸ್ಲಲಿಟ್ಟುವೆಂಬ ಬಿಂಬಕಮನಂಕಿಸಿ ಕಣ್ಗೆವಂದ ಗಂಧಸಿಂಧುರ ಸಂಮೂಹದಿಂ ಮತ್ತಂ ಕಿಳಿರ್ವ ಗೋಳಿಗೆಯ ದನಿ ಕಿವಿವುಗದಮುನ್ನಂ ಮಂದುರದೊಳಂದಂ ಬಡೆದು ನಿಂದಬಲ್ಗೆಚ್ಚಿನ ಮುಂಡಿಗೆಯಂಮುಱಿದು ಪಿಂಗಾಲ್ಗೆ ತೊಡರ್ಚ್ಚಿದಗ್ಗದಗ್ಗರಣಿಯಂ ಭಟಭಟನೆ ಕೀಳ್ತು, ಕಿಳಿರ್ದ್ದು ಪಿಡಿಯಲೊಡರ್ಚ್ಚಿ ತಡೆದು ತೊಡಂಕಿ ತುಡುಂಕಿದ ಗೋವಳನಂ ಕೊಡಪಿ ಕೆಡಪಿ

ಕಡೆವಾಯ್ದು ನಡುವೀದಿಗೆ ಕಡುವೇಗದಿಂ ಪರಿತಂದು ನಿಂದು ನೆರೆದ ಜನಂ ಕಲ್ಲೊಳಿಟ್ಟ ಕವಡಿ
ಕೆಯ ರಾಶಿಯಂತೆ ಝಲ್ಲನೆ ಕೆದರೆ ಖರಖುರಾಗ್ರಘಾತಜಾತ ವಿತತಧರಾತಳ ರಜಃಪಟಲಂರವಿ
ಮಂಡಳಮನಂಡಲೆಯಲೆಂದು ಮುಸುಂಕೆವಿಸಟಂಬರಿವ ಸೂಕಳಾಶ್ವಂಗಳ ನಂಕಣಿಯಂಬಗೆಯ
ದೆ ಮುಂಕೊಂಡು ಶಂಕಿಸದೇರಿವೀರಿ ಬೀದಿಗೊಂಡು ಪರಿಯಿಪಾಗಳ್ಮುಂಗಾಲ್ಗಳಂ ನೆಗಪಿ ನಿ
ಲ್ವಪಿಂಗಾಲ್ಗಳಂ ಕೀಳ್ತು ದಾಂಟುವ ಪೊರಕಾಲ್ಗೊಳ್ವ ಮರಳಿ ಮೆಟ್ಟುವ ಬರಿವರಿವ ಸರಳಿಸಿ
ಪಾಯ್ವ ಚಪ್ಪರಿಸುತುಪ್ಪರಿಪ ವಿಡಿವ ಕಡೆಗಣಿಸಿ ಪಾರ್ವ ದುಂಡಿಪ ದಿಂಡುವಾಯ್ವ ಬವರಿವ
ರಿವ ಚಮ್ಮಟಿಗೆಗೆ ಚಳಿಯದ ಕಡಿಯಾಣಮುಂ ಕೈಕೊಳದಬಗೆಯುಂ ಬಗೆದಂತೆ ಕಂಡು ಮನ
ಮರಿದು ಮೈಯರಿದು ಪೊಲಂಬರಿದು ಪೊಳ್ತರಿದು ದನಿಯರಿದು ಪಶಿಯರಿದು ಬೋಳೈಸಿ ಹಜ್ಜೆ
ಗೊಳಿಸಿ ತೊಡೆಮಡದನಿಚಂಮುಟಿಗೆ ಗಳಿನೊಯ್ಯನೊಯ್ಯನೆ ಮೈವಳಿಗೆ ತಂದೊಡಂಬಡಿಸಿ ಕ
ಡಂಗಿ ನಡೆಯಿಪ ಪೊಳಯಿಪ ದುವ್ವಾಳಿಪ ಪೊಂಮುಡಿ ಪಿದಿರೇರಿವ ಪಡ್ಡಂಬರಿಯಿಪ ರಾಘವಾ
ಘೆಯೊಳ್ಸರಿಸಂ ಗೊಂಡೊಂದೆ ಮೆಯ್ಯೊಳ್ಸಳರಿದೇರುವ ಸುತ್ತೇರುವ ಬಿತ್ತರಂ ಬಡೆದ ವಾ
ಹಳಿತನದೊಳ್ನಲ್ನಿಳಿಕ್ಕೆವ ಶಾಲಿಹೋತ್ರನ ನಾಳಿಗೊಳ್ವ ಗೋಳಾಯ್ಲನೆರೆದು ಕನಕ್ಕನಕ ಕ
ವಚಮುಂ ತೊಟ್ಟು ಕಾಲ್ಗುಪ್ಪಸಮ ನಿಟ್ಟು ಸೀಸಕಮುಂ ಸಿಂಗರಿಸಿ ಬಾಹುರಕ್ಕೆಯ ನಾಂತು
ಸಾಂಬ್ರಾಣಿಯುಂ ಬಿಗಿದುಡಿಯೊಳ್ಪಂಜುರಿಗೆಯುಂ ಕಟ್ಟಿ ಗರಿಗಣೆಗಳ್ತುರುಗಿದ ಪೊನ್ನಬತ್ತ
ಳಿಕೆಯಂ ಬೆನ್ನೊಳ್ತಳೆದು ತರಕಸಮ ನೆಡವೆಗಲೊಳೊತ್ತಡಚ್ಚಿ ಪಂಚವಣ್ಣದ ಬಟ್ಟೆಯ ಬಿರುದಿ
ನ ಬೀರಗಚ್ಚೆಗಟ್ಟಿರ್ದ ಪಿರಯ ನೇಜೆಯ ಮನೋಜೆಯಿಂದೆತ್ತಿ ಪಿಡಿದು ಸಮರ ಸಮಯ ಸಮು
ಚಿತನೈಪಥ್ಯಂಬಡೆದಬ್ಬರಿಸಿ ಬೊಬ್ಬೆಗೊಟ್ಟೇರಿ ಸರಭಸಂ ಪರಿಯಿಪಾಗಳ್ಪೊನ್ನ ಕಡಿವಾಣದ
ರನ್ನದ ಮೊಗರಂಬದ ಕಿವಿಯ ಚಾಮರದ ಸುತ್ತುಜಲ್ಲರಿಯ ನೆತ್ತಿಯ ಬೆಳ್ಗರಿಯ ನೊಸಲಕನ್ನ
ಡಿಯ ರೇವಂತಮಾಲೆಯ ಗರ್ಗರದ ತರಜೆಗತ್ತರಿಯ ಪೊಕ್ಕರಳಘಂಟೆಯ ಪೊಂಬೆಸದ ಗುಬ್ಬಿ
ಯ ಪಾರಿವದ ಸಂಧ್ಯಾರಾಗದ ದೇವಾಂಗದ ನವರಂಗದ ಸುವರ್ಣಪಳಿಯ ಪಳದಿಯ ಜೋನೆ
ಳಿಯ ಪಲಬಗೆಯ ಪಲ್ಲಣದ ಪಕ್ಕಜಲ್ಲಿಯ ಪದ್ಮರಾಗದ ಪಾವುಡದ ಪರುಠವಣೆ ಪಸರಿಸೆ ಶರಧಿ
ಮಥನ ಸಮಯದೊಳ್ಸುಳುಘುಳಿಸಿ ಘುಳಿಲನೆ ಪರಿವ ಪೆರ್ದೆರೆಯ ದೊರೆಗೆವಂದುರಯದಿಂ ಪ
ರಿದು ನೆರೆದು ತರಂಗೊಂಡ ತುರಂಗ ಸಂಘಾತದಿಂ, ಮತ್ತಂ ಹೂಡಿದ ಹಯಂಗಳ ಜೋಡಿಸಿ
ದಚಕ್ರಂಗಳ ಮುಗಿಲೊಳ್ಪಳಂಚುವ ಪಳವಿಗೆಯ ಸುವರ್ಣದೊಡ್ಡವಲಗೆಯ ನೆಗಪಿ ನೆಟ್ಟ ಘನ
ತ್ರಿಶೂಲದ ಕೆಲದೊಳಿಳಿಸಿದಂಬಿನ ಪೊದೆಯ ಸಾಚ್ಚಿರ್ ನಿಲಿಸಿದ ಶರಾಸನದ ಕೀಳ್ಮೊಲೆಯೊಳಿ
ಪಿದ ಪಾರುಂಬಳೆಯ ಸಂಗಳಿಸಿದ ಮುಕುರತೋರಣದ ಮುಂಗಡೆಯೊಳಿಕ್ಕುವ ಧವಳ ಚಾಮ
ರದ ಮೇಲಿವೊರೆವ ಮೇಘಡಂಬರದ ರಣಕಬಳರಕ್ಕೆ ಮದ್ದುರ್ಗಳ್ಪಿದಿವ ಭರಣಿಗಳ ಪೊಸ ಸವಗ
ಸೀಸಕಂಗಳ ಪೆಟ್ಟಿಗಳ ಚಕ್ರಚೀತ್ಕೃತಿಗೆ ಜತಿಗುಡುವ ಮಾಲೆ ಘಂಟೆಯ ಸಾರಿನಿಂದ ಧೀರ
ಸಾರಥಿಯ ಸಂಮುಖದೊಳ್ಬಿರುದಿ ನುಗ್ಗಡಿಪ ವಂದಿವೃಂದದ ಸಂಭ್ರಮುಂ ಬೆರಸು ನಿಂದ ನಿಜ
ರಥಗಳಂ ಬೀರಸಿರಿಯ ಮಣಿಮಂಚಮ ನೇರುವಂತೇರಿ ಮಣಿಮಕುಟ ಕಿರಣಾವಿ ನರುಚಿಯ ನೊ

ತ್ತರಿಸೆ ಕಲಿತ ಕರ್ಣಾಭರಣ ಕಾಂತಿ ಕಪೋಲದೊಳ್ನರ್ತಿಸೆ ತೊಡೆದ ಯಕ್ಷಕರ್ದಮದ ಕಡು
ಗಂಪಿಂಗೆ ಮದಾಳಿ ಮೊರೆದೆರಗೆ ಕನಕ ಕವಚ ರುಚಿರ ರುಚಿಯೊಳ್ ಹಾರರುಚಿ ಮಲ್ಲಗಾಳಗ
ಮ ನೊಡರ್ಚೆ ಭುಜವಲ್ಲರಿಯ ಮಂಜರಿಯ ಸಿರಿಯಂ ಭುಜಕೀರ್ತಿತಳೆದು ತೆರಂಬೊಳೆಯೆ ಪೊಂ
ದೊಡರ ನುಣ್ಗದಿರ್ಚ್ಚರಣಾಂಬುಜಕ್ಕೆ ಪೊಸವಿಸಿಲಂ ಪಸರಿಸೆ ಪಸದನಸಿರಿ ಮಿಸುಗೆ ರಥಾರೋ
ಹಣ ನಿಪುಣತೆಯೊಳ್ಪಾರ್ಥನಂ ಪಳಿವ ಪಾರ್ಥಿವ ಸಮುದಯಂ ಮುದಂದಳದೇರಿ ಪನ್ನತಿಕೆ
ಯಿಂ ಪರಿಯಿಸಾಗಳಂ ಬುಧಿಯ ತರಂಗದ ಬೆಂಬಳಿಯೊಳ್ಪರಿವ ವಹಿತ್ರಂಗಳಂತೆ ತುರಂಗದ
ಬೆಂಬಳಿಯೊಳ್ಪರಿದು ಪಾಳಿವೆತ್ತ ರಥಂಗಳಿಂ ಮತ್ತಂ, ರಣರಂಗದೊಳಿದಿರ್ಚ್ಚಿದ ವೀರನಂ ಸ
ದೆದು ಬಿಸುಡುವ ತೊಡಂಕಿದ ವೀರನ ನಡಂಗಿ ಪೊಯ್ಯು ವಂಚಿಸಿ ಪಾಯ್ವ ವೀರನಂ ಸಂಚರಿ
ದೆರಗುವ ತೊಲಗದೆ ನಿಂದವೀರನಂ ತಲೆಗಡಿದುರುಳ್ಚುವ ಮೂದಳಿಪ ವೀರನಂತೌದಲೆಗಾ
ಣಿಪ ಮಾಯದ ವೀರನಂ ನೋಯಲಿರಿದು ಕೆಡಪುವ ಪರಾಕ್ರಮಕ್ಕೆ ಪಕ್ಕಾದ ಡವಣೆವರೆ
ಯ ಕಾಲಸರಪಳಿಯ ಬಾವುಳಿಯ ಬೊಂಬೆಯ ಭುಜಕೀರ್ತಿ ಮುಖದ ಬೀರಜೀಗಟೆಯ ಬೆನ್ನ
ಚವುರದ ಪಳದಿಯ ಸೀಗುರಿಯ ಪಗಲಕ್ಕೆದೀವಿಗೆಯ ವಜ್ರದಂಕುಶದ ವಿಜಯ ಪತಾಕೆಯ ಪು
ಲಿಯಚರ್ಮದ ಪಲುಬಿಯ ಗರಿಯ ತೋಳಕಚ್ಚೆಯ ತೊಂಗಲ್ಗಂಟೆಯ ಜೋಡುಶಂಖದ ಜಗ
ಜಂಪಿನಸತ್ತಿಗೆಯ ಪಲಬಿರುದುಗಳ್ನೆಗಳ್ತವಡೆಯೆ ಘುಡುಘುಡಿಸಿ ಜಡಿದು ಪಿಡಿದಕರವಾಳ ಕಕ್ಕ
ಡೆಯ ಸಬಳದುಲ್ಬಣದ ಕುಂತದ ಕೌಕ್ಷೇಯಕ ದಡ್ಡಣದ ಡಾಯುಧದ ಮುಸಲದ ಮುದ್ಗರ
ದ ಪರಶುವಿನಪಟ್ಟಿಯದ ಪಾಶದಂಕುಶದ ವಂಕಿಯ ಲೌಡಿಯ ಜವದಾಡೆಯ ಚಾಪದ ಚಕ್ರದ
ಶರದ ಶೂಲದ ಶಲ್ಲೆಹದ ಬಲ್ಲೆಹದ ಪೊಡರ್ಪು ಪಡಿತಳಿಸೆ ಸಿಡಿಲಪಡೆ ಕಾಲನ ಕಾಯ್ಪುಗೊಂಡು
ಕಟ್ಟಾಳ್ತನಂ ಬೆತ್ತಂತೆ ಮೆರೆದು ನೆರೆದ ಪದಾತಿವ್ಯೂಹದಿಂ ಮತ್ತಂ ಮೊರೆವ ಚಂಬಕವರೆಯ
ಮೊಳಗುವ ಪಳಹದಸೂಳ್ಪೆಪ ನಿಸ್ಸಾಳದ ಪೂರೈಪ ಶಂಖದ ಡಮಡಮಮೆಂಬ ಡಿಂಡಿಮದ ಭೋ
ರೆಂಬ ಕಹಳೆಯ ಬೊಬ್ಬಿಡುವ ಬೀರಮದ್ದಳೆಯ ಜತಿಗುಡುವ ಕಂಬಟದ ಬೆಂಬಳಿವಿಡಿದ ಬೊಂ
ಬುಳಿಯ ಗಿರ್ರೆಂಬ ಗಿರುಗಟೆಯ ನಿಬಿಡತರ ಪಟುರಟನ ದೊಡನೆ ಘುಡುಘುಡಿಪ ಸುಭಟ ಪಟ
ಲ ಕಳಕಳಂ ರಥಚಕ್ರಚಟುಲ ಚೀತ್ಕಾರಂ ಮತ್ತಮಾತಂಗ ಸಂಘಾತ ಸಮುದಿತ ಬೃಹ
ದ್ಬೃಂಹಿತಂ ತರಂಗತರಳ ತುರಂಗ ಸಂಘಹೇಷಾ ಸಮುದ್ಘೋಷಣಂ ಬೆರಸಿ ನಭೋಮಂಡ
ಳಮ ನಳ್ಳಿರಿ ದಳುರ್ಕ್ಕೆಗೊಳೆ ಸೇನಾರಜಂ ಬಾನಂ ಬಾಸಣಿಸೆ ಕರತಳದೊಳೊರೆಗಳೆದು
ಜಳುಂಪಿಸುವ ಕೈದುಗಳ ಬಳ್ಪಿವೆಳಗು ಬಳಸಿ ಬಳೆದು ಕವಲಿರಿದು ಕವಿಯೆ ನೀಳ್ದಪತಾಕೆಗಳ
ಪಸರಿಸಿದ ಪಟಪಟಲಂ ಪದ್ಮಸಖರುಚಿಯಂ ಪರಿಭವಿಸೆ ಪೆರ್ಮೆವೆತ್ತು ಕಲ್ಪಾಂತದೊಳ್ಕವಿತ
ರ್ಪ್ಪ ಕಡಲಂತೆ ಘುಳುಘುಳಿಸಿ ನೆನೆವಮನಕಂ ನೋಳ್ಪಕಣ್ಗಂ ನುತಿಪರಸನೆ ಗಸದಳಮೆನಿಸಿ
ಜಗದಗಲಕ್ಕೆ ತೆಕ್ಕನೆ ತೀವಿದ ಚತುರಂಗ ಬಲಮಂ ಚತುರ ಚಮೂಪತಿ ತೋರಿ ದಾಗಳದಂ
ಕಂಡು ಕೌತುಕಂ ಗೊಂಡಾಪುರ್ಪ ಮಿಗೆ ರಾಜಶೇಖರ ರಾಜೇಂದ್ರ ನೋಜೆಯಿಂ ದಾಜಿ
ಸನ್ನದ್ಧನಾಗಿ ಯಥೋಚಿತ ನೈಪಥ್ಯಂ ದಳೆದ ಮಾತ್ಯಸಮೇತಂ ಪಣ್ಣಿಬಂದಿಭೇಂದ್ರಮ ನೇರಿ

ಸಮರ ಸಮುಚಿತ ಸಂಭ್ರಮಂ ಮಿಗೆ ಶುಭಮುಹೂರ್ತದೊಳ್ಪೆಬಿರಕ್ಕೆ ನಡೆಸಪರ್ಾಗಳ್—

ವೃ॥ ಬಳವದ್ದೋರ್ದಂಡ ದಂಡಾಧಿಪ ಮಿತವಚನಾಮಾತ್ಯರೊಂದೊಂದಿಭೇಂ
ಗಳನಾಪ್ಪಿಂದೇರಿ ಪಿಂದೈತರೆ ರವಿಶಶಿವಂಶೋದ್ಭವ ಸ್ಸರ್ದ್ವರೂಥಂ॥ [ದ್ರಂ
ಗಳೊಳೊಪ್ಪಂಬೆತ್ತು ಸುತ್ತು ತ್ತೊಡವರೆ ಚತುರಂ ಚಾತುರಂಗಾನ್ವಿತಂ ಮಂ
ಜುಳ ಖಡ್ಗನ್ಯಸ್ತಹಸ್ತಂ ತಳರ್ದನಹಿತ ಸೇನಾಬ್ಜಿನೀ ಕುಂಜರೇಂದ್ರಂ ॥ ೧೨

ವಚನ॥ ಮತ್ತಂ—

ವೃ॥ ಖರಖಡ್ಗಪ್ರಾಂಶು ವಿದ್ಯುದ್ದ್ಯುತಿ ಪರಿಗೆಗಳಂಭೋಧರಂಗಳ್ಗ ಜಪ್ರೋ।
ತ್ಕರ ಶುಂಭದ್ಬ್ರಲಹಿತಂ ಪೆರ್ವೊಳಗು ಮಣಿರಥಶ್ರೇಣಿ ಶಕ್ರಾಯುಧಂ ಬಂ॥
ಧುರ ಮಾಗುತ್ತಿರ್ಪಿನಂ ತದ್ರಿಪು ಮದದವಮಂ ನಂದಿಸಲ್ಬರ್ಪ ಕಾರಂ।
ತಿರೆ ಬಂದಂ ಸತ್ಕದಂಬಪ್ರಹಿತ ಕರಕ ವಿಖ್ಯಾತನಾ ಭೂಮಿಪಾಲಂ॥ ೧೩

ವಚನ॥ ಅಂತು ಬರ್ಪಾಗಳ್—

ವೃ॥ಕಮಠೇಂದ್ರಂ ತೆಕ್ಕೆಗೊಂಡೊಂದಿದ ವಿನಮಿತ ಕಂಠಾಹಿಪಂ ಸಿಂಬಿಯೆಂಬಂ।
ತಮದೋರ್ಪ್ಪಂಬೆತ್ತು ಬೆನ್ನಲ್ಲಿರೆ ಬಲಭರಮಂ ತಾಳ್ದು ಬಾಳ್ದಂ ಪತಾಕಾ॥
ಕ್ರಮಿತಾಕಾಶಾಧ್ವದೊಳ್ತತ್ಪಟಪಟಲದೊಳಿಟ್ಟಾಸ್ಯಮಂ ತದ್ರಜಸ್ಸಂ।
ಕ್ರಮ ಜಾತಕ್ಲೇಶಮಂ ಮೇಣ್ಕಳಿದರನಿಮಿಷನ್ನಿರ್ನ್ನಿರ್ಮೇಷಾಕ್ಷಿಗಾಗಳ್ ॥

ಕಂ॥ ಬಳವಿಪುಳಕೇತು ತುಡುಕಿದೊ।
ಡಳರ್ದಿಳಿ ತಂದಿಂದು ತನ್ನೃಪಾಲನ ಮರೆಯಂ॥
ಗಳಿಲನೆ ಪುಗಲ್ಕೆ ಬಂದಂ।
ತೆಳಮುತ್ತಿನ ಮೇಘಡಂಬರಂ ಒಗೆಗೊಳಿಕುಂ॥ ೧೫

ವೃ॥ ಮದಜಳದಿಂದೆ ಮುಳ್ಗಿಪುದು ಭೂರಜಮಂ ಗಜರಾಜಿ ವಾಜಿ ಮ।
ತ್ತದನೆ ಖುರಾಗ್ರದಿಂ ನೆಗಪುಗುಂ ಧ್ವಜಪಙ್ಕ್ತಿ ಮುಸುಂಕಿ ಸೂರ್ಯನಂ॥
ಪದೆದೆಳಮುಬ್ಬಿರ್ ನುರ್ಬಿಪುದು ಮತ್ತದ ನಾಗಳೆ ಖಡ್ಗಕಾಂತಿ ಪೊ।
ಯ್ವುದು ಬಳಿಕೆಂದೊಡೇ ಪೊಗಳ್ವೆನಾ ಜಗತೀಶ ಜಯಪ್ರಯಾಣಮಂ॥೧೬

ರಿಪುದುರ್ಗಧ್ವಾಂತ ವಿಧ್ವಂಸನ ಖರಕರನೀ ಬಂದನೀ ಬಂದನನ್ಯೋ।
ರ್ವಿಪ ಗರ್ವೋರ್ವೀಧ್ರ ಸಂಭೇದನ ಪವಿಧರನೀ ಬಂದನೀ ಬಂದನು ದ್ರಿ॥
ಕ್ತಪರಕ್ಷ್ಮಾಪ ಪ್ರತಾಪೋತ್ಕದಳಕಳಭನೀ ಬಂದನೀ ಬಂದನೆಂದು।
ರ್ವಿ ಪಟುಪ್ರಧ್ವಾನಮಂ ಬೀರಿದುವು ಕಹಳೆಗಳ್ಮುಂದೆ ವಿಸ್ತಾರದಿಂದಂ॥ ೧೭

ವಚನ॥ ಮತ್ತಮಾಸೈನ್ಯ ಮುದ್ಯಾನದಂತೆ ಮಹಾಗಜಾತಿ ಶೋಭಿತಮುಂ ರಣಾಜಿರ
ದಂತೆ ಮನೋಗಮನ ವಾಜಿರಂಜಿತಮುಂ ಅಯೋಧ್ಯಾನಗರದಂತೆ ಸಮಾಶ್ರಿತ ಮಹಾದಶರಥ

ಸಮಂಚಿತಮುಂ ತ್ರಿವಿಕ್ರಮ ಮೂರ್ತಿಯಂತೆ ವಿಮಲಪದಾತಿ ಮಂಡಿತಮುಂ ಘನಾಗಮದಂತೆ ಜಿಷ್ಣುಚಾಪ ಶರಕರಕೋದಂಚಿತಮುಂ ನಭಸ್ಸ್ಥಳದಂತೆ ಸಮುಚ್ಚಾಮರ ಸಮಂಚಿತಮುಂ ಪೃಥುಳ ಪುರದಂತೆ ಮಿಳಿತಘಂಟಾ ಧ್ವನಿ ಕೇತನಾಲಂಬಿತಮುಂ ಸುರಲೋಕದಂತೆ ಮುಕ್ತಾಮಯಾತಪತ್ರಸ್ತಿಮಿತವಿ ಭವಮುಂ ಸಾಮ್ರಾಜ್ಯದಂತೆ ಸಮುತ್ಕೀರ್ಣಧರಾಪರಾಗಮುಂ ಶರಧಿತಟದಂತೆ ಮಹಾಪ್ರಭಾವ ನೀಪಾಲಂಕೃತಮುಮೆನಿಸಿ ಸಡಗರಿಸಿ ನಡೆತಪ್ಪ ಗಳ್—

ವೃ॥ ಇದಿರೊಳ್ಕಣ್ಗೊಪ್ಪಿತಬ್ಜೋದ್ಭವನ ಭವನಮಂ ಮುಟ್ಟೆ ತತ್ಸೃಷ್ಟಿಶಿಲ್ಪ।
ಕ್ಕಿದೆ ಪಾಳಿಸ್ತಂಭಮೆಂಬಂತ ಮರೆ ಸುರನದೀಸುಪ್ರವಾಹಂ ಪಟಂಬೋಲ್॥
ತುದಿಯೊಳ್ಭಾಸ್ವದ್ವಿಭಾಸ್ವ ಸ್ಮುಕುರಮಿರೆ ಸರಿನ್ನಿರ್ಝರಂ ಚಾಮರಂಬೋ।
ಲ್ಪದೆದೊಪ್ಪಂ ಬೆತ್ತು ತೋರುತ್ತಿರೆ ಮಣಿಕಟಕ ಖ್ಯಾತ ಧಾತ್ರೀಧರೇಂದ್ರಂ॥

ವೃ॥ ಕೆಲದೊಳೆ ತಳ್ತು ಮೇವಮುಗಿಲೊಪ್ಪುವ ಕರ್ಣತಳಂ ಗದದ್ವಯಂ।
ವಿಳಸಿತವಜ್ರಶೃಂಗೆ ಯುಗಮಂತದರಂತರದಲ್ಲಿ ಬಿಳ್ದ ನೆ॥
ಲ್ದೊಲೆವ ಮಹೋರಗಂ ಕರಮೊಸದುರ್ಗುವಂಬು ಮದಾಂಬು ಗುಂಡುಗ।
ಲ್ತಲೆ ತನಗಾಗೆ ತದ್ಗಿರಿ ಕರೀಂದ್ರಮದೊಪ್ಪಿತು ಕಣ್ಗೆ ಭೂಪನಾ॥ ೧೯

ವಚನ॥ ಆನಗದಗ್ರಪ್ರದೇಶದಲ್ಲಿ—

ವೃ॥ ವಿಳಸತ್ಸಂಧ್ಯಾರುಣಪ್ರದ್ಯುತಿಗೆ ರುಧಿರವಿ ಭ್ರಾಂತಿಯಿಂ ಬಗ್ಗವಿಂಡ।
ವ್ವಳಿಕುಂಬಾಯ್ಮಿಟ್ಟು ತತ್ಕಾಲ ದೊಳೊಗೆದ ಸರಕ್ತೋಡುವಂ ಬೇಡವೆಣ್ಕೈ॥
ದಳಮಂಕೊಂಡೊಯ್ದು ಕೊಯ್ಯಲ್ಕೆಳಸುವಳೆರವಣ್ಣೆಂದುಶೋಣಾಂಶು ಮಸ್ಮಂ।
ಡಳಮಂ ತಾಳೀಫಲಂ ಗೆತ್ತೆಳಿಸಿ ತುಡುಕುಗುಂ ಬಾಲಶಾಖಾಚರಂಗಳ್॥ ೨೦

ಕಂ॥ ಕಟಕಚರ ಕರಟಿ ನಿಜಕಟ।
ತಟ ಕಂಡೂಹರಣ ಸಮುದಪುಷ್ಕರದೆ ನಭ॥
ಸ್ಸ್ಫುಟ ಶಶಿಯ ನಬ್ಜವೆಂದು।
ತ್ಕಟಿಸಿ ತುಡುಂಕಿದೊಡೆ ತನ್ಮದಂ ಕರೆಯೆನಿಕುಂ॥ ೨೧
ಹರಿಮಣಿಯರೆ ಯೊಳ್ಮಿರುಗು।
ತ್ತಿರೆ ವೃತ್ತತೆ ವೆತ್ತದಿನಕರೋಪಲ ಮಿದು ಭಾ॥
ಸ್ಕರಬಿಂಬವೆಂದು ಬಂದಾ।
ಗರಣದ ಸಮಯದೆ ವಿಧುಂತುದಂ ಪಿಡಿವುದದಂ॥ ೨೨

ವೃ॥ ತಡಿಯೊಳ್ನೀಗೊರ್ಂಬ ಕಾಡಾನೆಗಳೆ ನಳಿಗಳಿಂ ತಳ್ತಕಂಜಾತದಿಂ ಜಾ।
ಣ್ಬಡೆದೆತ್ತಂ ಕೂಡಿ ಕೋಲಾಹಲಮು ನೆಸೆಪಚಕ್ರಾಳಿಯಿಂ ಪಾಳಿಯಿಂ ಮೆ॥
ಲ್ನಡೆದೋಪ್ಪುರ್ದ್ಯನ್ಮರಾಳಾವಳಿಯಿ ನೊಳಗೆಮೇಲ್ವಾಯ್ವಮತ್ಸ್ಯಂಗಳಿಂಪಂ।
ಪಿಡಿದೊಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವಪೊಚ್ಚಂ ಪೊದಳ್ದೊಪ್ಪದಿಂದಂ॥ ೨೩

ಕಂ|| ನೆಲವೆಣ್ಣ ಗಿರಿನಿತಂಬ |
ಸ್ಥಳಮದುತನಿವೆಚ್ಚರ್ ಕೀಳ್ತು ಕೆಲಸೂಸಿದ ಮೇ ||
ಖಳೆಯೆನಿಸಿ ಮೆರೆದುದಂಬೂ |
ಜ್ಜ್ವಲಕಣಮುಕ್ತಾಮನೋಜ್ಞಮಾಸದಿ ಪದಪಿಂ || ೨೪

ವಚನ|| ಮತ್ತಮಿತ್ತರಂ ಬಿಡಿಥೊತ್ತರಿಸಿ ಕ್ಕಿಬಳೆದ ಮರದುರುಗಲ್ಗಿರ ದೆರಗಿ ಮುರಿವಕರಿ
ಕರಕಂಜಿ ನೀರ್ವೊರ್ಕ್ಕು ನಡುಗುವಂತೆ ತೆರೆವೊಯ್ಲಿಂ ಕಂಪಿಪದರ ಪಡಿನೆಳಲ್ಪರಿರಂಜಿಸೆಯುಂ
ನಡುವಗೆಲೊಳ್ಕಡುನೀರ ನೊಳೊಡವೆರೆದ ಬಳಲ್ಕೆ ಗಳೆಯಲೆಳಸಿ ಗಳಿಲನೊಳಪೊಕ್ಕು ಮ್ಮೆದೊ
ಳೆದು ನಡುನೀರೊಳೊಗೆದ ನಳಿನಮಂ ಮುರಿಯಲೆಳಸಿ ಮಗುಳ್ದು ತೆರೆವಿಡಿದೀಸು ವೆಳೆವೇಡ
ತಿಯ ಗುರುತರ ನಿತಂಬ ಬಿಂಬಮಂ ಮುಳುಂಗಿತೋರ್ಪ ಕರಿಣಿಯ ಶಿರಂಗೆತ್ತು ತುಡುಂಕ
ಲೊಡರ್ಚ್ಚಿ ತಡಿಯೊಳ್ನಿಂದು ನಿಳ್ಕಿ ನೀಡಿದ ಮದಗಜದ ಕರದ ಮಾರ್ಪೊಳವು ನಿಜಸ್ವಚ್ಛ
ತೆಯಿಂ ರಸಾತಳದಹಿ ಕಣ್ಗೆ ಕಾಣಿಪಂತೆ ಕಮನೀಯಮಾಗೆಯುಂ ಪುಳಿನತಳದೊಳೆಣೆವಕ್ಕಿ
ಗಳುಡಿದುಡಿದು ಸೂಸಿದ ಮೃದು ಮೃಣಾಳ ನಾಳತಂತು ಜಾಲಕದೊಳೊಯ್ಯ ನೊಯ್ಯನೆ
ರಯ್ಯಮೆನೆ ನಡೆವೆಡೆಯೊಳಡಿ ತೊಡಂಕಿ ತಡೆಗೆಡೆವ ತರುಣ ಮರಾಳಂಗಳಂ ಕಂಡು ಗಹಗಹಿಸಿ
ನಗುವಂತೆ ಘುಳುಘುಳಿಸಿ ನೊರೆವಿಂಡು ಪಸರಿಸೆಯುಂ ಮಾಪೆರ್ವೊಳೆ ಪರಿಯುಡುಗದಸಿರಿಯ
ನೊಳಕೊಂಡು ಭೂಮಂಡಲಕ್ಕೆ ಮಂಡನಮೆನಿಸಿ ರಂಜಿಸಿಪ್ಪುದದರ ತೀರದಾ ಮಣಿಕಟಕನ
ಗೇಂದ್ರ ಕಟಕದೊಳ್ನರೇಂದ್ರ ಕಟಕಂ ಪಾಳಿಯಿಂ ಪಾಳೆಯಂ ಗೈದು—

ಕಂ|| ಚತುರಂಭೋನಿಧಿ ವರೆಗಂ |
ಚತುರಂಗಬಲಂ ಪೊದಳ್ದು ಬಿಡೆ ಪದ್ಮಜನೇಂ ||
ಚತುರನೊ ತೆದ್ಭಾರಮ ನಹಿ |
ಪತಿ ಪೊರಲೆಂದಂದೊಡರ್ಚ್ಚಿದಂ ಬಹುಶಿರಮಂ || ೨೫

ವಚನ|| ತನ್ಮಧ್ಯದೇಶದಲ್ಲಿ—

ಕಂ|| ಪಳದಿಯ ಪಚ್ಚೆಯ ಪಟ್ಟೆಯ |
ತಳಿರ್ವಟ್ಟೆಯ ಗುಡಿಗಳೊಡನೆ ಬಳಸಿರೆ ಕಣ್ಗೇಂ ||
ತೊಳಗಿದುದೊ ನಡುವೆ ತನ್ನೃಪ |
ತಿಳಕನ ನಲ್ಮೆಸುನಿ ವೆಸದ ಪೊಸಗೂಡಾರಂ || ೨೬

ವಚನ|| ಅಂತದರೊಳಾಕುಮಾರಂ ವಸಿಯಿಸಿರೆ ಯಿರೆ—

ಕಂ|| ಆಸೇನಾರಜದಿಂ ಪರಿ |
ಧೂಸರ ಮಾದುರು ನಿಜಾಂಗಮಂ ತೊಳೆಯಲ್ಕೆಂ ||
ದೋಸರಿಸದೆ ಪೊಕ್ಕಂತಿರೆ |
ವಾಸರ ಕರನಪರವಾರಿನಿಧಿಯೊಳ್ಪೊಕ್ಕಂ || ೨೭

ವಚನ|| ಆಗಳ್—

ವೃ|| ಒಗೆದಿಂದ್ರಾಶಾದ್ರಿಯೆಂದೆಂಬ ತುಳಪವಿಮಯಸ್ತಂಭದೊಳ್ಸಂಜೆಯೊಳ್ಳಿ |
ಟ್ಟಗಿದಿರ್ಚ್ಛರ್ದ್ದರ್ಗಂಧ ಕಾರಾಸುರನನಡಸ್ಸಿ ಸೀಳ್ದೊತ್ತಿ ಪಾಯ್ದೊಳ್ಗದಿ ಕರ್ಮ್ಗ||
ರುಗುರಿಂ ರಕ್ತಾಂಬುಪಂ ತಾಂ ನನೆದನೆನಿಸಿ ಕೆಂಪೇರಿ ನೈಜಾಂಶು ರಕ್ತಂ |
ಭಗಣಂ ತತ್ಸೀಕರಂ ಬೋಲ್ಮೆರೆಯೆ ಶಶಿನೃಸಿಂಹಂ ಕರಂ ಕಣ್ಗೆವಂದಂ || ೨೮

ವಚನ|| ಇಂತೊಗೆದ ಯಾಮಿನೀ ಪ್ರಥಮಯಾಮದಲ್ಲಿ—

ವೃ|| ಶಿವಪಾದಾಂಭೋಜಮಂ ಪೂಜಿಸಿ ಸಚಿವಸಮೇತಂ ಮಹಾಭಕ್ತಿಯಿಂ ಭ|
ದ್ರವಿಳಾಸಂ ಬೆತ್ತು ನಾನಾರಣಕರಣ ಜಯೋದ್ಯೋಗವೂಗಪ್ರಸಂಗೋ ||
ತ್ಸವದಿಂ ಮಾತಂಗ ವಾಜಿಪ್ರತತಿ ವಿಶತಸಲ್ಲಕ್ಷಣಾಲಾಪದಿಂ ಶ |
ಸ್ತ್ರವಿಶೇಷಾಸ್ತ್ರ ಪಂಚಪ್ರವಚದೆ ನಿಶಿಯಂ ನೂಂಕಿದಂ ಮಂತ್ರಲಕ್ಷ್ಮಂ || ೨೯

ಕಂ|| ಮನಸಿಜನಿಭಂಗೆ ಸತ್ಯೇಂ |
ದ್ರಸರೇಂದ್ರತನೂಭವಂಗೆ ಪೂರ್ವಾಗಂಗನೆ ಪೆಂ ||
ಪಿನೊಳೆತ್ತಿದ ವಿಜಯಾರತಿ |
ಯೆನೆ ಕೆಂಪಿಡಿದರ್ಕಬಿಂಬ ಮುದಯಿಸಿತಾಗಳ್ || ೩೦

ವಚನ|| ಆಸಮಯದೊಳಾರಾಜಶೇಖರಂ ರಾಜಶೇಖರಪೂಜೆಗೈದು ಯಥೋಚಿತ ಪ್ರಾಕರಾಚಾರಮಂ ನಿರ್ವರ್ತಿಸಿ ಮಿತವಚನ ನೊಡನೇಳ್ದು ನಡೆಗೊಂಡು ದಂಡನಾಥ ಮುಖಮಂಡಳಮಂ ನಡೆನೋಳ್ಪುದುಂ ತದ್ಭ್ರೂವಿಕ್ಷೇಪಣ ಪ್ರೇರಿತಂ ಮೇಘನಾದ ನಾದರದಿಂ ಬಂದು ಸಮರ ಸನ್ನಾಹಭೇರಿಯಂ ಪೊಂಗುಡುಪಂ ಪಿಡಿದಡಿಸಿ ಪೊಡೆಯಲೊಡನೆ—

ವೃ|| ದಿಗಿಭಂಗಳ್ಕಡುಬೆರ್ಚ್ಚೆ ಕರ್ಚ್ಚೆ ರಿಪುವರ್ಗಂ ಪುಲ್ಗಳಂ ತಾಯ್ಮಣ |
ಲ್ಲೆಗೆವಂತಬ್ಧಿ ತುಳುಂಕೆ ಶಂಕೆ ಮಿಗೆ ದಿಕ್ಪಾಲಕ್ಕರಂ ಬಳ್ಕೆ ಪ ||
ನ್ನಗರಾಜಂ ಪೆಡೆತಗ್ಗೆ ಕುಗ್ಗೆ ಕುಳಭೂಭೃನ್ಮಸ್ತಕಂ ಸೀಳೆ ಧಾ |
ತ್ರಿಗೆ ತಾಂ ಪರ್ಬ್ಬಿದುದುರ್ಬ್ಬಿ ದಾಂಥಳಧಳ ಸ್ಫಾರೋರುಭೇರೀರವಂ || ೩೧

ಕಂ|| ಆರವಮಂ ಜಳಧರದ ಮ |
ಹಾರವಮಂ ಕೇಳ್ದ ಸಿಂಹದಂತಿರೆ ಕೇಳ್ದಾ ||
ಧೀರೋತ್ತಮ ಸಿಂಹಳಧರ |
ಣೀರಮಣಂ ಕೆರಳ್ದು ನೋಡಿದಂ ನಾಲ್ದೆಸೆಯಂ || ೩೨

ವಚನ|| ಅಂತು ನೋಳ್ಪಾಗಳ್ನಿಜಸಭಾಸದರೆಲ್ಲರದ್ಭುತಕ್ರಾಂತ ಸ್ವಾಂತರಾಗಿರ್ಪಿನ ಮೊರ್ವಚರಂ ತ್ವರಿತಗತಿಯಿಂ ಬಂದು—

ಕಂ|| ದಡದಡಿಪಡಿ ಪಡಿವಮಾತಂ |
ಪಡೆಯುಲೊಡಚ್ಚುರ್ವ ಮನಂ ತಡಂಬಡಿಪ ತಳ ||
ಸ್ನುರ್ಡಿ ಯಡಿಗಡಿಗೊಡ ನೊಡನಿ |
ಟ್ಟೆಡೆ ಗೊಂಡಿರೆ ನುಡಿದನಾಗಳಾಚರಮುಖ್ಯಂ || ೩೩

ವೃ|| ಎಲೆ ಎಲೆದೇವದೇವ ಪಿರಿದದ್ಭುತ ಮದ್ಭುತ ಮೇನ ನೆಂದಪೆಂ |
ನೆಲನಿರದೀದುದೋ ದೆಸೆಯೆ ತಾಂ ಬೆಸಲಾದುದೊ ಪೆತ್ತುದೋ ನಭಂ ||
ಬಲಮಿದೆ ಬಂದುದದ್ರಿ ಪುಡಿಯಪ್ಪಿನ ಮಗ್ಗದರಣ್ಯ ಮೆಲ್ಲಮುಂ |
ನೆಲಸರಿಯಪ್ಪಿನಂ ಘನತರಂಗಿಣಿ ಪಂಕಿಲ ಮಾಗುತಿರ್ಪ್ಪೆಸಂ || ೩೪

ವಚನ|| ಅದೆತ್ತಣದೆಂಬುದು ಮಾತನಿಂತೆಂದಂ—

ವೃ|| ಚತುರಂಭೋಧಿ ಪರೀತ ಭೂತಳದ ಭೂಪರ್ಕಪ್ಪಮಂ ತರ್ಪ್ಪರು |
ದ್ಧತ ವೃತ್ತಪ್ರಭ ವಿಷ್ಣು ಸಿಂಹಳನದೆಂದುಂ ಕೆತ್ತನಲ್ತೆಂದು ಪೇ ||
ಳೆ ತದುದ್ಯದ್ಗಣಕಾಳಿ ಕೇಳ್ದು ಕೆರಳ್ದು ಸತ್ಯೇಂದ್ರ ಚೋಳೇಂದ್ರ ಚಂ |
ದ್ರ ತನುಪ್ರೋದ್ಭವ ರಾಜಶೇಖರ ನರೇಂದ್ರಂ ಬಂದಪಂ ಭೂಮಿಪಾ || ೩೫

ವಚನ|| ಎಂಬ ಮಾತಂ ಕೇಳ್ದತ್ಯಂತ ಕೋಪಾರೂಢನಾಗಿ—

ಕಂ|| ಕುಡಿನಿಮಿರ್ದಪುರ್ಬು ಕುಣಿವು |
ತ್ತೊಡನಿರೆ ನೆರೆ ಮುರಿದು ಮಿಾಸೆಯುಂ ಕಣ್ಗಳ ಕೆಂ ||
ಗಿಡಿ ಸೂಲಿಡೆ ಕರವಾಳೆಂ |
ಜಡಿದೆಂತೆಂತೆಲವೊ ಮಗುಳ್ದು ಪೇಳೆನುತೆಳ್ದಂ || ೩೬

ವಚನ|| ಅಂತೆಳ್ದು ನೆಲನದಿರೆ ಗಜರಿ ಗರ್ಜಿಸಿ—

ಕಂ|| ತಾಂಗಡ ಶೂರಂಗಡ ಕ |
ಪ್ಪಂಗೊಡೆ ನಾಂ ಗಡ ಕನಲ್ದು ಬರ್ಪ್ಪಂಗಡ ಯು ||
ದ್ಧಂಗಡ ಗೆಲ್ವಂಗಡ ಬಳಿ |
ಕಂ ಗೆಲದೇಕಿರ್ಪ್ಪ ನಿರ್ಪ್ಪನಮುಮ ಸಮರ್ಥಂ || ೩೭

ವೃ|| ಲಾಳನ ನಿಕ್ಕಿ ಮಾಳವನನಳ್ಕಿಸಿ ಘೂರ್ಜರನಂ ಪೊರಳ್ಚಿ ಪಾಂ |
ಚಾಳನನೊತ್ತಿ ಮಾಗಧನ ನರ್ದಿಸಿ ಕೊಂಕಣನಂ ತೆರಳ್ಚಿ ನೇ ||
ಪಾಳನನಟ್ಟಿ ಕೇರಳನನೋಡಿಸಿ ಬರ್ಬರನಂ ಕಲಂಕಿದೀ |
ಚೋಳನ ಚೆನ್ನಪಸ್ನತಿಕೆಯುನ್ನತಿ ಕೊಳ್ವುದೆ ಸಿಂಹಳೇಂದ್ರನೊಳ್ || ೩೮

ವಚನ|| ಎಂದು ಮತ್ತಮಿಂತೆಂದಂ—

ವೃ|| ನಿಜಭುಜದರ್ಪಮಂ ಮುರಿವೆನೆನ್ನದಟಂ ತವೆ ತೋರ್ಪೆನಾಂತತ |
ದ್ಧ್ವಜಿನಿಯನಿಕ್ಕಿ ಭೂತಗಣ ಕೌತಣಮಂ ಮಿಗೆ ಮಾಳ್ಪೆ ನಪ್ಸರೋ ||
ಜ ಮುಖಿ ಯಕ್ಕರ್ಗಳಿಷ್ಟವು ನೊಡಚ್ಚರ್ಗವೆ ನಾಗೆಸದೊಳ್ನಿರೀಕ್ಷಿಪ |
ಬ್ಜಜಭವನಕ್ಷಿಗಳ್ಗೆ ನವಕೌತುಕಮಂ ರಣದೊಳ್ನಿಮಿರ್ಚುವೆಂ || ೩೯

ವೃ|| ಇಂತೆಂದ ತ್ಯಂತ ರೋಷಾವೃತ ಮತಿಯದಟಿಂದೆಳ್ದು ಭೇರೀರವಂ ದಿ|
ಕ್ಕಾಂತಾಸ್ವಾಂತಾತಿ ಭೀತಿಪ್ರದ ಮೆನಿಸೆ ತದಂಭೋಧಿಯಿಂ ದಬ್ಧಿಯೊಂ ದೆ||
ಳ್ದಂತುದ್ಯತ್ಸೇನೆ ಕೋಲಾಹಲ ಮನೆಸಗಿ ಕೂಡಿರ್ಪಿನಂ ಕೂರ್ಪಿನಿಂ ಭೂ |
ಕಾಂತವ್ರಾತಾವೃತಂ ಪೆರ್ವ್ವಡಗನಡರ್ದು ತತ್ಸಂಯುತಂ ಬಂದನಾಗಳ್ ||೪೦

ವಚನ || ಅಂತೇಳ್ತಂದಪರಿಮಿತ ಬಲಜಲಧಿ ಜಲಧಿಯುಂಕಳಿದು ನೆಲನೆಲ್ಲಮ ನಳುರ್ಕೆ ಗೊಂಡು ಘುಳುಘುಳಿಸಿ ರಯದಿಂಪರಿತಪ್ಪಾಗಳ್—

ವೃ|| ದಿಗಿಭಂಗಳ್ಬೆಗಡೊಂದೆ ಭಾಸುರಥದಶ್ವಂ ಬೆರ್ಚೆ ಪಾತಾಳ ಪ |
ನ್ನಗರಳ್ಕುತ್ತಿರೆ ಖೇಚರರ್ಬೆದರೆ ಮತ್ತೇಭಪ್ರತಾನಂ ತುರಂ ||
ಗ ಗಣಂ ತೇಗ್ಗರ್ಗಳ ಪಜ್ಜ್ಯಾತ್ತಪಾದಚರಬೃಂದಂ ಬೃಂಹಿತಂ ಹೇಷಿತಂ |
ಪ್ರಗತಂ ಚೀತ್ಕೃತಿ ಬೊಬ್ಬೆಯುಬ್ಬಿರೆ ಕರಂ ಸಾಲ್ಗೊಂಡದೇಂ ಬಂದುದೋ ||
ಖರರುಚಿ ಬಿಂಬಮಂಬರ ಧುನೀ ತರುಣಾಂಬುಜದಂತೆ ತೋರೆ ವಿ |
ಸ್ಫುರಿತ ಪತಾಕೆ ಮೇಲಲೆಯೆ ಸೂಸುತೆ ಪರ್ಬ್ಬಿದ ತದ್ರಜಕ್ಕೆ ತಾಂ ||
ದೊರೆಯೆನಿಸುತ್ತೆ ಸುತ್ತಿಡಿದು ಸಾಸಿರ ಕಣ್ಬುಗೆ ಸೈನ್ಯ ರೇಣುವಿಂ |
ದಿರ ನಿರದಂತರಿಂಬಲವಿರೋಧಿ ಸಮಾಹ್ವಯ ಮಾಂತನಾಗನೇ || ೪೨

ಕಂ|| ಗಗನಗಹನದೊಳೆ ಗಮಿಪ |
ಖಗಕ್ಕೆ ಪತ್ತೀಂದ್ರ ಧೀವರಂ ಬೀಸಿದ ರೇ ||
ಣುಗಣನವಜಾಲ ಕೊಳಗಾ |
ಯ್ತೊಗುಮಿಗೆಯಿಂ ದನಿಮಿಷಪ್ರತಾನಂ ಚಿತ್ರಂ || ೪೩

ವಚನ|| ಅಂತೇಳ್ತಂದದ್ಭುತಂಮಿಗೆ ತತ್ಸೈನ್ಯಮ ನತಿದೂರದೊಳಿದಿರ್ಚಿಬಿಟ್ಟಿರ್ಪುದು ಮುಭಯಬಲಚಮೂಪತಿ ನಿಯಾಮಿತ ಸ್ಸಮರಸನ್ನಾಹ ಭೇರಿಯುಂ ತಂತಾದ್ಯಕ್ಷರ್ಕಡಂಗಿ ಪೊಡೆದಾಗಳ್

ಕಂ|| ಬಳೆದು ನೆಗೆತಂದು ದಾಂಧಳ |
ಧಳಂಧಳಧ್ವನಿಯಳುರ್ಕೆಗೊಳೆ ಶಬ್ದಗುಣಂ ||
ತಿಳಿಪೊಡದಕಾಯ್ತು ಗಗನ |
ಸ್ಥಳಿಗಲ್ಲದೊಡಲ್ಲಿ ಶಬ್ದಮೇಂ ಸಮನಿಕುಮೇ || ೪೪

ವಚನ|| ಅನಂತರ ಮಿಂತಳವಿಗಳಿದ ಕಳಕಳವು ನೊಳಕೊಂಡೊಡ್ಡಿ ನಿಂದುಭಯಬಲದೊಳು ಭಯಬಲಾಧ್ಯಕ್ಷರ್ಕ್ಕಡಂಗಿ ಕೈವೀಸಿದಾಗಳ್ ಪ್ರಚಂಡಪ್ರತಾಪ ಮಂಡಿತ ರುದ್ದಂಡ ಕೋದಂಡ ದಂಡಮನಡಿಸಿ ಪಿಡಿದು ಜೇವೊಡೆದು ಪಿಂಗದ ಮುಂಗಡೆಗಾಂತು ತಱಿಸಂದು ನಿಂದು—

ಕಂ|| ಡೊಣೆಯಿಂ ಕಣೆಯಂ ತೆಗೆತೆಗೆ |
ದಣಿಯರ ಮೆನೆ ಪೂಡಿ ನೋಡಿ ಗುರಿಯಂ ಮಣಿಕಾ ||
ಲ್ಮಣಿಯೆ ಭುಜವೊಗೆಯೆ ಕುಂಡಲ|
ಮಣಿ ಕುಣಿಯೆ ಧನುರ್ಧರರ್ಕ್ಕಳದಟಿಂ ದೆಚ್ಚರ್ || ೪೫

ಕಂ|| ಹುಂಕೃತಿ ಬಿಲ್ಗಾಱರ ಗುಣ |
ಠಂಕೃತಿ ಚಾಪಪ್ರಮುಕ್ತಶರನಿಕರ ಮಹಾ ||
ಭೀಂಕೃತಿ ನೋಳ್ಪಮರರ್ಗ್ಗೆ ಭೆ|
ಯಂಕೃತಿ ಗೈದುದು ತದೀಯ ರಣಭೂತಳದೊಳ್ || ೪೬

ನೆರೆ ನುರ್ಚ್ಚಿ ಪಾಱಯ್ದು ನೆತ್ತ ||
ರ್ತ್ತುರುಗೆ ಪರಿಕ್ಷುಬ್ಧಬಲ ಜಲಧಿಯೊಳ್ಕೆಂಬಾ ||
ವುರೆ ಮೊರೆದು ಪಱಿವ ತೆರದಿಂ |
ಗಱಿಗಣೆ ನೆರೆ ಮೊರೆದು ಪಱಿದು ವೆರಡುಂಬಲದೊಳ್ || ೪೭

ಅಂಬೆರ್ದೆಯನುರ್ಚ್ಚೆ ಕೀಳ್ತದ|
ಱಿಂ ಬಳಿಕೆಚ್ಚವನ ನೊರ್ವ್ವನಿಸೆ ಕೊಂದುದು ತಾ ||
ನೆಂಬಾ ಗಳಾತನಂ ಗುಣ |
ಮಂ ಬಿಟ್ಟತಿ ಚಪಳರಲ್ಲಿ ಗುಣಮುರಸುವುದೇ || ೪೮

ಅಱಿಗಳ ಸುಪವನನಂ ತಾ |
ನಿಱದೊಳಕೈದಾಶುಗತ್ವಮಂ ಪ್ರಕಟಿಸಿದ ||
ತ್ತಱರೆ ಶರಮನ್ಯರೊಡ ನೊಂ|
ದಿರೆ ತದ್ಧರ್ಮ್ಮಂ ಧರಿತ್ರಿಯೊಳ್ದೊರಕೊಳದೇ || ೪೯

ವೃ|| ಎಡೆಯೊಳೆ ಬರ್ಪ್ಪ ಬಾಣಮನೆ ಖಂಡಿಪ ಚಾಪಮನೆಚ್ಚು ತೊಟ್ಟನಿ|
ರ್ಕ್ಕಡಿಯನೆ ಮಾಳ್ಪ ತೊಟ್ಟಬೆರಲಂ ತವೆ ತುಂಡಿಪ ಬಿಲ್ಲಬಿನ್ನಣಂ ||
ಬಿಡದೆಡೆಗೊಂಡ ಧನ್ವಿಜಯ ಮೆಚ್ಚೊಡೆ ಪಾಯ್ದುದು ಪಾಱಿದತ್ತು ತ|
ಳ್ತಡಸಿದುದುರ್ಚ್ಚೆ ನಟ್ಟುದೊಡ ನಿಕ್ಕಿದುದು ರ್ಕ್ಕಿದಶೂರರಂ ಶರಂ || ೫೦

ಕಂ|| ತಳಿರೊಡೆದಸುಗೆಗಳೊ ದವಾ |
ನಳನಡಿಸಿದ ಪಾದಪಂಗಳೋ ಪೇಳೆನೆ ಕಂ ॥
ಗೊಳಿಸಿದ ರುರುಶರಹತಿ ಪರಿ |
ಗಳಿತ ಕ್ಷತ ಜಾತ ಕಲಿತ ಕಾಯರಜೇಯರ್ ॥ ೫೧

ವಚನ|| ಇಂತು ಕಡುಗಲಿತನಂ ಕೈಮಿಕ್ಕು ಕಾದುವ ಧನುರ್ಧರರ ಕಡುಪಂ ಕಂಡು ಕ ಡು ವಹಿಲದಿಂ ಕಾಯ್ಪೇರಿ ಖಡ್ಗಮಂ ಪಿಡಿದೊಡ್ಡುಗೊಂಡಡ್ಡಣ ಕಾರರಾದುರ್ದ್ದ ಸಾದ್ದುರ್ಸಂ ರಂಭಸಂಭ್ರಮ ಮಿಂಚುವಡೆಯೆ ತಡೆಯದೆ ಪಡಿತಳಿಸಿ ಗೊಂದಣಿಸಿ ನಿಂದು—

ಕಂ|| ಪೊಡೆಯೆ ಕಡಿವಡೆದ ರುಂಡಮ |
ನೆಡಗೈಯಿಂದಡಸಿ ಪಿಡಿದು ಬಿಡದುದ್ಧರಿಸು ॥
ತ್ತೊಡನೆ ನಡೆದಿಕ್ಕಿದ ನನಿ |
ರ್ಕಡಿಗೈವದಟರ್ಕಳಮರರಂ ಮೆಚ್ಚಿಸಿದರ್ ॥ ೫೨

ವಚನ॥ ಅದಲ್ಲದೆಯುಂ—

ವೃ|| ಕರತಳಖಡ್ಗಮಂ ಜಡಿದು ಪಾಂಗರಿದಡ್ಡಣ ವೊಡ್ಡಿ ನಿಂದು ಖೇ |
ಚರರರಿದೆಂಬಿನಂ ಪೊಡೆವ ಪೊಯ್ಯ್ವ ತರುಂಬುವ ಥಟ್ಟುವಾಳ್ವ ಮುಂ ||
ಬರಿವ ಮುರಳ್ಚುವ ಬ್ಬರಿಪ ಗರ್ಜಿಪ ಬೊಬ್ಬಿರಿವಾರ್ವ ಪೋರ್ವಮೊ |
ಗ್ಗರಿಪ ತೊಡಂಕುವ ಗ್ಗಲಿಪೆಬಿನ್ನಣಮೊಪ್ಪೆ ಕಡಂಗಿ ಕಾದಿದರ್ ॥ ೫೩

ವಚನ|| ಮತ್ತಮಲ್ಲಿ—

ಕಂ|| ಅಡ್ಡಣಮೊಡ್ಡಿದ ಕಾಮುರ್ಗಿ |
ಲೊಡ್ಡಣ ಮಿರದಿರಿದು ಮಂಚಿಪಸಿ ಮಿಂಚುವ ಮಿಂ ||
ಚೆಡ್ಡಮೆನಿಸಿರೆ ಸಿಡಿಲ್ವಡೆ |
ಯೊಡ್ಡನೆ ಘುಡುಘುಡಿಸಿ ಕಾದಿದರ್ಕಲಿಸುಭಟರ್ || ೫೪

ಕರವಾಳ್ಮರುಮೊನೆ ಗೊಂಡು |
ರ್ಚಿರೆ ಬೆನ್ನೊಳ್ಮೂಡೆ ನಡೆದು ತೊಡರ್ದಿರೆ ಬಿಡದೊ ||
ರ್ವರೊಳೊರ್ವಮುಷ್ಟೀ ಮು |
ಷ್ಟಿರಣಂ ನೆಗೆಳ್ದುದು ನಖಾನಖಿ ಸ್ಫುಟಯುದ್ಧಂ || ೫೫

ಕರತಳದ ಹರಿಗೆ ಕವಿದೊ |
ಪ್ಪಿರೆ ಕಪ್ಪರದಂತೆ ಮೇಲೆ ಬಲರೇಣು ಧರಾ ||
ಭರಮಂ ಪೊರಲುಜ್ಜುಗಿಪು |
ದ್ಧುರ ಕೂರ್ಮ ನನೊರ್ವ ನಡಿಯೊಳನುಕರಿಸಿರ್ದಂ || ೫೬

ಕರುಳದು ಪೊಡೆಯಿಂ ಪೊರಸೂ |
ಸಿರೆ ಸೂಸದೆ ಶೌರ್ಯಮುರ್ವಿ ಕರವಾಳಿಂ ಪೊ ||
ಯ್ದರಿಯ ನಿರದಕ್ಕೆ ಮಿಕ್ಕ |
ಕ್ಕರುಳಿಲ್ಲದ ಕಲಿತನಕ್ಕೆ ಪಕ್ಕಾಗಿರ್ದರ್ || ೫೭

ವಚನ|| ಆಗಳಂತದಂ ಕಂಡು ಸಮರಸಮುತ್ಸುಕಾಂತರಂಗಿಗಳುತ್ತರಂಗಿಗಳುತ್ತುಂಗ ತುರಂಗ ಸಂಘಮಂ ಪಿಂಗದೆ ಮುಂಗಡೆಗೆ ಸಂಗಡಿಸು ತೊಡನೆ ಘುಡುಘುಡಿಸಿ ತೊಡಮುಡಸನ್ನೆಯಿಂ ದೌಂಕಿ ನೂಂಕಿದಾಗಳ್—

ಕಂ|| ಕುಳಿಗೊಳಿಸಿ ಕೊಳಗಿಸಿಂ ಕೊಳು |
ಗುಳದಿಳೆಯಂ ನೆಗಪಿ ಮಿಗೆ ತದುದ್ಧ್ರಜಮಂ ಬಾಂ ||
ಬೊಳೆಯಂ ಕದಡೇಳಿಸಿ ಮೇ |
ಣ್ಕೆಳಿರ್ದತಿರಯದಿಂದೆ ಪರಿದುವಲ್ಲಿ ಹಯಂಗಳ್ || ೫೮

ವಚನ|| ಅಂತುಮಲ್ಲದೆಯುಂ—

ಶರಧಿಮಥನದೊಳೆ ನೊರೆಗಳ |
ನೆರಮಿಸು ನಿರದಾಂತು ಪರಿವ ತೆರೆಗಳ ಸಿರಿಯಂ ||
ಧರಿಸಿ ಪರಿದುದು ತುರಂಗೋ |
ತ್ಕರಮಾನನ ಫೇನ ಖಂಡಷಂಡದಿ ನಾಗಳ್ || ೫೯

ಬಟ್ಟಜೆಯಿಂ ಪೆಗಲೊಳ್ತೆಗೆ |
ದಿಟ್ಟ ಗ್ಗದಪಟ್ಟೆಯಂಗಳಂ ಜಳುಪಿಸಿ ಬೊ ||
ಬ್ಬಿಟ್ಟಡಸಿ ಪೊಕ್ಕು ಮಿಕ್ಕಾ |
ದ್ದಿರ್ಟ್ಟಣೆಸಿ ಪಳಂಚಿದತುರ್ರಂಗಿಗಳದರೊಳ್ || ೬೦

ಕಿಡಿಗೆದರ್ವ ಕಣ್ಗಳೆತ್ತಿದ |
ಕಡುಗಂ ಕಡುಗಚ್ಚಿರ್ದೌಡು ಗಂಟಿಕ್ಕಿದಪು ||
ಬ್ಬರ್ಡಿಗಡಿಗೆ ಕುಣಿವ ಮೀಸೆಗ |
ಳೊಡನೊಡನೆ ಭಯಾವಹಂ ಹಯಾರೋಹಕರಾ || ೬೧

ವೃ|| ಒಡೆದುಡಿವಂತೆ ಪೊಯ್ದು ಕರಖೇಟಕಮಂ ಪೊಡೆದಿಕ್ಕಿ ಸೀಸಕಂ |
ಪುಡಿಪುಡಿಯಪ್ಪಿನಂ ಕಡಿದು ಕಂದಮನಿಕ್ಕಡಿಗೈದು ವಾಜಿಯಂ ||
ಸಿಡಿಯೆ ಶರಂ ಕರುತ್ತು ತರಿದಬ್ಬರಿಸುತ್ತ ತುಳಪ್ರತಾಪಮೊ |
ಗ್ಗಡಿಸಿದ ವೋಲ್ತುರಂಗಿಗಳೆ ರಳ್ಬಲದೊಳ್ಕಡುಪಾಂತು ಕಾದಿದರ್ || ೬೨

ಕಂ|| ಎರಡುಂಬರಿಗಳ ಪೊಂಬ |
ಕ್ಕರಿಕೆಗಳೊಳ್ತುರುಗಿ ನಟ್ಟಗರಿಗಣೆ ಗರಿಯಂ ||
ತಿರೆ ಪುರುಷೋತ್ತಮ ರೇರಿದ |
ತುರಂಗತತಿ ಗರುಡಬಳಮ ನೇನಿಳಿಸಿದುದೋ || ೬೩

ನಿಡುನೇಜೆಯ ದಿನದೊರ್ವ್ವಂ |
ಜಡಿದಿರಿದೆತ್ತಿ ದೊಡೆ ಮತ್ತಮಂ ಕರವಾಳಿಂ ||
ಪೊಡೆದಂ ಮೇಗಣಿನಾ ಮೊನೆ |
ಎಡೆದಿಳಿ ತಂದವನ ನಾತುರಂಗಸಮೇತಂ || ೬೪

ವಚನ|| ಅಲ್ಲಿ ನಡೆಸೂಲಂಗಳಂ ಪಿಡಿದುನಡೆವಂತೆ—

ಕಂ|| ನೇಜೆಯದಿಂದಿರಿದೆತ್ತಿ ನಿ |
ಜಾಜಮನೆ ಬಿಡಾಜಸರ್ಗೆ ತೋರ್ಪಂತೆ ಸುಹೃ ||
ದ್ರಾಜಿಯನೆ ವಾಜಿವಾಹಕ |
ರಾಜಿ ಮಹಾಜಿಯೊಳೆ ತಳೆದರ್ದದ್ಭುತ ಮೊಗೆಯೊಲ್ || ೬೫

ವಚನ|| ಇಂತು ತಕ್ಕುಗೆಡದೆ ಮಿಕ್ಕು ಪೊಕ್ಕು ಪೊಣರ್ವ ಸಗರ್ವ ಗಂಧರ್ವ ವಾಹಕ ಸಮೂಹದ ಸಾಹಸ ದಾಹವದ ಮೋಹರಮುಂ ಕಾಹುರದ ಮೋಡಿಯಿಂ ನೋಡಿ ನೀಡುಂ ತೋಡಿಲ್ಲದ ಪಾಡು ಪಂತಂಗೊಂಡು ಸಮ್ಮವಂ ಮಿಗೆ ಸಮ್ಮುಖದ ಧೀರಸಾರಥಿಯಂ ಪುರ್ಬಿಂ ಜಬ್ಬಿ ಜವಂಗೆಡದುಭಯ ಬಲವರೂಥಿಗಳ್ವಿಜಯ ವರೂಥ ಯೂಥಂಗಳಂ ಪಿಂಗದೆ ಮುಂಗಡೆಗಾಂತಿದಿರ್ಚ್ಚಿ ಸಾರ್ಚ್ಚಿ ಪರಿಯಿಪಾಗಳ್—

ವೃ|| ಕಾಲನ ಕಲ್ಲಗಾಣದ ಸಮುದ್ಗತಚೀತ್ಕೃತಿಯಂತೆ ಪೊಣ್ಮೆ ಪೆ |
ರ್ಗಾಲಿಯ ಚೀತ್ಕೃತಿಧ್ವನಿ ತದುದ್ಭಟಹೂಂಕೃತಿಯಂತೆ ತಾಡಿತ ||
ಜ್ಯಾಲತೆಯೊಂದುಠಂಕೃತಿ ವಿಜೃಂಭಿಸೆ ಮೃತ್ಯುಬಹುತ್ವಮಾಂತವೋ |
ಲ್ಸಾಲಿರಿದೊತ್ತಿದರ್ಸ್ಸಮರಪೂರ್ಣಮನೋರಥರಾಮಹಾರಥರ್ || ೬೬

ವಚನ|| ಅಂತು ನಿಜರಥಂಗಳನೊತ್ತುತ್ತಿದಿರ್ಚ್ಚಿನಿಂದು—

ವೃ|| ಜೋಡಿಸಿದಶ್ವಕಂದರಮನೊಂದೆಶರಾಗ್ರದೆ ಖಂಡಿಪಂತೆ ರ |
ಳ್ಮಾಡುವ ನೀಳ್ದಕೇತುಮಣಿದಂಡಮನೊಡ್ಡಿದಸೂತವಕ್ಷಮಂ ||
ತೋಡುವ ಮೇಘಡಂಬರಮನಿಕ್ಕಡಿಮಾಳ್ಪಪೊದಳ್ದ ಲೋಹದೊ |
ಳ್ಜೋಡನಡುತ್ತುರ್ತುಂಡಿಪವರೂಥಿಗಳೊಟ್ಟಜೆಯಿಂ ಪಳಂಚಿದರ್ || ೬೭

ಕಂ|| ಗರಿಗಣೆಗಳ್ನೆರೆ ಯುಚ್ಚಿರ್ದ |
ತೆರವೊಳ್ಪರಪಾಯ್ದು ರಕ್ತರಸಖಂಡಂಗಳ್ ||
ತುರುಗಿರೆ ವರೂಥಿಗಳ್ನೆರೆ |
ಮುರಿದಕ್ಕುರ್ಸುಮಿತಜಪಾ ಕ್ಷಿತೀಜಂಗಳವೋಲ್ || ೬೮

ಕಣೆಪಣೆಯೊಳ್ನಡೆ ಕೀಳಾತ್ತು |
ಕಣೆಯಿಂದೆಚ್ಚವನ ಪಣೆಯನೊಡನಿಸೆ ಕೀಳಾತ್ತು ||
ಕಣೆಯಂ ಮೊದಲಂತೆವೊಲಾ |
ಪಣೆಯೊಳ್ನಾಂಟಿಸಿದ ನವನದೇಂ ಬಿನ್ನಣಿಯೋ || ೬೯

ವಚನ|| ಇಂತದಿರದಿದಿಚ್ಚಿರ್ ಪೊಣಚ್ಚುರ್ವ ವರೂಥಿಗಳ ತಂಡದ ಗಂಡುಗೊಂಡ ಬಂಡೆ ಣವಂ ಕಂಡು ಪಿಂಡುಗೊಂಡು ಮಂಡಳಿಸಿ ದಂಡಿಗಾಂತ ಚಂಡ ಗಜಾರೋಹಕರುದ್ದಂಡ ವೇತಂಡಂಗಳನಳಂಕೆವೆತ್ತಂಕುಶಮನಿಕ್ಕಿ ಜಂಕಿಸಿ ಭೋಂಕನಣೆದಾದ್ದುರ್ ಸಾದ್ಭುರ್ಂಕಿ ಕೊಂಕಿ ನೂಂಕಿದಾಗಳ್—

ವೃ|| ನಭೆದೊಳ್ಮಿಳ್ಳಿರಿದಾಡೆ ಸಿಂಗರದ ಸಿಂದಂ ಡಿಂಡಿಮುಧ್ವಾನ ಮು |
ಣ್ಮೆ ಭಟಾನೀಕದ ಬೊಬ್ಬೆ ಪಬ್ಬಿರೆ ಲಂತದ್ಘಂಟಾರವಂ ಪೊಣ್ಮೆ ಮೇ ||
ಣಿಭಯೂಥಂ ಪರಿದತ್ತು ನಿಶ್ಚಳಿತಕರ್ಣಂ ಕ್ಲಿಪ್ತಹಸ್ತಂ ರದ |
ಪ್ರಭೆ ಚೆಲ್ವಾಗೆ ಮದಾಂಬು ಸೂಸೆ ಸಮರಕ್ರೀಡಾ ಮಹೋತ್ಸಾಹದಿಂ || ೭೦

ಕಂ|| ನೆಗಪಿ ಭರಿಕಯ್ಯ ನಬ್ದಾಂ |
ಬುಗಳಂ ಬರೆಪೀದ್ದುರ್ ಕರ್ಣಚಾಲನದಿ ನವಂ ||
ಮಿಗೆ ಪರಿಯಿಪ ಮದಕರಿಗ |
ಳ್ಬಗೆಗೊಂಡೊಡನೊಡ್ಡಿ ನಿಂದು ವೆರಡುಂ ಬಲದೊಳ್ || ೭೧

ವಚನ|| ಅಂತೊಡ್ಡಿ ನಿಂದು—

ವೃ||ಭರಿಕೈಯಿಂ ಭರಿಕಯ್ಯನಾಂತು ಮುರಿದೊತ್ತುತ್ತೆತ್ತಿ ಪತ್ತುತ್ತೆ ದೀ |
ರ್ಘ ರದಾಗ್ರಂಗಳಿನೊಂದ ನೊಂದಿರಿದು ಜೋದರ್ಬೊಬ್ಬಿಡಲ್ಮೇಲೆ ರ ||
ಕ್ತರಸಂ ವಕ್ತ್ರದಿ ನೆಚ್ಚು ಪಾಯೆ ಮೊಳಕಾಲೊಳ್ದಂಡೆ ಗೊಂಡೊಡ್ಡಿನಿಂ |
ದೆರಡುಂ ಪೆಬ್ಬಲದಗ್ಗದಾನೆಗಳ ಮೊತ್ತಂ ತಾಗಿತಂತಾಜಿಯೊಳ್ || ೭೨

ವಚನ|| ಮತ್ತಮಲ್ಲಿ—

ಕಂ|| ಪ್ರತಿರದನಿ ರದನ ಹತಿವಿಗ |
ಳಿತವಿತತಕ್ಷತಜ ಜಳಮನುಗುತಪ್ಪರ್ ಮದೋ ||
ದ್ಧತ ಹಸ್ತಿರುಧಿರ ಸೃಷ್ಟಿಯ |
ನತಿ ಶಯಮೆನೆ ಕರೆವ ಜಳದಮೆನೆ ಕಣ್ಗೊಳಿಕುಂ || ೭೩

ವೃ|| ಮುಂಬಿಡದೊಕ್ಕು ಕಾಳ್ಪುರ ಮದಾದಮುದೋದಕ ದೊಂದು ಗೂಡಿ ರ |
ಕ್ತಾಂಬು ರದಪ್ರಘಾತ ಲಪನೋದ್ಗಲಿತಂ ಪರಿಗೊಂಡು ಪಾಯ್ದು ತ ||
ಳ್ತಂಬುಜಮಿತ್ರ ಜಾಂಬುಪರಿಮಿಶ್ರಿತ ಶೋಣನದೀ ಪ್ರವಾಹ ಮೆಂ |
ದೆಂಬ ಬೆಡಂಗನಂಬರ ಚರಾಕ್ಷಿಗೆ ಬೀರಿದುದಾ ರಣೋರ್ವಿಯೊಳ್ || ೭೪

ವಚನ|| ಮತ್ತಮಲ್ಲಿ ರಣದೇವತೆಯ ನುದ್ದೇಶಿಸಿ—

ವೃ|| ಸೂನಗಿಗತ್ತಿ ಬೆನ್ನ ನಡುಬಾರೊಳೆ ಕೋದಿರೆ ಬೀರಸಿಂಗರಂ |
ತಾನಮರ್ದೊಪ್ಪೆ ನೇಲ್ದು ಜಡಿದಾತ್ಮಕರಾಸಿಯ ನುರ್ಬ್ಬಿ ಬೊಬ್ಬೆಗೊ ||
ಟ್ಟಾನೆಯ ಕೊಂಬದಾಗೆ ಸಿಡಿವಂಜರ ಮುದ್ಧೃತ ಹಸ್ತ ದಂಡಮಾ |
ಬಾನೊಳೆ ತಳ್ತು ತೋರೆ ಸಿಡಿಯಾಡುವ ಮಾಳ್ಕೆಯೊಳೊರ್ವ್ವ ನೊಪ್ಪಿದಂ ||

ವಚನ|| ಅದಲ್ಲದೆಯುಂ—

ವೃ|| ಇದಿರೊಳದಿರ್ಚ್ಚಿ ನಿಂದಕಲಿಯಂ ಕರಿ ತನ್ನಕರಾಗ್ರದಿಂ ತುಡುಂ |
ಕಿ ದುದಿರದಿಟ್ಟು ದಾಗಸಕೆ ಮೇಣ್ಬರೆ ಕೊಂಬ ನಮರ್ಚ್ಚಿ ಸಾರ್ಚ್ಚಿದ ||
ತ್ತದಿರದವಂ ಕರಾಸಿಯೊಳೆ ತತ್ಕರಮಂ ಕಡಿದಲ್ಲಿ ಬೀಳ್ದನಾ |
ಪದದೊಳೆ ತತ್ಕರೀಂದ್ರ ಶಿರದೊಳ್ಸುರನಾರಿಯ ರೊಯ್ದರಾತನಂ || ೭೬

ಭೂರಿರಥಾಂಗ ಚೀತ್ಕೃತಿ ಧನುರ್ಗುಣಠಂಕೃತಿ ಮತ್ತವಾರ |
ಸ್ಫಾರಕರಾಗ್ರಘಾತ್ಕೃತಿ ಭಟಸ್ಫುಟಹೂಂಕೃತಿ ವಾಜಿವಾಂಹಕೋ ||
ದಾರ ಕರಾಸಿ ಘಟ್ಟನ ಠಣತ್ಕೃತಿ ತಾಡಿತ ಖೇಟರಿಕೌಘ ವಿ |
ಸ್ತಾರ ಚಳಚ್ಚಟತ್ಕೃತಿ ಚಮತ್ಕೃತಿ ಯಾದುದು ಯುದ್ಧರಂಗದೊಳ್ ||೭೭

ಕರತಳ ಖಡ್ಗಘಟ್ಟನ ಸಮುದ್ಭವ ವಿಸ್ಫುರಿತ ಸ್ಫುಲಿಂಗಮುಂ |
ಬರತಳ ಮುಚ್ಚಳ ದ್ರುಧಿರ ಶಂಜರ ಸಂಭೃತ ಮುರ್ವಿ ರಂಗದ ||
ಶ್ವರಥಭಟೇಭ ಭೂರಿರವ ಸಂಗತಮೆಣ್ದೆಸೆಯಾಗೆ ಲೋಕಭೀ |
ಕರ ಮೆನಿಸಿತ್ತು ಭೂತಗಣ ಚಿತ್ತ ಮಹೋತ್ಸವ ಕಾರಣಂ ರಣಂ || ೭೮

ಇಡಿಕಿರಿದಿರ್ದ್ದ ದೆಲ್ಲೆಡೆಯೊಳಟ್ಟೆಗಳೊಟ್ಟಜೆ ಮೂಳೆಯೋಳಿ ಪೇ |
ರಡುಗುಗಳೇರಿ ಕಾಳಿಜದ ಪಾಳಿ ತೊವಲ್ಗಳಸಾಲ್ಗಳಂಗದಂ ||
ಗಡಿ ಪೊಸಕಂಡದಿಂಡೆ ನೆಣದುಲ್ಬಣ ಮಾಂತ್ರದ ಮಂತೆಣಂ ಸಿಡಿ |
ಲ್ದಿಡಿದುರು ರುಂಡಮುಂಡಳಿ ಪೆಣಂಗಳ ಜಂಗುಳಿ ನೆತ್ತರೆಳ್ತರಂ || ೭೯

ಕಂ|| ರಿಪುವಿಜಯ ವಿಜಯ ನಿಭ ಭಟ |
ಚಾಪಲ ಶರೋತ್ಕರ್ಷ ವರ್ಷದಿಂ ತೀವಿ ಜನಾ ||
ಸ್ಯಪರಂ ಪರೆಯಿಂ ಪಡೆದಂ |
ವಿಪುಳ ಸರಿತ್ಪತಿ ಪೊದಳ್ದ ಶರನಿಧಿವೆಸರಂ || ೮೦

ವಚನ|| ಇಂತಾ ಗಲೊಡನಾಗಳಿ ದಿರ್ಚಿ ಪೋಗದೆ ಸಮ ಸಮುಸರಂಗೆಯ್ವ ರಾತಿಬಲಮಂ ಕಂಡು ಕಾಯ್ಪುಗೊಂಡು ರಾಜಶೇಖರ ರಾಜೇಂದ್ರಂ ವಿಶವಚನಂ ಬೆರಸು ನಿಜಗಜೇಂದ್ರಮ ನಣೆದಲೆದು ನೂಂಕಿದಾಗಳ್—

ವೃ|| ಘನಶುಂಡಾದಂಡ ಪಾಶಚ್ಯುತ ಖರಕರ ಬಿಂಬಂಬೊಲಿಂಬಾಗೆ ಶಂಭ|
ತ್ಕನದುದ್ಯದ್ದರ್ಪಣಂ ಫಾಲದೊಳೆ ಸೃಣಿ ಚಲತ್ಕುಂಭ ಕೂಟಾಗ್ರಸಂಘ ||
ಟ್ಟನದಿಂ ಬಿಳ್ದರ್ಧಚಂದ್ರಂಬೊಲಿರೆ ಪೃಥುಶಿರೋಮಧ್ಯ ದೊಳ್ಮುಕ್ತದಾನಾಂ|
ಬು ನಿಯುಕ್ತಂ ಕರ್ಣಮಬ್ಧಂಶೊಡರ್ದವೊಲಿರೆ ಕಣ್ಗೊಪ್ಪಿ ಬಂದತ್ತಿಭೇಂದ್ರಂ||

ವಚನ|| ಆಗಜೇಂದ್ರದಗ್ರದೊಳೊಪ್ಪುಱಿರ್ಕೆಗಾಂಶು ಬಪ್ಪರಿಪುಬಲ ಬಲಾಹಕ ಪ್ರಬಲ ಜಂಝಾಪ್ರಭಂಜನನಂ ಕಂಡು ಸಿಂಹಳೇಂದ್ರಂ ಸಮರ ಸಮುತ್ಸಾಹ ಮಾನಸಂಮಾನಸಂಯು ತಂ ತನ್ನ ಪನ್ನತಿಕೆವೆತ್ತ ಪಾರ್ಥಿವ ಕುಮಾರರೊಂದುಗೂಡಿ ಗಂಧಸಿಂಧುರ ಸ್ಕಂಧಾರೂಢನಾಗಿ ಕಡುವಹಿಲದಿ ನಿದಿರ್ಚೆ ಬಪ್ಪಾಗಳ್—

ಕಂ|| ಬಡಬನಳುರ್ಕೆಯೊ ಭೈರವ |
ನಡವೊರ್ ಮಿಳ್ತುವಿನ ದರ್ಪವೋ ಪಿಳಯದ ಮುಂ ||
ಗಡೆಯ ಸಿಡಿಲೇಳ್ಗೆಯೋ ಮಾ |
ರ್ಪಡೆಯೋ ಎಂದೆನೆ ಕರುತ್ತು ತಾಗಿತ್ತಾಗಳ್ || ೮೨

ವೃ|| ಪೊಡೆದುದು ಪೊಯ್ದುದಟ್ಟಿದುದುಮೆಟ್ಟಿದುದಿಟ್ಟುದು ಪೊಟ್ಟಯಿಂಕರು|
ಳ್ಗಡಣೆಸಿ ಪಾಯ್ವಿನಂ ತುಳಿದುದೆತ್ತಿದು ದೊತ್ತಿದು ದತ್ತಮಿತ್ತಲುಂ ||
ಕೆಡಪಿ ದುದೀಳ್ದು ಸೀಳ್ದುದುರೆ ತೊಳ್ದುದು ಪೋಳ್ದುದು ನೀಳ್ದಹಸ್ತದಿಂ |
ಪಡಿಬಲಮಂ ಮಹಾರಣ ವಿದಾರಣ ದಾರುಣ ಮತ್ತವಾರಣಂ || ೮೩

ಕಂ|| ಗಿರಿಯ ಸಿರದಿರಿದು ಕೆಡಪಿದೊ |
ಡಿರದದರಗ್ರದ ಮರಂಗಳುರುಳ್ವಂತಿರೆ ತೆ ||
ತ್ಕರಿ ಕರಿಯಸಿರಿದು ಕೆಡಪಿದೊ |
ಡುರುಳ್ದಜ್ಜೊರ್ದತ್ತರ್ದಗ್ರದಿಂ ರಣಧರೆಯೊಳ್ || ೮೪

ಕಡುಪಿಂ ಕರಿ ನಿಜಕರದಿಂ |
ಪಿಡಿಪಿಡಿದಿಟ್ಟುದು ಪೊಣರ್ಚಿದರಿಸುಭಟರ ನಿ ||
ಟ್ಟೆಡೆಗೊಂಡಚ್ಚರಸಿಯರಿ |
ಪ್ಪೆಡೆ ಗಿವರೊಳಗಾಯ್ದು ಕೊಳ್ಳಿಮೆಂದೊಪ್ಪಿಪ ವೋಲ್ ||

ವಚನ|| ಆಗಳ್ಪ್ರಚಂಡ ಬಳನೆಂಬ ಸಿಂಹಳನ ಪಡೆವಳಂ ಪತಿತಳಿಸು ತಿದಿರ್ಚಿ ವರಲವ ನಾರೋಹಿಸಿರ್ದ—

ಕಂ|| ರಥಮಂ ಸುಗೋತ್ರ ತಸಾ |
ರಥಿಯಾಂತೊಡೆ ಪಿಡಿದಿಭಂ ನಭಕ್ಕಿಡೆ ದಿನಕೃ ||
ದ್ರಥದೊಳಗೆ ಬೀಳ್ದು ತತ್ಸಾ |
ರಥಿಯೆನಿಸಿದ ನವನಸೂರುವರುಣತೆಯಿಂದಂ || ೮೬

ವಚನ|| ಅದಲ್ಲದೆಯು ಮಾಪಡೆವಳನೂರುದಂಡಮಂ ಕದಳೀಕಾಂಡಮಂ ಮುರಿವಂತೆ ಮುರಿದವನ ಭುಜಮಂ ಕರೀರಮಂ ಕೀಳ್ವಂತೆ ಕೀಳ್ತವನ ರುಂಡಮಂ ಪುಂಡರೀಕಮಂ ಪರಿವಂತೆ ಪರಿದು ಕೊಳುಗುಳ ದಿಳೆಯೆಂಬ ಕೊಳದೊಳೆತ್ತಿಡರ್ದ ನಳಿನನಾಳಂಗಳೆಂಬಂತೆ ನರರ ನರಮಾಲೆ ಮುಂಗಾಲೊಳೆತ್ತಡರೆ ಮಾಲೆಸರಪಳಿಯಂತೆ ಬಳ್ಳಿಗರುಳ್ಪಂಗಾಲೊಳೆಳಲ್ದು ಬರೆ ಭರಂಗೊಂಡೋಜೆಯಿಂ ಬರ್ಪ ರಾಜಶೇಖರ ಕರೀಂದ್ರ ದಿದಿರೋಳ್ಸಿಂಹಳೇಂದ್ರಂ ನಿಜಗಜಮಂ ಪರಿಯಿಸಿನಿಂದು ಚಂಡಕೋದಂಡ ಮನಡಸಿ ಪಿಡಿದು—

ವೃ|| ಪಟುಭುಜನೊತ್ತಿ ಜೇವೊಡೆದು ಸಿಂಜಿನಿಯಂ ಸೆಳೆದಾದ್ರ್ದ ಸಾದರ್ಸಂ |
ಘಟಿಸಿ ತೊಡಚ್ಚ್ರ ತೆಚ್ಚೊಡರಿ ಸಿಂಹಳ ಸೈದುವ ಲೋಕಭೀಕರೋ ||
ತ್ಕಟ ರಟನಾಸ್ತ್ರಮಂ ತರಿದನೊಂದೆ ಶರಾಗ್ರದೆ ಮಧ್ಯದೊಳ್ಮಹಾ |
ಭಟರಿರದಾರೆ ನಿರ್ಜರ ರಿದಚ್ಚರಿಯೆಂದೆಸೆ ರಾಜಶೇಖರಂ || ೮೭

ವಚನ|| ಅಂತವಂ ತರಿದುರುಳ್ಚಿ—

ವೃ|| ಕಂಡರೊಳಿಂತುಟಪ್ಪ ಕಡುಸಾಹಸಿ ಕೇಳ್ದರೊಳಿಲ್ಲವೆಂದು ಮುಂ |
ಕೊಂಡ ತುಳಪ್ರತಾಪನಿಧಿ ಸಿಂಹಳಭೂಪತಿ ಮೆಚ್ಚಿ ಚಂಡಕೋ ||
ದಂಡ ಮನಾಪ್ಪ್ರನಿಂ ಸೆಳೆದು ಬೊಬ್ಬಿರಿದೆಚ್ಚ ನತುಚ್ಛ ಬಾಣಮಂ |
ಖಂಡಿಸಿದಂ ಬಳಿಕ್ಕ ಮದನಂ ತರದೊಳ್ನಿಜ ಬಾಣದಿಂನೃಪಂ || ೮೮

ವಚನ|| ಅಂತು ಖಂಡಿಸುತ ಖಂಡಪ್ರತಾಪಂ ಗಂಡುಗೊಂಡಿದಿಚ್ಚ್ರ ನಿಂದ ಸಿಂಹಳೇಂದ್ರನ ಧಟಂ ಕಂಡು—

ವೃ||ಪಟುಕೋಪಾಟೋಪಬದ್ಧಭ್ರುಕುಟಿವಿಚಲಿತಶ್ಮಶ್ರುಘರ್ಮಾಂಬುಬಿಂದು|
ಸ್ಫುಟ ಫಾಲಂ ಪದ್ಮರಾಗಾರುಣ ವಿಕಟಕಟಾಕ್ಷಂ ಧನುಜ್ಯಾಲತಾ ಸಂ ||
ಘಟಿತಾ ಮೋಘಾಸ್ತ್ರದಿಂ ತತ್ಕರಟಿ ಬಿದುವನಾದ್ರ್ದಚ್ಚ ನೆಚ್ಚಂತೆ ಮುಂಧೂ |
ರ್ಜಟಿಪುತ್ರಂ ಕ್ರೌಂಚಮಂ ಪಂಚಮೆಸೆ ರಿಪುಮಹಾಕಲ್ಪ ಕಾಲಾಗ್ನಿರುದ್ರಂ ||

ವಚನ|| ಅಂತೆಚ್ಚ ಶರಂ ಪಿಂಚಕದೊಳ್ನಟ್ಟುಚ್ಚ್ರ ಪಾಯೆಪಡಲಿಡುವ ನಿಜ ಗಜದಿನಿಳೆಗೆ ದುಮ್ಮಿಕ್ಕಿ ಹಂಮುಗೆಡದೆ ಧೀರಸಾರಥಿ ಸಾಚ್ಚ್ರದ ರಥಮನೇರಿದಾಗ ಳ್ಧರ್ಮಯುದ್ಧಕ್ಕೆ ಮನವಿತ್ತು ರಾಜಶೇಖರ ನಮರಗಿರಿಯಿ ನಿಳಿದಿಳಾರಥಮನಾ ರೋಹಿಪ ಭವನ ವಿಭವಮಂ ತಳೆದಿಭಮು

ಸ್ತಕದಿ ನಿಳೆಗವತರಿಸಿ ಮಣಿರಥವ ನಾರೋಹಿಸಿ ಸಾಕ್ಕೆಗೆ ಪಂನತಿಕೆ ಮಿಗೆ ಪರಿಯಿಪಾಗಳ್ಸಿಂ
ಹಳೇಂದ್ರಂ ಕೆರಳ್ದು ನೋಡಿ—

ಕಂ॥ ಬಳಯುತ ರೇಳ್ಗೊಗಾರ್ಗವುದ |
ದಳವಿಯೊಳೋಲ್ಪೈಪರರಸ ರಖಿಳರ್ಕ್ಕಪ್ಪಂ ||
ಗಳ ನೀವರೆಂಬ ನಿನ್ನ |
ಗ್ಗಳಿಕೆಯದೇಂ ಸಿಂಹಳೇಂದ್ರ ನೊಳ್ಕೊಂಡಪುದೇ || ೯೦

ವೃ|| ಗುಹೆಯೊಳಗಿರ್ದ್ದ ಕೇಸರಿಯ ನಾಸುರದಿಂ ವನದಂತಿ ಸೊಕ್ಕಿ ಬಂ|
ದಹಹ ಕೆರಳ್ಚಿ ಜೀವಿಕುಮೆ ನೀನದರಂತಿರೆ ವಾರ್ಧಿ ಮಧ್ಯಮ ||
ದ್ಗೃಹದೊಳೆ ಸಂತಮೊಪ್ಪುವನ ನೆನ್ನನಿಳೇಶ್ವರ ನೀಂ ಕೆರಳ್ಚಿ ಮೇ |
ಣ್ಪ್ರಹತಿಯ ನಾನದೆಯ್ದು ವೆಯದೆಂತೆಲೆ ತೀರ್ಚ್ಚದೆ ನಿನ್ನನಿರ್ಪ್ಪನೇ || ೯೧

ವಚನ|| ಎನೆ ಸಮರ ಷಣ್ಮುಖಂ ಸರೋಷ ಹಸನ ಮುಖನಾಗಿ ಮಗುಳ್ದಿಂತೆಂದಂ—

ಕಂ|| ಜಳನಿಧಿಯನುಳಿದು ನೀಂ ಕೊಳು |
ಗುಳಕೈದಿದೆ ಕೈದುಗೊಂಡು ಮದವಿಹ್ವಳ ಸಿಂ ||
ಹಳ ಭಾಪು ತೋರ್ಪ್ಪನೆಲೆ ಕೈ |
ಚಳಕಮ ನೊಂದಿನಿತು ಸೈರಿಸೈ ರಣದೆಡೆಯೊಳ್ || ೯೨

ಸಿಂಹಳಭೂಪತಿ ನಿಜದೈನ್ಯ |
ಸಿಂಹಂ ನೀನಲ್ತೆ ನಿನ್ನನಾಹವದೆಡೆಯೊಳ್ ||
ಸಂಹರಿಸಿ ಶರಭವಿಕ್ರಮ |
ಮಂ ಹರಸುತನಾದುದರ್ಕ್ಕೆ ತೋರ್ದ್ದ ಪೆನೀಗಳ್ || ೯೩

ವಚನ|| ಎಂದು ಮುಟ್ಟ ಮೂದಲಿಸಿ—

ಕಂ|| ಪೃಥುಳ ಭುಜಬಳವಿಜಿತದಶ |
ರಥ ಸುತನಪ್ರತಿ ಮಗುಣಗಣಾಂಕಂ ಗುಣಮಂ ||
ಪೃಥಿತ ಶರಾಸನ ಕೇರಿಸಿ | ೯೪
ಪೃಥಿವೀಶ್ವರ ಪುತ್ರನೊತ್ತಿ ಜೇವೊಡೆಯಲೊಡಂ ||

ವೃ|| ಅದರುದ್ಯದ್ಧ್ವನಿ ಪೊಯ್ಯೆ ಮೇಗಣುಡುಜಾಳಂ ಕಳ್ಕನೊಕ್ಕಂತದೊ|
ಕ್ಕದು ಚಂಚತ್ಸುಮನಃಪ್ರಮುಕ್ತ ಸುಮನೋವರ್ಷಂ ಪ್ರತಿಧ್ವಾನ ಮು ||
ಣ್ಮಿದುದೆಂಬಂತಿರೆ ಪೊಣ್ಮೆದತ್ತ ಮರಭೇರೀ ದಾಂಧಳ ಧ್ವಾನಮ |
ಭ್ರದೊಳಾ ಬಲ್ಧನುಗೊಲ್ದು ಪೂಡಿದ ನವೋಘ ತ್ರಾಣಮಂ ಬಾಣಮಂ|| ೯೫

ವಚನ|| ಅಂತು ಪೂಡಿ ನೀಡಡಿಗೊಂಡು ತಗೆನೆರೆದು ನಿಂದಾಗಳ್—

ವೃ|| ಕರ್ಣಸಹಾಯಮಂ ಪಡೆಯುದಂದಿರದೈದಿದ ಸರ್ಪಬಾಣಮಾ |
ಪೂರ್ಣಮನೋರಥಂ ಬಡೆದುದಿಲ್ಲೆಸುತಂ ಬಿದು ರತ್ನಮಂಡನಾ ||
ಕೀರ್ಣ ರುಚಿಪ್ರಬದ್ಧ ಕವಚಾನ್ವಿತ ಕರ್ಣಸಹಾಯಮಂ ಗುಣೋ |
ದೀರ್ಣತೆ ಯಿಂದೆ ಪೊಂದಿತೆನೆ ತನ್ನಿಕಟಸ್ಥಿತಮೇಂ ಮನೋಜ್ಞಮೋ || ೯೬

ವ|| ಅಂತಾಬಾಣಮಂ ರಿಪುಮುಖ ವಿದಾರಣ ವೀರಭದ್ರಂ ರೌದ್ರಂ ಮಿಗೆಮಾಣದೆಚ್ಚಾಗಳ್—

ಕಂ|| ಕಡಿದುದವನೆಚ್ಚ ಕಣೆಗಳ |
ನೆಡೆಯೊಳ್ಪಡಿತಳಿಸಿ ಪೊಕ್ಕು ತತ್ಸೂತನ ಪೇ ||
ರೊಡಲ ನೊಡೆದುರ್ಚಿ ಪಾಯ್ದುದು |
ಬಿಡೆ ನೆತ್ತರ ಸರೆ ತದಂಗದಿಂ ತತ್ಕ್ಷಣದೊಳ್ || ೯೭

ವಚನ|| ಅದಂ ಕಂಡು ಕೌತುಕಂಬಟ್ಟು ಬೆರಲೆತ್ತಿ ಪೊಗಳ್ದಾಶುಗಾಶನ ನಿಭಾಶುಗ
ಮನಾಶುಗಾಸನದೊಳೋಸರಿಸದೆ ತೊಡರ್ಚಿ ಸಾರ್ಚಿತೆಗೆನೆರೆದು ನಿಂದು—

ಕಂ|| ಮಣಿಗೆಳಸಿ ಕೆಮ್ಮನೆಮ್ಮೊ |
ಳ್ಮಣಿಯದಿದಿರ್ಚಿದೆ ನರೇಂದ್ರಸುತ ನಿನಗೀ ಕೂ ||
ರ್ಗಣೆಯಿತ್ತಪುದು ನವವ್ರಣ |
ಮಣಿಯಂ ಕೊಳ್ಳೆಂದು ಸಿಂಹಳಂ ಪದೆದೆಚ್ಚಂ || ೯೮

ನಡುಗೆ ಸುರರೊಡನೆ ಕಿಡಿಗಳ |
ಗಡಣ ಮನುಗುತರ್ಪ ಭೀಕರಾಸ್ತ್ರಮ ನದನಿ ||
ರ್ಕಡಿಗೈವ ಮೋಘ ಶರಮಂ |
ತುಡುತೆಚ್ಚಂ ರಾಜಶೇಖರಂ ಸಿಂಹಳನಂ || ೯೯

ಎಚ್ಚೊಡಿಳೆ ನಡುಗೆ ಸೆಡೆಯೆ ವಿ |
ಯಚ್ಚರರಂಬದು ಪೊದಳ್ದು ಕೆನ್ನೀರ ಪೊನಲ್ ||
ಬೆಚ್ಚನೆ ಪಾಯ್ತರೆ ವಕ್ಷಮ |
ನುಚ್ಚಳಿಸಿದೊಡಹಿತನೃಪತಿ ಮೂರ್ಛಿತನಾದಂ || ೧೦೦

ವಚನ|| ಆಗಳದಂ ಕಂಡು ಕನಲ್ಕೆಗೊಂಡು ಮಂಡಲಿಸುತಿಂದ್ರ ಮನ್ಯುಭದ್ರಕೇತು ಹಿರಣ್ಯಕವಚಂ ಚಂಡಬಾಹು ಪ್ರಚಂಡವರ್ಮಂ ಸಿಂಹಳಸೇನಂ ಕುಲಿಶದಂತಂ ಲೋಹಿತಾಕ್ಷಂ ಪಿಂಗೇಕ್ಷಣಂ ಕಾಲನೇಮಿ ಭೀಮನಾದನಾದಿತ್ಯ ವರ್ಮಂ ವಿಕ್ರಮ ಬಾಹು ಮೊದಲಾದ ಪಾರ್ಥಿವರ್ನಿಜವರೂಥಂಗಳನೇರಿ ವಿಪುಳ ಪ್ರಚಂಡ ಧನುರ್ದಂಡಮಂ ತಿರುವೊಯ್ದು ಜೇವೊಡೆದು ಘುಡುಘುಡಿಸಿ ಸಿಡಿಲ ಪಡೆವಂತೆ ಮೋಹರಿಸಿ ಶರವರ್ಷಮಂ ಕರೆಯುತ್ತೆ ನಿಜಬಲಂಬೆರಸು ಕಡಂಗಿ ಕವಿಯಲೊಡನೆ—

ವೃ॥ಕಡುಪಿಂಕಾಯ್ದೇರಿಸಿಂಗಾಡಿಯನೆಸೆಳೆದುಮೆಯ್ಯುರ್ವಿಕಯ್ಯಿಕ್ಕಿತೋಡು
ತೊಡನಂಬಂ ಬೆನ್ನ ಪೊಂಬತ್ತಳಿಕೆಯೊಳದಟಿಂ ಪೂಡಿ ಪೂಣ್ದೆಚ್ಚು ಕಾಲಾ |
ಳ್ಕೆಡೆವನ್ನಂ ಪಾಯ್ವ ಚಂಚದ್ರಥ ಚಯಮುಡಿವನ್ನಂ ಗಜಾಶ್ವಪ್ರತಾಸಂ |
ಮುಡಿವನ್ನಂ ಮಾಣದೆಚ್ಚಂ ಮದವದರಿ ಮಹೀಭೃನ್ಮಹೀಭೃನ್ಮಹೇಂದ್ರಂ॥೧೦೧

ವ॥ಆಗಳ್ಮಿತವಚನ ನುಚಿತ ಹಯಾರೂಢನಾಗಿ ಕರತಳದೊಳ್ಕಾಲಜಿಹ್ವೆಯಂ ಪೋಲ್ವ ಕರವಾಳಮಂ ಜಡಿದು ಝಳಂಪಿಸಿ ಜಳದಪಟಲ ದೊಳ್ಪೊಕ್ಕ ಜಂಝಾಪವನನಂತೆ ಮಿಕ್ಕು ಪೊಕ್ಕು—

ವೃ॥ ಪಡಲಿಡೆ ತೇರ್ಗಳಂ ಪೊಡೆದು ಸಾರಥಿಯಂ ತಿವಿದಶ್ವಕಂಧರಂ |
ಕಡಿಯೆರಡಪ್ಪಿನಂತರಿದು ಖಂಡಿಸಿ ತದ್ಧ್ವಜಮಂ ಪೊರಳ್ಚಿ ಮುಂ ||
ಗಡೆಯ ಭಟರ್ಕಳಂ ರಥದ ಚಕ್ರಮನಿರ್ಕಡಿಗೈದು ಸಾಹಸಂ |
ಬಡೆದಿದಿರಾಂತ ತದ್ರಥಿಕರಂ ತಲೆಗೊಂಡ ನಖಂಡ ವಿಕ್ರಮಂ || ೧೦೨

ವಚನ॥ ಮತ್ತಂ—

ವೃ॥ ಕರಿಶಿರಮಂವಿದಾರಿಸಿ ಕರಾಗ್ರದ ಖಡ್ಗದೆ ವಜ್ರಪಾತದಿಂ |
ಗಿರಿ ಬಿರಿವಂತೆ ಮೇಣ್ಬಿರಿದು ದಂತೆದರಂತರ ದೊಳ್ಪೊದಳ್ದ ಕೇ |
ಸುರಿಯಿರವೆಂಬಿನಂ ರುಧಿರವಾರಿ ಯೊಸರ್ತುದು ತದ್ರಸಾರ್ದ್ರಬಂ |
ಧುರತರ ಮೌಕ್ತಿಕಂ ಸಿಡಿವಕೆಂಗಿಡಿಯಂತಿರೆ ಪಾರಿತಾಜಿಯೊಳ್ ‖ ೧೦೩

ಕರಿಗಳ ಥಟ್ಟು ಪಟ್ಟಪರಿ ವಾಜಿಗಳೋಜೆಯ ಪೌಜು ಗಾಜುಗೋ |
ಜೆರದಿದಿರಾಗಿ ಮೊಗ್ಗರಿಸಿದಗ್ಗದ ತೇರ್ಗಳ ನುಗ್ಗುನುಗ್ಗು ಬಿ ||
ತ್ತರದೊಳೆ ಪಿಂಡುಗೊಂಡ ಭಟಮಂಡಳಿ ತಂಡದೆ ತುಂಡುತುಂಡದಾ |
ಗಿರೆ ಕಡಿದೊಕ್ಕಲಿಕ್ಕಿ ದನುದಗ್ರ ಸಮಗ್ರ ಮಹೋಗ್ರ ವಿಗ್ರಹಂ || ೧೦೪

ವ॥ ಅದಲ್ಲದೆಯುಂ ಮತ್ತಂ—

ವೃ॥ ಇರಿದ ರಿದಿರ್ಚಿದ ಪೂರ್ಡೆದರಿಟ್ಟ ರುರುಳ್ಚಿದ ರೊತ್ತಿ ತತ್ತರಂ |
ದರಿ ದರಡುತ್ತುರ್ ಸೀಳ್ದರರೆಯಟ್ಟಿದ ರೊಟ್ಟಿದ ರಟ್ಟೆಯಂ ಕೊರ ||
ಲ್ಗೊರೆದರ ದಿರ್ಚಿದ ಸ್ಸರ್ದೆದ ರಣ್ಮಿದ ರಿಕ್ಕಿದ ರೆಚ್ಚರಾದುರ್ ಬೊ |
ಬ್ಬಿರಿದ ರಡಂಗೆ ಪೊಯ್ದು ರರಿಸೈನ್ಯಮ ಸಾಹವದೊಳ್ಮಹಾಭಟರ್ || ೧೦೫

ವಚನ॥ ಅಗಳ್ಪ್ರಳಯಮೇಘ ಜ್ಯೋತಿ ಯೊಳಿದಿರ್ಚಿ ದಂಜನಾದ್ರಿಗಳಂತೆ ಕುಂಭಿಗಳ್ಕುಂಭಿನಿ ಯೊಳ್ಕುಂಬಿಟ್ಟು ಕೆಡೆಯೆಯುಂ ಶರಭನೊಳಾಂತ ಸಿಂಗಂಗಳಂತೆ ತುರಂಗಂಗಳ್ಪಂಗದೆ ಮುಂಗಡೆಯುಯೊಳುರುಳೆಯುಂ ಜಂಝಾಪವನನೋಳೊಡ್ಡಿ ನಿಂದ ನೀರತೇರ್ಗಳಂತೆ ತೇರ್ಗಳ್ನುಗ್ಗು ನುರಿ ಗೊಂಡು ಪಡಲಿಡೆಯುಂ ದವಶಿಖಿ ಯೊಳ್ಪೊಣರ್ಕ್ಕೆ ಗೊಂಡಪಾದಪಂಗಳಂತೆ ಪದಾತಿ ಗಳ್ಪನ್ನತಿಕೆ ಗೆಟ್ಟು ಮಡಿಯೆಯುಂ ಮಿತವಚನಂ ತನಗಿದಿರಾಂತ ರಿಬಲಮನಿಂತು ತವಿಸಿದಾಗಳ್—

ವೃ|| ತುಂಗಮತಂಗಜ ಪ್ರಕರ ಮಸ್ತಕಮೌಕ್ತಿಕರಾಶಿ ರಾಜಲೋ |
ಕಂಗಳ ಮೌಳಿಮಂಡಿತ ಮಣಿಪ್ರಕರಂ ನೃಪಚಾಪ ಮುಕ್ತ ಬಾ ||
ಣಂಗಳ ಪಾತದಿಂ ಸುರಿದಸೃಜ್ಞದಿಯೊಳ್ಪರಿದೈದಿ ಕೂಡೆರ |
ತ್ನಂಗಳವಂಗೆ ಮೇಣ್ದೊರೆದುವಲ್ಲದೊಡಬ್ಧಿ ಗವೆಂತು ಸಾರ್ದ್ದುರ್ವೋ || ೧೦೬

ಕಂ|| ಪಡಲಿಟ್ಟಪಡೆಯ ನೆತ್ತರ |
ಮಡುವಿ ನೊಳುಡಿದುಡಿದು ಕೆಡದಕರಿದಂತಂಗಳ್ ||
ಕಡಿವಡೆದ ಸುಭಟ ಶಿರಮುಂ |
ಪಡೆದುವು ತದ್ಬಿಸಬಿಸಪ್ರಸೂನದ ಸಿರಿಯಂ || ೧೦೭

ಘುಳುಘುಳಿಸಿ ಪರಿವ ನೆತ್ತರ |
ಪೊಳೆಯೊಳ್ನರೆ ಮುಳುಗಿ ಪಂದೊವಲ ಧೋತ್ರಮನು ||
ಟ್ಟೆಳಸರದ ಜನ್ನಿವಾರಮ |
ನಳವಡಿಸುತ್ತಲ್ಲಿ ಬೊಮ್ಮರಕ್ಕಸರೆಸೆದರ್ || ೧೦೮

ತಳಿರುಡೆಯೆನೆ ಪಂದೊವಲು |
ಟ್ಟೆಳಲತೆಯೆನೆ ನರವನೆತ್ತಿ ಸುತ್ತುತೆ ಗುಂಜಾ ||
ಫಳಮೆನೆ ತಳೆದಿಭಮುಕ್ತಾ |
ವಳಿಯಂ ಮರುಳಮಮ ಶಬರಿಯೆನಿಸಿತ್ತದರೊಳ್ || ೧೦೯

ವಚನ|| ಆಗಳ್—

ಕಂ|| ತಿಳಿಯೆ ನಿಜಮೂರ್ಛೆ ಮುರಿದಾ |
ಗಳೆ ಪರಿತಪ್ಪರ್ತ್ಮಬಲಮ ನೀಕ್ಷಿಸಿ ಭಯವಿ ||
ಹ್ವಳ ಸಿಂಹಳನಾ ಕೊಳುಗುಳ |
ದಿಳೆಯುಂ ಬೆಂಗೊಟ್ಟು ಜಗುಳ್ದ ನತಿಜವದಿಂದಂ || ೧೧೦

ವಚನ|| ಅಂತು ಜಗುಳ್ದು ಜಳಧಿಮಧ್ಯ ದೊಳ್ಸಬಳ ದುರ್ಬಳ ನಸ್ತಮಯ ಸೂರ್ಯನಂತೆ ತೇಜಂ ಗುಂದಿ ಪೊಕ್ಕು ಪೋಪಾಗಳ ರವಿಜಯ ವಿಕ್ರಮಾರ್ಕನವೋಘ ಬಾಣಮಂ ಕೇಣದಿಂ ಪ್ರಾಣಂಗೊಳಲೆಂದು ಮಾಣದೆ ಬಾಣಾಸನ ದೊಳ್ತೊಡ ಚ್ಚುರ್ವಾಗಳ್—

ವೃ|| ಶಕ್ರಮುಖಾಮರರ್ಕ್ಕಳೆಲೆನಿನ್ನದಟಿಂ ಗಗಿದೊಂದು ಗೊಂಟಿನೊ |
ಳ್ಸಕ್ರಮ ಮಿಪ್ಪರ್ ರಿನ್ನು ಮೆನೆ ಸಿಂಹಳನಾಂಪನೆ ಗಾಂಪು ದೋರಿಭೂ ||
ಚಕ್ರಕೆ ಪೊಕ್ಕ ನಕ್ಕಿ ಕಡಲಂ ತೊಡನಿರ್ತ್ತ ವಿಸಂಬನಿಂಜು ನಿ |
ರ್ವಕ್ರ ಪರಾಕ್ರಮಾಕ್ರಮಿತ ವಿಕ್ರಮ ವಿಕ್ರಮ ರಾಜಶೇಖರಾ || ೧೧೧

ವಚನ|| ಎಂಬಮಿಶವಚನನ ಹಿತವಚನ ಮನಾಕರ್ಣಿಸಿ ಸುಪರ್ಣ ಪರಾಕ್ರಮನಾ ಕರ್ಣಾರ್ಣಂ

ತವುಗಿದ ಕರ್ಗ್ಗಣಿಯನು ಪಸಂಹರಿಸಿದಾಗಳಾ ಸಿಂಹಳಂ ಪಡಂಗೇರಿ ಕಡಲೊಳ್ಪಿಂಗೊಟ್ಟು ಪೋಗಲೊಡನೆ—

ವೃ॥ ಅತುಳಿತ ತತ್ಪ್ರತಾಪ ಬಡಬಂಗಗಿದಂತಿರೆ ಸಿಂಹಳೇಂದ್ರನ |
ಪ್ರತಿಮ ಮದಾಬ್ಧಿ ವೈದೆಗೆದವೋಲ್ಮುಳಿಸಿಂದಮೆ ರಾಜಶೇಖರ ||
ಕ್ಷಿತಿಪತಿ ಶೈವಮಂತ್ರನಿಧಿ ಸೋಳ್ಪುದು ಮಳ್ಕಿ ಪಯೋಧಿ ಬಟ್ಟೆಗೊ |
ಟ್ಟತಿ ಶಯವಾಗೆ ನೀರ್ದ್ದೆಗೆದುದಾ ರಿಪುಸೀಮೆಯೆ ಸೀಮೆಯಪ್ಪಿನಂ || ೧೧೨

ಕಂ|| ಪರಿಗತಪದ್ಮ ಮಹಾಪ |
ದ್ಮ ರುಚಿರ ವರಶಂಖ ಮಕರ ಕಚ್ಛಪ ನೀಲ ||
ಸ್ಫುರಿತ ಮುಕುಂದಂ ಕುಂದದ |
ಶರನಿಧಿ ಯಕ್ಷೇಂದ್ರ ನಿಧಿಯಿದೆನೆ ಸೊಗಯಿಸುಗುಂ || ೧೧೩

ಪೊಸಬಿಸಿಲದು ಪೆರದೆಗೆದಿರೆ |
ಕಿಸುಸಂಜೆಯು ಮುಡುಸಮೂಹಮುಂ ಮಿಸುಪವೋಲೇ ||
ನೆಸೆದುದೊ ಪವಳಂ ಮುಕ್ತಾ |
ವಿಸರಂ ಜಾಂಬವ ಜಳಂ ಪೆಡಂಮೆಟ್ಟಲೊಡಂ || ೧೧೪

ಅಘಟಿತಮಿದಲ್ತೆ ಮುನ್ನಂ |
ರಘುವಂಶ ಭವಂಗಮೇನಿ ದಿತ್ತುದೆ ಪಥಮಂ ||
ಪೃಥುನ ಪ್ರತಾಪ ಮಹಿಮಾ |
ಲಘು ತರನಿವನಬ್ಧಿಯಂ ಪೆಡಂಮೆಟ್ಟಿಸಿದಂ || ೧೧೫

ವಚನ||ಎಂದಂಬರ ದೊಳಂಬರ ಚರಪೊರ್ಗೆಗೆಳುತ್ತುಮಿರೆನಿಜಬಳಂ ಮುದಂಬಡುತ್ತಿರೆ ಪಡಿಬಳಂ ಕಂಗೆಡುತ್ತು ಮಿರೆ ಕಡುವೇಗದಿಂ ಕಮಳಾವತಿಯೆಂಬ ನಿಜದುರ್ಗಮನವಂ ಪೋಗಿ ಪೊಕ್ಕಾಗ ಳ್ಕುಪಿತರಿಪುಪನ್ನಗ ಸುಪರ್ಣಂಬೆನ್ನನೆ ಪೋಗಿ ಪನ್ನತಿಕೆಯಿಂ ತನ್ನ ಬಲಂಬೆರಸು ಸುತ್ತಿ ಪತ್ತಿ ಮುತ್ತಿದಾಗಳ್—

ವೃ|| ಉರಿವರಿವೆಣ್ಣೆ ಪಂದಿದಲೆ ಪೆರ್ದ್ದೊಲೆ ಬಲ್ಮೊನೆಗಲ್ಕೃಶಾನುವೊ |
ಳ್ಬೆರಸಿದ ಪುಲ್ಲದೊಂದೆ ಪೆಟಲುಪ್ಪಿನ ಪರ್ದ್ದಿದಿ ಮದ್ದಿವೆಂಬಿವಂ ||
ಸುರಿದಿಳಿವಾಯ್ಕನೂಂಕಿ ಸೆಳೆದಿಟ್ಟೊಡ ನಲ್ಲಿಳಿದಿಟ್ಟು ಸೂಸಿ ಪೊ |
ಯ್ದುರಿಭಟರಿಂತು ಕಾದುತಿರೆ ಮುತ್ತಿ ಬರಳ್ಕದೆ ತನ್ಮಹಾಭಟರ್ || ೧೧೬

ವಚನ|| ಇಂತು ಮೊತ್ತಂಬೆತ್ತು ಮುತ್ತಿಲಗ್ಗೆಗಗ್ಗರಿಸಿಪಾರ್ಗೆಳಾ ಸಿಂಹಳೇಂದ್ರಂಘೋರ್ವಿಸಿ ನಿಜಬಳಂಬೆರಸು ಕಾಳೆಗಕ್ಕೆ ಪೊರಮಡಲುಜ್ಜುಗಿಸಿ ಸಜ್ಜುಗೆಯ್ವುತಿರ್ಪಿನ ಮಾಗಳ್ನೀತಿ ಭೂಷಣನೆಂಬ ಮಂತ್ರಿ ಶಂ ಕೃತಾಂಜಲಿಪುಟನಾಗಿ ವಿನಯದಿಂದಿಂತೆಂದಂ—

ವೃ|| ಆವಧರಿಸಣ್ಣ ಸಿಂಹಳನರೇಶ್ವರ ಮದ್ವಚವಮಂ ಮನುಷ್ಯಭೂ |
ಧವ ಶಿವನೆಂದು ನೀಂ ಬಗೆಯದಿ ಶಿವಮಂತ್ರಭವಂ ಮಹಾಪ್ರಭಾ ||
ವವಿದಿತ ಶೌರ್ಯನಾತನೊಳೆ ನಿಲ್ವುದು ಗೆಲ್ವುದು ಮಾರ್ಗ್ಗ ಮಾಗದೀ ||
ಭುವನ ದೊಳಂತರಿಂದೆಸಗು ಸಂಧಿಯ ನೀಂ ಬಿಡು ತದ್ವಿರೋಧಮಂ || ೧೧೭

ವಚನ|| ಅದಲ್ಲದೆಯುಂ—

ವೃ|| ಪಿಡಿವರ್ಬಡಬವಹ್ನಿಯಂ ಮಿಡಿವರಾದಿತ್ಯೇಂದುಬಿಂಬಂಗಳಂ |
ಕುಡಿವರ್ಸಪ್ತಸಮುದ್ರಮಂ ಪೊಡೆವರಾಶಾದಂತಿಯಂ ಕಿಳ್ತು ಮೇ ||
ಲಿಡುವರ್ಮೇರುವ ನೊತ್ತಿಸುತ್ತಿ ತುಡುವರ್ಶೇಷಾಹಿಯಂ ಪಾಯ್ದು ಪೊ |
ಯ್ದೊಡೆ ವರ್ಪದ್ಮಭವಾಂಡಮಂ ಮೃಡನ ಭಕ್ತರ್ಬಲ್ಲಿದ ರ್ಭೂವರಾ||೧೧೮

ಕಂ|| ಪಡೆ ಪಡಲಿದೆ ಪಡಗೇರು |
ತ್ತೊಡ ನೈರೆ ನೀನುಮಾತನುಂ ಬೆಂಕೊಳಲಾ ||
ಕಡಲಳ್ಕೆ ಬಟ್ಟೆಗೊಟ್ಟುದು |
ಗಡ ನಡೆನೋಳ್ಪಾಗಳಾ ತನೇಂ ಜಾವಳನೇ || ೧೧೯

ವಚನ|| ಅಂತುಮಲ್ಲದೆಯುಂ—

ಕಂ|| ಅತಿಸಾಹಸಿ ಸತ್ಯವಚೋ |
ನ್ನಿತ ನಧಿಕದಯಾಳು ಧಾರ್ಮಿಕಂ ಪರಹಿತ ಪಂ ||
ಡಿತ ನುಚಿತಜ್ಞಂ ತಜ್ಜ್ಞೋ |
ನ್ನತಾ ವೃತಂ ತನ್ನೃಪಾತ್ಮಜಂ ಸಂಧೇಯಂ || ೧೨೦

ಮಾಯಾವಿ ದೈವವಿಮುಖನ |
ಪಾಯಾಸ್ಪದ ನಾಪ್ತರಹಿತ ನತಿಚಪಲ ಸುಷಾ ||
ಡೇಯ ಜಡಮತಿ ಯತಿಹತೋ |
ಪಾಯಂ ಸಂಧೇಯನಲ್ತವಂ ರಣಜೇಯಂ || ೧೨೧

ಕ್ಷಿತಿಯೊಳ್ಸಮನೆನಿಪ ಮಹೀ |
ಪತಿಯೊಳ್ಸಲೆ ಸಂಧಿಗೈವುದಾಗದು ತನ್ನಿಂ ||
ದ ತಿಬಳನಜೇಯ ನೆನಿಪು |
ನ್ನತ ನೊಳ್ನುತಮಲ್ತೆ ಸಂಧಿಕಾರ್ಯಂ ನೃಪತೀ || ೧೨೨

ಎಲ್ಲಂದದಿಂದೆ ಕಾರ್ಯದ |
ಗೆಲ್ಲಂಗಾಣಲ್ಕೆ ಬಲ್ಲೊಡಾತನೆ ಬಲ್ಲಂ ||
ಬಲ್ಲಹ ಮೇಣರಿಯದೊಡ ವ |
ನಲ್ಲದೆ ಗಾಪಿಲ ನಿಳಾಗ್ರದೊಳ್ಪೆರನೊಳನೇ || ೧೨೩

ವೃ|| ಅತಿಕೋಪಾತುರ ನಾಪ್ತವಾಕ್ಯಬಧಿರಂ ಮಾಯಾವಿ ಸಂಘಾತನಂ
ಗತಿರಕ್ತಂ ರತಿಲಂಪಟಂ ಮದಯುತಂ ಮಾನಾತ್ಯಯಾಭೀತನು ||
ದ್ಧತವೃತ್ತಂ ಗತಧೈರ್ಯ ನಾರ್ಯವಿಮುಖಂ ನಿದ್ರಾಳು ತಾನಾದ ಭೂ |
ಪತಿಗಾದ್ಯೈಸಿರಿ ಗಾಳಿಗೊಡ್ಡಿದ ಸೊಡರ್ಪಿನಂತಾಗದೇಂ ಪೋಕುಮೇ ||೧೨೪

ಕಂ|| ಅದರಿಂದೆ ನೀತಿವಿದನ |
ಪ್ಪುದು ನರಪತಿ ವಿಬುಧರೊರೆದವೋಲ್ನಡೆವುದು ತ ||
ಪ್ಪದೆ ಸಿರಿ ಜಸಮಂ ಬೆರೆವುದು |
ವುದುವಾಳ್ವುದು ಬಾಳ್ವುದಾರ್ಯತತಿ ಮಚ್ಚುವಿನಂ||೧೨೫

ಕಲೆಯರಿಯದ ವಿಟನಾತ್ಮನ |
ನೆಲೆಯರಿಯದ ಯೋಗಿ ವೇದಮರಿಯದ ಪಾರ್ವಂ ||
ಬಲವರಿಯದ ದಳಪತಿ ನಯ |
ದೊಲವರಿಯದ ನೃಪತಿ ಬಲ್ಲರಂ ಮಚ್ಚಿಕುಮೇ || ೧೨೬

ಸರಸಗುಣಶಾಲಿ ದೋಷಾ |
ಕರಾಹಿತಂ ಸ್ವಪ್ರಸಿದ್ಧಮ ತಿಬಂಧುರವಂ ||
ಬುರುಹಮದು ಮಿತ್ರರುಚಿ ವಿ |
ಸ್ಫುರಿತಂ ಸಿರಿಗಾದುದಲ್ತೆ ಮನೆ ಮನುಜೇಂದ್ರಾ || ೧೨೭

ಸೋದರಿಯ ಮನೆಗೆ ಪಗೆ ಪಗೆ |
ಗಾದಂ ನೆಲೆ ಸಲೆ ಕಲಂಕಿ ದೋಷಾಕರನಾ ||
ಹ್ಲಾದಿ ಗತಮಿತ್ರತೇಜ ದೊ |
ಳಾದಾರಾಜಂಗಮೇಂ ಕ್ಷಯಂ ಸಮನಿಸದೇ || ೧೨೮

ಎಡರಂ ಪರಿವೊಡೆ ಸಿರಿಯಂ |
ಪಡೆವೊಡೆ ಪಳಿವೊರ್ದದಮಳ ಗುಣಗಣಮಂ ತಾ ||
ಳ್ವೊಡೆ ಜಸಮನಾಂತು ಬಾ |
ಳ್ವೊಡೆ ನುಡಿಯಂ ಕೇಳ್ವುದು ಜನಾಧಿಪಂ ಬುಧಜನರಾ ||

ಕ್ಷಿತಿನಾಥ ನೀತಿವಿದ್ಯಾ |
ಚತುರ್ಮುಖಂ ಗಮಮ ನಿನಗೆ ನೃಪನೀತಿಗುಣೋ ||
ನ್ನತಿಯಂ ಪೇಳ್ವುದು ಕಂತುಗೆ |
ರತಿಕೃತಿ ಚತುರತೆಯ ನೊಸೆದು ಪೇಳ್ವವೊಲಕ್ಕುಂ || ೧೩೦

ನಯಜಲಧಿ ನಿನ್ನೊಳೀಪ |
ನ್ನಯ ಪಯಮಂ ಪಡೆದು ಮುನ್ನಮೀರಸನಾಬ್ದಂ ||
ರಯದಿಂ ಸುರಿಯಲ್ಶ್ರುತಿ ಶು |
ಕ್ತಿಯೊಳೀಗಳ್ಸಫಲ ಭಾವಮಂ ತಳೆಯದೆ ಪೇಳ್ || ೧೩೧

ದೇವ ನೃಪನೀತಿಸಾರಮ |
ನಾವಂ ನಿನ್ನಂತೆ ಬಲ್ಲನೀಭುವನದೊಳೆ ||
ನ್ನೀ ವಿಜ್ಞಾಪನಮಂ ಪರಿ |
ಭಾವಿಸಿ ಸಂತಕ್ಕೆ ನಡೆ ಸಮುನ್ನತಸತ್ತ್ವಾ || ೧೩೨

ವಚನ|| ಎಂದನೇಕ ವಿಧದಿ ನಾನೀತಿಭೂಷಣಮಂತ್ರಿಪಂ ಸಾಭಿಪ್ರಾಯ ಹಿತಮಿತ ಪ್ರಚುರವಚನ ನಿಚಯದಿ ನೊಡಂಬಡಿಸುತ್ತಿಲ್ಲಿಂ ತಳ್ವದೆ ಕೊಳುಗುಳದೆಡೆಗೆತಳರ್ದು ತನ್ಮಂತ್ರಿಪನಂ ಸಂಧಿಸಿ ಸಂಧಿಕಾರ್ಯೋಚಿತ ವಚನ ನಿಚಯದಿ ನೊಪ್ಪುಗೊಳಿಸಿ ತತ್ಸಮೇತಂ ಬಂದು ಮಣಿರಥದೊಳಿರ್ದ ರಾಜಶೇಖರ ರಾಜೇಂದ್ರಂಗೆ ಮಣಿಮಕುಟಮಂ ಮಣಿದು ಬದ್ಧಾಂಜಲಿಯಾಗಿ ನಿಂದಿರ್ಪುದುಂ ನಿಜಮಂತ್ರಿ ವದನ ವಿಜ್ಞಾಪನ ವಿದಿತಾಖಿಳ ವೃತ್ತಾಂತನುಪಶಾಂತಚಿತ್ತನಾಗಿ ನಡೆನೋಳ್ಪಾಗಳ್—

ಕಂ|| ಅಳಿಯೆ ತಮಮಿಂದು ಚೆಂಗದಿ |
ರ್ಗಳ ಸುಳಿದ ಮಳಾಂಶು ಗರೆವ ವೋಲ್ರಿಪುಗರ್ವಂ ||
ಕಳಿಯೆ ಗತರಾಗ ನಯನಾಂ |
ಚಳ ರುಚಿಯಂ ತನ್ಮುಖಾಬ್ಜಮೇಂ ಸೂಸಿದುದೋ || ೧೩೩

ವಚನ|| ಆಗಳಾನೀತಿ ಭೂಷಣ ನಿಂತೆಂದಂ—

ಕಂ|| ಯುವರಾಜ ರಾಜಶೇಖರ |
ಭವದಾಹವ ವಿಕ್ರಮಕ್ಕೆ ಕೌತುಕಮಾಳ್ದಿ ||
ಮ್ಮವನೀಶಂ ಮುರ್ಚ್ಛ ಮಹೋ |
ತ್ಸವಮನನಾಗುತ್ತೆ ಮತ್ತೆ ಕಳಿಪಿದ ನೆನ್ನಂ || ೧೩೪

ಎಮಗಂ ತಮಗಂ ಸಲ್ಲದು |
ಸಮರಂ ಕಂಡಪೆವು ಕಪ್ಪಮಿತ್ತಪೆ ವೆಂಬೀ ||
ಕ್ರಮಮಂ ಬಿನ್ನವಿಸಲ್ಕೆಂ |
ದು ಮದೀಶ್ವರ ನೆನ್ನನಟ್ಟಿದಂ ಯುವರಾಜಾ || ೧೩೫

ವಚನ|| ಎಂಬುದು ಮಾಧೀರೋದಾತ್ತ ಸಾರ್ವಭೌಮಂ ನಿಜಸಚಿವ ವದನಾರವಿಂದಮಂ ನೋಡಲೊಡನೆ—

ವೃ|| ಎರೆದಗ್ಗಿರ್ಗಲ್ಲೆನ್ನ ದೀವಗ್ಗಳಿಕೆ ಮರೆಗೆ ಬಂದಾತಸಂ ಕಾವಪೆಂಪಾಂ|
ತರಿಯಂ ಸೀಳ್ದಿಕ್ಕು ವಾಪರ್ವಾರ್ಶ್ರಿತರ ಸುದಿಸಂ ಪಾಲಿಪೊಂದೊಳ್ಪು ಗಾರೀ ||
ವರಭಕ್ತ ವ್ರಾತಮಂ ಮನ್ನಿಪಬಗೆ ತೊದಳೊಂದಿಲ್ಲದೊಳ್ವಾತು ಶಾಸ್ತ್ರೀ |
ತ್ಕರ ಪಾಂಡಿತ್ಯಂಭವದ್ವಂಶಜರೊಳಿದುನಿಬದ್ಧಂ ನಿತಾಂತಂ ಪ್ರಸಿದ್ಧಂ ||೧೩೬

ವಚನ|| ಎಂದು ಳ್ಳುದನುಪಚಾರ ಮಿಲ್ಲದೆ ನುಡಿದು ಮತ್ತ ಮಿಂತೆಂದಂ—

ಕಂ|| ಭುವನತ್ರಯ ದೊಳ್ನಿನ್ನೊ |
ಳ್ಭವರಂ ಗೊಳಲಾ ಸ್ಸಮರ್ಥ ರದರಿಂದ ಮನೀ ||
ಧವ ಸಿಂಹಳೇಂದ್ರ, ನೊಳ್ಸಂ |
ಧಿವಿಧಾಸಮನಪ್ಪುಕೈದಯ್ಯಾಳುಗಳರಸಾ || ೧೩೭

ವಚನ|| ಎಂಬ ವಿಜ್ಞಾಪನದಿಂ ತನ್ಮನಃಪ್ರಸನ್ನತೆ ವಡೆದು ಬಂದಸಚಿವನನುಚಿತೋಕ್ತಿಗಳಿಂ ಮನ್ನಿಸಿ ಗಳಿಲನೆ ಕಳಿಪಲವಂ ಬಂದೀವೃತ್ತಾಂತ ಮೆಲ್ಲಮ ನುನ್ನತೋತ್ಸವಂ ಬಿನ್ನಹಂಗೆಯ್ಯ ಲೊಡನೊಡಂಬಟ್ಟವಂಗೆ ಬಹುಭೂಷಣಾಂಬರಂಗಳಂ ಮಟ್ಟುಗೊಟ್ಟು ಪಟ್ಟವಣೆಯಿಂದೆಳ್ದು ಪಟ್ಟಣಮಂ ಸಿಂಗರಿಸಿ ನಿಜಸಚಿವಸಾಮಂತ ದಂಡನಾಥ ಮಂಡಳಿಕರ್ವೆರಸು ವಿತತ ಕರಿ ತುರಗ ರಥ ಸುಭಟ ಪಟಲ ಪರಿವೃತಂ ಪಟಹ ಡಿಂಡಿಮ ಶಂಖ ತಾಳ ಕಹಳಾ ಬಹುಳನಾದ ಬಧಿರೀಕೃತ ದಿಶೇಂದ್ರಂ ಸಿಂಹಳೇಂದ್ರಂ ಸಾಂದ್ರ ಹರ್ಷಮ ನಾಂತು ನಡೆದಿದಿಗೊಂಡು ರಾಜಶೇಖರ ರಾಜೇಂದ್ರನಂ ರಾಜವೀಥಿಯೊಳೋಜೆ ವಿಗೆ ತಪರ್ಗಳ್—

ವೃ|| ಶ್ರೀಮತ್ಪ್ರಾಲೇಯಶೈ ಲೊದ್ಭವೆ ಶಿವೆ ಭುವನಾರಾಧ್ಯೆ ಕಲ್ಯಾಣಿಸಾಕ|
ಲ್ಯಾಮರ್ತ್ಯಶ್ರೇಣಿ ರಕ್ಷಾಕರೆ ಭವಹರೆ ಶರ್ವಾಣಿಗೀರ್ವಾಣಮೌಳಿ ||
ಸ್ತೋಮಪ್ರೋದ್ಧಾಮ ರತ್ನವ್ರಜ ಶಬಳರುಚಿಸ್ನಿಗ್ಧಪಾದಾಬ್ಜೆ ದೇವಿ |
ಪ್ರೇಮಂ ಚಿತ್ತೈನ್ನನಾಗಳ್ಪೊರೆ ಪುರಹರಚೇತಸ್ಸರೋರಾಜಹಂಸೀ || ೧೩೮

ಗದ್ಯ|| ಇದು ವಿನಮದ ಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್

ರಾಜಶೇಖರ ವಿಜಯ ವರ್ಣನಂ

ಷಷ್ಠಾಶ್ವಾಸಂ

ಸಂಪೂರ್ಣಂ



# ಸಪ್ತಮಾಶ್ವಾಸಂ

(ಸರ್ವಮಂಗಳಾದರ್ಶನ ವರ್ಣನಂ)

---

ಕಂ|| ಶ್ರೀರಮಣೀ ಧರಜಾ ಕುಚ |
ಭೂಧರ ಕೃತಧಾತು ನಿಜಕರಾರುಣರುಚಿ ಗಂ ||
ಗಾಧರನೆಮ್ಮಂ ಪೊರೆಗೆ ಪ |
ಯೋಧರ ಶಿತಿಕಂಧರಂ ಸದಾಶಿವಲಿಂಗಂ || ೧

ಕರಿ ಕಾಮುರ್ಗಿಲಂತಿರೆ ಬ |
ಜ್ಜರ ದಂಕುಶ ಮಮರ್ದ*ವಜ್ರದಂತಿರೆ ಮೇರಿಂ ||
ದಿರ ನಾರೋಹಿಸಿ ಬರ್ಪಂ |
ತಿರೆ ಬಂದಂ ರಾಜಶೇಖರಕ್ಷಿತಿಪಾಲಂ || ೨

ವೃ|| ಇನರುಚಿಯುಂ ಪಳಂಚಲೆಯೆ ಮೌಳಿಮಣಿಪ್ರಭೆ ಗಂಡಭಿತ್ತಿಯಂ |
ಘನಮಣಿ ಕುಂಡಲಾಂಶು ವಿಳೆ ಚಿತ್ರಿಸೆ ವಕ್ತ್ರಮರೀಚಿ ಪೂರ್ಣಚಂ ||
ದ್ರನ ಕದಿರಂ ಪಗಲ್ತರೆ ತನುದ್ಯುತಿ ತಳ್ವದೆ ನೋಳ್ಪ ಕಾಮಿನೀ |
ಜನ ಮನದೊಳ್ಮನೋಜ ಜನನಂ ಬಡೆಯುತ್ತಿರೆ ಬಂದನಾ ನೃಪಂ ||

ವಚನ|| ಅಂತು ಬಪ್ಪಾಗಳ್—

ವೃ|| ಪಾಡುವ ಗೀತಮಂ ನಿಲಿಸಿ ವೀಣೆಯ ನಾಳಿಯ ಕಯ್ಯೊಳಿತ್ತು ಮ|
ತ್ತಾಡುವ ನೆತ್ತಮಂ ಬಿಸುಟಲಂಕೃತಿಯಂ ರಯದಿಂದೊಡರ್ಚ್ಚಿ ಮೇ ||
ಳ್ನೋಡುವ ನೃತ್ಯಮಂ ತೊಲಗಿ ಕೇಳ್ವಿನಿ ಗಬ್ಬಮ ನೊತ್ತಿ ಬಂದವ |
ನ್ನೋಡಿದರಾಕುಮಾರಕನನಾಪುರದಂಗನೆಯ ವ್ವಿಳಾಸದಿಂ || ೪

ವಚನ|| ಮತ್ತ ಮವರೊಳೊರ್ವ್ವಚ್ಚಿಗಾತ್ರಿ—

ವೃ|| ಕೆಂಬರಲೋಲೆ ಕೇತಕಿಯ ಸೋಮ್ಮುಡಿ ಕೆಂದಳಿರುದ್ಧ ಕರ್ಣಪೂ |
ರಂ ಬಗೆಗೊಂಬ ಮಲ್ಲಿಗೆಯ ಚೊಲ್ಲೆಯ ಮಜ್ಜಗುಣಾಂಬರಂ ಸುವ ||
ರ್ಣಾಂಬುಜ ಕರ್ಣಿಕಾರಚಿತಕಾಂಚಿ ತೆರಂಬೊಳೆದೊಪ್ಪೆ ಪೂತಮಾ |
ವಂ ಬಿಡದೇರಿ ನೋಳ್ಪರತಿಯಂತಿರೆ ಸೌಧಮನೇರಿ ನೋಡಿದಳ್ || ೫

ವಚನ|| ಮತ್ತೊಂದುಭವರ್ ಹರ್ಮ್ಯದಗ್ರದೇಶದಲ್ಲಿ —

ವೃ|| ಸಿರಿವಿಡಿದುಟ್ಟ ಚೀನಲಲಿತಾಂಬರಮಂ ಪೊಸಮುತ್ತುದೊಟ್ಟ ಮೇ|
ಣ್ಮೆರುಗುವ ವಜ್ರದೋಲೆಗಳ ಪಾಲೆಗೆಳೊಳ್ತಳೆದಣ್ಪುಗೆಯ್ದು ಬಾಂ ||
ದೊರೆ ನೊರೆಯಂತೆ ತೋರ್ಪ್ಪ ಸಿರಿಕಂಡ ಮನೊರ್ವ್ವ ಬೆಡಂಗಿ ವೀಣೆಯಂ |
ನೆರೆ ಪಿಡಿದೇರಿ ವಾಣಿಯೆನೆ ಜಾಣೆ ಜಲಕ್ಕನೆ ನಿಂದು ನೋಡಿದಳ್ || ೬

ವೃ|| ಕನತ್ಕನಕಭೂಷಣಂದಳೆದು ಕುಂಕುಮ ಕ್ಷೋದಮಂ |
ಘನಸ್ತನಕೆ ಲೇಪಿಸುತ್ತೊಡನೆ ತಾಳ್ದು ಪೊಂಬಟ್ಟೆಯಂ ||
ವನೇರುಹಮನೋಜೆಯಿಂ ಪಿಡಿದು ನಿಂದು ಹರ್ಮ್ಯಾಬ್ಜದೊಳ್ |
ಜನೇಶಸುತನಂ ರಮಾವಧು ವೆನಲ್ಪೆರಳ್ನೋಡಿದಳ್ || ೭

ವಚನ|| ಮತ್ತ ಮೊರ್ವ್ವಳ್ಮಾಧುರ್ಯಮನೋಹರೆ—

ವೃ|| ಮುಡಿಯಿಂಪೂಮಾಲೆಸೂಸುತ್ತಿರೆಪೊಡರೆನಿತಂಬದ್ವಯಂಮುಂಗುರುಳ್ಗಾ
ಲ್ವಿಡಿದೆತ್ತಂ ನರ್ತಿಸುತ್ತೊಪ್ಪಿರೆ ಚಳಧವಳಾಪಾಂಗೆ ಮಿಂಚಾಗೆ ಕಂಪಂ ||
ಬಡೆದುತ್ತುಂಗ ಸ್ತನಂಗಳ್ಮಸುಗೆ ಸಿರಿ ಕರಂ ಜಾರೆ ನೈಪಥ್ಯಮಂ ತಾಂ |
ತೊಡೆದಿರ್ದ್ದಂತೆ ಬಂದಂದವನಿಪತಿಯನಬ್ಜಾಕ್ಷಿ ನೋಡುತ್ತ ಮಿರ್ದ್ದಳ್

ವಚನ|| ಮತ್ತಮೊರ್ವ್ವಳಖರ್ವಸಗತಾರುಣ್ಯವತಿ—

ವೃ|| ಅಳಿದಳಕಾಳಿ ಕಂಪಿಸುವನುಣ್ದೊಡೆ ಸೂಸುವ ಸುಯ್ಯೆ ಮರ್ತ್ತಕೋ|
ಮಳತನು ಗುಜ್ಜುಗೊಂಡಮೊಲೆಯುಬ್ಬಿ ಬೆಳರ್ತ್ತಧರಂ ಸಡಿಲ್ದಮಂ ||
ಜುಳ ವಸನಂ ಸರಾಗ ನಯನಾಂಚಳವೊಪ್ಪಿರೆ ಕಂತು ಕೇಳಿಯಾಂ |
ತೆಳೆಯು ಳೊರಲ್ದು ಬಂದು ಮಣಿವಾಗಿಲೊಳೀಕ್ಷಿಸಿದಳ್ಮಹೀಶನಂ || ೯

ಕುರುಳಂ ಕೂರುಗುರಿಂದೆ ನೇವರಿಸುತುಂ ಹಸ್ತಾಬ್ಜಮಂ |
ತಿರುಪುತ್ತುಂ ಕಚಗಂಧಕಾರ್ದ್ದರಪ ಭೃಂಗವ್ರಾತಮಂ ಸೋವೃತುಂ ||
ಪರಪುತ್ತುಂ ನವಪುಷ್ಪವೃಷ್ಟಿ ಯನಪಾಂಗದ್ಯೋತಿಯಿಂ ದೊರ್ವ್ವಸುಂ |
ದರಿ ಬಂದೀಕ್ಷಿಸಿದಳ್ಪ್ರಸೂನವಿಶಿಖಶ್ರೀರೂಪನಂ ಭೂಪನಂ|| ೧೦

ವಚನ|| ಮತ್ತಂ—

ವೃ||ಮುಡಿ ಬಿಡಿತಂದು ಸೂಸೆ ಮುಗುಳಂಮೊಲೆ ಮೇಲುದನೊತ್ತೆ ಬಳ್ಕಿತೆ|
ಳ್ನಡು ಕಡೆಗಣ್ವಿಳಾಸಮನೆ ಸೂಸೆ ರವಂ ಗುಡೆ ಕಾಂಚಿ ಬಿಣ್ಪಿನಿಂ ||
ಜಡಿಯೆ ನಿತಂಬಬಿಂಬಮಿಳಿದೊಪ್ಪಿರೆ ಬಳ್ಸಿರಿ ನೀರೆ ಸಾರೆವಂ |
ದಡರ್ದೆಳೆ ಮುತ್ತಿನುಪ್ಪರಿಗೆಯಂ ನಡೆನೋಡಿದಳಾನರೇಂದ್ರನಂ || ೧೧

ಕಡೆಗಣ್ಕಂತು ಶರಾಸನಕ್ಕೆ ಸುಮನೋಬಾಣಂಗಳಂ ನೀಡೆ ಸೋ |
ಮ್ಮುರ್ಗಡಿ ಸಾದ್ರಾರ್ದ್ರಡಿಗಳ್ಗೆ ಸಾರ್ಚ್ಛೆ ಕುಸುಮಾಮೋದಂಗಳಂ ಚೆಲ್ವಮೆ ||
ಲ್ನಡಿ ಪಾಂಡಿತ್ಯಮ ನೀಯೆ ಕಯ್ಯ್ಗಳಿಗೊಲ್ದ್ಯೆತಂದ ರಾಯಂಚೆಗೊ |
ಳ್ನಡೆಯಂ ಮೆಲ್ಲಡಿ ಬೀರೆ ಬಂದು ಪೆರಳೊರ್ವ್ವಳ್ಭೂಪನಂ ನೋಡಿದಳ್ || ೧೨

ಕುಡಿಮಿಂಚಂ ಮುರಿದಂತಿರಾಗೆ ಕಡೆಗಣ್ನೋಟಂ ಮೃದುಸ್ಮೇರ ಮಿಂ |
ಗೆಡಲಂ ತಳ್ಕಿ ದಮಾಳ್ಕೆಯಿಂದೊಗೆಯೆ ಜೇನ್ಸೈಸೋನೆಯಂ ಸೂಸೆ ಮೆ ||
ಲ್ನಡಿ ಪಾದಾರುಣರೋಚಿ ಚೆಂದಳಿರ್ಗಳಂ ಸಾಲಿಟ್ಟವೋಲೊತ್ತೀರೆ ಬಂ |
ದುಡುರಾಜಾನನೆ ರಾಜಶೇಖರನನೊರ್ವ್ವಳ್ಕೂರ್ಮ್ಮೆಯಿಂ ನೋಡಿದಳ್ || ೧೩

ವಚನ|| ಇಂತು ನೀರೆಯರ್ನೆರೆನೆರೆದು ನೆಲಿವಾಸಂಗಳ ನೆಲೆನೆಲೆಯೊಳ್ನೋಡುತ್ತುಮಿ
ರೆ ಯಿರೆ—

ಕಂ|| ಸೆಳೆದುದವರಾಸ್ಯರುಚಿ ನವ |
ಸಳಿಳ ಚಳಚ್ಚಪಳ ನಯನಶಫರಂ ಗಳನಾ ||
ನಳಿನ ದಳಧವಳನಯನನೋ |
ಜ್ಜ್ವಳ ರುಚಿಜಾಳಕ ಮಿಳಾತಳಾಧಿಪ ಸುತನಾ || ೧೪

ವಚನ|| ಆಗಳಿತ್ತಲಾ ಸಿಂಹಳೇಂದ್ರನಂತಃಪುರ ಸರೋವರ ಬಾಲಹಂಸಿ ಸರ್ವಮಂಗಳಾ ವರದಿಂ ದುದಯಿಸಿದ ಸರ್ವಮಂಗಳೆ ಯೆಂಬ ತದ್ರಾಜಪುತ್ರಿ ರತಿವಿಳಾಸಮಂ ತಳೆದತಿವಿನೋದ ದಿಂ ಕೇಳೀವನದ ಕೆಂದಳಿರ್ವಂದರೊ ಳವಳಯದ ಕುಸುಮ ಮಂಟಪದೊಳಲರ್ವ್ವಸೆಯೊಳ್ಪ ಸದನಂಗೊಂಡು ಕುಳ್ಳಿರ್ದ್ದ ಸೌಂದರ್ಯ ಶಾರದೆಯೆಂಬ ಸಖಿಯ ಸಂಗೀತ ಮನಾಲಿಸುತಿ ಪ್ಪಿನ ಮಾಳೀಜನಂ ಪರಿತಂದು ಸಂದಣಿಸಿ ನಿಂದು—

ವೃ|| ಜಲಜಾತಾಯತಲೋಚನಂ ಕುಮುದಿನೀಕಾಂತಾನನಂ ಕಾಂತಿಮಂ|
ಜುಲ ಕಾಯಂ ನವಯೌವನಾಂಕನತಿಸೌಂದರ್ಯಾನ್ವಿತಂ ರಾಜಸಂ ||
ಕುಲದೊಳ್ಮೀರಿದ ನೀರನೈತರ ತು ಮಿರ್ಪ್ಪಂ ನೋಡಲೇಳೆಂದು ಪೇ |
ಳೆ ಲಸತ್ಸಿಂಹಳರಾಜನಂದನೆ ಮನಂದಂದೆಳ್ದ ಳಂದೀಕ್ಷಿಸಲ್ || ೧೫

ಅರಗಿಳಿಮಿಂಡು ತೊಂಡುಗೆಡೆವಂತಿರೆ ನುಣ್ಣುಡಿ ಸೋಗೆ ಸಾಗಿ ಸೈ |
ವರಿವೊಲೊಪ್ಪೆ ಸೋರ್ಮ್ಮುಡಿ ತಳಿರ್ತೊಳ್ಪಂತಿರೆ ಕೆಂದಳಂ ಕಳ ||
ಸ್ವರಮದು ಕೋಕಿಲ ಸ್ವರದವೋಲಿರೆ ಬಲ್ಮೊಲೆ ಪೂದೊಡಂಬೆಯಂ |
ತಿರೆ ಬನಮೆಯ್ದು ವಂತಸಯೆ ಪೆಣ್ಬಡೆ ಬಂದಳದೊಂದುಬಿಂಕದಿಂ || ೧೬

ವಚನ|| ಅಂತು ವನಲಕ್ಷ್ಮಿ ವಸಂತನಂ ನೋಡಲೆಳಸುವಂತೆ ಸುಜನ ವನವಸಂತನಂ ಭೂಕಾಂತನಂ ಕಾಂತೆ ನೋಡಲೆಳಸಿ ಗಳಿಲನೆಳ್ತಂದು—

ವೃ|| ನೆಲೆವೊಲೆಗಳ್ಕದಕ್ಕದಿಸೆ ಸೂಸೆ ಬಳಲ್ಮುಡಿ ಪುಷ್ಪಬೃಂದಮಂ |
ಕಲರುತಿ ಕಿಂಕಿಣೀ ಕಲಿತಕಾಂಚಿ ರವಂಗುಡೆ ನೂಪುರಂ ಪೊದ ||
ಳ್ದಲಿಯೆ ನಿತಂಬಮುಂ ಜಡಿಯೆ ತೆಳ್ನಡು ಬಳ್ಕೆ ಸಖೀಕದಂಬಕಂ |
ನಲಿದೊಡನೇರೆ ನೀರೆ ಬಿಡದೇರಿದಳೊಯ್ಯನೆ ರಮ್ಯಹರ್ಮ್ಯವುಂ || ೧೭

ವಚನ|| ಅಂತೇರಲಾಗಳ್ಸಡಗರಿಸು ತೊಡನಾರೋಹಿ ಪಮದದಿಯರ ಮುಡಿ ಮುಡಿಗಳೊಡನೊಡನೊರಸ ಲೊಡನೊಗೆದು ನೆಗೆವ ಪುಡಿಗತ್ತುರಿಯ ಪರಾಗ ಪಟಲಂ ಪರೆದು ಪರಿಕಲಿಸಿ ಹಸನರುಚಿಚಂದ್ರಿಕೆಗಗಿದು ನೆಗೆವ ತಮಃಪಟಲದಂತೆ ಪರಾಗ ಪರಿರಂಜಿಸೆಯುಂ ತನುಸಹಜ ಸರಸ ಸುರಭಿ ಗೆರಗೆಲವ್ವಳಿಪಳಿಪ್ರತಾನದ ನೂನ ಗಾನಧ್ವನಿಯ ನಾಕರ್ಣಿಸಿದ ಕರ್ಣಮದಕ್ಕೆ ಮೆಚ್ಚುಗೊಟ್ಟು ಪುದೆಂಬ ವೊಳ್ಳಿಯಿಂ ಕಮಳ ಕಮಸೀಯ ಕರ್ಣಪೂರಂ ಜಗುಳ್ದು ಬೀಳುತಿರೆಯುಂ ಬಿಂಬಾಧರದ ಕೆಂಬೊಳಪಂ ತಳೆದು ಕೆಂಬರಲಂತೆ ತೊಳತೊಳಪ ನಾಸಾಭರಣ ಮೌಕ್ತಿಕವೆ ಸಂಜೆಗೆಂಪು ಪುದಿದ ಶುಕ್ರನಂತೆ ಮೆರೆದಲುಂಗುತ್ತು ಮಿರೆಯುಂ ತಳತಳಸಿ ಬಳೆದು ಬಳ್ಳಿವರಿದು ಪರೆದು ಪಸರಿಪ ಕಟಾಕ್ಷರುಚಿರ ರುಚಿಯೆಂಬ ವದನ ವಿಧುವಿಮಳ ಪ್ರಭಾಪಟಲಂ ಕನತ್ಕನಕ ಮಯ ಮಣಿ ಭೂಷಣಾಂಶು ವಿಸರ ವಿಸರದ ಝಣತರುಣಾತಪದೊಳ್ಮಲ್ಲಗಾಳೆಗವು ನೊಡರ್ಚ್ಚೆ ಕಂಡು ಕಡುನಡುಗುವ ಜಕ್ಕವಕ್ಕಿಗಳಂತೆ ನೆಲೆವೊಲೆಗಳ್ಕದಕ್ಕದಿಸೆಯುಂ ಮೃದುಳತರ ಬಾಹಾಮೃಣಾಳ ನಾಳದೊಳೊಗೆ ದರವಿಂದದ ಸಿರಿಯನೊಳಕೈದ ಲೀಲಾರವಿಂದದ ಮಂದಗಂಧ ಸಂದೋಹಕ್ಕೆ ಮೊರೆದೆರಗುವಿಂದಿಂದಿರಬೃಂದದೊಳ್ಸಣ ಸಳೆಳಸಿ ನೆಗೆವಂತೆ ಚೂರ್ಣಾಳಕಂ ಪಣೆವಿಡಿದು ಕುಣಿಯುತ್ತಿರೆಯುಂ ಮದನ ಮರಾಳ ನಾಡುವ ಮಳಲೊಟ್ಟಿಲೆಂತೆಂಬುವಡೆದ ನಿತಂಬಬಿಂಬಂ ನಿಜಭಾರಮಂ ಪೊರಲಾರದೆ ದಡದಡಿಪ ನುಣ್ನಡೆಗೆ ವಿಪುಳತರ ಕುಚಭರಮುಂ ತಳೆದ ಬಡನಡುವಂ ತೋರಿ ಪುರುಡಿಸಿ ಜಡಿವಂತೆ ಮಣಿಮೇಖಲೆ ಝಣಝಣಿಸುತ್ತಿರೆಯುಂ ಸೋಮ್ಮರ್ಡಿಯೆಂಬ ಕಾಮ್ಮರ್ಗಿಲಿಂ ದಿಳಿವ ಮುಗುಳ್ವಳೆಗೆ ಚಿಗುತ್ತುರ್ ಸೋಂಪೇರಿದ ಪಸಲೆಯಂತೆಸೆವ ಪಸುರ್ವಣಿಯ ಸೋಪಾನಕ್ಕೆ ಪದಕಮಲಕ್ತ ರಸದಿನಲ್ಲಿಗಲ್ಲಿ ಗಂದಂಗೊಳಿಸಿದ ಕೆಂಬರಲ ಸಿರಿಯಂ ನಿರವಿಸುತ್ತಿರೆ ಯುವತಿ ವಿಳಾಸದಿಂ ಯುವರಾಜ ವದನರಾಜಮಂಡಳ ದರ್ಶನೋತ್ಸುಕೆಯಾಗಿ ಕುವಲಯಾಕ್ಷಿ ಯದಱಮೇಲ್ನಿಲೆಗೇಳ್ತಂದಾಗಳ್—

ಕಂ|| ಆಮಣಿಹರ್ಮ್ಯದ ಮುಂದಣ |
ಸೋಮಾಶ್ಮದ ವೇದಿಕಾಗ್ರದೊಳ್ನಿಂದ ವಳು ||
ದ್ದಾಮನ ಯನಾಂಶು ಪಸರಿಸೆ |
ಕೋಮಲೆ ತದ್ರಾಜವೀಧಿಯದ ನೀಕ್ಷಿಸಿದಳ್ || ೧೮

ವೃ|| ಹಿಮಕರ ಕಾಂತಿಯಂ ಕವರ್ದುದಲ್ಲದೆ ತನ್ಮೃಗನೇತ್ರ ಶೋಭೆಯಂ|
ಕಮಳದ ಚೆಲ್ವುಮಂ ಸೆಳೆದುದಲ್ಲದೆ ಮತ್ತದರೊಂದು ಲಕ್ಷ್ಮಿಯಂ ||
ಭ್ರಮರದ ಕರ್ಪುಮಂ ತೆಗೆದುದಲ್ಲದೆ ಮೀಣದು ಪಾರ್ವ್ವಲೀಲೆಯಂ |
ಪ್ರಮದೆಯ ಕಣ್ಗಳೀಳ್ದೆಳೆದು ಕೊಂಡುವೊಲಾದುದು ಕಣ್ಗೆ ನೋಳ್ಪರಾ ||೧೯

ವಚನ|| ಆಪ್ರಸ್ತಾವದೊಳಾರಾಜವೀಥಿಯಲ್ಲಿ—

ವೃ|| ತೊಳಪ ಕಿರೀಟ ರತ್ನಕರ ಮಂಬರಮಂ ಮಿಗೆ ಚಿತ್ರಿಸುತ್ತೆ ಕಂ |
ಗೊಳಿಸೆ ಮುಖೇಂದುಮಂಡಳ ಮರೀಚಿ ವಧೂನಯನೋತ್ಪಳಂಗಳಂ ||
ಕೆಳೆಗೊಳಿಸುತ್ತ ಲಜ್ಜೆ ನಿಜರೂಪು ಮನೋಜನ ನಂಗಹೀನ ನೆಂ |
ದಿಳೆ ನುಡಿವಂತೆ ಮಾಡೆ ನಡೆತಂದ ನಿಭಾಗ್ರದೊಳಾ ನರಾಧಿಪಂ || ೨೦

ವಚನ|| ಅಂತು ನಡೆತಪ್ಪಾಗಳ್—

ವೃ|| ನಗೆಗಣ್ಗೊಸೆ ಸುಧಾಮರೀಚಿ ರುಚಿಯಂ ಘರ್ಮಾಂಭಸಂ ಪೊಣ್ಮೆ ನು|
ಣ್ಮೊಗದೊಳ್ ಚಿತ್ತದೊಳಾಗೆ ಕೌತುಕರಸಂ ಪೀನೋರುಗಳ್ ಕಂಪಿಸಂ ||
ಉಗೆ ಲೀಲಾಕಮಲಂ ಕರಾಂಬುಜದಿ ನಾಗಳ್ಗೊಸೆ ಕಂಜಾಸ್ತ್ರನಂ |
ನಗುವಂತೊಪ್ಪುವನಂ ಮೃಗಾಕ್ಷಿ ನಡೆನೋಡುತ್ತಿದ್ದಳಾ ಭೂಪನಂ || ೨೧

ವಚನ|| ಇಂತನಿಮಿಷ ದೃಷ್ಟಿಯಿಂ ನಿಂದು ನಿರೀಕ್ಷಿಪ ಸಖೀಜನ ಮಧ್ಯದೊಳ್ತನ್ನನೂನಸ್ನೇಹ ರಸ ಭರ ಭರಿತ ಕಟಾಕ್ಷದಿ ನಭೀಕ್ಷಿಸುತ್ತು ಮಿರ್ಪ—

ಕಂ|| ಕಾಮಿನಿಯಂ ತೆನುಜಿತಸೌ |
ದಾಮಿನಿಯಂ ಸೌಧದಗ್ರದೊಳ್ಕಂಡನಿಲಾ ||
ಭಾಮಿನಿಯರಸಂ ಮುರರಿಪು |
ಗೋಮಿನಿಯಂ ಕಾಣ್ಬವೋಲ್ಸರೋರುಹದೆಡೆಯೊಳ್ || ೨೨

ವಚನ|| ಅಂತು ಕಂಡತಿವಿತತ ಕೌತುಕರಸ ಪ್ರವಾಹದೊಳ್ಮುಳುಂಗಿ ಮೋಹಿಸಿ—

ಕಂ|| ಅಮರಾಂಗನೆ ಯಿವಳಲ್ಲದೊ |
ಡೆಮೆಯಿಕ್ಕದ ದೀರ್ಘನಯನಮೀ ಸೌಂದರ್ಯಂ ||
ಸಮನಿಪುದೆ ಸೊಳ್ಪೆಡೆಂದಾ |
ರಮಣಿಯ ನಾನೃಪ ಕುಮಾರಿ ನೀಕ್ಷಿಸುತೆಂದಂ || ೨೩

ಪಡೆಯದೆ ಬಗೆಗಚ್ಚರಿಯಂ |
ಪಡೆಯದೆ ನಿಜಸೃಷ್ಟಿ ಗತುಳತರ ನವಯುಶಮಂ ||
ಪಡೆಯದೆ ಹರ್ಷಮ ನತನುಗೆ |
ಪಡೆದನೆ ಕನ್ನಿಕೆಯ ನೀಕೆಯಂ ಕಮಳಭವಂ || ೨೪

ವಚನ|| ಎಂದು ಬಗೆಯೊಳ್ಬಗೆದು ಭಾವಿಸಿ ಪೊಗಳ್ತವಡೆದವಳವಯುವ ಸೌಂದರ್ಯಮನಾ ಕಳಾನಿಳಯಂ ಬೇರೆಬೇರೆ ಪರೀಕ್ಷಿಪಾಗಳ್—

ಕಂ|| ಆ ಸರ್ವಮಂಗಳೆಯ ಶೋ |
ಭಾಸೌಭಾಗ್ಯಮ ನದಾವ ಸಭಿವರ್ಣಿಪ ನಾ ||
ವಾಸುಕಿವಾಣೀವರ ವರ |
ವಾಸವ ಸಚಿವರ್ಗ್ಗಮಾದೊಡಂ ತೀರ್ದ್ದಪುದೇ || ೨೫

ವೃ|| ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊ |
ಳ್ಭಾವಿಸೆ ಬಾಳೆಗಂಬಮೊಗೆದಂದು ಲತಾಗ್ರದೊಳದ್ರಿಪುಟ್ಟಿದಂ ||
ದಾವಿಧು ಬಿಂಬ ಬಿಂಬವಳಮಂ ಪಡೆದಂದು ತದಗ್ರದಲ್ಲಿ ಭೃಂ |
ಗಾವಳಿ ಮೂಡಿದಂದು ಸತಿಯಂಗಮನಾಂ ಪೊಗಳಲ್ಕೆ ಸಾಲ್ದಪೆಂ || ೨೬

ಕಂ|| ಕುಸುಮಶರ ನಸುಗೆ ಸರವುಂ |
ಮಸೆಯೆ ಸುಧಾಕಿರಣ ಬಿಂಬ ಶಾಣೋಪಲದೊಳ್ ||
ಮಸಗಿ ಪನಿಪತ್ತಿ ತುದಿಯೆಡೆ |
ಳ್ಮಿಸುಗುವು ದೆನೆ ಮೆರೆದುವವಳ ಪದತಳ ದುಗುರ್ಗಳ್* || ೨೭

ಬಳೆದಡೆರ್ದ ತುಂಗಕುಚಗಿರಿ |
ಗಳ ಮರೆಯೊಳ್ಕಾಣದಾಸ್ಯಶಶಿಯಂ ವಿರಹಾ ||
ಕುಳ ಮೆಳದಳಿ ರೊಳಾತ್ತ ರಾ |
ವಳಿ ನಿಂದವೊಲೆಸೆದು ದವಳ ಪದ ನಖನಿಕರಂ || ೨೮

ಅಂದುಗೆಯ ಕಳನಿನಾದ ದೊ |
ಳೊಂದಿದ ಸುಂದರಿಯ ಮಂದಗತಿ ಯತಿಶಯಮಂ ||
ಕುಂದದೆ ಮಾಡೆಂದಜನಂ |
ಬಂದೀಗಳ್ಪೊತ್ತು ಸೇವಿಪುದು ಕಳಹಂಸಂ || ೨೯

ಲಲನೆಯ ನುಣ್ದೊಡೆ ತಮ್ಮಂ |
ಗೆಲೆ ಸೋಲ್ತೊಡನೈದಿ ಪೊಕ್ಕು ಭಯಭರದಿಂದಂ ||
ತಲೆವಾಗಿ ನೀರೊಳಿನ್ನುಂ |
ನೆಲಸಿರ್ದ್ದಪುವಲ್ತೆ ಬಾಳೆಗಳ್ಬನದೆಡೆಯೊಳ್ || ೩೦

ಕರಿಶಿರದ ಪಿರಿಯ ಸಿರಿಯುಂ |
ಪರಿಭವಿಸಿದೊಡವಳ ಸುಘನಜಘನಂ ಬಿಗೆ ತ ||
ಕ್ಕರಚರಣ ಸೋದರಂಗಳ |
ನರುಣಾಂಬುಜ ಪಲ್ಲವಂಗಳಂ ಪರಿದಿಡುಗುಂ || ೩೧

ಬಡಬಾಸೆ ಯೆಂಬಸಿತಫಣಿ |
ಯೆಡೆಗೊಂಡುದು ಸಿಂಹವಿಜಯಿ ಯೆನಿಸಿದ್ದೀರ್ಗಳ್ ||
ಪಿಡಿಗೊಳಗಾದೆನೆನುತ್ತುಂ |
ಬಡವಾಯ್ತೆನೆಮಧ್ಯ ಮೆಸೆದುದಾ ಮಾನಿನಿಯಾ || ೩೨

ಸ್ತನ ಕನಕ ಕಲಶ ನಿಧಿಯುಂ |
ಮನಸಿಜ ಸಾಧಕನೆಯುಗುಳ್ದು ನೆಗಪಿದ ಕುಳಿಯೆಂ ||
ದೆನೆ ಸುಳಿನಾಭಿವಿಳಾಸಾ |
ವನಿ ವನಿತಾಮಣಿಯ ತೆಳ್ವಸಿರೊಳೆಸೆದಿರ್ಕ್ಕುಂ || ೩೩

ಸುಲಲಿತ ಜಘನಸ್ಥಲಮೇ |
ಖಲೆಯಗ್ರದೊಳೆಸೆವ ಮಂಜು ಮಣಿದೀಪದ ಕ ||
ಜ್ಜಲರೇಖೆ ನೆಗೆದುದೆನೆ ಕ |
ಣ್ಗೊಲವಿತ್ತುದು ರೋಮರಾಜಿ ರಾಜಾನನೆಯಾ || ೩೪

ವಚನ|| ಮತ್ತಂ—

ಕಂ|| ಜಗವುಂ ಜಯಿಸುವೊಡೀಕೆಯ |
ನಗೆಮೊಗಮೇ ಸಾಲ್ವುದೆಂದು ಮದನಂ ಧನುವಿಂ ||
ತೆಗೆದಿಳಿಪಿದಳಿವೆದಯೊ ಎನೆ |
ಸೊಗಯಿಸುದುದು ಬಾಸೆ ತರುಣಹರಿಣೇಕ್ಷಣೆಯಾ || ೩೫

ಸ್ಮರಸಿದ್ಧಂ ಮೋಹನಯುಂ |
ತ್ರ್ರರಚನೆಯನೊಡರ್ಚ್ಚಲೆಂದು ಮೂಗೆರೆದೆಗೆದಂ ||
ತರಳೆಯುದರ ಪತ್ರದೊಳೆನೆ |
ಕರಮೆಸಗುಂ ತ್ರಿವಳಿ ಕಮಳದಳ ಲೋಚನೆಯಾ || ೩೬

ತರಳೆಯ ತ್ರಿವಳಿಯು ಪೋಲ್ವೆಯ |
ತರಂಗಮುಂ ಪಡೆವೆನೆಂದು ಸುರನದಿ ಪಲವುಂ ||
ತೆರೆಗಳನೆ ಪಡೆದು * ಪಡೆಯೆದೆ |
ಸರಿದೆರೆಯುಂ * ಮಾಂಜಿ ಮುಗುಳ್ದು ಪಡೆದಪುದಿನ್ನುಂ || ೩೭

ಎಲೆನಡು ಬಡವಾಗದಿ ರೆಂ |
ದಲರಂಬಂ ಬರೆದ ಸುಮರಜೋ ರಕ್ಷೆಯ ಮಂ ||
ಜುಲ ರೇಖೆಗಳೆನೆ ಮೆರೆಗುಂ |
ವಲಿಗಳ್ಕೋಮಲೆಗೆ ಹಾರರುಚಿ ರುಚಿರಂಗಳ್ || ೩೮

* ದದರ್ಶನೆ | ವರದೆಂದೇ

ಮೊಗನಸಿ ಪೊಕ್ಕ್ಯರ್ ಳೊಳ್ಗದಿಂ |
ತೆಗೆದೆತ್ತುತೆ ಕನಕಕಮಳ ಕಳಿಕೆಗಳಂ ತಱ ||
ರಗೆಯಂ ಕಾಪಿಟ್ಟಂದದೆ |
ಸೊಗಯಿಸಿದುವು ಹಾರಮಣಿಯಿನವಳ ಕುಚಂಗಳ್ || ೩೯

ನವನವ ಮಣಿಮಯ ಮಾಲಿಕೆ |
ಕವಿದಿರೆ ಕಾಶ್ಮೀರಗಂಧ ಗೈರಿ ಕಗತಶ ||
ದ್ಯುವತಿ ಸ್ತನಮಂಡಲ ಮದು |
ವಿವರಿಸೆ ರೋಹಣ ಗಿರೀಂದ್ರ ಮಪ್ಪುದು ಪುಸಿಯೇ || ೪೦

ಎಳೆಯಳ ನಳಿತೋಳಂದಂ |
ದಳಿವೆಸೆನುತ್ತೆಳಸಿ ತಳಿಱು ದಳಲಿಂ ಜಲದೊ ||
ಳ್ಮುಳುಗಿತು ಮೃಣಾಳ ಮಿಷ್ಟವು |
ನಿಳೆಯೊಳ್ತಿಳಿ ದೀರ್ಘಸೂತ್ರನೇಂ ಪಡೆದಪನೇ || ೪೧

ಮೃದುಲತೆಯಿಂ ಬಿಸಕಾಂಡದ |
ಮೃದುಲತೆಯಂ ಜಯಿಸುವವಳ ಬಾಹಾಲತೆಯೊಳ್ ||
ಪುದಿದೆಳದಳಿರಂ ಪೋಲ್ತು |
ಪ್ಪುದಿದೆನೆ ಕರಮೆಸೆದುದವಳ ಕರಸರಸಿರುಹಂ || ೪೨

ಎಳದಳಿರಂಬಿದು ಮರುಮೊನೆ |
ಗೊಳಲಾರದು ಧೀರರೆರ್ದೆಯು ನೆಂಡ ತನುವದ ||
ಕ್ಕಳವಡಿಸಿದನೆನೆ ಕೈತಕ |
ದಳಮಂ ತುದಿಗೊಂಡು ಕರಜಮೊಪ್ಪಿದುದವಳಾ || ೪೩

ಸೆರೆವೆರೆಮೊಗೆದ ಮೃಗಾಕ್ಷಿಯ |
ಮಿಱುಗುವ ನಖರುಚಿಗೆ ಸೋಲ್ತು ಮರನೇರುತ್ತುಂ ||
ಗರಿವೂವಿನ ಕಿರುಗರಿಗೆ |
ಳ್ತುರುಗಿದ ಬಹುಕಂಟಕಂಗಳೊಳ್ಳೆ ಲಸಿಕ್ಕರ್ಗಂ || ೪೪

ಮುಗುದೆಯ ಮೊಗದಾವರೆ ಯುದು |
ಮುಗಿವುದೊ ನಗುವುದೊ ಪರೀಕ್ಷಿಸೆಂದಟ್ಟಲೊಡಂ ||
ಮೃಗಧರ ನಬ್ಜಮನದನದು |
ಮಿಗೆ ಸೆರೆವಿಡಿದಂತೆ ಕಂಠಮೊಪ್ಪಿದುದವಳಾ || ೪೫

ಹರಿಣಸುವಮಂ ಪುತ್ತಂ ವಟ |
ತರುವಂ ತೊರೆದಕ್ಷಿಫಣಿಫಲಂಗಳ ನಾಂತಂ ||
ತಿರೆ ನೇತ್ರ ಭ್ರೂಬಿಂಬಾ |
ಧರಂಗಳಿಂದವಳ ವದನವಿಧು ಕರಮೆಸೆಗುಂ || ೪೬

ಅರವಿಂದದ ಸಿರಿ ಮೇಣಿರು |
ಳಿರು ಳೆರೆಯನ ಸಿರಿಯೆ ಪಗಲೊಳಿರುಳಿಗು ಮಿವೆರಡಂ ||
ಸರಿಮಾಳ್ಪುದೆಂತೊ ಸಿರಿ ಬಂ |
ದೆರವಿಲ್ಲದೆ ನೆಲಸಿ ಸಿಂದ ತರಳೆಯ ಮೊಗದೊಳ್ || ೪೭

ಎನ್ನಂ ಪಡೆದಂಬುಜಮಂ |
ಮುನ್ನಂ ಮುಗಿಯಿಪ ಪಮೃಗಾಂಕನಂ ಜಯಿಸೆಂದಾ ||
ಕನ್ನೆಯ ಮೊಗಕ್ಕೆ ಕಡುಚೆ |
ಲ್ವನ್ನಳಿನಜನೀಯೆ ಕುಂದುಗುಂ ಕುಮುದಾಪ್ತಂ || ೪೮

ಮುಗುದೆಯ ಮೊಗಸಸಿಯೊಳ್ಬಿದಿ |
ಮಿಗಮಂ ನಿರ್ಮಿಸುವೆನೆಂದು ಬಗೆದ ದರಂದಂ ||
ಬಗೆವುಗೆ ಮರಳ್ದು ಲೋಚನ |
ಯುಗಮಂ ಸಮೆದಂತೆ ಮೆರೆದುದವಳಲರ್ಗಣ್ಗಳ್ || ೪೯

ವನಿತೆಯ ವದನಶ್ರೀ ಚಂ |
ದನ ರಸಮಂ ಸಳಿನ ದಳದೆ ತೀವಿದಳೆನೆ ಲೋ ||
ಚನರುಚಿಯಿರೆ ತಾರಕ ಮದು |
ನೆನೆಯಿಪುದ ದರೆಡೆಯೊಳಿರಗಿ ತೇಲ್ವಳಿ ಶಿಶುವಂ || ೫೦

ಸೊಗಯಿಪ ಸಂಪಗೆ ಮುಗ್ಗುಳದು |
ಮುಗುದೆಯ ಮೂಗಿಂಪರಾಭವಂ ಬಡೆದಳಲಿಂ ||
ಮೃಗನಯನೆಯ ಕುರುಳೊಡನಾ |
ಡಿಗಳೆನಿಪ ಳಿಗಳನೆ ತಗುಳ್ವು*ದಿನ್ನುಂ ಮುನ್ನುಂ || ೫೧

ಉದಯಿಪ ಪೂರ್ಣೇಂದುವ ಕೆಂ |
ಪೊದವಿದ ಕಳೆದೆಗೆದ ಮಚ್ಛರ್ದಂತೆ ಪೊಲೆಸಗುಂ ||
ಸುದತಿಯ ಬಾಯ್ದೆರೆ ಯೊಸರ್ದ ಮೃ |
ತದ ಪನಿಗಳ ಪಙ್ಕ್ತಿಯಂತೆ ಪಲ್ಗಳ್ಮೆರೆಗುಂ || ೫೨

ಚೆಂದಳಿರ್ದಂಪಂ ಬಿಂಬದೊ |
ಳೊಂದಿದ ಕೆಂಪಂ ಪಯೋರಸ ದೊಳವುರ್ದಿಂಪಂ ||
ಕುಂದದ ರನ್ನದ ಲಂಪಂ |
ತಂದೊಂದೆಸಿಸಿದವೊಲಧರ ವೊಪ್ಪಿದುದವಳಾ || ೫೩

ಅಲರದ ಕುಂದದ ಚಂದದ |
ಸುಲಲಿತ ಕುಟ್ಮಳ ಮನಾಯ್ದು ತೊಯ್ದು ಮರ್ದಿನೊಳಾ ||
ಲಲನೆಯ ಚೆಂದುಟಿದಳಿರೆಡೆ |
ನಳಿನಜ ನಿಟ್ಟಂತೆ ದಂತಮೇಂ ರಂಜಿಸಿತೋ || ೫೪

ಕಿವಿದೊಡವಿನ ಮುಕ್ತಾ ತತಿ |
ನವೋಡುಗಣ ಮೆನಿಸೆ ಕರೆಯೆ ಮಕರಿಕೆಯೆನೆ ತ ||
ದ್ಯುವತಿಯ ನಯನೋತ್ಪಳದಂ |
ದವನೀಕ್ಷಿಸಲ್ಕೈದಿದಿಂದುವೆನೆ ಕದಪಸೆಗುಂ || ೫೫

ಕುರುಳೊಳ್ತೀವಿದ ಕತ್ತುರಿ |
ಯ ರಜಂ ಮೊಗೆರಸ ದೊಳುದಿರ್ದು ನರುಸುಯ್ಯೆಲರಿಂ ||
ಪರೆದು ತೆರೆಮಸಗಿ ನಿಂದಂ |
ತಿರೆ ಕೊಂಕಿಂ ಭ್ರೂಯುಗಂ ವಿರಾಜಿಪುದವಳಾ || ೫೬

ಸೆರೆವಿಡಿದುದು ಮುಖಕಮಳಂ |
ಪೆರಪಿಂಗದು ಚಿಕುರ ತಿಮಿರ ಮೆನ್ನನಿದೆಂದೇಂ ||
ಮುರುಗಿ ಬಡವಾದನೋ ಪೇ |
ಳ್ಕಿರವೆರಯೆನೆ ಪರೆನೊಸಲ್ಮೃಗೇಕ್ಷಣೆಗೆಸೆಗುಂ || ೫೭

ಅಗಲದೆ ಮೊಗದಾವರೆಯೊ |
ಳ್ಸೊಗಯಿಪ ಮೃಗಮದ ಲಲಾಮ ಮಧುಪದ ಶಿಶುಗಳ್ ||
ಬಗೆಗೊಳಿಸಿ ಬಳಿಯೊಳಾಡುವ |
ಬಗೆಯೆನಿಸಿದು ದವಳ ಪಣೆಯೊಳೊಲೆವಳ ಕಂಗಳ್ || ೫೮

ವನಿತೆಯ ತನುತನುಹರಿ ಚಂ |
ದನಶಾಖೆಯ ನಡರ್ದು* ಬಾಸೆಸಿಸುವೆಲ್ಲಿದು ದೆಂ ||
ದೆನುತೆರಗಿ ನೋಳ್ಪಭುಜಗಾಂ |
ಗನೆಯೆನೆ ಘನವೇಣಿ ಜಾಣೆಗೇ ನೊಪ್ಪಿದುದೋ || ೫೯

ವಚನ|| ಅಂತುಮಲ್ಲದೆಯುಂ—

ವೃ|| ಹಿಮಕರಬಿಂಬವಕ್ತ್ರೆಗೆ ಮೃಗಾಯತಲೋಚನ ಮಬ್ಜಗಂಧಿಗು |
ತ್ತಮ ಮದಭೃಂಗ ಕುಂತಳೆ ಮುದಾರ ಶುಕೀಮೃದು ವಾಣಿಗಬ್ಜದಾ ||
ಡಿಮರದನಾಳಿ ಶೈಲಜಘನಸ್ಥಳೆಗೊಪ್ಪುವ ಸಿಂಹಮಧ್ಯಮೊ |
ಪ್ಪಮನಿರದೀವುದಚ್ಚರಿಯೆ ಕೋಕ ಕುಚದ್ವಯೆಗಬ್ಜಪಾಣಿಗಳ್ || ೬೦

ನುಡಿ ನುಡಿವೆಣ್ಗೆ ಜಾಣ್ನುಡಿಗಳಂ ಕಲಿಸಲ್ಸಲೆ ಸಾಲ್ವುದೊಪ್ಪವೊ |
ಳ್ನಡೆ ನಡೆವಕ್ಕಿಗಳ್ಗೆ ನಡೆಯಂ ನೆರಪಲ್ನೆರೆದಿರ್ಪುದೆಯ್ದೆ ಕ ||
ಣ್ಗುಡಿ ಕುಡಿಮಿಂಚನುರ್ಕ್ಕುಡಿಯಲಾರ್ಪುದು ಬಾಳೆಯ ಭಾಳವರ್ಣಮಂ|
ತೊಡೆ ತೊಡೆದಪ್ಪುದಾಂ ತೊಡೆ ಶುಭಾವಹ ಭಾವ ಭವಾಧಿದೇವಿಯಾ||೬೧

ವಚನ|| ಮತ್ತ ಮಾತರುಣಿ ಗಿರಿಸುತೆಯಂತೆ ಶಶಿಕಳಾಧರೆಯುಂ ರಮೆಯಂತ ತನುಜನ್ಮಸ್ಥಳೆಯಂ ಭಾರತಿಯಂತೆ ಪದ್ಮಜಾತ್ಯಾಮೋದಾವಹೆಯುಂ ವನಸ್ಥಳಿಯಂತೆ ಪೃಥುಲಕುಚಾಲಂಕೃತೆಯುಂ ನರ್ತಕಿಯಂತೆ ಮಂಜುಲಾಸ್ಯಮನೋಜ್ಞೆಯುಂ ಈಶಾನದಿಶೆಯಂತೆ ಸುಪ್ರತೀಕಸಮನ್ವಿತೆಯುಂ ಸುಗ್ರೀವಾಭಿರಾಮೆಯಾಗಿಯು ಮಲಂಕಾರಾತಿಶೋಭಿತೆಯುಂ ಮುದಿತಾರುಣಕರೋಲ್ಲಸಿತೆಯಾಗಿಯುಮಪೂರ್ವಸ್ವಭಾವೆಯುಂ ಧೃತಕುಂಭಜಘನಸ್ಥಿತಿಯಾಗಿಯು ಮತಿಲಾವಣ್ಯನಿಧಾನೆಯುಂ ರಂಭೋರುವಿಭವಾನ್ವಿತೆಯಾಗಿಯುಂ ವಿತತಭೂಮಹಿತಗುಣೋದಯೆಯುಂ ನಳಿನನೇತ್ರ ವಿಳಸಿತೆಯಾಗಿಯು ಮನಂತಮಣಿಕಿರಣ ಮನೊಜ್ಞೆಯು ಮೆನಿಸಿರ್ಪಳಂತು ಮಲ್ಲದೆ—

ವೃ|| ಗತಿಯಿಂದಂ ರಾಜಹಂಸದ್ವಿಜ ವಿಜಯಿನಿಯಾಗಿರ್ದ್ದ ಮಾತಂಗಮಂ ನಿ|
ರ್ಜಿತ ಸಜ್ಜೈವಾತ್ರಕ ಪ್ರದ್ಯುತಿಯೆನಿಸಿ ನಿಜಾಪಾಂಗದಿಂದಂ ಕ್ಷಣತ್ವಿ ||
ಟ್ತತಿಯಂ ಸೌಂದರ್ಯದೂರೀಕೃತ ಸಕಳವಧೂವೃಂದೆ ಯಾಗಿರ್ದ್ದ ಭೂಭೃ |
ತ್ಸುತೆ ತಾಂ ತ್ರೈದಶ್ಯ ಯೊಪ್ಪಿಜ್ಜನ ಮನನುದಿನಂ ಗೆಲ್ವುದಾಶ್ಚರ್ಯಮೇ ದಲ್ ||

ವಚನ|| ಮತ್ತಂ—

ವೃ|| ಇದುಕುಸುಮಾಸ್ತ್ರ ನಸ್ತ್ರಮಿದುದರ್ಪಕನಾರ್ಪ್ಪಮನೋಜನೋಜೆನೋ|
ಡಿದು ನನೆವಿಲ್ಲ ಬಲ್ಲಹನ ಜೆಲ್ವಿದು ಕಾವನ ಜೀವರತ್ನಮಿಂ ||
ತಿದು ರತಿಕಾಂತನಾಂತ ಪೊಸಕೂರಸಿ ತಾನಿದು ಮಾರವೀರನ !
ಗ್ಗದ ಸದಳಂ ಕೃತಿ ಧ್ವಜ ಮಿದೆಂದೆನಿಸಿರ್ದ್ದುದು ರೂಪು ನೀರೆಯಾ || ೬೩

ಕಂ|| ಕರೆದಳೆಯುದಿಂದು ಕಳೆ ಕಳೆ |
ದೊರೆಯದ ಚಂದ್ರಿಕೆ ಪಗಲ್ಪಗಲ್ಮುಗಿದ ಮುದಂ ||
ಮುರಿಯದ ಕೋಮಳೆ ಕೋಮಳೆ |
ಬರೆಯದ ಸಿಂಗರದ ಪೊಳೆ ಪೊಳೆಯು ತೆಸೆತಿರ್ದಳ್ || ೬೪

ವಚನ|| ಇಂತು ನಿರತಿಶಯ ಸೌಂದರ್ಯ ಮಾಧುರ್ಯಮಂ ಬೀರಿ ಕಾಂತೆ ಕಾಂತಿವೆತ್ತು ಕಂಗೊಳಿಸುತ್ತು ಮಿರೆಯಿರೆ—

ವೃ|| ಗುರುಜಘನಸ್ಥಳೀ ಪುಳಿನದೊಳ್ಪರಿದಾಡಿ ವಲಿತ್ರಯೋರ್ಮಿ ಯೊ |
ಳ್ಪರಿದಡದರ್ಗಡಿ ನಾಭಿ ಸುಳಿಯೊಳ್ಸಿಳಿದಾಡಿ ತಮಾಲ ನೀಲಭಾ ||
ಸುರತರ ರೋಮರಾಜಿ ನವಶೈವಲ ದೊಳ್ಗಡೆದಾಡಿ ತನ್ಮುಖಾಂ |
ಬುರುಹರ ಸಪ್ರವಾಹದೆ ಮುಳುಂಗಿದು ವಕ್ಷಿ ಝಷಂಗಳಾತನಾ || ೬೫

ವಚನ|| ಮತ್ತಮಾಗಳ್—

ವೃ|| ಲಲನಾ ನೇತ್ರತ್ರಿಭಾಪ್ರತತಿಶಿತಿರುಚಿ ಶ್ವೇತರುಗ್ಲೋಹಿತ ಜ್ಯೋ|
ತಿ ಲಸದ್ಧಾತ್ರೀಶ ಪುತ್ರಾಂಗದೊಳೆ ಪಸರಿಸುತ್ತೆಯ್ದೆ ಕಣ್ಗೊಪ್ಪಿದತ್ತು ||
ಜ್ಜ್ವಲ ತನ್ನೇತ್ರಾಂಚಲ ಸ್ಥಸ್ಮರನಿಸೆ ಪರಿತಂದೊತ್ತಿ ಪಾಯ್ತುತ್ಪರ್ಸ ನಿಲೋ |
ತ್ಪಲ ಚಂಚನ್ಮಲ್ಲಿಕಾ ಶೋಕ ವಿಶಿಖತತಿಯೆಂದೆಂಬ ಪಾಂಗಿಂದಳುಂಬಂ || ೬೬

ವಚನ|| ಅಪ್ರಸ್ತಾಪಮಂ ಸಾದ್ಭುತ ಸಂಭ್ರಮಿಸಿ ನೀದು—

ವೃ|| ಕಬ್ಬಿನ ಬಿಲ್ಗೆ ತುಂಬಿವೆದೆಯಂ ಪದೆದೇರಿಸಿ ಗಂಡಗಾಡಿಯಿಂ |
ದುಬ್ಬಿ ಸರೋಜಕೋರಕದ ಕೂರ್ಗಣೆಯಂ ತವೆ ತೊಟ್ಟುಲಕ್ಷ್ಯಮಂ ||
ದೋರ್ಬಲಶಾಲಿ ನೋಡಿ ಸೆಳೆದೆಚ್ಚ ನವಂದಿರ ನೊಮ್ಮೆ ತೊಟ್ಟನಂ |
ದಿಬ್ಬಗಿಯಾಗೆ ತನ್ಮನಮನಂಗಧನುರ್ಧರ ನಾಕ್ಷಣಾರ್ಧದೊಳ್ || ೬೭

ಕಂ|| ಗಡಿಗೆಟ್ಟುದು ಕಣ್ಬೇಟಂ |
ನಡೆಗೆಟ್ಟುದು ಚಿತ್ತವೃತ್ತಿ ಧೃತಿವಲ್ಲಿ ವಲಂ ||
ಕುಡಿಗೆಟ್ಟುದು ನವವಿರಹಂ |
ತಡೆಗೆಟ್ಟುದು ತನ್ನೃಪಾತ್ಮಜಂಗಾ ಕ್ಷಣದೊಳ್ || ೬೮

ಅರಸನ ಹೃದಯಪಟಾಭ್ಯಂ |
ತರ ದೊಳ್ಸವ ರಾಗರಸದಿ ನಾ ಕನ್ನೆಯ ನು ||
ಣ್ಬರಿಜಂ ಬರೆದಂಗಜನೇಂ |
ಪರಿಕಿಸೆ ಮುಂ ಚಿತ್ರಕರ್ಕ ಳೊಡನಾಡಿದನೋ || ೬೯

ವಚನ|| ಆಗಳರಸಂ ತನ್ನೊಳಿಂತೆಂದಂ—

ವೃ|| ಬಗೆಯಂ ಒಲ್ಸೆರೆಗೈದು ದೀಗಳಿವಳೀ ಮಾಧುರ್ಯ ವೀಮೆಯ್ಯಸು |
ಣ್ಬೊಗರೀಕಣ್ಗಳ ಕಾಂತಿಯೀ ಮುಖಶಿಶಿಪ್ರದ್ಯೋತಮೀಕಂಜದೊ ||
ಳ್ಮುಗುಳಂ ಪೋಲ್ವಕುಚಂಗಳೀ ಪೃಥುಳವೃತ್ತ ಶ್ರೋಣಿಯೀ ಬೇಟದು |
ಜ್ಜುಗವೀವಿಭ್ರಮವೀವಿನೋದದೊದವೀ ಸೌದರ್ಯ ಮೀಸದ್ಗುಣಂ || ೭೦

ಕಂ || ಈ ಲಲನೆಯ ಸೌಂದರ್ಯಂ |
ಸೋಲಿಸಿದುದು ಗಡ ಮದೀಯ ಮನವ ಸದಾಗ್ರಂ ||
ಸೋಲದುದಂ ಶಿವಶಿವ ಶಶಿ |
ಮೌಳಿಯ ಮಾಯೆಯ ಸದಾರೊ ವೀರಲ್ಬಲ್ಲರ್ || ೬೧

ವಚನ|| ಎಂದು ವಿಸ್ಮಯಂ ಬಡೆದು ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂತೈಸಿಕೊಂಡು ಧೀರೋದಾತ್ತ ಸಾರ್ವಭೌಮಂ ಮುಂದಣ್ಗೆ ನಡೆತರುತ್ತುಂ ನಿಜನಯನ ಪಥಮಂ ಮೀರಲೊಡನೆ—

ವೃ|| ಪಡಿದೆರೆದಂತೆ ಪಾರಿತೆರ್ದೆ ಜುಂಮನೆ ಮೈನವಿರುರ್ವಿ ಮೂಡಿದ |
ತ್ತಿಡಿಕಿರಿದಿರ್ದ ಬಲ್ಮೊಲೆಗಳಿಟ್ಟೆಡೆಯೊಳ್ಬೆಮರುಣ್ಮಿದತ್ತು ಮೇಣ್ ||
ದಡದಡಿಸಿತ್ತು ನುಣ್ದೊಡೆ ರದಚ್ಛದ ಮಿಪ್ಪುಡಿಗಿತ್ತು ಸುಯ್ಗೆ ಕಾ |
ಯ್ಪಡರ್ದೊಡಲ್ಗೆ ಮೆಲ್ಲನಡಿಯಿಟ್ಟುದು ಮೂರ್ಛೆ ಮೃಗಾಯತಾಕ್ಷಿಯಾ|

ವಚನ|| ಅಂದವಳಂದವಳಿದಂದವಂ ಕಂಡು ಕಳಾರಮೆ ಮೊದಲಾದ ಕೆಳದಿಯ ರ್ವಿಸ್ಮಯಂ ಬಟ್ಟು ವಿರಹಾತಪಮಂ ತವಿಪಬಗೆಯಂ ಬಗೆದಲ್ಲಿಂ ಮೆಲ್ಲನೆ ಕೆಂದಳಿರಾಂದೋಳನ ದೊಳಿರಿಸಿ ಕೇಳೀವನಕ್ಕೆ ಕೊಂಡು ಪೋಗಲೊಡನೆ—

ವೃ|| ಇಸಿಯ ನಗಲ್ಕೆ ಗಿಚ್ಚು ಸುಡೆ ಸೈರಿಸಲಾರದೆ ಮುಗ್ಧೆ ಬಂದು ನಂ|
ದನದೆಡೆ ನಿಂದು ಬೆಚ್ಚನುಸಿರೊತ್ತಿ ದೊಡಾಗಲೆ ಕಂದಿಸಿತ್ತು ಮೇ ||
ಣ್ಚಿನುಗುವ ತುಂಬಿಯಂ ಬಳಸಿ ಬಗ್ಗಿಪ ಕೋಗಿಲೆಯಂ ಮೃಗಾಂಕನಂ |
ಮನಸಿಜ ಮಾರುತರ್ತನುವನಾಂತೊಡೆ ಕಂದಿಸದೇ ನದಿಕ್ಕೆಮೇ || ೬೩

ವಚನ|| ಆನಂದನದೊಳಾಳೀಜನ ಮವಳಂ ಶಿಶಿರೋಪಚಾರಂ ಗೆಯ್ಯಲೆಂದು ಪೊಸ ಕುಸುಮ ಮಂಟಪಕ್ಕೆ ತಂದು—

ವೃ|| ಸರಸ ರಸಾಲ ಸಲ್ಲಲಿತ ಪಲ್ಲವ ತಲ್ಪದೊಳಿಟ್ಟು ಪಚ್ಚೆಗ |
ಪ್ಪುರವ ನಮುಚ್ಚುತೆಚ್ಚಿ ಸಿಡುಗಣ್ಗೆ ಸರೋಜ ದಳಂಗಳಂ ಪಯೋ ||
ಧರ ದೆಡೆಯಲ್ಲಿ ತಂದಿರಿಸಿ ಸೂಸಿ ಹಿಮಾಂಬುವ ನೈದೆ ಪುಷ್ಪಚಾ |
ಮರವನೆ ಬೀಸಿ ಚಂದನವ ನಂಗದೆ ಪೂಸಿ ವಿಳಾಸಿನೀಜನಂ || ೬೪

ಕಂ|| ಪರಿಹರಿಸಲೆಂದು ವಿರಹ |
ಜ್ವರಮಂ ಶಿಶಿರೋಪಚಾರ ಮೆಸಗಿದೊಡದು ತಾಂ ||
ಪಿರಿದಾದು ದಕಟ ಮಧುರಾ |
ಧರೆಗದನಂತಿಂತುಟೆಂದು ಬಣ್ಣಿಪರೊಳರೇ || ೬೫

ವೃ|| ಬಿಸುಸುಯ್ಯಿಂದಿರ್ಪುಗುಂದಿರ್ದಧರಕಿಸಲಯಂ ರಕ್ತನೇತ್ರಾಂಚಲಂ ಬಾ
ಷ್ಪಸರಿದ್ವ್ಯಾಲಗ್ನಕೀರ್ಣಭ್ರಮರಕಮಮೃತಾಪಾಂಡು ಗಂಡಸ್ಥಲಂ ಶೂ ||
ನ್ಯಸಮಾಲೋಕಂ ತನುತ್ವಂ ಬಡೆದತನುವ್ಯಥಾನಲ್ಪ ಸಂಕಲ್ಪಚಿತ್ರಂ |
ಮುಸುಕಿರ್ದಾಲಸ್ಯ ಭಾವಂ ನೆಗಳ್ದಿರೆ ವಿರಹಾಕ್ರಾಂತೆ ತತ್ಕಾಂತೆಯಿರ್ದಳ್

ಕಂ|| ತೀವಿದ ತಾಪಕ್ಕಿಕ್ಕಿದ |
ಬಾವನ್ನದ ಬಟ್ಟಬೊಟ್ಟು ವದನ ದ್ಯುತಿಯಂ ||
ತಾವರೆ ವಗೆಯಂ ಕಳಲೆಂ |
ದಾವೇಳೆಯ ಸರಿದು ಬಂದು ನಿಂದವೊಲೆಸೆಗುಂ || ೬೭

ಅಸಿಯಳಸಿಯೊಡಲೊಳೊರಸಿದ |
ರಸಮೊಸರ್ವ ಸುಚಂದನಂ ಕರಂ ಕಣ್ಗೆಸೆಗುಂ ||
ಕುಸುಮಾಸ್ತ್ರನ ಕುಸುಮಶರ |
ಪ್ರಸರದ ಹತಿಗಳ್ಕಿ ಕವಚಮಂ ತಾಳ್ದಿದವೋಲ್ || ೬೮

ಮಾನಿನಿಯ ಪೀನತರಕುಚ |
ಮೀನಧ್ವಜ ಕುಂಭಿ ಕುಂಭಮದು ವಿರಹಗ್ರೀ ||
ಷ್ಮಾನಲನಿಂ ಬಿರಿದಂತೆ ವೊ |
ಲೇ ನೊಪ್ಪಿತೊ ಬಿರಿಯೆ ತಾಳ್ದ ಕುಂಕುಮ ಪಂಕಂ || ೬೯

ಅರೆವಿರಿದ ಸಂಪಗೆಯ ಸುರು |
ಚಿರಮುಕುಲಂ ಬೊಕ್ಕೆ ಬಿಸುಪ ನಾಂತಿಳೆ ವೆಲರಿಂ ||
ತಿರೆ ಬಿಸುಸು ಯ್ಸುದತಿಯ ಭಾ |
ಸುರ ನಾಸಿಕೆಯಿಂದೆ ಸೂಸುತುಂ ಸೊಗೆಯಿಸುಗುಂ || ೭೦

ವಿರಹಶಿಖಿ ಸುಟ್ಟೊಡಗಿದೊಳ |
ಗಿರಲಾರದೆ ಕಂದಿ ಕುಂದಿ ನೆಗೆದುದು ಬಗೆಯೆಂ ||
ಬರ ಬಗೆಗೇಂ ಬಂದುದೊ ಮಧು |
ಕರ ನವಳುರದಲ್ಲಿ ಚಂದನಸ್ಥಿತಪಕ್ಷ್ಮಂ || ೭೧

ಅಂದರವಿಂದಸಖಂ ಕಾ |
ಳಿಂದಿಯ ನೆಲೆವಡೆದನೆಂದು ಪುರುಡಿಂ ಪಡೆದಂ |
ಮಂದಾಕಿನಿಯಂ ಬಿದು ವೆಂ |
ಬಂದದಿ ನವಳಾಸ್ಯ ಬಾಷ್ಪನದಿ ಕಳಿದಿಳಿಗುಂ || ೭೨

ವಚನ|| ಮತ್ತಂ—

ಕಂ|| ಬಗೆವನೆಯೊಳಿರ್ಪ್ಪರ್ ರತಿಪನ |
ನೊಗೆದುತ್ಕುಚಗಿರಿಯ ವಿರಹ ಶಿಖಿ ದವಶಿಖಿ ಚು ||
ಚ್ಚುರ್ಗು ಮೆಂದು ಮುಖ ಮೃಗಾಂಕಂ |
ಮಿಗೆ ಸುಧೆ ಗರೆವಂತೆ ಕರೆದುದವಳಶ್ರುಜಳಂ || ೮೩

ವೃ|| ನಾರೀ ಚಾರು ಕುಚಂಗಳಂ ಮಿಗೆ ಮುಸುಂಕಿಟ್ಟಬ್ಜಪತ್ರಂಗ ಳೊ |
ಳ್ನೀರಂ ಸಿಂಪಿಸೆ ನೀರೆಯು ಕ್ಕರ್ಣಗಣಂ ಚಾಂಚಲ್ಯಮಂ ಪೊತ್ತು ತ ||
ಳ್ತೋರಂತಲ್ಲಿ ವಿರಾಜಿಸಿತ್ತು ಸುಡುಗುಂ ಕಾಮಾಗ್ನಿ ತಾನೆಂದು ತ |
ನ್ನೀರೇಜಚ್ಛದ ಜೀವನಂ ಭಯದಿ ನಾಗಳ್ಕಂಪನಂ ಬೆತ್ತವೋಲ್ || ೮೪

ಅಂಗನೆಯಂಗ ದಂಗಜ ಮಹಾಶಿಖಿ ಗಾಜ್ಯ ಮದಾದು ದಾಲಿನೀ |
ತುರ್ಂಗ ಕುಚಾರ್ದ್ರ ಚಂದನರಸಂ ಘಟಪಾಕ ವಿಲೇಪನಂಬೊಲಾ ||
ಯ್ತಿಂಗಳ ಮಾಯ್ತು ಚೆಂದಳಿರೆಲತ್ತ್ರದಿಯೊಂದೆಲರಂದಮಾಯ್ತು ಬೆ |
ಳ್ದಿಂಗಳೆ ಶಳ್ತ ದಳ್ಳುರಿಯದಾಯ್ತೆನೆ ತಾಪಮದೇನಳುಂಬಮೋ || ೮೫

ಅಸಿಯುಳ ಸೋಷ್ಣನಿಶ್ವಸಿತ ಸೌರಭಲೋಭದೆ ನಾಸಿಕಾಗ್ರ ದೊ |
ಳ್ಪಸಿದ ಮದಾಳಿ ಯಂದೆರಗೆ ತಾಂ ಸುಡೆ ಕರ್ರನೆ ಕಂದಿ ಕುಂದಿ ಸಾ ||
ಧ್ವಸ ವಶದಿಂದೆ ಬಂದೆರಗಲಣ್ಮದೆ ತತ್ಸಮ ಚಾರು ಚಂಪಕ |
ಪ್ರಸವ ದೊಳಿನ್ನು ಮಿಲ್ಲಿಯುರವಿಂದಮುರಂಡ ದೊಳಳ್ದು ಜೀವಿಕುಂ || ೮೬

ಕರಿಮುರಿವೋದು ವಾರ್ದರಗು ವಾರಡಿಗ ಳ್ತಳಿವಾಲಿ ನೀರ್ಪ್ಪಯೋ |
ಧರದೆಡೆ ಕಾಯ್ದು ಘಟ್ಟಿ ಗೆರೆದಂತಿರೆ ಚುಯ್ಯೆನೆ ಬತ್ತಿದತ್ತು ಮೇ ||
ಲಿರಿಸಿದ ಪಲ್ಲವಂ ಮೃದುಮೃಣಾಳಕುಳಂ ಸಿರಿಗಂಪು ಪುಷ್ಪಮುಂ |
ಜರಿಯುರಿಪತ್ತಿ ಪೊತ್ತಿ ಪೊಗೆದತ್ತು ತನೂದರಯಂಗತಾಪದಿಂ || ೮೭

ವ|| ಆಗಳವಳ್ಗೆ ಶಿಶಿರೋಪಚಾರಮಂ ಮಾಳ್ಪ ಮುಗ್ಧೆಯರ್ಗೆ ವಿದಗ್ಧೆಯರ್ಕಂಜ್ಞೆ ಗೈದು-

ವೃ|| ಘನಕಚೆ ಯಂಚೆಯುಂ ತೊಲಗಿಸೀಯಲರಂ ಫಣಿವೇಣಿ ಪಾರಿಸೀ |
ಜೆನುಗುವ ತುಂಬಿವಿಂಡನೆಲೆ ಚಂಪಕನಾಸಿಕೆ ನೂಂಕು ಮತ್ತಕೀ ||
ರನ ನಿರದಟ್ಟು ಮಂಜುಳ ವಿಡೂರಜಭೂಷಣೆ ಚಂದ್ರಕಾಂತಿಯುಂ |
ಕನಕ ಪರಿಷ್ಕೃತಿ ದ್ಯುತಿಕೃತಾತಪೆ ನೀಂ ತಡೆಯೆಂದ ರಾಳಿಯರ್ || ೮೮

ವಚನ|| ಮತ್ತಂ—

ವೃ|| ಅಲಗರ್ಗಳ ಜೊಂಪಮಂ ಪಿಡಿದು ಬೀಸದಿರಿಂದುನಿಭಾಸ್ಯೆ ಜೊನ್ನಮಂ |
ದಲಸುವಳಂಗಜಾತ ಶರಲೋಚನೆ ಪೂಗಳನಿಕ್ಕದಿ ಸುರ್ವೋ ||
ಜ್ಜ್ವಲಶರಮೆಂದು ಕುಂದುವಳುದಂಚಿತ ಪಲ್ಲವಪಾಣಿ ಪಲ್ಲವಾ |
ವಲಿಯನೆ ಪಾಸದಿರ್ಮದನವಹ್ನಿ ಶಿಖಾತತಿಯೆಂದು ಬೆಚ್ಚುರ್ವಳ್ || ೮೯

ವಚನ|| ಎಂದುಸಿರ್ದು ಮತ್ತಮಿರದೆ—

ವೃ|| ಅರವಿಂದಾನನೆಗಬ್ಜಲೋಚನೆಗೆ ಪದ್ಮಾಮೋದ ನಿಶ್ವಾಸೆಗಂ |
ಬುರುಹದ್ವಂದ್ವ ಸಮಾನ ಪಾಣಿಗೆ ಪಯೋರುಟ್ಪ್ರದೆ ಗಂಭೋಜ ಭಾ ||
ಸುರಕೋಶಸ್ತನೆ ಗೀಲಿತಾಂಗಿಗೆ ಸರೋಜಾತಾರಿ ತಾಂ ಕಾಯ್ವುದ |
ಚ್ಚರಿಯಲ್ತೇ ಕಳಹಂಸ ನೀಮಧುಕರಂ ಪೇಳ್ಕಾಯ್ವುದೇಂ ತಕ್ಕುದೇ || ೯೦

ತಳಿರುಂ ತಾಮರಸಂ ಮದಾಳಿಕುಳಮುಂ ಮಂದಾನಿಲಂ ಮಾಮರಂ |
ಕಳಿಯಾಣ್ಮಂ ಕಳಹಂಸ ಮಂಡಳಿ ಸರೋಜಾತಾಕರಂ ಷಟ್ಪದಂ ||
ಕಳಕಂಠಂ ಕದಳೀದಳಂ ಮಳಯಜಂ ಮಾಧುರ್ಯಗೀತಂ ಮನೋ |
ಜ್ಞಲತಾಗೇಹಮುಮೆಲ್ಲವೀಕೆಗೆ ಕರಂ ಕಾಯ್ದಪ್ಪು ವೇಗೆಯ್ವೆಳೋ || ೯೧

ವಿರಹಶಿಖಿ ಪ್ರತಪ್ತ ತರುಣೀ ಶತಲೋಚನ ರೋಚಿಯಿಂ ಸುಧಾ |
ಕರರುಚಿ ಸೋಷ್ಣಮಾಗುತಿಳಿವೀ ಬಿಸುಸುಯ್ವುಡೆ ಬೆಚ್ಚನಾಗಿ ತಂ ||
ಬೆಲರಿಂದಾಳಿಯತ್ತರ್ಳಿವ ನೀತ್ತರ್ನು ತಾಪದೆ ಕಾಯ್ದಿವೆಲ್ಲವೀ |
ತರಳೆಗೆ ತಾಪಮೇಗು ಮಿವರೊಳ್ಸಖಿಯರ್ಬರಿದೂದ ನೇರಿಪರ್ || ೯೨

ವ|| ಇಂತನೇಕ ವಿಧಾಲಾಪಂಗಳ ವರೊಳ್ಗೆ ಗಳುತ್ತು ಮಿಪ್ಪಿರ್ನ ಮಾಗಲ್ ಗಳಗಳನೆ ಕಳಿದಿಳಿವ ಬಹುಳಬಾಷ್ಪಜಳಪೂರದಿಂ ತೊಳೆದು ಕಳೆದಂತ ನಿದ್ರೆ ನೆಲೆಗೆಟ್ಟು ತೊಲಗೆ ಅಲರ ಬಿಜ್ಜಣಿಗೆಯಿಂ ಬೀಸೆ ಬೀಸರಂ ಬೋದಂತೆ ಹಸನಂ ಹಸಂಗೆಡೆ ಕಂದರ್ಪಂ ಬೆಸಸೆ ಮಂದಾನಿಲಂ ಪುಗುತಂ ದೊಳಗೆ ಮೊಳೆವ ವಿರಹದಹನಜ್ವಾಲೆಯುಂ ಮೇಲೆಮೇಲೆ ಪೆರ್ಚಿಸುತ್ತದರ ಬಿಸುಪ ನಾಂತಿಳಿ ತರ್ಪಂತೆ ನಾಸಾವಿವರದಿಂ ಸೂಸುವ ಬಿಸುಸುಯ್ಯೇದಿವರಿಯೆ ಬಳಸಿ ಬಂದು ಬಗ್ಗಿಪ ಕೆಂಗಣ್ಪಕ್ಕಿಗಳ್ಗೆ ಕಾಯ್ದಂತೆ ಕಡೆಗಣ್ಕಡುಗೆಂಪು ವಡೆಯೆ ಅಳನಿಗಳಿದು ಕೆಳದಿಯು ತ್ತರ್ಳಿವ ತುಹಿನಜಳ ದೊಡಗೂಡಿ ಮದನಾಗ್ನಿಯಿಂ ಪೊಗೆವ ಪಸಿಯ ಬಿಸವಿಸರದ ಪಸರಿಸಿದ ಪೊಗೆ ಸುರಿವಂತೆ ಕಾಳ್ಪುರಮಾಗಿ ಕಣ್ಣನೀರ್ಕವಿತರೆ ರಾಕಾಸುಧಾಕರಂ ಮುಖರುಚಿಯಂ ಕವದ್ದುರ್ ನಿಜರುಚಿಯ ನಿತ್ತಂತೆ ಸಿರಿಮೊಗಂ ಬೆಳ್ಪೇರೆ ಮನದೊಳಿರ್ಪ ಮನದನ್ನಂ ನಂ ಮನಸಿಜನ ನನೆಯಂಬು ನಾಂಟದಂತಡ್ಡಮಿಟ್ಟಪಳೆನೆ ಕುಚಮಧ್ಯಕ್ಕೆ ಸಾರ್ಚಿದ ಕರಂ ಕರಮೆಸೆಯೆ ಚಿಂತಾಭಾರಮಂ ಪೊರಲಾರದಳವಳಿವ ಶಿರಕ್ಕಾಂಗೆ ಗೊಟ್ಟಪಳೆನೆ ತಳ್ಗಂಪಂ ಕೈದಳಿತ್ತರ್ಳಿಯೆ ತನುನಾಮಮಂ ಸಾರ್ಥಕಂಮಾಳ್ಪಂತೆ ತನುತನುತ್ವಂ ಬಡೆಯೆ ಕಂತು ಗ್ರ

ಹದ ಕಾಟಕ್ಕಳ್ಕಿ ಭಸಿತಮಂ ಧರಿಸಿದಂತಲರ ಮಲಯಜದ ರಜಂ ನಿಜಾಂಗದೊಳ್ಕಂಗೊಳಿಸೆ ಘನತಾಪಕ್ಕೆ ಸೆಡೆದು ಘನಕವಚಂ ದೊಟ್ಟಂತೆ ಕಂದಿದ ಚಂದನದಚ್ಚು ತೋರೆ ಮೀರಿದ ತನು ತಾಪದಿಂ ನೊಂದು ಬೆಂದು ಸಸಿಜೊನ್ನಕೆ ಬೆರ್ಚಿ ಬಸಂತಂಗೆ ಬೆರಲ್ಚಿರ್ಚಿ ಕಳಕಂಠಂಗಳ್ಕಿ ಗಿಳಿವಿಂಡಿಂಗೆ ಬಳ್ಕಿ ತಳಿರ್ಗೆ ತಲ್ಲಣಂ ಗೊಂಡು ಮಳಯಜಕ್ಕೆ ಮಲ್ಲಳಿಗೊಂಡು ಮಂದಾನಿಲಂ ಗೆಳರ್ದು ಕಂದರ್ಪಂಗೆ ಪೆಳರ್ದು ಕುಸುಮ ವಿಸರಕ್ಕಗಿದು ಬಿಸಕಾಂಡಕ್ಕೆ ಸುಗಿದು ಪೊಂಬಾಳೆಯಿಂ ಮರವಟ್ಟು ತುಂಬಿಗಳಿಂ ಕಂಗೆಟ್ಟು ಕಮಳದಿಂ ಕಂದಿ ಕುಮುದದಿಂ ಕುಂದಿ ತಿಳಿಗೊಳಮಂ ಬೈದು ಕಳಹಂಸಂಗೆ ಸುಯ್ದು ಲತೆಗೆ ಕಲೆವಾಗಿ ಪುಳಿನಕ್ಕೆ ಮಾರುವೋಗಿ ಮಾವಂ ನೋಡದೆ ಪೂವಂ ಸೂಡದೆ ಸಖಿಯರಂ ಪರೀಕ್ಷಿಸದೆ ಮುಕುರಮಂ ನಿರೀಕ್ಷಿಸದೆ ಕುರುಳಂ ನೇವರಿಸದೆ ಶರೀರಮಂ ಸಿಂಗರಿಸದೆ ಜಳಕಮಂ ಪಾರದೆ ತಿಳಕಕ್ಕೆ ಸೇರದೂಟಕ್ಕೆಳಸದಾಟವಂ ಬಳಸದೆ ಕಾಯ್ಪೇರಿದ ಕನಕಪುತ್ರಿಕೆಯಂತೆ ಬೇರೊಂದು ಸೌಂದರ್ಯಕ್ಕೆ ಪಕ್ಕಾಗಿ ನಿಜಕಾಂತನಾಟಮಂ ಕೂಟಮಂ ಮೀಂಟು ಜೌವನದ ಬೇಟಗಾರ್ತಿ ಕೂರ್ತು ಬಗೆದು ಬಯಸಿ ಬಗೆಯೊಳ್ಭಾವಿಸುತ್ತಿರ್ದಳಾ ಪ್ರಸ್ತಾವದೊಳ್—

ವೃ|| ಗುರುಕುಚದಲ್ಲಿ ಸಾಂದ್ರತರ ಕುಂಕುಮ ಪಂಕಮನಿಟ್ಟು ಪಲ್ಲವಾ |
ಧರೆ ಗಿರದಾಳಿಯ ಬ್ಬಿರಿದ ಮಲ್ಲಿಗೆ ಮೊಗ್ಗೆಯ ನಲ್ಲಿ ಸಾರ್ಚಿ ತಾ ||
ಸರುಣತೆ ವೆತ್ತು ಕಾಣಿಸಿತು ಕಾಮನೃಪಂ ಕಡುಗಾಸು ತೆಚ್ಚ ಬ |
ಲ್ಸರಲೆನೆ ಮೂರ್ಛೆಯಿಂ ಮುಗಿದ ಕಣ್ಮಲರಿಂ ದೊರಗಿರ್ದ ಸೇರೆಯಾ ||೯೩

ವಚನ|| ಇಂತು ಸಂಮದಂ ಗುಂದಿ ಹಂಮದಂ ಬೋದ ಸರ್ವಮಂಗಳೆಗೆ ಕೆಳೆದಿಯರ್ಮದನ ದಹನ ಸಂತಾಪ ಪರಿಹರಣ ಸಮುಚಿತೋಪಚಾರಂ ಗೆಯ್ಯುತ್ತುಮಿರ್ದರನ್ನೆವರಮಿತ್ತಲ್ ವಿಪುಳ ವಿಭವಂ ಮಿಗೆ ಮುಂಬಂದ ರಾಜಶೇಖರ ನರೇಂದ್ರಂಗೆ ವಿವಿಧೋಪಚಾರಂಗೈದನಂತರಮಂತಃಪುರದೊಳವಳಯದ ಕೇಳೀವನಾಂತಸ್ಥಳವಿಳಸಿತ ಮಣಿಮಯ ಪ್ರಾಸಾದಮಂ ಬಿಡುದಾಣಂಮಾಡಿ ಕೊಟ್ಟು ಮಜ್ಜನ ಭೋಜನಾದಿ ಸಮುಚಿತೋಪಚಾರಕ್ಕೆ ತಕ್ಕ ಪರಿಚಾರಕ ಜನಮಂ ನಿಯಾಮಿಸಿ ನಿಜರಮಣಿಯೊಡನೆ ಕನಕ ಪೀಠಮನಳಂಕರಿಸಿ ಸಿಂಹಳೇಂದ್ರಂ ಕುಳ್ಳಿರ್ದೀಕುಮಾರಂಗೆ ನಿಜಕುಮಾರಿಯಂ ಪರಿಣಯಂಗೆಯ್ಯಲ್ವೇಳ್ಕುಮೆಂದು ನುಡಿವ ಸಮನಂತರದೊಳ್ಸೌಂದರ್ಯಶಾರದೆಯೆಂಬ ಸರ್ವಮಂಗಳೆಯುಂ ಕೆಳದಿ ಪರಿತಂದಿರ್ವರಡಿದಾವರೆಯಂ ಕುರುಳ್ದುಂಬಿಗಳಿನೋಲಗಿಸಿ ಕರಾರವಿಂದಮುಂ ಮುಗಿದು ನಿಂದು—

ವೃ|| ಎಂದು ನರೇಂದ್ರ ಪುತ್ರನ ನಭೀಕ್ಷಿಸಿ ದಳ್ಕವದೀಯ ಪುತ್ರಿಯಂ |
ದಿಂದ ಮನಂಗ ಬಾಣಹತಿಯಿಂ ಬಗೆಗುಂದಿ ಬಳಲ್ದು ಪಾಡದೇ ||
ನೊಂದುಮ ನಾಡದಂಜೆ ಗಿಳಿಕೋಗಿಳೆಯಿಂಚರಕಳ್ಕಿ ಬಳ್ಕಿ ಪೂ |
ರ್ಣೇಂದು ನಿಭಾಸ್ಯೆ ನೊಂದಪಳಿವಳ್ಗೆ ಸಪುಜ್ಜುಗಮೇಂ ಮಹೇಶ್ವರಾ || ೯೪

ಕಂ|| ಅಲರೆ ಲರಳಿ ಗಿಳಿ ಮಧು ವಿಧು |
ನಳಿನಂ ಪುಳಿನಂ ಮರಂದ ಬೃಂದಂ ಕುಂದಂ ||
ಕಲಗಲ ಕಲಕಲ ಘನ ವನ |
ಮಲೆಗುಂ ಭವದೀಯ ತನುಜೆಯಂ ಮನುಜೇಂದ್ರಾ || ೯೫

ವೃ|| ತರುಣಿಯ ವಕ್ತ್ರನೇತ್ರ ಪದ ಪಾಣಿ ದದಸ್ಮಿತ ಕಾಂತಿ ಗಳ್ಗೆಸೋ |
ಲ್ತು ದುತರ ಕಂಜ ಕೈರವ ಸವಾಮ್ರ ವಿರಾಜ ದಶೋಕ ಮಲ್ಲಿಕಾ |
ಶರನಿಕರಂ ಕರಂ ಸ್ಮರನಿಷಂಗ ಮನ್ಯೈದಿ ವಿರೋಧಭಾನಸಂ |
ಸ್ಮರಣದೆ ತನ್ನಿ ತಂಬಿನಿಯಸುಂಗೊಳಲುಜ್ಜುಗಿಸಿಪ್ಪುರ್ದುರ್ವಿಪಾ || ೯೬

ವಚನ|| ಅದು ಕಾರಣದಿಂ ದಶಮದಶೆಗೆ ವಕ್ಕಾಗದ ಮುನ್ನಂ ತಕ್ಕು ದಂನೆಗಳಲ್ವೇಳ್ಕು ಮೆಂದು ನುಡಿಯ ಲೊಡನರಸಂ ಮನೋರಥಕ್ಕನು ಗುಣವಾದ ಮಗಳ ಬಗೆಗೆ ಸಂತಸಂಬಟ್ಟು-

ಕಂ|| ಈಕುವರಿಗೆ ಬಗೆವೊಡೆ ಮ |
ತ್ತಾ ಕುವರನೊಳಲ್ಲದೊಲ್ಮೆ ಸಮನಿಕುಮೆ ಪಲಂ ||
ಶ್ರೀಕುಮುದಿನಿ ಗೊದವುಗುಮೆ ಕ |
ಲಾಕಾಂತ ನೊಳಲ್ಲ ದಾತ್ಮ ಹರ್ಷೋತ್ಕರ್ಷಂ || ೯೭

ವಚನ|| ಎಂದಿನಿಯ ಳೊಡನೆ ಸಾದರಂ ಮಿಗೆ ಪೊಗಳ್ದು ಸಿಂಹಳೇಂದ್ರಂ ಸಾಂದ್ರಹರ್ಷದಿಂ ದಿದ್ದರ್ ಮರುದಿವಸ ದುದಯಸಮಯದೊಳೇ ಕಾಂತ ಭವನದೊಳ್ಮಣಿಪೀಠ ದೊಳ್ಕುಳ್ಳಿರ್ದು ನಿಜಾಮಾತ್ಯ ನೊಡನೆ ತತ್ಪರಿಣಯ ಪ್ರಸಂಗಂ ಗೆಯ್ಯುತ್ತುಮಿರ್ಪಾಗಳ್ ಪತಿಮೋಹಿಮಂತ್ರಿಪಂ ರಾಜಶೇಖರ ಪ್ರೇಷಿತನಲ್ಲಿಗೇಳ್ತಂದು ನಿಜವಿನಯಮಂಮೆರೆದು ತನ್ನರೇಂದ್ರಸನ್ಮಾನಿತ ನುಚಿತ ವಚನದಿ ನಿಂತೆಂದಂ—

ಕಂ|| ವರರಾಜಶೇಖರಂ ಗಾ |
ಗಿರಿವರನಿತ್ತಂತೆ ಸರ್ವಮಂಗಳೆಯಂ ಭೂ ||
ವರರಾಜಶೇಖರಂಗೆಲೆ |
ನರೇಂದ್ರ ಕುಡು ಸರ್ವಮಂಗಳೆಯ ನನುನಯದಿಂ || ೯೮

ವಚನ|| ಎಂದಮಾತಿಂಗೆ ಮನೋರಥಂ ಕೈಸಾರ್ದಂತೆ ಸಂತಸಂ ಬಟ್ಟುಕೊಟ್ಟೆಂಕೊಟ್ಟೆನೆಂದು ಸಿಂಹಳೇಂದ್ರಂ ನುಡಿದು ಮೌಹೂರ್ತಿಕರಂ ಬರಿಸಿ ಶುಭಲಗ್ನಮಂ ಬೆಸಗೊಂಡು ಮಗಳ ಪರಿಣಯಕ್ಕೆ ತಕ್ಕ ಕಲ್ಯಾಣಮಂಟಪಮಂ ಕೌತುಕಾವಹ ಮಪ್ಪಂತೆ ಮಯಮಾಂಡವರಂ ಪಳಿವಶಿಲ್ಪಿವಿದ್ಯಾ ವಿಶಾರದರಿಂ ರಚಿಸುತ್ತಿರ್ದ್ದನಾಗಳ್ಪತಿಮೋಹಿ ಮಂತ್ರಿಪನಲ್ಲಿಂದೇಳ್ತಂದು ಕುಮಾರಂಗರಿಪಿ ತದನುಜ್ಞೆಯಿಂ ಧರ್ಮವತಿಗೈತಂದು ಸತ್ಯೇಂದ್ರಂಗೆ ಪೊಡಮಟ್ಟು ನೆಗಳ್ದ ಕಜ್ಜಮೆಲ್ಲಮಂ ಬಿನ್ನಪಂಗೈದು ಮತ್ತಮಿಂತೆಂದಂ—

ಕಂ|| ಮಣಿಯುದ ಸಿಂಹಳ ನಗ್ಗದ |
ಮಣಿಯಂ ಮಣಿದಿತ್ತು ಮಾತ್ಮಭವೆಯೆನಿಸುವ ಪೆ ||
ಣ್ಮಣಿಯಂ ನೃಪಕುಳ ಚೂಡಾ |
ಮಣಿಯುವರಾಜಂಗೆ ಮದುವೆಯಂ ಮಾಡಿದಪಂ ||  ೯೯

ವೃ|| ಸಿಂಗರದಿಕ್ಕೆ ಮಂಗಳದ ಮೆಯ್ಸಿರಿ ಜಾಗ್ಮೆಯಗೊತ್ತು ಕಾಮಶಾ |
ಸ್ತ್ರಂಗಳ ಕೋಶವಿಂಪಿನ ತವರ್ಮನೆ ಸೈಪಿನ ಸೀಮೆ ಚಿತ್ರಜಾ ||
ತಂ ಗಧಿದೇವಿ ಸತ್ಕಳೆಗಳಾಗರ ಮೇಳ್ಗೆ ಯಡಪ್ಪುಣ ಸಚ್ಚರಿ |
ತ್ರಂಗಳ ಬೀಡು ಶೈವಮತ ದರ್ಪಣವೂತನ ಪುತ್ರಿ ಭೂವರಾ ||  ೧೦೦

ವೃ|| ನಗೆ ನಡೆ ಮಾಂದ್ಯ ಮಾಳ್ದಿರೆ ಕುರುಳ್ಕುಡಿನೋಟ ಮರಾಳ ಭಾವದೊ|
ಳ್ಪುಗೆ ಪೊಸಜವ್ವನಂ ಜಘನಮುಂ ತನಿವೆರ್ಚೆ ಕದಂಪು ಕಣ್ಬೊಗರ್ ||
ಪೊಗರಿಡೆ ಲಜ್ಜೆಯುಂ ಲಲಿತಲೀಲೆ ಪೊದಳ್ದಿರೆ ಸೊಂಪುದಾಳ್ದ ಮೇ |
ಳ್ಗೊಸಗಯಿಸೆ ಮೈಮೊಗಂ ಕುವರಿಗೊಪ್ಪಿದುದುರ್ವಿದಯೌವನೋದಯಂ ||

ಕಂ|| ತೊಳಗುವ ನಗೆಮೊಗಮುಜ್ಜ್ವಳ |
ಕಳಶಸ್ತನಮಳಿಚಳಾಳಕಂ ತಳಿರ್ದುಟಿ ಕೋ ||
ಮಳತನುಲತೆ ಘನಜಘನಂ |
ಸೆಳೆನಡು ಕಳಹಂಸಗಮನಮೆಳೆಯಳ್ಗೆಸೆಗುಂ ||  ೧೦೨

ರತಿ ಬಗೆಗೆ ಬರ್ಪ್ಪಳಾಭಾ |
ರತಿ ನುಡಿಯಂ ಮೀರಿ ನಡೆಯಳಿಂದಿರೆ ಚತುರ ||
ಸ್ಥಿತಿಯಿಂ ಮೈವಳಿಯೊಳ್ಪಂ |
ದತಿಶಯಮೆನೆ ನಡೆವಳಾಮಹೀಭೃತ್ಸುತೆಯಾ ||  ೧೦೩

ವ|| ಎಂದವಳ ರೂಪಾತಿಶಯಮಂ ಸತ್ಯೇಂದ್ರ ನರೇಂದ್ರಂಗೆ ವಿಜ್ಞಾಪನಂ ಗೈದು ತತ್ಪರಿಣಯಕರಣಲಬ್ಧಾಭ್ಯನುಜ್ಞನಾಗಿ ಮಗುಳ್ದು ಕಮಳಾವತಿಗೆಯ್ತಂದು ಸಚಿವೇಂದ್ರಂ ನರೇಂದ್ರಪುತ್ರಂಗೆಲ್ಲಮಂ ಬಿನ್ನಪಂಗೈದಾಗಳ್—

ಕಂ|| ಮೊಗಸಸಿಗೆ ಸುಪ್ರಸನ್ನತೆ |
ನೆಗಳ್ದು*ದು ಹೃದಯಾಬ್ಜಮಲರ್ದು* ಸಾಮೋದತೆಯಂ ||
ಮಿಗೆ ತಳೆದುದು ಚಿತ್ರಂಗಡ |
ಬಗೆವೊಡೆ ತನ್ನೃಪಕುಮಾರಕುಸುಮಾಯುಧನಾ ||  ೧೦೪

ವ|| ಮತ್ತಮಾಗಳ್—

ವೃ|| ಶಿವಪಾದಾಂಭೋಜಮಂ ಭಕ್ತಿಯೊಳೆ ಭಜಿಸುತುಂ ಶೈವಕಾವ್ಯಂಗಳಂ ಶಾಂ
ಭವಲೀಲಾಸತ್ಕಥಾ ಸಂತತಿಯ ನೊಸಗೆಯಿಂ ಕೇಳುತುಂ ಭವ್ಯವಿದ್ವ ||
ನ್ನಿವಹಕ್ಕಾನಂದದಿಂದಂ ವಸುವಸನ ಮಣಿ ಶ್ರೇಣಿಯಂ ಮಾಣದೀಯು |
ತ್ತವ ನಿರ್ದಂ ಭೂರಿ ಭೂಮೀಶ್ವರ ನತಚರಣಂ ಭಾರತೀಭಾಗಧೇಯಂ ||

ಸುರೇಂದ್ರಪರಿಪೂಜಿತೇ ಸುಗುಣ ರಾಜಿವಿಭ್ರಾಜಿತೇ |
ಕರೀಂದ್ರವದನಾಂಬಿಕೇ ಕಲಿತಪದ್ಮ ಪತ್ರಾಂಬಕೇ ||
ಹರೀಂದ್ರ ವರವಾಹನೇ ಹರಕೃತೋರು ಸಮ್ಮೋಹನೇ |
ಗಿರೀಂದ್ರ ತನುಸಂಭವೇ ಗತಿಭವತ್ಪದಂ ಶಾಂಭವೀ || ೧೦೬

ಗದ್ಯ|| ಇದು ವಿನಮದ ಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿ
ವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚ
ಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡ
ಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್

ಸರ್ವಮಂಗಳಾದರ್ಶನವರ್ಣನಂ

ಸಪ್ತಮಾಶ್ವಾಸಂ

ಸಂಪೂರ್ಣಂ



## ಅಷ್ಟಮಾಶ್ವಾಸಂ

(ಸರ್ವಮಂಗಳಾವಿರಹ, ವಿವಾಹ, ವರ್ಷರ್ತುವರ್ಣನಂ)

ಕಂ|| ಶ್ರೀಮದುಮಾ ಮಧುರಾಧರ |
ಸೋಮಕಳಾರಸ ರಸಜ್ಞ ರಸನಂ ಪ್ರಮಥ ||
ಸ್ತೋಮಾವೃತ ಕನಕಾಚಳ |
ಧಾಮಂ ಕುಡುಗೆಮಗೆ ಸೌಖ್ಯಮಂ ಶಿವಲಿಂಗಂ || ೧

ವ|| ಆಗಳಿತ್ತಲ್—

ವೃ|| ಮುತ್ತಿನ ತೋರಣಂ ಕನಕವೇದಿಕೆ ಪಚ್ಚೆಯ ಕುಟ್ಟಿಮಸ್ಥಳಂ |
ಸುತ್ತಿಡಿದಿರ್ದ ಮಾಣಿಕದ ಲಂಬಣಮಾಲೆ ಸಮೀನಚೀನದಿಂ ||
ಬಿತ್ತರವೆತ್ತ ಮೇಲ್ಗಡಿ ನಿಮಿರ್ಚಿದ ಬಜ್ಜರಗಂಬ ಮಿಂಬುಗೊಂ |
ಡುತ್ತಮನೀಲಪುತ್ರಿಕೆ ವಿರಾಜಿತಮಾಯ್ತು ವಿವಾಹಗೇಹದೊಳ್ || ೨

ಬಳಸಿರೆ ಕಟ್ಟಿಬಿಟ್ಟ ಪೊಸಮಲ್ಲಿಗೆಮಾಲೆ ಮರಂದಬಿಂದುಗ |
ಳ್ತುಳುಕುವಿನಂ ಮಧುವ್ರತವಿತಾನ ಮೊರಲ್ದೆರಗಿರ್ದುದಲ್ಲಿ ಸಾ ||
ಲ್ಗೊಳಿಸಿದ ಮೌಕ್ತಿಕ ಪ್ರಸರಮಂ ಹರಿನೀಲಮಣಿ ಪ್ರತಾನದೊ |
ಳ್ನೆಲೆಗೊಳಿಸುತ್ತೆ ತೆತ್ತಿಸಿದವೋಲ್ಮೆರೆದಿರ್ದುದು ಮಂಟಪಾಗ್ರದೊಳ್ || ೩

ವ|| ಮತ್ತಂ—

ಕಂ|| ಹರಿನೀಲದ ಭಿತ್ತಿಯೊಳಂ |
ಬುರುಹಾನನೆ ಕೂಡೆ ಕುಂಕುಮದ ಕಾರಣೆಯಂ ||
ವಿರಚಿಸಿದಳದರೆ ಮುಂಗಾ |
ರ್ಸಿರಿ ಸೆಳೆಮಿಂಚಂ ಪಯೋದದೊಳ್ಪುಟ್ಟಿಪವೋಲ್ || ೪

ವೃ|| ರಜನಿ ನಭಃ ಪ್ರದೇಶದೊಳುಡುವ್ರಜಮಂ ರಚಿಪಂತೆ ಸಾರನೀ |
ರಜನಿ ಮರಂದಬಿಂದು ತತಿಯಂ ದಳದೊಳ್ತಳಿವಂತೆ ಕಾಂತ ಶು ||
ಕ್ತಿಜಮಣಿಚ್ಛಂಡಮಂ ಸುರಿದು ನೀಲದ ಪಚ್ಚೆಯ ಕುಟ್ಟಿಮಂಗಳೊ |
ಳ್ನಿಜಕರದಿಂದೆ ರಂಗಮನೊಡರ್ಚಿದಳೊರ್ವಳುದಾತ್ತಲೀಲೆಯಿಂ || ೫

ವಚನ|| ಮತ್ತಮದು ಘನ ಕನಕ ಮಯಸ್ತಂಭ ಸಹಸ್ರದಗ್ರದೊಳ್ನೆಲೆಗೊಳಿಸಿ ಕಟ್ಟಿದ ಪೊಂಬಟ್ಟೆಯ ವಿತಾನದ ಪರಿಸರದೊಳ್ನಿರಿವಿಡಿದೆಳಲೆವಿಟ್ಟ ತಳಿರ್ವಟ್ಟೆಯ ಚಿತ್ರಾವಳಿಯ ಮೇಲ್ಕಟ್ಟಿನ ಮುತ್ತಿನ ಲಂಬಣಂಗಳ ತೆತ್ತಿಸಿದ ಕೆಂಬರಲ್ಗಳ, ಸಾಲಿಡಿದು ತೊಡರ್ಚಿದ ಜಲ್ಲಿಗಳ ಕೀಲಿಸಿದ ಪೊನ್ನಬಿಂಗಾರಿಗಳ ಸಾಲ್ಗೊಳಿಸಿದ ಮಾಣಿಕದಿಂಡೆಗಳ ಕೀಲ್ಗೊಳಿಸಿದ ನಿಮಿರ್ಚಿದ ಪಚ್ಚೆಯ ಕುಚ್ಚುಗಳ ತೊಡರ್ಚಿದ ಕುಸುಮ ಮಾಲಿಕೆಗಳ ನೆಗಳ್ಚಿದ ಚಿತ್ರಪುತ್ರಿಕೆಗಳ ಬಿಗಿದ ಮಣಿದರ್ಪಣಂಗಳ ಗಗನಮಂ ತುಡುಂಕುವ ಪತಾಕೆಗಳ ಮುಗುಳ್ವಳೆಯಂ ಸುರಿವಜಂತ್ರದ ಮುಗಿಲ್ಗಳ ತೆಗೆದು ತರಂಗೊಳಿಸಿದ ಪಂಚವಣ್ಣಿಗೆಯ ಪಟ್ಟೆಯ ಸಿಂಗರಿಸಿದ ಮಕರತೋರಣದ ಸಂಗಳಿಸಿದ ನನೆಯ ಸೂಸಕಂಗಳ ಸಸಿಗಲ್ಲ ನೆಲಗಟ್ಟಿನ ಪೊಸಬಜ್ಜರದ ವೇದಿಕೆಯ ನವನೀಲದ ಭಿತ್ತಿಯ ಪವಳದ ಬಾಗಿಲ್ವಾಡದ ಗೋಮೇಧಿಕ ಕವಾಟದ ಹೇಮಮಯಾರ್ಗಳಸ್ತಂಭದ ಸುತ್ತಿಕಟ್ಟಿದ ಕನಕಘಂಟೆಯ ಬಿತ್ತರಂಬಡೆವ ಮಾಣಿಕ್ಯ ಕಲಶದ ವೈಡೂರ್ಯದ ಲೋವೆಯ ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ ತರಂಬಿಡಿದ ರಾಜಪುತ್ರರಿಂ ಮಂತಣಂಬಡೆದ ಮಂತ್ರಿಗಳಿಂ ಕಿಂತಿಣಿಗೊಳ್ವ ರಾಜಪುರುಷರಿಂ ಬಣ್ಣಿಪ ಸತ್ಕವೀಂದ್ರರಿಂ ಕಣ್ಣಿಟ್ಟು ಕೌತುಕಂಬಡುವ ಕಳಾವಿದರಿಂ ದೆಡೆಯಾಡುವೆಳವೆಣ್ಗಳಿಂ ಗುಡಿಗಟ್ಟುವ ಪೌರಜನದಿಂ ಗಳಿಗೆವಟ್ಟಲ ನಾರ್ಕೈವ ಜೋಯಿಸರಿಂ ದೊಳಗೆ ಪಸವನಂ ಗೊಂಬ ವಿದಗ್ಧೆಯರಿಂ ನೆರಪಿದ ಮಂಗಳಸಾಧನಂಗಳಿಂ ಸರಸಗೀತಮಂ ಪಾಡುವ ಗಾಯಕರಿಂ ಮೊಳಗುವ ಮಂಗಳವರೆಗಳಿಂ ತೊಳಗುವ ಮಣಿದೀಪಿಕೆಗಳಿಂ ನೋಡಿನಲಿವ ಕುಮಾರಿಯರಿಂ ಕೂಡೆ ಸಡಗರಿಪ ವಿಳಾಸಿನಿಯರಿಂ

ತೆರಂಬೊಳೆವ ಕಾಂಡಪಟದಿಂ ತುರುಗಿ ಸುೞಿವ ಕರ್ಪೂರರಜದಿಂ ಪರಿಮಳಕ್ಕೆರಗುವ ಪರಮೆವರಿಗಳಿಂ ಪುರುಳಿಗೂಡಿ ಗಳಪುವ ಕೇಳೀಶುಕಂಗಳಿಂ ಕೆದರ್ದ ಕುಸುಮಂಗಳಿಂ, ಪದಂಗೊಳಿಸಿದ ಪನ್ನೀರ್ಗೊಡಂಗಳಿಂ ಮುತ್ತಿನ ರಂಗವಲ್ಲಿಗಳಿಂ ಬಿತ್ತರಿಸಿದ ಚಿತ್ರಂಗಳಿಂ ಪೊರಗನೆಸಿದ ನವಿಲುಯ್ಯಲಿಂ ಕಿರುವೆಂಡಿರಕೇಳಿಗೆ ಸಮೆದ ಮಣಿ ರಾಟಾಳದಿಂ ದಿಂಬುವೆತ್ತು ವಸಂತರಾಜನ ವಿಳಾಸಮಂಟಪದಂತೆ ಕುಸುಮಶರನ ಕೇಳೀನಿಳಯದಂತೆ ಕಾಣ್ಬರ ಕಣ್ಗೆ ಕೌತುಕಮನೊದವಿಸಿ ನುತಿಪರ ರಸನೆಗತರ್ಕ್ಯಮೆನಿಸಿ ವಸುಧೆಗೆ ಬಿಸವಂದಮನೀವ ಪಸದನಂ ಬಡೆದ ಪೊಸಪಸುರ್ವಂದ ರೊಸಗೆ ಮಿಗೆ ಮಿಸುಗುತಿರ್ದುದಂತು ಮಲ್ಲದೆಯುಂ—

ವೃ॥ ಅದು ಪರಿಶೋಭಿಸುತ್ತು ಮಧುವಿಂ ವಿಧುವಿಂ ವಧುವಿಂ ಪರಾಗಮಂ ।
ಕೆದರ್ವ*ಲಸತ್ಪ್ರಸೂನ ಸರದಿಂ ತರದಿಂ ನೆರೆದಿಂಬುಗೊಂಡಕೋ ॥
ವಿದ ಕುಲದಿಂ ನರೇಂದ್ರಸುತರಿಂ ಹಿತರಿಂ ಸುತರಿಂ ಕವೀಂದ್ರರಿಂ ।
ಸದಮಳ ಶೈವವಿಪ್ರತತಿಯಿಂ ಶ್ರುತಿಯಿಂ ಕ್ರತುವಿಂದೆ ಮಂಟಪಂ ॥ ೬

ಅರಲ ಸರಂಗಳಂ ಸವೆವ ಲಾಜೆಯ ನೋಜೆಯೊಳಾಯ್ವ ಪುಷ್ಪಮಂ ।
ಜರಿಗೆ ಹಿಮೋದಕಂ ದಳಿವ ಕತ್ತುರಿ ಸಾರಣೆಗೆಯ್ವ ಚಿತ್ರಮಂ ॥
ಬರೆವ ಕದಂಬಮಂ ನೆಗಳ್ವ ನೀವಿಯ ನೊತ್ತುವ ಪುಷ್ಪಪುತ್ರಿಕಾ ।
ವಿರಚನೆಗೆಯ್ವ ನೀರೆಯರ ದೇನೆಸೆದಿರ್ದರೊ ಮಂಟಪಾಗ್ರದೊಳ್ ॥ ೭

ವಚನ॥ ಮತ್ತಮಲ್ಲಿ—

ವೃ॥ ಮುಡಿಮುಡಿ ತಾಗಿ ಸೂಸೆ ಮುಡಿದುಳ್ಳಲರೆಲ್ಲೆಡೆಯೊಳ್ಪಳಂಚಿ ಪೊಂ।
ಗೊಡ ಮೆರಡೊಂದ ನೊಂದೊರಸೆ ತದ್ರಜ ಮೊಕ್ಕುದೆ ನಿಪ್ಪ ಭಾವಮಂ ॥
ಕುಡೆ ನಿಬಿಡಪ್ರಕಂಪಿತ ಕುಚಚ್ಯುತ ಕುಂಕುಮ ರೇಣು ತಮ್ಮಕೇ ।
ಸಡಿಗಳ ಕೆಂಪು ಕೆಂದಳಿರ ಸಾಲಿಡೆ ಸಂಚರಿಪರ್ಲತಾಂಗಿಯರ್ ॥ ೮

ವಚನ॥ ಮತ್ತಮಾಮಂಟಪಂ ಮಧುಸಮಯದಂತೆ ಪ್ರೋಲ್ಲಮದಾಳಿ ಸುಮನೋಮನೋಜ್ಞಮುಂ ದಿವದಂತ ನಂತಮಣಿ ಕಿರಣಾಲಂಕೃತಮುಂ ಸಮುದ್ರದಂತೆ ಸದಾ ರವಿಭವಾನ್ವಿತಮುಂ ಸಂಧ್ಯಾಸಮಯದಂತೆ ಸಭಾನುರಾಗರಂಜಿತಮುಂ ಸತ್ಯಲೋಕದಂತೆ ಸುಧೀರಾಜಾನ್ವಿತಮುಂ ಪುರಂದರ ಪುರದಂತೆ ಸದಾರಂಭಾನ್ವಿತವಿಬುಧಮಿಳಿತಮುಂ ಅಯೋಧ್ಯಾನಗರದಂತೆ ಮಹಾಲಂಕಾರಾತಿ ಶೋಭಿತಮುಂ ತಪೋವನದಂತೆ ಸದರ್ಘವೇದ್ಯವಶೋಭಿತಮುಂ ಪಾಂಚಾಲಿಕೋದಂಚಿತ ಮಾಗಿಯುಂ ಕಲಶಜಾತಸಮನ್ವಿತಮುಂ ಸದಾಮೋದ ರಮಣೀವಿಲಸಿತ ಮಾಗಿಯು ಮಜಡಾಶ್ರಯಮುಂ ಚಿತ್ರಕಾಯಾಶ್ರಯಮಾಗಿಯುಂ ಮೃಗಮದ ಸಮೃದ್ಧಿ ಭಾಜನಮುಂ ಪ್ರವಾಳದಂಡಮಂಡಿತ ಮಾಗಿಯುಂ ಅನಂಜನಾತ್ಮಜಾತಮುಂ ಸಮಧುರವಿತತಾಬೊ[illegible]ಪ ಲಸಿತಮಾಗಿಯುಂ ಮುಕ್ತಾಳಿ ವಿತಾನಮುಂ ಶಿವಪ್ರಭಾವಾಶ್ರಿತ ಮಾಗಿಯು ಮತನು ವಿಳಾಸಾಸ್ಪದಮೆನಿಸಿದುದಲ್ಲಿ—

ಕಂ|| ಭಗಣಂ ಬಳಸಿರೆ ಕಿರುವೆ|
ಳ್ಮುಗಿಳೊಪ್ಪುವ ತೆರದೆ ಸುತ್ತಿ ಮುತ್ತಿನ ಮಣಿಸಾ ||
ಲ್ಚೊಗಯಿಸೆ ನಡುವೆಸೆದುದು ಝಗ |
ಝಗಿಸುತೆ ಬಜ್ಜರದ ಪಟ್ಟವಣೆ ವೇದಿಕೆಯೊಳ್ || ೯

ವಚನ|| ಅದರಮುಂಗಡೆಯಲ್ಲಿ —

ಕಂ|| ಬಳಸಿರೆ ಮೃಣಾಳಗುಣ ಮ |
ಗ್ಗಳಿಸಿರೆ ಮಣಿದರ್ಪಣಂ ಮಹೌಷಧಿ ಗಳ್ಕಂ ||
ಗೊಳಿಸಿರೆ ಪಲ್ಲವತತಿ ಸಂ |
ಗಳಿಸಿರೆ ಮಣಿಪೂರ್ಣ ಕುಂಭ ಮೊಪ್ಪಿದುದದರೊಳ್ || ೧೦

ವೃ|| ದಧಿ ಜವೆ ದೂರ್ವೆ ಲಾಜೆ ಪೊಸಸಂಕು ಸರೋರುಹತಂತು ರೋಚನಂ|
ಮಧು ಮಣಿಮಾಲೆ ಮಾದಳದ ಪಣ್ಕದಳೀಫಳ ಮಿಕ್ಷುಬಾಸಿಗಂ ||
ಸುಧೆ ಸಿರಿಗಂಪುಕುಂಕುಮ ರಸಂ ಕಳಮಾಕ್ಷತೆ ರತ್ನದರ್ಪಣಂ |
ವಿಧು ಮಣಿಪೂರ್ಣ ಕುಂಭ ಮೆಸೆದತ್ತು ವಿವಾಹಗೃಹಾಂತರಾಳದೊಳ್ ||೧೧

ವಚನ|| ಇಂತನಂತಾನಂತಗರ್ಗಿಂನುತಿಸಲಸದಳ ಮಾದ ಶೋಭಾವಹ ಶುಭಮಂಟಪಂ ವಧೂವರರ ಬರವಂ ಬಯಸುತ್ತಿರ್ದ್ದುದಾಸಮಯ ದೊಳ್ಸಿಂಹಳೇಶ್ವರನ ಬೆಸದಿಂ ಕಳಾವಿದೆಯರಾದ ಕೆಳದಿಯ ರೆಳ್ತಂದೊಸಗೆ ಮರುಳ್ಗೊಂಡು ಬಂದು ನಿಂದು—

ಕಂ|| ಒದವಿದ ಯೌವನರಾಜ್ಯಾ |
ಭ್ಯುದಯಕ್ಕಭಿಷೇಕಿಪಂತೆ ಮದನನ ಬೆಸದಿಂ ||
ಸುದತಿಯ ರಾಯುವತಿಗೆ ಮಾ |
ಡಿದ ರೊಲವಿಂ ಪರಿಮಳಾಂಬುವಿಂ ಮಜ್ಜನಮಂ || ೧೨

ವಚನ|| ಅನಂತರದಲ್ಲಿ —

ಕಂ|| ಉಗುರ್ಗದಿ ರಳಕಾಳಿಗೆ ಮ |
ಲ್ಲಿಗೆ ಗುಡೆ ಬಿಡೆಬಿದಿರ್ದು ಬಿಚ್ಚಿ ಬಿಡದಾರಿಸಿ ಮೇಣ್ ||
ಮುಗಮುಗಿಪ ಮೃಗಮದದ ರೇ |
ಣುಗಳಂ ತಳಿದಾಳಿ ಕಟ್ಟಿದ ಳ್ಮೋಮುರ್ಡಿಯಂ || ೧೩

ದಿಸಲಕ್ಷ್ಮಿಗಿಂದ್ರದಿಗ್ವಧು |
ವಿಸಯದೆ ಪೊಂಬಿಸಿಲ ನುಡಿಸಿದಂತಿರೆ ಪದ್ಮಾ ||
ಸನೆಗೆ ಪೆರಳ್ಪೊಂಬಟ್ಟೆಯ |
ನನು ಗೊಳಿಸಿದ ಳವಳ ವಿಪುಳ ಜಘನಾಚಳದೊಳ್ || ೧೪

ಎಳನೇಸರ ಕೆಂಬೆಳಗಂ |
ತಳೆದಬ್ಜನಿಯಂತೆ ಕಾಂತೆ ಕುಂಕುಮದಣ್ಪಂ ||
ತಳೆದೆಸೆ ದಳ್ತನುಲತೆಯೊ |
ಳೊತ್ತಳಗುವ ಪೊಸಪೊನ್ನ ಪುತ್ತಳಿಯ ನೇಳಿಸುತುಂ || ೧೫

ವಿರಹಿಜನ ದೆರ್ದೆಯ ನೆತ್ತ |
ರ್ವೊರೆದಂಗಜ ನಸುಗೆ ಸರದ ಚೆಲ್ವಂ ತಳೆದ ||
ತ್ತುರರೆ ನವಯಾವಕದ್ರವ |
ಪರಿಲಿಪ್ತಂ ಚರಣತಳ ಮದಬ್ಜಾನನೆಯಾ || ೧೬

ಅಡಿಯಿಂದು ನಳಿನದೆ ಜಯಮಂ |
ಪಡೆದುದು ನಡೆಯಿಂದ ಪೂಮರಾಳದ ಮದಮಂ ||
ತೊಡೆದು ದೆನುತಬಳೆ ಬಿರುದಿನ |
ತೊಡರಂ ತುಡಿಪಂತೆ ತುಡಿಸಿದ ಳ್ನೂಪುರಮಂ || ೧೭

ಸ್ಮರಕರಿಯ ಶಿರದ ಸಿರಿಯಂ |
ಗುರುಜಘನಂ ಕಳ್ದುದೆಂದು ಕಾವನ ಬೆಸದಿಂ ||
ತರಳೆ ಮಿಗೆ ಕಟ್ಟಿದಪಳೆನೆ |
ಸುರುಚಿರ ಕಟಿಸೂತ್ರಮಂ ತೊಡರ್ಚಿದ ಳೊರ್ವಳ್ || ೧೮

ಇನಿಯನ ಮನೋಮಯೂರಂ ||
ಬಿನದಿಸುಗೆ ನಿತಂಬಗಿರಿ ನಿಶಂಬದೊಳೆನುತುಂ ||
ವನಿತೆ ಸೆಳೆಮಿಂಚ ನಿಟ್ಟ ಪ |
ಳೆನೆ ಕಾಂಚನ ಕಾಂಚಿಯಂ ಕರಂ ಕೈಗೈದಳ್ || ೧೯

ವದನವಿಧುರುಚಿ ಮುಸುಂಕಿದೊ |
ಡ ದಿರದಿರೆಂದಬಳೆ ತೊಡಿಪಪೋಲೆಳವಿಸಿಲಂ ||
ಸುದತಿಯ ಕುಚಚಕ್ರಕೆ ತುಡಿ |
ಸಿದ ಳೊಲವಿಂ ಮಿಸುಪ ಮಿಸುನಿರವಕೆಯ ನೊರ್ವಳ್ ||೨೦

ಸ್ತನಕನಕ ಕಮಳಕಳಿಕೆಗ |
ಳನೆ ತಳೆದ ಮೃಣಾಳಮೆನಿಸಿ ತೋಳ್ಪರ್ ವೊಲೊರ್ವಳ್ ||
ವನಿತೆ ಯುರದಲ್ಲಿ ಪೊಸಮು |
ತ್ತಿನ ಘನನಕ್ಷತ್ರಮಾಲೆಯಂ ತೆಗೆದಿಟ್ಟಳ್ || ೨೧

ವಚನ|| ಅಗಳ್—

ಕಂ|| ಸ್ತನಗಿರಿ ಯೊಳುದಯಿಪಂ ಕಾಂ |
ತನಖಕ್ಷತ ತರುಣ ಚಂದ್ರ ನೆಂದುಡುಗಣ ಮೊ ||
ಯ್ಯನೆ ಬಂದು ಮುನ್ನ ವಿಂದರ್ಪು |
ದೆನೆ ತಾರಾಹಾರ ಮಿಂಬುವೆತ್ತುದು ಸತಿಯಾ || ೨೨

ಸಂಪಗೆಯ ದುಂಡುದಂಡೆಗ |
ಲಂಪಿಂ ಮಲ್ಲಿಗೆಯ ದಂಡೆಯುಂಕೆಳೆಗೊಳಿಪಂ ||
ತಿಂಪಡರೆ ತೋಳ್ಗೆ ಮೌಕ್ತಿಕ |
ದಿಂ ಪುದಿದುರುಬಾಹುಪೂರಮಂ ಪದೆದಿತ್ತಳ್ || ೨೩

ಇನಕರ ಮುಡುಗಣಮಂ ಕ |
ರ್ಚಿ ನೆಲಕ್ಕಿಳಿತಂದು ನಳಿನಕಿತ್ತಪುದೆನೆ ಕಾ ||
ಮಿನಿಯ ಕರಾಗ್ರದೊಳಿಡೆ ಕಾಂ |
ಚನ ವಲಯಂ ಮೌಕ್ತಿಕಾನ್ವಿತಂ ಕಣ್ಗೊಳಿಕುಂ || ೨೪

ಚೆಂಗುಡಿ ಗುಡಿಯೊಡೆ ಯೆಡೆಯೊ |
ಳ್ಪಿಂಗದೆ ನೆಗೆದೇರಿ ಸಿಂದ ಮಣಿಗಳಿ ವೆಂಬೊಂ ||
ದಂಗಮ ನೊಡರ್ಚಿ ಮಾಣಿಕ |
ದುಂಗುರಮಂ ನುಣ್ಬೆರಲ್ಗಳೊಳ್ಕೈಗೈದಳ್ || ೨೫

ನುತಸುಕರ ಪದ್ಮರಾಗಂ |
ಕ್ಷಿತಿಯೋಳ್ರವಿಯಿಂದೆ ಮೆರೆವುದುಚಿತ ಮದೀಗಳ್ ||
ನುತಸುಕರ ಪದ್ಮರಾಗೆ |
ಸ್ಥಿತಿಯಿಂ ರವಿ ರಾಗವಾಂಪುದಿದು ಚಿತ್ರತರಂ || ೨೬

ಸ್ತನಕನಕ ಕಂಜಕೋರಕ |
ಮನಿಶಂ ವಿಕಸನ ಮನಾಸದಿರ್ಕೆಂದು ಪಳ ||
ಚ್ಚನೆಮೂಡು ಎಂದು ವಿಟ್ಟಪ |
ಳೆನೆ ಕಟ್ಟಿದಳ್ಬೆರೆದಾಳಿಯಂ ಪೆರಳೊರ್ವಳ್ || ೨೭

ವನಿತೆಯ ಕಣ್ಣೈದಿಲ ಸಿರಿ |
ಗಸುಕೂಲವಿದೆಂದು ಚಂದ್ರಬಿಂಬದ್ವಯಮಂ ||
ಮನಸಿಜಜಯರಮೆ ಸಾರ್ಚಿದ |
ಳೆನೆ ತುಡಿಸಿದಳೆಸೆವ ಮುತ್ತಿನೋಲೆಗಳೆರಡಂ || ೨೮

ಹಸನರಸ ವೆಂಬಸುಧೆ ಶರೆ |
ಮಸಗೆಸಿಡಿಲ್ದುದರೆ ತೋರಸನಿ ತಳ್ತವೊಲೊ ||
ರ್ವ್ವಸಿಯಳಿಡೆ ಮಿಸುಪ ಮುತ್ತಿನ |
ಪೊಸಮೂಗುತಿ ಮೆರೆದುದಾಸ್ಯ ದೊಳ್ಸ್ಮಿತಮುಖಿಯಾ ||೨೯

ಕಂ|| ಸುರಗಿರ್ೀಯ ಲಾಗದೆಲೆಚಂ |
ದಿರ ಕಲೆಗಳಸಂದು ಬಂದು ಪೊಡೆಯೊಳ್ತಲೆಯಿ ||
ಟ್ಟಿರದೆರೆವ ಶುಕ್ರನೆನೆ ಭಂ ||
ಸುರ ನಾಸಾಮಣಿ ವಿರಾಜಿಸಿತು ಮೊಗಸಸಿಯೊಳ್ || ೩೦

ಇಂದೀವರದ ಸಿತರಜಂ |
ಪೊಂದಿದುದೆಲರಲೆಯೆ ತುದಿಯ ನೆಸಿಸುತ್ತೊರ್ವ್ವಳ್ ||
ಚಂದಿರ ಮೊಗದೆ ಳೆಯಳ ನಯ |
ನೇಂದೀವರಕಾಗಳೆಚ್ಚಿದಳ್ಕಜ್ಜಳಮಂ || ೩೧

ಮೊಗವೆಂಬ ಪೂರ್ಣಚಂದ್ರನೊ |
ಳೊಗೆದಳಿಕಾರ್ಧೇಂದುಃ ಪೆತ್ತುದೆನೆ ಸಸಿಗೆರೆಯಂ ||
ಮಿಗೆ ಮೆರೆವ ಭಸಿತ ತಿಲಕಮ |
ಸುಗುಗೊರ್ನೆಯಿಂ ತಿದ್ದಿರಚಿಸಿದಳ್ಪೆರಳೊರ್ವ್ವಳ್ || ೩೨

ಅಲರ್ದಸೆವ ಕರ್ಣಪೂರೋ |
ತ್ಪಲದ ಸಿತರಜಂ ಕಳಲ್ದು ಪಸರಿಸಿತೆನೆ ಕೋ ||
ಮಲೆಯು ಕದಪಿನೊಳ್ ಬರೆದ |
ಳ್ನಲಿನೇಕ್ಷಣೆ ಮಿಸುಪ ಮಕರಿಕಾಪತ್ರಿಕೆಯಂ || ೩೩

ವದನೋದಿತೇಂದುವಿನ ಚೆಂ |
ಗದಿ ರಿದಿರೇರ್ವ್ವಂತೆ ಸಿಂದುರಂ ತಳ್ತಿರೆ ತ
ತ್ಸುದತಿಯ ಚಿಕುರತಮಂ ಕೊ |
ಟ್ಟುದೆನಲ್ಪಟ್ಟಿಯ ನದರ್ಕ್ಕೆ ಬೈತಲೆ ಮೆರೆಗುಂ || ೩೪

ರಜನೀಮುಖ ವಿಧುವೆನೆ ಧೃತ |
ರಜನೀ ಮುಖವಿಧು ಪೊದಳ್ದ ಕಾರ್ತಸ್ವರನೀ ||
ರಜ ಮಧುರತೆ ದಾಳ್ದಿರೆ ನೀ |
ರಜ ಮಧುರತೆಯುಳಿನಿ ಪಾಯ್ದುದೆನೆ ಕುರುಳೆಸೆಗುಂ || ೩೫

ವೃ|| ದರಹಾಸಜ್ಯೋತ್ಸ್ನ ಯಿಂತಳ್ತಿಸೆವವದನಪೂರ್ಣೇಂದುವಂಸಾದ್ರ್ರನೀ
ಬುರುಹಂಗಳ್ಕಂಗಳಾ ಕಾಂವುನೆ ಪಡೆದು ಚೆಲ್ವಾದುವೆಂದಲ್ಲಿ ಕಾಮುಂ|[ಲಾಂ
ಪುರುಡಿಂದಂತಪ್ಪಚೆಲ್ವಂ ತಳೆಯಲೆ ಳಸಿ ಕಾದಿರ್ಪುವಿಂಬಂತೆ ಶೋಭಾ ||
ಕರಕಾಂತಾಕರ್ಣದೊಳ್ಕಂಗೊಳಿಸಿದುವುಲಸತ್ಕರ್ಣಪೂರೋತ್ಪಲಂಗಳ್||೩೬

ಕಂ|| ಮುಡಿ ನವಿಲಸಖ್ಯದಿಂದಂ |
ಕುಡಿಮಿಂಚ ಮರ್ದಪ್ಪಿ ಸಿಂದುದೆನೆ ಮೆರೆಪಿನವಾ ||
ಮುಡದಿಗೆ ಸೂಡಿದಳೊರ್ವ್ವ |
ಳ್ಪಿಡಂಗು ವಡೆದೆಸೆವ ಸಂಪಿಗೆಯ ಮಾಲಿಕೆಯಂ || ೩೭

ವೃ|| ಕಾಮರ್ಗಿಲ ಗೃದೊಳ್ಪೊಳೆವ ಭಾಸ್ಕರ ಬಿಂಬಮನುನ್ಮ ಯೂಖಮಾ
ಲೋಮಿಃಯು ನೊರ್ಮ್ಮ ಪೊಲ್ತಿರೆ ಮಣಿವ್ರಜ ಮಂಡಿತ ಮೊಂದಿ ತೊಂಡಿಲಾ||
ಸೋಮರ್ಡಿಯಲ್ಲಿ ನಲ್ಮಿಸುಸಿದಂಡೆ ಮೃಗಾಕ್ಷಿಗೆ ತತ್ಸಖೀಜನಂ |
ಕೂರ್ವೆಯೊಳಿಟ್ಟು ಸಿಂಗರಿಸಿ ನೀಕ್ಷಿಸಿ ತಾಳ್ದುದು ರಾಗದೇಳ್ಗೆಯಂ || ೩೮

ವಚನ|| ಅಗಳ್—

ವೃ|| ಅನುದಿನ ಮಿಕ್ಷುಚಾಪ ನೆಳವೆಂಡಿರ ಪೆರ್ಮೆಲೆ ವೆಟ್ಟಿನಲ್ಲಿ ನೆ |
ಟ್ಟನೆ ನೆಲೆಗೊಂಡು ತನ್ನ ಕಸುಧರ್ಮವ ನೆಲ್ಲಮನೊತ್ತಿ ನಿಸ್ಮಯಿಂ ||
ನೆನೆಯೆ ನಿಜಪ್ರಸನ್ನೆಯೆನಿಸಿರ್ದಧಿದೇವತೆಯಂತೆ ಕಾಂತೆಕಾ |
ಮಿನಿಯರ ಕಣ್ಗೆ ಕಾಣಿಸಿದಳುಜ್ಜ್ವಳಭೂಷಣವಾಂತು ಚೆಲ್ವಿನಿಂ || ೩೯

ವಚನ|| ಮತ್ತಂ—

ವೃ|| ಮಸೆದ ಲರಂಬನಂಬಕಮರೀಚಿ ವಲಂ ಗೆಲೆಪಾರ್ವಣೇಂದುವಂ |
ಮಿಸುಪ ಮೊಗಂ ಕರಂ ಪಳಿಯೆ ಪಂಕಜ ಕೋಶಮನುತ್ಕುಚಂ ಏಡಂ ||
ಬಿಸೆ ಗಜಕುಂಭಮಂ ಜಘನಮೇಳಿಸೆ ನುಣ್ದೊಡೆ ಬಾಳೆಯಂ ಬಳುಂ |
ಕಿಸೆ ತಳಿರಂದಮಂ ತೆಗಳೆ ಮೆಲ್ಲಡಿ ಕನ್ನಿಕೆ ಕಣ್ಗೆ ತೋರಿದಳ್ || ೪೦

ಕರಪಂಕೇಜಂಗಳೇಂ ಕಂಕಣದಿ ನೆಸೆವುದಾಶ್ಚರ್ಯಮೇ ಪಾಣಿಶಾಖೋ|
ತ್ಕರ ಚಂಚದ್ವಿದ್ರುಮೌಘಂ ಮಿಸುವುದು ಪಿರಿದೇ ರತ್ನಯುಕ್ತೋರ್ಮಿಕಾ ಬಂ
ಧುರ ಏೂವಕ್ತ್ರೇಂದು ಬಿಂಬಂ ಮೆರೆವುದರಿದೆ ನಕ್ಷತ್ರಮಾಲಾವೃತಂ ತ್ವ |
ಚ್ಚರಣಾಬ್ಜಂ ಹಂಸಕಾರಾಜಿತ ಮೆನಿಪುದಿದೇಂ ಚಿತ್ರಮೇ ಪೇಳ್ಮೃಗಾಕ್ಷೀ ೪೧

ವಚನ|| ಎಂದು ಕಳಾರಮೆ ಪೊಗಳುತ್ತಿರೆ ಮತ್ತೊರ್ವ್ವಳ್ಮ ಕುರಮುಖಿ ಸಖೀಮುಖೇಂ
ದುಗಿಂದುಬಿಂಬಮಂ ಸರಿಯಿಟ್ಟು ಪರೀಕ್ಷಿಪಳೆನೆ ಮಣಿಮುಕುರಮನೆತ್ತಿ ಪಿಡಿಯಲೊಡನೆ—

ಕಂ|| ಒಳಕೈದುಂದವಳ ಮುಖಮಂ |
ಡಳವಿಧುಮಂಡಳಮನ ಮಳಮಣಿಮುಕುರ ವಿಳಾ ||
ತ್ಕಳದೊಳ್ಪೆರರಿದ್ದಿರವಂ |
ತಿಳಿವುವ ವಿಮಳಗ್ಗಧೀನವಾಗದರೊಳರೆ || ೪೩

ವಚನ|| ಇಂತುವಾಸರ್ವಮಂಗಳಾಮಹಾದೇವಿ ಪಸದನಂಬಡೆದು ಸಖೀಜನಮಧ್ಯದೊ
ಳ್ಸಂಭ್ರಮದಿನಿರ್ಪಿನವಿತ್ತಲ್—

ವೃ|| ಸನ್ನುತಿವೆತ್ತತನ್ನೃಪಸುತಂಗೆ ವಿಳಾಸಿನಿಯರ್ವಿಳಾಸದಿಂ |
ದನ್ನವಗಂಧತೈಲಮನೆ ಪೂಸಿ ಕಜಾಘಕೆ ಸಾರ್ಚಿನಲ್ಮೆಯಿಂ ||
ರನ್ನದ ಪೀಠಮಂ ಮೊಳಗೆ ವಾದ್ಯರವಂ ವಿವಿಧೋತ್ಸವಂಗಳಿಂ ||
ಪನ್ನಗವೇಣಿಯರ್ಸ್ಸರಿದು ಸೂಸಿದರೊಲ್ದು ಸುಗಂಧವಾರಿಯಂ || ೪೪

ಕಂ|| ತರುಣಸುರತರುಗೆ ಸುರಿವಂ |
ತಿರೆ ಸುದತರುಣಿಯರಮರ್ತ್ಯನದಿಯುದಕಮನಾ ||
ತರುಣಿಯರರಸಂಗೊಳ್ಗ |
ಪ್ಪುರವೆರೆದ ಮಳಾಂಬುವಿಂದೆ ಜಳಕಂಗೆಯ್ದರ್ || ೪೫

ವಚನ|| ಅನಂತರಂ—

ಕಂ|| ಸಿಂಗರಿಸಿದ ನಖಿಳ ಕಳಾ |
ಸಂಗತಸಲ ರ್ವಿಲ್ಲ ನಂಗಮಂ ಸಿಂಗರಿಪಂ ||
ತಿಂಗದಿರಂ ಸಾಂಗಮನೋ |
ಜಂಗೆಣೆಯೆನೆ ನೃಸುಪ ಕುವರನಂ ಸಖನೊರ್ವ್ವರಂ || ೪೬

ವಚನ|| ಮತ್ತಮಾಗಳ್—

ವೃ|| ವರಿಸಲ್ಕ್ರೀಕಾಂತೆ ತಾಂ ತಂದಿಳಿಪಿದ ವಿಳಸನ್ಮಲ್ಲಿಕಾಮಾಲ್ಯಮೆಂಬಂ
ತಿರೆ ಹಾರಂ ವಕ್ಷದೊಳ್ಪಂಕಜಕೆ ಬಳಸಿ ಸಿಂದಂಚೆ ಯಂಡಂಗಳೆಂಬಂ ||
ತಿರೆ ಮುಕ್ತಾಕಂಕಣಂ ಕೈಮೊದಲೊಳುಡುಗಳಂ ಕಟ್ಟಿವಕ್ತ್ರಾಬ್ಜ ಮಿಟ್ಟಂ |
ತಿರೆ ಕರ್ಣಾಲಂಬಿ ಸುಮ್ಮುತ್ತು ಗಳ ತೊಡವು ಚೆಲ್ವಾದನಾ ರಾಜಪುತ್ರಂ ||

ಕೊಂಕಿದಪುರ್ಬ್ಬ ನೀಳ್ದನಗೆಗಣ್ಕಳಿವೆತ್ತಮುಖೇಂದು ಶಂಖಮಂ |
ಝುಂಕಿಪನುಣ್ಗೊರಲ್ತೊಳಪುರಸ್ಥಳ ಮಾಯತಬಾಹು ಕಾಂತಿಯಿಂ ||
ಪಂಕಜಮಂ ಕರಂ ತೆಗಳ್ವಕೆಂದಳಮೊಳ್ಪಡು ಬಾಳೆಗಂಬಮಂ |
ಮಾಂಕರಿಸುತ್ತೆ ತೋರ್ಪತೊಡೆ ಮೆಲ್ಲಡಿ ರಂಜಿಕುಮಾಕುಮಾರನಾ || ೪೭

|| ಮಣಿವಿಭೂಷಣವೃತ್ತಂ ||

ವೃ|| ಕಾವನಾಕುವರಸಂಗದ ಚೆಲ್ವಿಕೆಗೆಂಡು ರಾ |
ಜೀವಲೋಚನೆಯರೆನ್ನಿರವಂ ಪಳಿಕ್ಕೈವರೆಂ ||
ದೇವಿಚಾರಿಸುತೆ ನಾಣ್ಚುತೆ ಮೈಗರೆದಿರ್ಪರ್ನಾ |
ಪೀವರಸ್ತನಮಹೀಧರಮಧ್ಯದೊಳೀಗಳುಂ || ೪೮

ವೃ|| ಪೊದೆದ ನವೀನಚೀನ ವಸನಂ ತಳೆದುಜ್ಜ್ವಳ ರತ್ನಭೂಷಣಂ |
ಪದೆದು ಕಿರೀಟಮಧ್ಯದೊಳಮರ್ಚಿದರತ್ನದ ಶೇಖರಂ ನಿಜಾಂ ||
ಗದೊಳಿರದಣ್ಪುಗೈದಸಿರಿಗಂಪು ಕರಾಬ್ಜದೊಳಾಂತ ಮಾತುಳಂ |
ಗದಫಳಮೊಪ್ಪೆ ಬಂದವನೀಶ್ವರಪುತ್ರನುದಾತ್ತವೈಭವಂ || ೪೯

ಕಂ|| ಮಿಳಿರ್ವ*ಪತಾಕಾವಳಿ ಮೇ |
ಳಳುರ್ಕೆಗೊಳೆ ಮೌಕ್ತಿಕಾತಪತ್ರ ಪ್ರಕರಂ ||
ತೊಳಗೆ ಬಳಸಿರ್ದ ನೃಪವಂ |
ಡಳಿಯೊಳ್ಕರಿಯೇರಿ ನೃಪತಿ ಬರ್ಪವಸರದೊಳ್ || ೫೦

ವಚನ|| ಮತ್ತಂ—

ಕಂ|| ದೆಸೆಯಂ ತುಂಬಿರೆ ತೂರ್ಯ |
ಪ್ರಸರಧ್ವನಿ ತೀವೆ ಬಹುಳಕಹಳಾರವಮಾ ||
ರಸೆಯಿಂಬಿಲ್ಲೆಂಬಂತಿರೆ |
ಮುಸುಂಕೆ ಕರಿತುರಗರಥಪದಾತಿಗಳಾಗಳ್ || ೫೧

ವೃ|| ಕರಕಂಜಾತಕ್ಕೆ ಪುಟ್ಟಿರ್ದಬುಜಮೆನಿಸೆ ಲೀಲಾಂಬುಜಂ ತುಂಬಿ ಬಿಂಬಾ|
ಧರರಾಗಂ ಸೂಸಿತೆಂಬಂದದೊಳೆ ಪೊಳೆಯೆ ಕೆಂಬಲ್ಗಳೊಳ್ಗೆಂಪು ಪಾದಾಂ ||
ಬುರುಹಪ್ರಸ್ಯಂದಮೊಕ್ಕಂತಿರೆ ನಖರುಚಿಸಂಮಿಶ್ರಿತಾಲಕ್ತಕಂ ಬಂ |
ದರಮಂದಾನಂದದಿಂದಂದಿದಿರನವನಿಪಾಲಾಜ್ಞೆಯಿಂ ಕಾಂತೆಯರ್ಕಳ್||೫೨

ವಚನ|| ಅಂತು ಮೆಲ್ಲದೆಯುಂ— [ಣಂಕಾಂ

ವೃ||ಸ್ತನಯುಗ್ಮಂಪೂರ್ಣಕುಂಭದ್ವಯಮಳಿಚಳಚೂಣಾಳಕಂತೋರ–
ಚನಕಾಂಚೀದಾಮ ಚಂಚದ್ದ್ಯುತಿ ಯುರಿವ ನಲಂ ದರ್ಪಣಂ ಗಂಡಮಬ್ಜಾ||
ನನಮಬ್ಜಂ ಶಂಖಮುದ್ಯದ್ಗಳ ಮಧರದಳಂ ಬಿಂಬಮಿಂತಾಗೆ ಕಾಂತಾ |
ಜನಮಂದೈತಂದು ದಿಷ್ಟಾಪ್ತಿಯನರಿಪುವ ಮಾಂಗಲ್ಯಮೆಂಬಂದದಿಂದಂ ||೫೩

ಎಸೆರಜ್ಜಾಂಬೂನದೀಪೂರದೊಳೆ ಬೆರೆದಗಂಗಾಪ್ರವಾಹಂಬೊಲಿಂಬಾ |
ಗೆ ಸುಧಾಧಾಮಪ್ರಭಾಭಾಸುರಮದುಬಿಸಿಲೋಳ್ತೀವಿನೇತ್ರಾಂಶು ಮಂಜೇ||
ರಸಮುದ್ಯನ್ನಾದಮಿಾಭೂಮಿಯ ತಳೆದಹಿಪಂಗೆಳ್ಚರಂಪೇಳ್ವವೋಲ್ರಂ |
ಜಿಸೆ ತತ್ತೀನಸ್ತನಪ್ರೋಜ್ಜಘನವಹನದೊಳ್ಪೆಂಡಿರ್ರೈತಂಡರಾಗಳ್ || ೫೪

ವಚನ|| ಮತ್ತಂ—

ವೃ|| ತರಳಕಟಾಕ್ಷರೋಚಿ ಪೊಸಲಾಜೆಯ ಸೂಸೆ ಮೃದುಸ್ಮಿತಂ ಸಿತಾಂ
ಬುರುಹದೆ ತೋರಣಂಗೊಳಿಸೆ ವಾದ್ಯರವಂ ಗುಡೆ ಸಿಂಜಿತಂ ಚಲ ||
ಚ್ಚರಣನಖಾಂಶುಪಾಸೆ ಮುಡಿಯಂ ಗುಡಿಗಟ್ಟೆಚಳಾಳಕಂ ಪಯೋ |
ಧರಕಲಶಕ್ಕೆ ಚಂದಳಿರನೊಂದಿಸೆ ಚೆಂದುಟಿಗೆಂಪು ಕಾಂತೆಯರ್ || ೫೫

ಕಂ|| ಇದಿಗೊರ್ಗಂಡರಮರ ಸಾರಿಯ |
ರಿದಿಗೊ*ರ್ಗಂಬಂತಮರ ರಾಜನಂ ಕಣ್ಗದಿರ್ಗಳ್ ||
ಪುದಿದಿರೆ ಸುರಕರಿಯಿರವಂ |
ಮದಗಜಮದುಪೋಲೆ ಮೇಲೆ ಮೆರೆವವನಿಪನಂ || ೫೬

ವಚನ|| ಆಗಳ್ಸಸಂಭ್ರಮಂ ನೆರೆದು ನೆಲೆವನೆಯ ನೆಲೆನೆಲೆಗಳೊಳ್ನಿರೀಕ್ಷಿಪಬಳೆಯರನೀಳ್ದ ಕಡೆಗಣ್ಣಕದಿದ್ದುರ್ಗರುಗಲೆಂಬರಲ ಸರಿಯ ಪಿರಿಯಸಿರಿಯಿಂ ಸಕಳರಾಜ ನಿಕರಕಿರೀಟ ಕೋಟಿಘಟಿತ ಮಣಿಗಣರುಚಿರ ರುಚಿನಿಚಯ ತರುಣದಿನಕರಕರನಿಕರ ದಳಿತ ಧವಳನಳಿನಂಗಳೆಂಬಂತೆ ನಿಲುಂಬಿ ನಿಂದ ಧವಳಾತ ಪತ್ರಪ್ರತಾನದಿಂ ದಶದಿಶೆಯೊಳ್ಬರಕಲಿಸಿ ಪರ್ಬಿದಪಟಹಡಿಂಡಿಮ ಶಂಖ ಕಹಳಾಮುರಜಾಮೃದಂಗಢಕ್ಕಾದಿ ವಾದ್ಯನಿನಾದದಿಂ ಮುಂದೆ ಸಂದಣಿಸಿ ಕೈಯೆತ್ತಿ ಪೊಗಳ್ವವಂದಿ ವೃಂದದ ಕೋಲಾಹಲಧ್ವಾನದಿಂ ಪಿಂದೆ ಗೊಂದಣಂಗೊಂಡು ತುರಂಗಮನೇರಿ ಬಪ್ಪರ್ದಂಡನಾಥ ಮಂಡಳಿಕರ ತಂಡದಿಂದೆಡಬಲದೊಳ್ಬೀಸುವಧವಳಚಾಮರದನೆಗಪ್ಪುವ ಸೀಗುರಿಯ ಪಿಡಿದು ಬಪ್ಪರ್ನವರತ್ನದ ನಡೆ ತೋರಣದ ನಭಮನಳ್ಕಿರಿದು ಮಿಳಿರ್ವಪಳವಿಗೆಗಳ ವಿಳಾಸದಿಂ ಮಿಕ್ಕು ಪೊಕ್ಕು ಕಿಕ್ಕಿರಿಗಿರಿದು ಬಪ್ಪರ್ಕರಿತುರಗ ರಥಪದಾತಿಗಳ ಪೆರ್ಮೆಯಿಂ ವಿಸ್ತರಿಸಿದ ವಸ್ತುಕಾರದ ಕನಕಪಾತ್ರಗಳಂ ಮಣಿ ಭರಣಂಗಳ್ಪುದಿದಪೆಟ್ಟಿಗೆಗಳಂ ಪರಿಮಳ ಪ್ರಕರ ಪರಿಮಿಳಿತ ಭಾಜನಂಗಳ ನೋಜೆಯಿಂ ಪಿಡಿದೆಡೆವಿಡದೆ ಗಡಣಂಗೊಂಡು ಬಪ್ಪರ್ಮುಡದಿಯರಿಂದತಿಸಂಭ್ರಮಂ ನೆಗಳೆ ಸುರೇಂದ್ರವೈಭವಮಂ ನರೇಂದ್ರತನೂಭವಂ ತಾಳ್ದು ಮಿತ್ರವಚನ ಸಮೇತಂ ಬಂದು ರಾಜಗೃಹದ ಬಹಿದ್ವಾರ ದೇಶದೊಳ್ಗಜಸ್ಕಂಧದಿ ನಿಳೆಗೆಗವತರಿಸಿ ಸಚಿವಂ ಕೈಗುಡೆ ನಡೆತಂದು ಮಹೋತ್ಸವಂ ಮಿಗೆ ಮಾಂಗಲ್ಯ ಮಂಟಪಮಂ ಪೊಕ್ಕು ಮಧುಪರ್ಕ್ಕಮಂ ಕೈಕೊಂಡು ಪುಣ್ಯಾಹಮೆಂಬ ಪುರೋಹಿತರವದೊಡನೆ ಭದ್ರವೇದಿಕೆಯ ನಲಂಕರಿಸಿ ಸದ್ರೀತಿಯಿಂ ದಿಪ್ಪಾರ್ಗಳ್ಸುಮುಹೂರ್ತಂ ಸಾರ್ತಂದುದೆಂದು ಸಿಂಹಳೇಂದ್ರಂಗೆ ಪುರೋಹಿತಂ

ನಿರವಿಸೆ ಕೇಳ್ದು ಕುವರಿಯುಂ ಕರೆದು ತರ್ಪುದೆಂದು ಸಚಿವಂಗೆ ಪೇಳಲೊಡನವಂ ಗಳಿಲನೆ ಪೋಗಿ ಮುನ್ನಮೆ ಪಸದನಂಗೊಂಡು ಪಸೆವೆಣ್ಣೆನಿಸಿರ್ದ್ದ ಕನ್ನೆಯುಂ ಕರೆದುತರ್ಪ್ಪಾಗಳ್—

|| ರಥೋದ್ಧತವೃತ್ತಂ ||

ಸುತ್ತಿತಳ್ತಸುದತೀಜನೇಕ್ಷಣೋ |
ದಾತ್ತಕಾಂತಿ ನವದುಗ್ಧವಾರ್ಧಿಯಂ |
ಕೆತ್ತಮುರ್ವೆ ಸಿರಿಯಲ್ಲಿ ಬರ್ಪ್ಪವೋ |
ಲ್ವೃತ್ತಪೀನಕುಚೆ ಬರ್ಪ್ಪಳೊಪ್ಪಿದಳ್ || ೪೮

ವೃ|| ಮಣಿಭೂಷಾಭಾನಃಭಾನುಪ್ರಭೆಯನರುಣಿಮಂಮಾಡೆ ಚಂಚತ್ಕಟಾಕ್ಷೇ|
ಕ್ಷಣರೋಚಿರ್ಮಾಲೆ ಮಿಂಚಂ ಕರೆಯೆ ಮಿಸುಪವಕ್ತ್ರಾಂಶು ದಿಗ್ಭಾಗದೊಳ್ಪಾ
ರ್ವಣಚಂದ್ರದ್ಯೋತಿಯಂ ಮೇಣ್ಪರಪೆ ಮೃದುಪದನ್ಯಾಸಕಿಂಚಜ್ಝಲತ್ಕಂ |
ಕಣಕಾಂಚೀಕಿಂಕಿಣೀ ನಿಕ್ವಣಿತಯುತೆ ವರಾಭ್ಯರ್ಣಮಂ ಸಾರ್ದ್ದಳಾಗಳ್||

ಕಂ|| ಮೊಳಗುವ ಭೇರಿಯ ಶಂಖದ |
ಪಳಹದ ಮದ್ದಳೆಯ ಘನ ಮೃದಂಗದ ಪಟುಕಾ ||
ಹಳಿಯ ಬಹುವಿಧದ ವಾದ್ಯದ |
ಕಳಕಳಮೆಣ್ದೆಸೆಯನಮರ್ದದೇಂ ಮುಸುಕಿದುದೋ || ೪೯

ಸಿರಿಯು ಹರಿಯೆಡೆಯೊಳಬ್ಧಿಯೊ |
ಳಿರದೇಳ್ವ ಸುವರ್ಣಕಂಜರಜದೊಡವೆರೆದೊ ||
ಳ್ದಿರೆಗೆ ದೊರೆಯಾದುದು ವಧೂ |
ವರರೆಡೆಯೊಳ್ಮಿಸುಪ ಮಿಸುನಿದೆರೆ ಮಣಿಗೃಹದೊಳ್ || ೫೦

ಜವನಿಕೆ ನಡುವಿರೆ ನೋಡ |
ಲ್ತವಕದಿನೋರೊರ್ವ್ವರಂ ಸಮುನ್ನತದೇಶ ||
ಕ್ಕವತರಿಸಿದರೆನೆ ಮುದದಿಂ |
ದವರಾಗಳ್ಮೆಟ್ಟಿ ನಿಂದು ಮೆಟ್ಟಕ್ಕಿಗಳಂ || ೫೧

ಪದೆದಿಟ್ಟರ್ಜ್ಜೀರಿಗೆಬೆ |
ಲ್ಲದಿನೊರ್ವ್ವರನೊರ್ವ್ವರತುಳತರಸಂಭ್ರಮದಿಂ ||
ಮುದವಕ್ಕರ್ಳ್ಕಿ ಜನಖರುಚಿ |
ಕೆದರುತ್ತಿರೆ ಕೂಡೆ ಮಲ್ಲಿಕಾಮಂಜರಿಯಂ || ೫೨

ನಳಿನವಮುಡುಗಳನೆ ಸೆರೆವಿಡಿ |
ದೆಳನೇಸಗ್ಗಿರ್ೀವ ತೆರದೆ ಕರಮದು ಮುಕುಟೋ ||
ಜ್ಜ್ವಳಮಣಿಶೇಖರದೆಡೆಯೊ |
ಳ್ತೊಳಿದುದುವೊಸಮುತ್ತಿನಕ್ಷತೆಯನಾವಧುವಾ || ೬೩

ಕಂದದಕುಂದದ ನನೆಯಂ |
ಕಂದರ್ಪಂರತಿಯಮುಡಿಗೆ ಸೂಸುವವೋಲ್ಟೊ ||
ಕಂದರ್ಪಂ ಸೂಸಿದನೊಲ |
ವಿಂದವಳ ಕಚೌಘದಲ್ಲಿ ಧವಳಾಕ್ಷತೆಯಂ || ೬೪

ವೃ|| ಎಲರಲೆದೆತ್ತಿ ನೂಂಕಿ ತೊಲಗುತ್ತಿರೆ ಪುಷ್ಪಪರಾಗಪೂಗಮಾ |
ಮ್ರಲತೆಯ ಪಲ್ಲವಂ ಮಿಸುಪಶೋಕೆಯ ನುಣ್ದಳಿರೊಂದುವಂತೆ ಜೆ |
ಲ್ವಲರೆ ಸುವರ್ಣಕಾಂಡಪಟವೋಸರಿಸುತ್ತಿರೆ ಸನ್ಮುಹೂರ್ತಮು |
ಜ್ಜ್ವಲಿಸೆ ವಧೂವರರ್ಕ್ಕಳ ಕರಗ್ರಹಣಾಂ ಬಗೆಗೊಂಡುದಾಕ್ಷಣಂ || ೬೫

ಕಂ|| ತೆರೆ ಸರಿಯೆ ಸಂಜೆ ಸರಿವಂ |
ತಿರೆ ವರವದನೇಂದುವಂ ನಿರೀಕ್ಷಿಸಿ ತಾರಾ ||
ತರುಣಿ ಮುದವಾಂಪವೊಳ್ಕೆಯೊ |
ಳರಸಿ ಮುದಂಬೆತ್ತು ಬೀರಿದಳ್ನಿಜರುಚಿಯಂ || ೬೬

ವಚನ|| ಆಗಳ್—

ವೃ|| ನನೆಯಿಂ ಪೇರಿರ್ದ್ದ ಮಲ್ಲೀಲತೆಗಮುಮರ್ದ್ದಸತ್ಕೋರಕಂಬೆತ್ತಚೂತಾ
ವನಿಜಕ್ಕಂಚೈತ್ರನಚಾಕ್ಷಂಬುವನೆಸುರಿವವೋಲ್ಸ್ವೇದವಾರ್ಬ್ಬಿಂದುರೋಮಾಂ|
ಚನಮಂ ಕೈಕೊಂಡು ನಿಂದಾತ್ಮಜೆಗವೊಡನೆ ಜಾಮಾತೃಗಂ ಸಿಂಹಳೇಂದ್ರಂ|
ಮನವೊಲ್ದೀರಂತೆ ಕೈನೀರೆರೆದನಭಿನವ ಸ್ವರ್ಣ ಕುಂಭಾಂಬುವಿಂದಂ || ೬೭

ಪಾಡೆ ಶೋಭನಮನಂಗನೆಯರ್ಕ್ಕಳ್ಮಂಗಳ ಪಾಠಕರುರ್ವ್ವಿ ಕೊಂ |
ಡಾಡೆ ಭೋಗಿರ್ಗ್ಗರೆದು ವಾದ್ಯನಿನಾದಂ ತೀವಿರೆ ಭೂವರಬಾಂಧವರ್ |
ನೋಡೆ ಸಂತಸದಿನಾಗಮುಘೋಷಂ ಪೊಣ್ಮಿರೆ ಜಾಣ್ಮಿಗೆ ಹೋಮಮಂ |
ಮಾಡೆ ಭೂಸುರರಿಳಾಪತಿಪುತ್ರಂ ಕೈವಿಡಿದಂ ಕಮಳಾಕ್ಷಿಯಂ || ೬೮

ವಚನ|| ಅಲ್ಲಿಂಬಳಿಯಿಂ—

ಕಂ|| ನಡೆಮುಡಿಯೊಳೊಯ್ಯನೊಯ್ಯನೆ |
ನಡೆವವಧೂವರರದೇಂ ವಿರಾಜಿಸಿದರೊ ಬೆ ||
ಳ್ಪಡರ್ದ ಪುಳಿನಸ್ಥಳದೊಳಡಿ |
ಯಿಡುತೊಡನೈದುವವುರಾಳದಂಪತಿಗಳವೋಲ್ || ೬೯

ವೃ|| ಶ್ರುತಿವಿಹಿತಕ್ರಿಯಾಕುಶಲಶೈವಮತಾಶ್ರಿತಶಾಸ್ತ್ರವಿತ್ಪ್ರರೋ |
ಹಿತಕೃತಹೋಮಕುಂಡದೆಡೆಗೆಳ್ತರುತುಂ ಮುದವರ್ಕ್ಕಳಂಬಿಕಾ ||
ಪತಿಯುತಮಿಂತಿದೆಂದು ಬಲವಂದು ಜಯಸ್ವನಸರ್ವವಾದ್ಯಸಂ |
ತತಿರುತಿ ತೀವೆ ಮಂಡಿಸಿದರಿಕ್ಕಿದಮೆಲ್ವಸೆಯೊಳ್ವಿಳಾಸದಿಂ || ೭೦

ಕಂ|| ನನೆವಾಸನೆನೆ ಮುತ್ತಿನಪಸೆ |
ಮನಸಿಜನೆನೆ ಕುವರನಲ್ಲಿ ನೆಲಸಿರೆ ಲಜ್ಜಾ ||
ವನತಾಂಗಿ ಕೆಲದೊಳಿಳಿಪಿದ |
ನನೆವಿಲ್ಲೆನೆ ಸುಗುಣವತಿ ಕರಂ ಮೆರದಿರ್ದ್ದಳ್ || ೭೧

ಮೆಲ್ಲನೆ ನಲ್ಲನನೀಕ್ಷಿಪ |
ನಲ್ಲಳ ಕಣ್ಗದಿರ್ಗ* ಳೆಸೆದುವಾಕೆಯ ಕಡೆಗ ||
ಣ್ಣಲ್ಲಿ ನೆಲಸಿದ ಮನೋಜಂ |
ಮಲ್ಲಿಗೆ ಬಿರಿಮುಗುಳ ಸೇಸೆಯಂ ಸೂಸುವವೋಲ್ || ೭೨

ವಚನ|| ಮತ್ತ ಮಲ್ಲಿ—

ವೃ|| ಮಾಣಿಕವಜ್ಜ ಮಂ ತಳೆದು ಕುಂಕುಮದಣ್ಪನಮರ್ಚ್ಚಿ ಕಾಯದೊ |
ಳ್ಶೋಣ ನವೀನ ವಾಸಮನಲಂಪಿನೊಳುಟ್ಟಳಮುತ್ತು ದೊಟ್ಟು ಕ ||
ಲ್ಯಾಣಿಯ ರಾಗಳಾರತಿಯ ಪೊಂಬರಿಯಾಣಮ ನಾಂತು ನಿಂದು ಮೇ |
ಣಾಕ್ಕಣಿಸಿದರ್ಸ್ವರ್ಭೇಂದುಮತಿಸಂಜೆ ಬಹುತ್ವಮನಾಂತು ನಿಂದವೋಲ್ || ೭೩

ಮನದನುರಾಗದಿಂ ವನಿತೆ ನೋಳ್ಪುದುಮಲ್ಲಿ ವರಾನನಾಬ್ಜ ಮಂ |
ತನು ಪುಳಕಂಗಳಂ ತಳೆಯೆ ನೇತ್ರದೊಳುಣ್ಮೆ ಸುಖಾಶ್ರುಮೆಲ್ಲಮೆ ||
ಲ್ಲನೆ ಬೆಮರುಣ್ಮೆ ಜಾಣ್ಮೆಯೊಳವಂ ಮರೆಸುತ್ತಿರೆ ದೂರಿದತ್ತು ಕಂ |
ಪನಕೃತ ಕಂಕಣಸ್ವನಮುಮಾವಿಕಾಸಮುಮಾತ್ಮರಾಗಮಂ || ೭೪

ವಚನ|| ಆಗಳ್—

ಕಂ|| ಪರಿಸುವವಮುತ್ತೈದೆಯರಾ |
ದರಿಸುವ ಕುಲವೃದ್ಧರತುಳವುಂಗಳವಂ ಬಿ ||
ತ್ತರಿಸುವವಿಬುಧರ್ನೆರೆದೊ |
ತ್ತರಿಸುವನಲ್ವೆಂಡಿರೆಸೆದರಾ ಮಂಟಪದೊಳ್ || ೭೫

ಘನಕಚಘನಕುಚಭಾರದೆ |
ವನಿತೆಯರುರೆಬಾಗುವಂತೆ ಬಾಗುತೆ ಕರದಿಂ ||
ದನವದ್ಯೆಯರಾಗಳ್ಮು |
ತ್ತಿನ ಸೇಸೆಯನಿಕ್ಕಿ ಪರಸಿದಮ್ಮರ್ಗನದೊಲವಂ || ೭೬

ವಚನ|| ಆಸಮಯದೊಳಖಿಳಕಳಾವಿದೆಯರಾದ ಕೆಳದಿಯರುಂ ನೆರೆದ ನರೇಂದ್ರಪುರಂಧ್ರಿಯರು ಮಭೀಕ್ಷಿಸಿ—

ಕಂ|| ಶಿವೆಯ ವರದಿಂದೆ ಪುಟ್ಟಿದ |
ಕುವರಿಯಿವಳ್ತತ್ಪ್ರಸಾದದಿಂದಲ್ತೆ ಮನೋ ||
ಭವನನಿಳಿಕೈವಚೆಲ್ವಿನ |
ಯುವರಾಜನೊಳೊಲ್ಮೆವೆತ್ತು ಪಸೆಸಿಂದಿರ್ದಳ್ || ೭೭

ವಚನ|| ಅಂತುಮಲ್ಲದೆಯುಂ—

ಕಂ|| ಇವರಂದಮಿವರವಿಭ್ರಮ |
ಮಿವರತಿಲಾವಣ್ಯಮಿವರ ಸೊಬಗಿವರಕಳಾ ||
ನಿವಹಜ್ಞತೆ ಯಿವರಗುಣಂ |
ವಿವರಿಸೆ ಮತ್ತಿವರೊಳಲ್ಲದನ್ಯರೊಳೊಳವೇ || ೭೮

ವಚನ|| ಎಂದು ಮಗುಳ್ದುಮಗುಳ್ದೀಕ್ಷಿಸಿ ಪೊಗಳುತ್ತುಮಿರೆ—

ಕಂ|| ಸರಿಯಿಟ್ಟು ನೋಳ್ಪವೋಲ್ಪಂ |
ಕರುಹಮನವಳಡಿಗೆ ತನ್ನ ಕರಮಿಡುತರಸಂ ||
ಸರಸಂ ಮಿಗೆ ಮೆಟ್ಟಿಸಿದಂ |
ದರಹಾಸಂ ಮೊಳೆಯೆ ಸಪ್ತಪದಿಗಳನಾಗಳ್ || ೭೯

ವೃ|| ಮಂಗಳದುತ್ಸವಂ ನೆಗಳೆ ಸಿಂಹಳಭೂಪತಿ ರೋಹಣಾದ್ರಿಯಂ |
ತಾಂ ಗೆಲೆವಂದು ಕಾನಕ ನಗೇಂದ್ರದವೋಲ್ಸಲೆ ಸಂದು ನಿಂದ ರ ||
ತ್ನಂಗಳ ರಾಶಿಯಂ ಮಿಸುಪ ಪೊಂಗಳ ರಾಶಿಯನಲ್ಲಿ ದೇವಭೂ |
ಜಂಗಳ ಪೆರ್ಮೆಗೆ ಕೀಳ್ಪಡೆ ಬುಧಪ್ರಕರಕ್ಕವನಿತ್ತನಿಚ್ಛೆಯಿಂ || ೮೦

ವಚನ|| ಆಗಳಾ ಸಿಂಹಳೇಂದ್ರ ನಧಾ೯ಂಗಿ ಕಳಾಧರೆ ಮಗಳುಮ ನಳಿಯನು ಮನ ಛೀಕ್ಷಿಸಿ ಸಂತಸಂಬಟ್ಟು—

ಕಂ|| ಹಿಮಮೃಗಮದಕುಂಕುಮಕ |
ದರ್ಪಮಸುಮನೋಮಾಲ್ಯವೀಟಿಕಾಭೂಷಣಮಂ ||
ದಮನಸಮಳಾಂಬರಮಂ ನೃಪ |
ರಮಣೀಸಮುದಯಕೆ ಪೊನ್ನಪಾತ್ರೆಯೊಳಿತ್ತಳ್ ೮೧

ವಚನ|| ಇಂತು ಯಥೋಚಿತ ವಿಧಾನಂ ಪರಿಣಯಂ ಬಡೆದನಂತರ ಮನೂನ ಸ್ನೇಹ ರಸಭರಿತಾಂತಃಕರುಣಂ ಕುಮಾರ ಕುಸುಮಾಯುಧಂ ಸಸಂಭ್ರಮಂ ಸಜ್ಜುಗೆಯ್ದು ಸೆಜ್ಜಾಗೃಹದ ಪಜ್ಜಳಿಪ ಪರಿಮಳ ಪರಿಮಿಳಿತ ಕುಸುಮ ಸರವಿಸರ ಪರಿವೃತ ಕನಕಪರ್ಯಂಕ ತಳದ ಮೃದುಳಧವಳ ತಳ್ಪಸ್ಥಳ ದೊಳ್ಗಾಡಿಯಿಂ ನಲ್ಲಳ ಬರವಂ ಬಯಸುತ್ತೆ ಕುಳ್ಳಿರ್ದಾಪ್ರಸ್ತಾವದಲ್ಲಿ

ವೃ|| ವದನೇಂದುದ್ಯುತಿಪೊಣ್ಮೆ ಸೋರ್ಮುಡಿಯಕಂಪಿಂಗೆಯ್ದೆ ಭೃಂಗಾಳಿಪಿಂ |
ಗದೆ ಪೀನಸ್ತನಮುಂ ಕದಕ್ಕದಿಸೆ ಮಧ್ಯಂಬಳ್ಕೆ ಮಂಜೀರನಾ ||
ದದೊಳೊಂದಾಗಿ ಪಳಂಚೆ ಕಾಂಚಿ ನಿನದಂ ಸಾತ್ತ್ವಂದಳಿಂದೀವರಾ |
ಕ್ಷಿದರಸ್ಮೇರ ಮರೀಚಿ ಸೂಸೆ ಸುಧೆಯಂತನ್ಮಂದಿರ ಪ್ರಾಂತಮಂ || ೮೨

ವೃ|| ಇಂತೀಳ್ತಂದ ಸರ್ವಮಂಗಳಾದೇವಿಯೊಡನೆ ಕಳಾವಿದೆಯರಾದ ಕೆಳದಿಯರೊಡನೇಳ್ತಂದತಿಶಯಪ್ರಮೋದದಿ ನಾಕುಮರಿಯ ನಾಯುವರಾಜನ ಕೆಲದೊಳ್ಕುಳ್ಳಿರಿಸಿ ಸರಸಾಲೋಕನದಿ ಸವಲೋಕಿಸಿ ತಂಗಿ ನಲ್ಲಂಗೆ ತಾಂಬೂಲಂ ಗುಡುವುದೆಂದು ಪೇಳ್ದಿಂದೊಂದು ನೆವದಿ ನೆಲ್ಲ ವೆರ್ಗಲ್ಲನೆ ತೊಲಗಲೊಡನೆ ಚೆಲ್ಲದಿಂ ನಲ್ಲಳ ಲಜ್ಜಾನತಮಾದ ನಗೆಮೊಗಮಂ ಸಂದಣಿಪ ಕಟಾಕ್ಷದಿ ನಡರೆ ನೋಡಿ ಕಾಮಕೇಳಿಗೆ ಮನಂದಂದೊಯ್ಯನೆ ಕಯ್ಯಂಪಿಡಿದು ರಯ್ಯಮೆನೆ ಮೆಯ್ಯಂ ಸೋಂಕಿ ಕುರುಳಂ ನೇವರಿಸಿ ಕರಾಂಗುಲಿಯಂ ಚಿಟುಂಕಿಸಿ ನೇಮದಾಣ ಮನಂಟಿ ಗಲ್ಲಮಂ ಪಿಡಿದಲುಂಗಿ ಬಿಂಬಾಧರಮಂ ಚುಂಬಿಸಿ ಲಜ್ಜೆಪಜ್ಜೆದೆಗೆವಂತ ಜಾಣ್ಮೆಯಂ ಮೆರೆದು ಮದನೋದ್ರೇಕಂ ಮನದೊಳೊದವಿದ ಪದಮಂ ಮೊಳೆವ ಪುಳಕದಿಂ ಮೊಗದ ದೈನ್ಯದಿಂ ನೆಗೆವ ಬೆಮರಿಂ ಮೇಲ್ವರಿವಪಾಂಗದಿಂ ತಿಳಿದು ಮೋಹವರಿದು ಮುದ್ದಿಸಿ ತವಕವರಿದು ತಳ್ಕಿಸಿ ಲಲ್ಲೆಯರಿದು ಬುಲ್ಲವಿಸಿ ಸೋಲವರಿದು ಸೊಕ್ಕುಗೊಳಿಸಿ ಕಾಲವರಿದು ಕಳೆಯೇರಿಸಿ ಕಳಾನಿಳಯಂ ಕಡಂಗಿ ಸುಸಿಲ ಜಕ್ಕವಕ್ಕಿಯಂತೆ ಸುಸಿಲೆಸಗಲುಜ್ಜುಗಿಸಿತ್ತೆನ್ನೆಗಂ—

ವೃ|| ಬಳಿವರೆ ಪೊರ್ದ್ದೆ ಸೋಂಕ ಲೊಡನಂಗಮ ನೊಂದಿನಿಸಿತ್ತು ತಳ್ಕೆಗೆಂ |
ದೆಳಸಿರೆ ತೋಳ್ಗಳಂ ನೆಗಪಿ ಮೆಲ್ಲನೆ ಚುಂಬಿಸಲೊಂದೆ ವಕ್ತ್ರಮಂ ||
ಡಳಮನಮರ್ಚ್ಚೆ ಸಾದರಮೆ ಕೂಡಲೊಡರ್ಚ್ಚಿರೆ ಲಜ್ಜೆಯೊಕ್ಕು ಮೈ |
ವಳಿಯೊಳೆ ಸಂದು ಮೈಗುಡುತವಳ್ಪಿಡಿ ದಳ್ಮಸಮಂ ಮನೋಜ್ಞನಾ || ೮೩

ರತಿರಾಗಂ ಬೆತ್ತು ಕಾಂತಂ ತೆಗೆದು ಬಿಗಿದು ತಳ್ಕೈಸೆ ನೀವೀಭರಂ ಜಾ|
ರೆ ತದೀಯಾಂಗಕ್ಕಪಾಂಗದ್ಯುತಿವಸನಮನಂತಿತ್ತು ಉಪಾತ್ತಾಂಗರಾಗೋ ||
ನ್ನತವಕ್ಷೋಜಕ್ಕೆ ಹಸ್ತಾರುಣ ರುಚಿ ಘುಸೃಣ ಕ್ಷೋದಮಂ ಸಾರ್ಚಿಲೀಲಾ
ಚ್ಯುತಹಾರಗ್ರೀವೆಯೊಳ್ಸ್ವೇದ ಲವಸರಮನಿತ್ತೊಲ್ದು ಕೂಡುತ್ತಮಿರ್ದ್ದಂ||

ಒಳಪುಗುವಂತೆ ಬಟ್ಟಮೊಲೆಗಳ್ನಿಜವಕ್ಷದೊಳಾಳೆ ಸೊರ್ಕ್ಕು ಸಂ |
ಗಳಿಸಿರೆ ತೋಳ್ಗಳಿಂ ಬಿಗಿದು ತಳ್ಕಿಸಿ ನಾಣ್ಬಡೆ ಜಾಣ್ಮೆದೋರೆ ಜೆಂ ||
ದಳಿರ್ದುಟಿಯಂ ಕರ್ದುಂಕಿ ಕಳಿವೆರ್ಚ್ಚಿಸಿ ಮುದ್ದಿಸಿ ಅಲ್ಲೆಗೈದು ತ |
ನ್ನಳ ಮನವಂ ಮರುಳ್ಚಿದನದೇಂ ರತಕೋವಿದನೋ ಕುಮಾರಕಂ || ೮೫

ಮನದನುರಾಗ ಮೆಳ್ತರದ ಕಾತುರಮಂ ಪಡೆದೀಯೆ ನೋಂಕಿನಿಂ |
ಜನಿಯಿಪಸೊರ್ಕ್ಕು ಸೋಲಮನಮರ್ಚ್ಚಿ ಸುಧಾಧರದಿಂಪು ಕಂಠನಿ ||
ಸ್ವನ ಮನೊಡರ್ಚ್ಚಿ ತಳ್ಕೆ ತನಿನೇಹಮನುರ್ಬ್ಬಿಸೆ ತಳ್ತಕೂಟದೊಂ |
ದಿನಿದರಿವಂ ಕಳಲ್ಚೆ ನೆರೆದರ್ಪ್ಪರಮೋತ್ಸವದಿಂ ವಧೂವರರ್ || ೮೬

ವಚನ|| ಅಂತು ಮಲ್ಲದೆಯುಂ—

ವೃ|| ಬೆಂಸುತ್ತುಂ ಬಿಗಿಯಪ್ಪಿ ಕೂಡುವೆಡೆಯೊಳ್ಕಂಠೋತ್ಥಿತಧ್ವಾನಮಂ |
ಕರಸಂತಾಡನಮಂ ಕಚಗ್ರಹಣಮಂ ದಂತಕ್ಷತಂಗೆಯ್ವುದಂ||
ಕರಜಾತಾಹತಿಯಂ ಪೊದಳ್ದರತದೊಳ್ಪೊರ್ಕ್ಕೇರಿ ಕಣ್ಮುಚ್ಚಿ ನಿ |
ರ್ಭರದಿಂ ವೈಮರಪೊಂದಂದಂತೆಸಗುವಂತೋರೊರ್ವರೊಳ್ತೋರಿದರ್ ||

ಅಳಿಪಿ ನಿರೀಕ್ಷಿಪಾಸೆವಡುತುಂ ಬಿಗಿಯಪ್ಪುವ ನೇಹದಿಂ ಪದಂ |
ಗಳಿಯಿಸೆ ಪಾಯ್ದು ಚುಂಬಿಪ ಕಡಂಗಿ ಕರಾಗ್ರದೆ ಪೊಯ್ವ ಬೇಟಮು ||
ಗ್ಗಳಿಸೆ ನಖಾಗ್ರದಿಂದಿರಿವ ತೋಳ್ತೊಡೆ ತಳ್ತಿರೆ ಕೂಡುವಳ್ತಿವ |
ಟ್ಟೆಳಸುವ ನೇಕ ಭಾವರಸ ಮೊಪ್ಪಿದುದಾಕೆಗೆ ಕಂತುಕೇಳಿಯೊಳ್ || ೮೮

ಕಂ|| ಮಣಿತಂ ತನುವೊಳ್ಗಳದೊ |
ಳ್ಮಣಿತಂ ನೆಗಳ್ದಿರೆ ವಿಳಾಸಮ ಮರ್ದೊಪ್ಪಿರೆ ಪೆ||
ಣ್ಮಣಿ ತನ್ನವರತಿ ಚಿಂತಾ |
ಮಣಿ ಕನ್ನರಪತಿಗೆ ತನ್ನ ಪರಿಜಿನೆ ನೆರೆದಳ್ || ೮೯

ವೃ|| ಗಳನಾದಂ ನೆರವಾಗೆ ದೈನ್ಯನಿನದಂ ಕೈಗಣ್ಮೆ ಮಂದಸ್ಮಿತೋ |
ಜ್ಜ್ವಳ ವಕ್ತ್ರಂ ಪೊಸತಾಗೆ ನೇತ್ರಯುಗಳಂ ಬೆಂಡೇಳೆ ರೋಮಾಂಚಕಂ ||
ಚುಳಿತಾಂಗಂ ಬೆಮರೇರೆ ಸುಯ್ಗಿಮಿರೆ ಲೀಲಾವೇಗ ಮಿಂಬಾಗೆ ಮುಂ |
ಜುಳಸೌಖ್ಯಂ ತನಿವೆರ್ಚ್ಚೆ ಮರ್ಚ್ಚಿ ನೆರೆದ ಕ್ರ್ಕಾದಲ್ಮೆಯಿಂ ಕಾದಲರ್ ||೯೦

ವಚನ|| ಮತ್ತಂ—

ವೃ|| ಮುನಿಸೆಡೆಗೊಳ್ಳದಿರ್ಪ್ಪಕಲಹಂ ಕಿನಿಸಿಲ್ಲದ ಪುರ್ಬ್ಬಗಂಟುನೆ |
ಟ್ಟನೆ ಬಹುಭಾರವಮಂ ತಳೆಯದಾದ ಬಳಲ್ಕೆ ಪೊದಳ್ದನಿದ್ರೆಯೊಂ ||
ದಿನಿಸಿರದುರ್ವ್ವಪಾಯ್ವನಿಡುಸುಯ್ತಣಿವಿಲ್ಲದ ತೃಪ್ತಿ ಭಂಗಮುಂ |
ಟೆನಿಸದ ಸೋಲಮಂಜಿಕೆ ಯನಾಸದ ಕಂಪಮಳುಂಬವೋಪರೊಳ್ || ೯೧

ಚುಂಬನದಿಂಪು ಸೋರ್ಮ್ಮುಡಿಯ ಕಂಪು ಮೃದೂಕ್ತಿಯಲಂಪುತಳ್ಕೆ ಚೆ|
ಲ್ವೆಂಬಿನ ಪೆರ್ಚ್ಚು ಸೌಖ್ಯಮನೆಸಾರ್ಚ್ಚು ನಿಜಾಕ್ಷಕಮರ್ಚ್ಚು ತೋರೆ ಬೇ ||
ಟಂ ಬಿಡದುರ್ವ್ವ ಬಿನ್ನಣಮೆ ಪರ್ವ್ವ ಸುಸಿಲ್ತನಿಗೊರ್ವ್ವ ಭೂಮನೋ |
ಜಂ ಬಗೆದಂದು ಕಾಂತೆಯೊಡನಂದು ಮುದಂ ಬಡೆದೊಂದುತೊಪ್ಪಿದಂ ||

ವಚನ|| ಇಂತು ಸಂತಸಂ ಮಿಗೆ ಸಮಂತು ಕಂತುಸುಖಸಾಮ್ರಾಜ್ಯಮ ನನುಭವಿಪ ದಂಪತಿಗಳ್ಗೆ ಮಾಸಂ ದಿವಸಂಗಳಾಗಿ ದಿವಸಂಗಳ್ನಿಮಿಷಂಗಳಾಗಿ ಸಲುತ್ತುಮಿರೆಯಿರೆ—

ವೃ|| ಅಪರಾಶಾ ಕುಂಭಿ ಶುಂಭತ್ಕರಟತಟ ಗಳದ್ದಾನ ಸಂಭ್ರಾಂತಭೃಂಗೌ
ಘಪಯೋದಾಲಂಬಿ ಜೃಂಭಜ್ಜಲಧಿ ಜಲಲವಾಶ್ಲಿಷ್ಟಮುನ್ನಿದ್ರಕೈತ ||
ಕ್ಯಪರಾಗ ಶ್ರೇಣಿ ಚಾಚಚ್ಚಪಲ ಮುಪಲಸತ್ತಾಳ ಸಂಘೃಷ್ಟಭಾಂಡೌ |
ಘ ಪಟುಧ್ವಾನಾಬ್ದರಾವಂ ಸುಳಿದುದು ಪವನಂ ಕಾರಿದೆಂಬಂತಳುಂಬಂ ||

ವಚನ|| ಆಗಳ್—

ವೃ|| ಅಲರ್ದುದು ಕಾಡಮಲ್ಲಿಗೆ ಮುಗುಳ್ತ್ತುದು ಜಾದಿ ಕದಂಬ ಕುಟ್ಮಳಂ
ಬಲಿದುದು ಪೂದೊಡಂಬೆಯನೊಡರ್ಚ್ಚಿತು ಕೇತಕಿ ಕೇಕಿ ನಣ್ಪನಿಂ ||
ನಲಿದುದು ಹಂಸೆಪಾರಲನುಗೆಯ್ದುದು ಚಾದಗೆ ರಾಗಮಾಂತುದು |
ಜ್ಜ್ವಲತೆಯನಪ್ಪುಕೈದುದು ವಿಯೋಗಿಗಳಂಗದೊಳಂಗಜಾನಲಂ || ೯೪

ಸುಳಿಗೊಳುತೆತ್ತಿ ಸುಟ್ಟುರೆ ಧರಾರಜಮಂ ಕೆಳಗೊಂದೆದಂಡ ದಂ |
ತುಳಿದ ತತಾತಪಂ ಬಳಸಿ ಪಲ್ಲವದಂತಿರೆ ಬಾನ ಮಧ್ಯದೊಳ್ ||
ತೊಳಗುವ ಭಾನು ಭರ್ಮ್ಮ ಕಳಶಂಬೊಲದೊಪ್ಪಿರೆ ಬಟ್ಟಬಲ್ಮುಗಿ |
ಲ್ತಳೆದುದು ಕಾಲಭೂಪತಿಯ ಪೀಲಿಯ ಸತ್ತಿಗೆಯೊಂದು ಲೀಲೆಯಂ || ೯೫

ಗಗನಶ್ರೀ ಯುಟ್ಟನೀಲಾಂಬರವೊ ರವಿಸುಧಾಧಾಮಬಿಂಬಂಗಳಂ ಮು |
ತ್ತಿಗೆಯಂ ಮಾಳ್ಪಂಧಕಾರವ್ರಜಮೊ ಸುರನದೀ ಸ್ನಾತದೇವಾಂಗನಾವೃ ||
ಷ್ಟಿಗಳದ್ವಾರ್ಬಿಂದು ಚಂಚತ್ಕಚನಿಚಯಮೊ ಜಂಭಾರಿಕುಂಭೀಂದ್ರದಾನಾಂ
ಬುಗೆ ಪಾಯ್ವಿಂದಿಂದಿರಶ್ರೇಣಿಯೊ ಎನೆ ನೆರೆದತ್ತಭ್ರನೀಲಾಭ್ರಜಾಲಂ|| ೯೬

ಕಂ॥ ಧೃತಚಂಚಲಮತಿಚಪಲ |
ಸ್ಥಿತಿ ಜಡಭರಿತಂ ಕಟುಸ್ವರಂ ಬರೆ ಮೇಘಂ ||
ನುತಹಂಸಂ ತಳರ್ದುದು ಮಲಿ |
ನತರಂ ಬರೆ ಶುಚಿಸುವೃತ್ತನೇನಿರ್ದಪನೇ || ೯೭

ಗರಿ ನೆರೆಯದ ಕಿರುವರಿಗಳ |
ನಿರುಂಕಿ ಪಕ್ಷದೊಳೆ ಪಾರಲಾರದೆ ಪಿರಿದುಂ ||
ಮರುಗುವಮರಾಳಿಗಳನು |
ಣ್ಗರಿವೊತ್ತೆಡೆವಿಡದೆ ತಳರ್ದುವಂಚೆಗಳಾಗಳ್ || ೯೮

ವೃ||ರವಿಚಂದ್ರಪ್ರಚುರಪ್ರಭಾಪ್ರಚಯಮಂ ಮೇಘಂ ಮುಸುಂಕುತ್ತೆ ಕಾ |
ರ್ಷ್ಣ್ಯವಿಶಿಷ್ಟಂ ತಟಿದಂಕುರಾಲ್ಪರುಚಿಯಂ ಬೀರಿತ್ತುದಗ್ರಸ್ಫುರ ||
ತ್ಕವಿ ಕಾವ್ಯಪ್ರಕಟಪ್ರಭಾವಮನದಂ ಕಿಳ್ಕಬ್ಬಿಗಂ ಗುಪ್ತಿಗೈ |
ದವರಾತ್ಮೀಯಕೃತಿಪ್ರಭಾವತೆಯನಾದಂತೋರ್ಪ್ಪವೋಲ್ಧಾತ್ರಿಯೊಳ್ ||೯೯

ಘನಕರಿಗಿಕ್ಕಿದಂಕುಶಮಿದಬ್ದಮುಕುಂದನನಂದಕಾಯುಧಂ |
ವನದೆ ತಮಾಲಕಾನನದ ಕಾನಕವಲ್ಲರಿ ವಾರಿಭೃದ್ಘನಾಂ ||
ಜನ ನಗದಾವಪಾವಕಶಿಖಾತತಿ ಮೇಘಮಹಾಂಧಕಾಖ್ಯದೈ |
ತ್ಯನ ಖರದಂಷ್ಟ್ರಮುಳ್ಕಿದುದು ಮಿಂಚುಮುಗಿಲ್ಮುಗುಳಂಬನೀಕ್ಷಣಂ ||೧೦೦

ಕಂ|| ಅಂಬುಜರಿಪು ಬಿಂಬದ ಬೆಳ |
ಗಂ ಬಂಧಿಸಿ ಮರ್ಬ್ಬುವೀರಿ ಮಿಂಚುತೆ ಪಥದೊಳ್ ||
ಶಾಂಬರಿಸಿ ನೆರಯಿಪಾಕಾ |
ದಂಬಿನಿ ಪಾಣ್ಬೆಯರ ಕೆಳದಿಯಾಗಲ್ವೇಳ್ಕುಂ || ೧೦೧

ವೃ|| ಅಡಿಗಡಿಗುರ್ವ್ವಿ ಮಿಂಚುವೆಳೆಮಿಂಚುಮರುದ್ಭಟನೆತ್ತಿ ಬೇಗದಿಂ |
ಪೊಡೆವಸುವರ್ಣಕೋಣಮೆನೆ ತಳ್ತಿರೆ ತಾನೊಗೆದತ್ತು ಕಾರ್ಮ್ಮುಗಿ ||
ಲ್ಗಡಣಮೆನಿಪ್ಪ ದಂತಿತತಿಯಗ್ರದ ಡಿಂಡಿಮ ನಾದದಂತೆ ಪೇ |
ರ್ಗ್ಗುಡುಗು ನಿದಾಘನಂ ತಗುಳಲೈದಿದನೀರದ ಕಾಲರಾಜನಾ || ೧೦೨

ವಚನ|| ಅಂತುಮಲ್ಲದೆಯುಂ—

ವೃ|| ಅಂಬುಧಿಸಂಗಸಂಜನಿತಶಂಬರನಿರ್ಭರಗರ್ಭೆ ಬಂದು ಕಾ |
ದಂಬಿನಿ ಶಕ್ರಸೂತಿಸಮಯಂ ಬರೆ ಪುಷ್ಕರ ಗೇಹದೊಳ್ಕರಾ ||
ಲಂಬಿತಹೇಮರಜ್ಜುವೆನೆ ಮಿಂಚಿರೆ ಮುಂಚೆ ಸರಲ್ಸರಾವದಂ |
ತೇಂಬಗೆಗೊಂಡುದೋ ಗುಡುಗು ಸೂತಿಮರುತ್ಕೃತತೋದದೇಳ್ಗೆಯಿಂ ||೧೦೩

(ವಂಶಸ್ಥವೃತ್ತಂ)

ವೃ॥ ಸ್ಫುರದ್ಧನುಶ್ರೀಕರಚಂಚಲೇಕ್ಷಣಂ ।
ಶರಧ್ಯುಪಾತೂರ್ಜಿರು ಶರಂ ಘನಸ್ವನಂ ॥
ಹರಿಪ್ರಭಂ ನೀರದರಾಜನಟ್ಟಿದಂ ।
ಧರಾತಿಸಂತಾಪದಸಂ ನಿದಾಘನಂ ॥ ೧೦೪

ಕಂ॥ ಗರಿ ಮೂಡಿದಂತೆ ಕೆಲದೊ ।
ಳ್ಕಿರುಮುಗಿಲಿರೆ ಜಲದನೀಲಗಿರಿ ಸೆಗೆಯೆ ಕರು ॥
ತ್ತೆರಗಿದವಜ್ರಿಯ ವಜ್ರದ ।
ಬಿರುವೊಯ್ಲ ರವಕ್ಕೆ ಬರಸಿಡಿಲ್ಸರಿಬಕ್ಕರ್ಗಂ ॥ ೧೦೫

ವೃ॥ ವರುಣಾಶಾಬ್ಧಿಪಯಃಪ್ರವಾಹವಿತತಸ್ನಾನಂ ವಿನಿರ್ಧೂತಧಾ ।
ತ್ರಿರಜಃವ್ರೋಕ್ಷಿಹಿತಾಂಗನುದ್ಧೃತಘನಕ್ಷ್ಮಾಜವ್ರಜಂ ಭೂಧರೋ ॥
ತ್ಕರಸಂಚಾರಿಕದಂಬಸನ್ಮಧುಮದಾಂಭೋವಾಹಮಂಭೋದಸಿಂ ।
ಧುರಮಂ ಪಾಯ್ದು ಪಳಂಚಿ ವೊಯ್ದುದು ರಟಜ್ಝಂಝಾಮರುತ್ಕುಂಜರಂ ॥

ವೃ॥ ಗಜದಜಿನಂ ಮುಗಿಲ್ಗಜರಿ ಗರ್ಜಿಪರುಂಡಕದಂಬಘೋಷಮ ।
ಭ್ರಜಪಟುಘೋಷಮುತ್ಕಟತಟಿತ್ತಿಯುತ್ಫಣಿತಾಹಿಶೀರ್ಷರ ॥
ತ್ನಜಘೃಣಿಮಾಲೆ ಘಾಲಶಿಖಿ ಮೇಘಶಿಖಾವಹನಾಗೆ ಸರ್ತಿಪಂ ।
ಗಜರಿಪುವೋಲ್ಬನಾಗಮಮದೇಂ ಬಗೆಗೊಂಡುದೊ ನೋಟಕರ್ಕಳಾ ॥

ಕಂ॥ ಕಡಲವಿಷಮಿಾಂಟಿದೊಡೆ ತೆ ।
ನ್ನೊಡಲಂ ಬಿಡದಡರೆ ಕರ್ಪುವೆತ್ತಂಗದಿನಾ ॥
ಗಡೆ ಜೀವನಮಂ ಬಿಟ್ಟುದು ।
ಜಡದಂ ಮೃಡನುಳಿದನೆಂದೊಡುಳಿದರ್ಗಳವೇ ॥ ೧೦೬

ನೆರೆದು ಘನಘನಮದೇಭೋ ।
ತ್ಕರಮಿಾಂಟಿ ಮರುತ್ತರಂಗಿಣೀಜಳಮಂ ಘೂ ॥
ತ್ಕರಿಸೆ ಸಿಡಿದಿಳಿವಕಣಗಣ ।
ದಿರವೆನಿಸಿದುದರರೆ ಸುರಿವಪೆರ್ಮಳೆ ನಭದಿಂ ॥ ೧೦೭

ಸುರಚಾಪಚಂಪಕಸ್ರಜ ।
ಕುರವಣಸುತ್ತಸಿತಜಳದವರ್ದ ಮಧುಪಸಮು ॥
ತ್ಕರಮೆರಗಿದಂತೆ ಮೆರೆದುದು ।
ಪರಿಕಿಸದಾತ್ಮೀಯಜೀವನವ್ಯಯಭಯಮಂ ॥ ೧೧೦

ನುಂಗೆ ರವಿರುಚಿಯನದು ತ |
ನ್ನಂಗುಳ್ಳುಡೆ ಶಿತಿಜಲದವಿಧುಂತುದ ನುಗೆಳ್ವಾ ||
ಪಾಂಗನನುಕರಿಸಿ ಮಿಂಚುತ |
ಡಂಗುವ ಸೆಳೆಮಿಂಚದೇಂ ಮನಂಗೊಳಿಸಿದುದೋ || ೧೧೧

ಪೇಳ್ಸರಿ ಸೂಳ್ಸರಿ ಮುಗಿಲೊ |
ಳ್ಗಲ್ಸರಿ ತೆಳ್ಸರಿ ಕರಂ ಪೊನಲ್ವರಿಯಿಪಬಂ ||
ಬಲ್ಸರಿ ಬಲ್ಸರಿ ಕಾಲ್ಸರಿ |
ಸಾಲ್ಸರಿ ಸಲೆ ಸುರಿದು ಕರೆದುವಿರುಳುಂ ಪಗಲುಂ || ೧೧೨

ಘುಡುಘುಡು ಛಿಳಿ ಛಿಟಿಲೆಂದು |
ಗ್ಗಡದಸಿಡಿಲ್ದನಿಯೆ ಪೊಡೆಯೆ ಗಗನಸ್ಥಳದಿಂ ||
ದುಡುಗಳ್ಪಳಪಳನುದಿರ್ವವೊ |
ಲೆಡೆವಿಡದಿಳಿವಾಲಿವರಲ ಮಳೆ ಬಗೆಗೊಳಿಕುಂ || ೧೧೩

(ವಂಶಸ್ಥವೃತ್ತಂ)

ವಿಯತ್ತಳಶ್ರೀವಧುವಂ ಘನಾಗಮ |
ಪ್ರಿಯುಂ ಸರಾಗಂ ಬಿಗಿದಪ್ಪೆ ಕಿಳ್ತು ತ ||
ತ್ಪಯೋಧರಸ್ಥಂ ಮಣಿವೊಕ್ಕವೋಲ್ಪನೋ |
ದಯೋಪಳಂ ಸೂಸಿದುದಿಂದ್ರಗೋಪಮುಂ || ೧೧೪

ವೃ|| ಸುರಚಾಪದ್ವಿಪವೈರಿ ಮಿಕ್ಕು ನೆಗೆದಭ್ರಾರಣ್ಯದಭ್ರೋರುಸಿಂ |
ಧುರಕುಂಭಸ್ಥಳಮಂ ಸಿಡಿಲ್ದನಿ ನಿಜಧ್ವಾನಂಬೊಲಿಂಬಾಗೆ ಬಂ ||
ಧುರವಿದ್ಯುತ್ಕರಜಾಗ್ರದಿಂದುಗಿದು ಸೀಳಲ್ಮೌಕ್ತಿಕಾಸೃಕ್ಕಣೋ |
ತ್ಕರಮೆತ್ತಂ ಸುರಿವಂತೆ ಸೂಸಿತು ಘನಗ್ರಾವೇಂದ್ರಗೋಪವ್ರಜಂ || ೧೧೫

ಎನ್ನ ಸಹಾಯದಿಂ ನೆರೆದು ತಾಳ್ದು ಘನತ್ವಮನಸ್ಮದೀಯಮಿ |
ತ್ರೋನ್ನತತೇಜಮಂ ತವಿಪನೆಂದನಿಲಂ ಮುಗಿಲಂ ಕನಲ್ದು ಪೊ ||
ಯ್ದನ್ನೆಗಳಲ್ಪನಧ್ವನಿ ಕಳಲ್ದುದಿರ್ದತ್ತು ಘನೋಪಳಾಂಚ್ಛದಂ |
ತನ್ನಿಜಮಲ್ಲದಿರ್ದೊಡೆಳೆಯಲ್ಲಿದುನೀರದನಾಮಮಾಂಪುದೇ || ೧೧೬

ಕಂ|| ಎಳಸಿ ನಿಜಚಂಚುಪುಟದೊ |
ಳ್ತಳೆದಿನಿಯಳ್ಗೆರೆದು ಮರಿಗಳಂ ತಣಿಪಿ ಮನಂ ||
ಗೊಳುತಳಿಪಿ ಸೆಳೆದು ಜಲಕಣ |
ಕುಳಮಂ ಪೀರ್ದತ್ತು ಚಾತಕಂ ಚೆದುರಿಂದಂ || ೧೧೭

ವೃ|| ಮಂಗಳವಾದ್ಯ ಮಬ್ಧರವ ಮುಣ್ಮುವ ಮಿಂಚದು ದೀಪಮಾಲೆಯು|
ತ್ತುಂಗ ಪಯೋದ ಮಿಟ್ಟತೆರೆ ತೋರಣ ಮಿಂದಿರ ವಿಲ್ಲು ವೃಷ್ಟಿಯೇ ||
ಸಂಗತ ಧಾರೆಯಾಲಿವರ ಲೊಪ್ಪುವ ಸೇಸೆಯಾಗೆ ಕಾ |
ರುಂ ಗಗನಸ್ಥಳೀ ರಮೆಯು ಮೊಂದಿದ ರೊಂದು ವಿವಾಹ ಲೀಲೆಯಂ|| ೧೧೮

ವಚನ|| ಮತ್ತಮಾಘನಸಮಯಂ ಗದಾಧರಮೂರ್ತಿಯಂತೆ ಘನಶ್ರೀಮನೋಜ್ಞಮುಂ ನಳಿನಭವಾಂಗದಂತೆ ಕಾದಂಬವಿತತಾಮೋದವಾಹಮುಂ ಗರೋದಯ ಸಮಯದಂತೆ ಸುರ ಚಾಪಲತಾನ್ವಿತಮುಂ ಪ್ರದೋಷಕಾಲದಂತೆ ನೀಲಕಂಠತಾಂಡವಾಡಂಬರಮುಂ ವಿಧುಂತು ದನಂತೆ ಸಂತರ್ಜಿತ ರಾಜಹಂಸ ಮಂಡಳಮುಂ ಘನನೀಲಾಂಬರಾಚ್ಛಾದಕನಾಗಿಯುಂ ಸಿತವಾ ರಿದೋಪಲಸಿತದ್ಯುತಿಯುಂ ಪ್ರಬಳಕೀಲಾಲಕ್ಷಣರುಚಿಯುತಮಾಗಿಯುಂ ವನಸಮೃದ್ಧಿದಮುಂ ಪರಕಬಂಧ ಸಂಸಕ್ತಸರಕ್ತ ಶಿಳೀಮುಖ ಮಿಳಿತಮಾಗಿಯು ಮಪ್ರಕಟಿತಪ್ರಭಾವಮುಂ ಕೃತವ ಜ್ರ ನಿರ್ಘೋಷಮಾಗಿಯುಂ ಗೋತ್ರಾತಿಹಿತಕರಮುಂ ವಿಪಕ್ಷಗತಿರೋಧಕಮಾಗಿಯುಂ ಪರಿ ಗತ ಭಂಗವಾಹಿನೀಕಮುಮೆನಿಸಿದ್ದುರ್ದಂತುಮಲ್ಲದೆ—

ಕಂ|| ಜಳಮಯಮಿಳೆ ಜಳದಮಯಂ |
ಜಳಧರಮಾರ್ಗಂ ತಟಿನ್ಮಯಂ ದಿಗ್ವಳಯಂ ||
ಕಳೆಗೊಳೆ ನವಸೃಷ್ಟಿಯನೇಂ |
ತಳೆದುದೊ ಭುವನಂ ಘನಾಗಮಾಂಬುಜಭವನಿಂ || ೧೧೯

ಫಣಿಯಂ ತುಂಡಿಸಿ ವಿಷಮಂ |
ನೊಣೆದಾನುಂ ನೀಲಕಂಠನಾದೆನೆನುತ್ತುಂ ||
ಕುಣಿವಂತೆ ವಿಷಧರದ ಮುಂ |
ದಣಿಯರದಿಂ ಕೇಗಿ ಕುಣಿವನವಿಲೆಸೆದಿರ್ಕುಂ|| ೧೨೦

ಗರಿ ಪೊಂಪುಳಿವೋದಂತಿರೆ |
ನೆರೆ ನೆಟ್ಟನೆ ನಿಲೆ ಮುದಶ್ರು ಗರಿಗಣ್ಗಳೊಳೇ ||
ನೊರೆತುದೊ ಪೇಳೆನೆ ಕಿರುವನಿ |
ತುರುಗಿರೆ ಮತ್ತೊಂದು ನವಿಲದೇಂ ನರ್ತಿಸಿತೋ || ೧೨೧

ವೃ|| ಚಾದಗೆಯಂತೆ ಮುಂಬನಿಯನೇಂ ಬರೆಪೀದ್ದುದೆ ವಲ್ಲಿಯಂತಿದೇಂ|
ತೋದುದೆ ವಾರಿಯಿಂ ಕಡವಿನಂತೆ ಮುಗುಳ್ತುದೆ ತತ್ಸಹಾಯದಿಂ ||
ಕೇದಗೆಯಂತೆ ಪೂತುದೆ ಮುಗಿಲ್ಗಳ ಪಂಗಿನಿತುಂಟೆ ಕೇಕಿಯಾ |
ಹ್ಲಾದದೆ ಕಂಡು ನರ್ತಿಪುದಿದಲ್ತೆ ಸಮಾನವಯಃ ಪ್ರವರ್ತನಂ || ೧೨೨

ಸರಸಸುಗಂಧಬಂಧುರದಳದ್ದಳನೂತನಕೇತಕೀಸುಮಾ |
ವರಣಫಣಿಪ್ರಮುಕ್ತಗರಳೋಪಮಮತ್ತಮಧುವ್ರತಾಳಿ ಷ ||
ಟ್ಚರಣಗಳತ್ತದೀಯರಜಮುಣ್ಮುವಮಿಂಚೆನೆ ಗಾವರಂ ಘನ |
ಸ್ವರಮೆನಲಲ್ಲಿ ಳ್ಕು ಕೆಳೆಗೊಂಡೆಳಗಾಳಿಮುಮ್ಮಗಿಲಂತೆ ರಂಜಿಕುಂ || ೧೨೩

ವಚನ|| ಮತ್ತಮಾಗಳ್—

ವೃ|| ತಳರಲ್ಕೆಂಡಡಿಯಿಟ್ಟು ಜಾರಿ ಜವದಿಂ ಕೈಯೂರಿ ಬೀಳ್ದೇಳ್ದು ಪಂ |
ಕಿಳಮಾದಂಶುಕಮಂ ಪೊನಲ್ವರಿವನೀರೊಳ್ಕರ್ಚಿ ಮೈಸಾರ್ಚಿ ಪ ||
ಲ್ಗಳ ನಾದಂಪುಳಕಾಂಕುರಂ ಪೊಳೆಯೆ ಮೇಣಾರ್ದೈದು ಕಾಲಿಟ್ಟು ಕೋ |
ಲ್ಗಳನಾಂತೈದುವ ಪಾಂಥರಂ ನಗುವರಾ ಹರ್ಮ್ಯಾಗ್ರದಬ್ಜಾಕ್ಷಿಯರ್||೧೨೪

ಕಂ|| ಬೆಳೆದೆಳವುಲ್ಕರಮೆಸೆದ |
ತ್ತಿಳೆ ಮಳೆಯಿಂ ನಾಂದು ಸೇದುವಡೆದಿರೆ ಮೊಳೆತ ||
ಗ್ಗಳಪುಳಕಾಂಕುರಮೆನೆ ಸಂ |
ಚಳದಳವನದಿಂದೆ ಕಂಪಿಪಂತಿರೆ ತೋರ್ಕುಂ || ೧೨೫

ವಚನ|| ಇಂತೊಗೆತಂದ ಸಕಳಜನ ಮನೋನಯನ ಹರ್ಷಪ್ರದಮಾದ ವರ್ಷಾಕಾಲದೊಳಿನಿಯಳೊಡನೆ ಸಡಗರಂಮಿಗೆ ಗಗನಮಂ ತುಡುಂಕುವಭರ್ಮಹರ್ಮ್ಯಮನಾರೋಹಿಸಿಮೋಲ್ನೆಲೆಯ ಕನಕ ಪರ್ಯಂಕಪೀಠದೊಳ್ಗಾಡಿಯಿಂ ಕುಳ್ಳಿರ್ದು ಗವಾಕ್ಷ ವಿವರ ವಿನಿಹಿತಕಟಾಕ್ಷನಾಗಿ—

ವೃ|| ಇದೆನಿನ್ನೀಕೇಶಪಾಶಕ್ಕಗಿದು ನೆಗೆದವೋಲಿರ್ಕುಮುಮ್ಮಗಿಲ್ಮಿಂಚು ತಾನಿಂ
ತಿದೆ ನಿನ್ನುದ್ಯತ್ಕಟಾಕ್ಷ ದ್ಯುತಿಗೆ ಬೆದರ್ದೆಂಬಂತೆ ಚಾಂಚಲ್ಯಮಂ ತಾ ||
ಳ್ದಿದೆ ನಿನ್ನೀ ಭ್ರೂವಿಳಾಸಕ್ಕಳರ್ದು ಕರಗುವಂತಿಂದ್ರಚಾಪಂ ಕಳಾಸಂ |
ಪದೆ ನೋಡೆಂದಂದು ತೋರುತ್ತೆಸೆದನಭಿನವ ಶ್ರೀವಧೂಟೀಭುಜಂಗಂ || ೧೨೬

ವೃ|| ದುರ್ವಹ ಜಗದ್ಧರೆ ಸುಪರ್ವನುತ ವೈಭವೆ ಸಗರ್ವಧಿತಿಜಾಪಹೆ ಯಖರ್ವಗುಣಹಾರೇ|
ಗೀರ್ವರ ಸಮರ್ಚಿತೆ ಯಜುರ್ವಿನುತ ಸತ್ಪದೆ ಹವಿರ್ವಿಧಿ ವಿಧಾಯಕೆ ಮಹಾರ್ವ ಶಿಖಿನೇತ್ರೇ ||
ಸರ್ವಮುನಿ ಭಾವಿತ ಸದೋರ್ವಿಜನ ಸೇವಿತೆ ವಸುರ್ವಿಜಿತವಲ್ಲರಿಯಪೂರ್ವ ಸುಚರಿತ್ರೇ |
ನಿರ್ವೃತಿ ಪದಾಸ್ಪದೆ ಚತುರ್ವಿಧ ಫಲಪ್ರದೆ ಸಶರ್ವತನು ಪಾಲಿಪುದು ಪರ್ವತ ತನೂಜೇ ||೧೨೭

ಗದ್ಯ|| ಇದು ವಿನಮದಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್
ಸರ್ವಮಂಗಳಾವಿವಾಹಾದಿವರ್ಣನಂ ಅಷ್ಟಮಾಶ್ವಾಸಂ
ಸಂಪೂರ್ಣಂ

## ನವಮಾಶ್ವಾಸಂ

(ಹೇಮಂತವಸಂತ ಋತುವರ್ಣನಂ)

---

ಕಂ || ಶ್ರೀಮದಪರ್ಣಾನನ ನವ |
ತಾಮರಸಾಮೋದಮುದ ಮಧು ವ್ರತನಭವಂ ||
ಸಾಮಜಮರ್ದನನಮರಲ |
ಲಾಮಂಪೊರೆಗೆಮ್ಮ ನಾವಗಂ ಶಿವಲಿಂಗಂ || ೧

ವೃ|| ಶಿವಲೀಲಾಕಥನಾವಳೀ ಶ್ರವಣದಿಂ ತತ್ಪಾದಪೂಜಾಸಮು |
ತ್ಸವದಿಂ ಶೈವಪುರಾತನ ವ್ರಜಪುರಾಣಾಕರ್ಣನೋತ್ಸಾಹದಿಂ ||
ಶಿವಯೋಗೀಂದ್ರ ಸಮರ್ಚನೈಕಸುಖದಿಂ ಕಾಂತಾಸಮೇತಂ ಮಹೀ |
ಧವನೊಪ್ಪಿರ್ದ್ದನಶೇಷಸಜ್ಜನಮನಃಪದ್ಮ ಪ್ರಭಾವಲ್ಲಭಂ || ೨

ವಚನ|| ಇಂತುಮಾನೃಪಂ ದಿವಸಂಗಳೆವುತ್ತಮಿರ್ಪ್ಪನ್ನೆಗಂ—

ವೃ|| ಸುರಕರಿಕರಮುಕ್ತಾಂಭಃ ಕಣಂಮಂಜಿದೆಂಬಂ |
ತಿರೆ ತಳೆದು ತಿಖಾವದ್ಗರ್ವಮಂ ನುಗ್ಗಿ ನೀಲಾಂ ||
ಬುರುಹಸುರಭಿಯೊಂದುತ್ತೈದಿದಂ ಮಾಗೆ ಬರ್ಪ್ಪಂ |
ತಿರೆ ಧೃತಘನಸಾರಾಮೋದಸಾರಂ ಸಮೀರಂ || ೩

ನೆಗೆದುಡುಜಾಲದಂತೆ ಪೊಸಮೊಲ್ಲೆಯ ಬಲ್ಮುಗುಳೊಪ್ಪೆಪದ್ಮಮಂ |
ಮಿಗೆ ತೊರೆದಲ್ಲಿ ಲಕ್ಷ್ಮಿ ನಿಲೆ ನೈದಿಲೊಳುರ್ಬ್ಬಿದಮುರ್ಬ್ಬಿ ಪಿಂಗದಿಂ ||
ತಗಲಿರೆ ಕಾಮುರ್ಗಿಲ್ನೆಗಳೆ ಜೊನ್ನದಪೋಲ್ಪೊಸಮಂಜು ವಾರ್ಧಿ ಪೆ |
ರ್ಚ್ಚುಗೆಯನಮರ್ಚ್ಚೆ ತಾಳ್ದುಸುದಿತೋದಯಮಂ ಹಿಮಕಾಲಚಂದ್ರಮಂ || ೪

ಕಂ|| ಘನ ರಾಹುವಿಂದುವಂ ತಿಂ |
ದು ನಭಸ್ಸ್ಥಳದೊಳೆ ಮಗುಳ್ಚಿದಂತೆ ಪೊಳೆಸೆಗುಂ ||
ವನಧರಮುದರಮೃತರಸದ |
ಸೊನೆ ಸುರಿತಪ್ಪಂತೆ ಮಂಜದೇಂ ರಂಜಿಸಿತೋ || ೫

ಧರಣಿಪನಕೀರ್ತಿವಧು ವಿ |
ಸ್ಫುರಿತನಭಃಕಬರಿಯಲ್ಲಿ ಗೊಜ್ಜುಗೆಯ ||
ಸರೋತ್ಕರಮಾಂತಪೊಲೆ ಸಿತಾಭ್ರಂ |
ನೆರೆದಿರೆ ಮಂಜದರ ಮಧುಕಣಂ ಬೋಲ್ಸುರಿಗುಂ || ೬

ವಚನ|| ಮತ್ತಮಾಗಳ್—

ವೃ||ಇಳೆಯಂ ಮುಚ್ಚಿ ಮುಸುಂಕಿ ನಿಶ್ಚಲತೆಯಿಂತಾತ್ತಶಾಧಿಪಗೊರ್ಗಂಟುಗೊಂ
ಟೊಳೆ ಸಾರ್ವರ್ಗಂತಿರೆ ಮಾಡಿ ವಹ್ನಿಸಖನಾನೆಂಬೊಂದಹಂಕಾರಮುಂ ||
ತಳೆದಾಮಾರುತನಂ ಕರಂ ಪಿಡಿದು ತನ್ನೈಕಿಲ್ಗಳಿಂ ನಾಂದಿ ಸಂ |
ಚಳನಂ ಮಾಡಿ ತದಾಪ್ತಸುಕ್ಕರ್ಗಮುರಿದೇಂ ಪರ್ಬಿರ್ತೊತ್ತು ಹೈಮಾಗಮುಂ ||೭

ವಚನ|| ಅಂತುಮಲ್ಲದೆಯುಂ—

ವೃ|| ಪಿಕಜಿಹ್ವಾಸ್ತಂಭಮುಂ ಪನ್ನಗಸ ಪಟುಗತಿಸ್ತಂಭಮುಂ ಮಾಡಿ ಮತ್ತ|
ರ್ಕಕರಸ್ತಂಭಾಗ್ನಿಸಂಸ್ತಂಭಮುನೆ ನೆಗಳ್ದು ಮೇಘಾಗಮೋಚ್ಚಾಟನಂಗೈ ||
ದು ಕರಂ ಕಾಂತೌಘಸಂಮೋಹಮುನೊದವಿ ಸುಧಾರುಗ್ವಶೀಕಾರನಿರ್ಹಾ |
ಯಕನನ್ಯಾಂಗಪ್ರವೇಶಂ ಹಿಮುಸಮಯ ಮಹಾಸಿದ್ಧನೊಪ್ಪಿರ್ದನಾಗಳ್ ||

ಕಂ|| ಪಗೆಯ ಕಳೆಯುಡುಗಿದುದುಗಡ |
ಪಗೆಯಂ ಕೆಳಗೊಂಡ ನಳನಿ ಕೊರಗಿದಳೆಂದೇ ||
ನಗುವುದೆನೆ ನೈದಿಲೆ ಪಗ |
ಲ್ಮುಗಿಯದು ಬೆಳ್ದಿಂಗಳೆಂದು ಭಾವಿಸಿ ಹಿಮುಮುಂ || ೯

ಮುಂಜಿರೆ ನರೆಯೆನೆ ಕೊರಗಿರೆ |
ಕಂಜಂ ತೆರೆವಿಡಿದು ಸುಕ್ಕಿದಾನನಮೆನೆ ಚ ||
ಕ್ರಂ ಜಗುಳ್ದಿರೆ ಮೊಲೆಯೆನೆ ಹಿಮ ||
ದಿಂ ಜರೆಗೊಂಡಂತೆ ದಿವಸರಮೆ ಕಳೆಗೆಟ್ಟಳ್ || ೧೦

ಮುರದೊಳೆಸೆನ್ವೊಂದುನೆವದಿಂ |
ಮುರನಡರ್ದಂ ಶಿಖಿ ದಿವಾಕರಂ ನೀರ್ವ್ವೊಕ್ಕಂ ||
ಪರಿಗತಬಿಂಬ ವ್ಯಾಜದಿ |
ನರರೆ ಹಿಮಾಗಮ ಮಹೀಶನೇಂ ಕಡುಗಲಿಯೋ || ೧೧

ರಯದಿಂ ಮುಸುಂಕುತಿರ್ಪತಿ |
ಶಯಹಿಮುಮುಂ ಕಳಿಯಲೆಂದಿನಂ ಶಿಖಿಯ ಸಮಾ ||
ಶ್ರಯಮೆಸಗಿ ಕಳಿಯನೆನಲಾ |
ಶ್ರಯಾಶನಾಶ್ರಯದಿ ನಿಷ್ಟಮೇಂ ಸಮನಿಪುದೇ || ೧೨

ಹಿಮುಕರಮುಖಿಯರ ಸೇವನೆ |
ಹಿಮುಮುಂ ಬರಿಕೈದುದಹಿಮ ಕರಸೇವನೆಯಿಂ ||
ಹಿಮುಮುಳಿದುದಿಲ್ಲಮೆನೆ ಕಾ |
ಲಮುಹಿಮೆ ಯಾವಂಗೆದೇನನೆಸಗದೊ ಜಗದೊಳ್ || ೧೩

ಹರಸುರಿಗಣ್ಣುಡೆ ಮರೆವೊ |
ಕ್ಕರಲಂಬನ ಬಿಸುಪುಗಳೆದು ಪೊರೆದುದು ತರುಣೀ ||
ಗುರುಕುಚವಿದು ಚಳಿಗಳೆದುದು |
ವರಂಗೆ ಮರೆವುಗೆ ಸುವೃತ್ತರೇಗೆಯ್ಯರೊ ಪೇಳ್ ॥ ೧೪

ಸಸಿ ಬಾಂಬೊಳೆಯಂ ಬಾಸೊ |
ಳ್ಬಿಸುಟುಂ ಬಿಡದಾಸೆ ದೊವಲ ನಿಮ್ಮಡಿಕೆಯೊಳೊಂ ||
ದಿಸಿ ಪೊದೆದಗಜೆಯನಾಲಿಂ |
ಗಿಸಿ ಗಿರಿಶಂ ಮೆರೆವನೆಂದೊಡದ ನೇನೆಂಬೆಂ ॥ ೧೫

ಹರಿವಿಧಿಗಳುಳಿದು ನಳಿನಾ |
ಕರಸರಸಿರುಹಂಗಳಂ ರಮಾವಾಗ್ದೇವೀ ||
ಪರಿರಂಭಣ ಯುತರಿರ್ದ್ದ |
ಸ್ಸುರುಚಿರ ವೈಕುಂಠಸತ್ಯಲೋಕಾಂತರದೊಳ್ ॥ ೧೬

ವೃ॥ ಚಳಿವೆಟ್ಟಾಪ್ಟಣ್ಮನಪುತ್ರಿ ಸುಕ್ಕಿ ಚಳಿಯಿಂ ವೈಸಾದ್ದ್ರತಾನಪ್ಪಿ ಸಂ |
ಚಳಿಸಳ್ಕರ್ವನ ದೇಹದಿಂ ಸಿರಿ ಸರೋಜಾತಾಕ್ಷ ವಕ್ಷಸ್ಸ್ಥನಿ |
ಶ್ಚಳಿಯಾದಳ್ಸುಡಿವೆಣ್ಚತುರ್ಮುಖಮುಖಾಂತರ್ವಾಸೆ ಯಾಗಿರ್ಪ್ಪಳಿ |
ನ್ನುಳಿದೀಲೋಕದ ಪೆಂಡಿರೇನುಳಿವರೇ ತಳ್ತಪ್ಪ ದಾತ್ಮೇಶರಂ ॥ ೧೭

ಕಂ॥ ಪುದಿದಹಿಮ ಮೊಡಲೊಳಿಳಿತಂ |
ದುದರಾಗ್ನಿಯ ಸೈದೆ ನಂದೆಪೊಯ್ದುದು ನಿಜಮ ||
ಲ್ಲದೊಡೆಂತು ತೋರ್ಪುದೋ ಪೇ |
ಳ್ಮೊದಲಿಲ್ಲದ ಪೊಗೆ ಪೊದಳ್ದ ಜನದಾನನದೊಳ್ ॥ ೧೮

ವ್ಯುಡನ ಕಿಡಿಗಣ್ಣ ಕಡುಬಿಸು |
ಪಡಂಗಿಸುತ್ತೈಕಿಲಿದು ಮನೋರಮೆ ನೋಡೆಂ ||
ದಡಿಗಡಿಗೆ ರತಿಯಕರಮಂ |
ಪೊಡೆದಾದ್ದ್ರನ್ನಂಜಿನೆಂದು ನಲಿವಂ ಮದನಂ ॥ ೧೯

ಕುಮುದಮ ನಲರ್ಚಿ ಹಿಮರುಚಿ |
ಗೆ ಮಹೋತ್ಸವ ಮಿತ್ತು ದಬ್ಜಮಂ ಕೊರಗಿಸಿ ತಿ ||
ಗ್ಮಮರೀಚಿಯನದು ಮಸುಳಿಸಿ |
ತು ಮಹೀಜನಮಾತ್ಮಸಮಕೆ ಮಾಳ್ಪುದು ಹಿತಮಂ ॥ ೨೦

ಬೆರಲ್ಕೈಕಿಲಿಂ ಮುರುಂಟಿರೆ |
ವಿರಹಿಯ ಹೃದಯಸ್ಥವಿರಹವಹ್ನಿಗೆ ಕಯ್ಯಂ ||
ಸ್ಮರನೊಡ್ಡಿ ಕಾಸಿ ಬಿಲ್ಲಂ |
ತಿರುವೊಯ್ದು ಸುತಿರ್ಪರ್ ನಸಿತ ಶರರುಹ ಶರದಿಂ || ೨೧

ವಚನ|| ಆ ಕಾಲದೊಳ್—

ವೃ|| ನಡುಕಂ ಕೈಮೀರೆ ದಂತಚ್ಛದವೊಡೆದು ಹುಹುಧ್ವಾನಮುಂ ಪೊಣ್ಮೆ ಮೆಯ್ಯೊ
ಳ್ಬಿಡದೆತ್ತಂ ತೋರೆ ರೋಮೋದ್ಗಮಮುಮುರ್ದಿರೆ ಸೀತ್ಕಾರಮುಂ ಗೈವೆರಲ್ಕಾಲ್ ||
ಕಡಿ ವೆತ್ತಂತಾಗೆ ತಳ್ತೈಕಿಲ ಭರದೆ ಪಡಲ್ವಟ್ಟು ಗೇಣಾಗಿ ಪಾಂಥ |
ರ್ತ್ತೊಡೆ ತೋಳ್ಗಳ್ಕೂಡೆ ಜಾನುಪ್ರಹಿತಶಿರರದೇ ನಿರ್ದರೋ ಶೀತಭೀತರ್ || ೨೨

ವಚನ|| ಮತ್ತಮವರೊಳೊರ್ವಮುಗ್ಧಾಧ್ವಗಂ—

ಕಂ|| ಗೇರಪಣ್ಣಸಿದು ಕೆಂಡಮೆನುತ್ತುಂ |
ಸಾರಿ ಮೇಲೆ ತೃಣಮಿಟ್ಟದನೂದಲ್ ||
ಸೇರಿ ಬಾಯ ಪೊಗೆ ತಳ್ತಿರೆ ಕಂಡಾ |
ದಾರಿಗಂ ಮುದದಿ ನೂದುತುಮಿರ್ದಂ || ೨೩

ಕಂ|| ಚಳಿಗಾರದೆ ಪೇರಾಲದ |
ಕೆಳಗಿರ್ಪನಿತರೊಳೆ ಚಪಳಕಪಿ ನಿಡುಗೋಡಂ ||
ಸೆಳೆದಲುಗೆ ಸೂಸುವೆಲೆವನಿ |
ಗೆಳಿನೊರ್ವಂ ನಸೆದು ಸಡಗಿ ಸಿಡಿಮಿಡಿಗೊಂಡಂ || ೨೪

ಇಡಿದಿಂಧನದೊಳೆ ಫಣಿಯೊಳ |
ಗಡಂಗೆ ಮಣಿಗಂಡು ಕೆಂಡಮೆಂದೊರ್ವಂ ಕೈ ||
ದುಡುಕೆ ಮೊರೆದೇಳೆ ಭಯದಿಂ |
ಕಡುಚಳಿಯಿಂದೊರ್ವ್ಮೆ ಸೆಡೆದು ನಡುಗುತ್ತಿರ್ದಂ || ೨೫

ಹಾದಿಯೊಳೂದಿದನೊರ್ವಂ |
ಬೂದಿ ಕರಂ ಪಾರೆ ಕೆಂಡಮಂ ಕಂಡಮಿದೆಂ ||
ದಾದರಿಸಿ ಕುಕ್ಕಿ ಕೊಕ್ಕಿಂ |
ಮೇದುದದಂ ಕಾಗೆ ಮಾಗೆಯೇನತಿಶಯಮೋ || ೨೬

ಪುಲ್ಲಿಕ್ಕಿ ಪೋಗೆ ಪಥಿಕ |
ರ್ಮೆಲ್ಲನೆ ಸುಡಲಾರದಗ್ನಿ ಹಿಮಸಮಯಮಹೋ ||

ಪಲ್ಲಭನತ್ತಣಿನಗಿದೇಂ |
ಪುಲ್ಲಂ ಕಚ್ಚಿರ್ದುದೊ ಪೇಳೆನಲ್ತಳ್ತಿಸಗುಂ || ೨೭
ಗರಿಗೆದರಿ ಬಿದಿರ್ದು ಕೊಕ್ಕಿಂ |
ದಿರಿದಿರಿದೆಳವಿಸಿಲನೆಳಸಿ ಸೋಡುಂಗೊಂಡೇಂ ||
ತುರುಗಿರ್ದ್ದವೊ ತುದಿಗೋಡೊ |
ಳ್ಮರಿ ಬೆರತಿರೆ ನೋಡಿ ಬಾಡುತುಂ ವಿಹಗಂಗಳ್ || ೨೮

ವೃ|| ಏಳುತ್ತುಂಮೆಲ್ಲನಲ್ಲಿಂಮರಿಯಮರ್ದಿರೆಕೀಳ್ಪೊಟ್ಟೆಯೊಳ್ಸುಕ್ಕಿರ್ದವೆಶಾತ್ಯ
ಬಾಳಂ ಮೇಣ್ಬಳ್ಕೆ ನೋಡುತ್ತಸವಸದೆ ಬಿಸಿಲ್ಗಿತ್ತು ಜೀರ್ಣಚ್ಛದಂಗಳ್ ||
ಮೇಳಂಗೊಂಡೊಪ್ಪೆ ಶಾಖಾಗ್ರದೊಳಡರ್ದಲುಗಲ್ ಸೂಸೆ ಮೇಲ್ಕೈಕಿಲಿತ್ತಂ |
ನಾಳೀಜಂಘಂ ಕರಂ ಪಲ್ದೆರೆದು ನಡುಗಿ ಹಕ್ಕಿಂದು ಪುರ್ಬ್ಬಿಕ್ಕಿತಾಗಳ್ ||೨೯

ಕಂ|| ಮೂಡಣೆಲರೂದೆ ಜವದಿಂ |
ದೋಡುಗುವೀಹಿಮಸಧಾಬ್ಧಿಯುಗ್ರದೊಳೆನಿಪೊಂ ||
ದಾಡಂಬರಮುಂ ಜನದೊ |
ಳ್ಮಾಡಿ ಕರಂ ತರಣಿ ತಳರ್ದುದಂಬರತಳದೊಳ್ || ೩೦
ಉರಿಗಣ್ಣಿಂ ದುರಿದಂಗಜ |
ನುರುಳ್ದಿ*ರ್ಪ್ಪಂ ಯುವತಿ ಸರಸ ಹೃದಯ ಪಯೋಜಾ ||
ಕರದೊಳ ಗಲ್ಲದೊಡವರುರು |
ತರ ಕುಚದೊಳ್ಬಿಸುಪು ಪೊಣ್ಮುಗುಮೆ ಪೊಗೆಯುಸಿರೊಳ್||೩೧

ವೃ|| ಪುಳಕಂ ಕಾಯದೊಳುಣ್ಮೆ ಕಂಪನಮುದುಂ ಕೈಗಣ್ಮೆ ದಂತಚ್ಛದ |
ಸ್ಖಳಿತಂಚೀತ್ಕೃತಿ ಪೊಣ್ಮೆ ಬಂದು ನೆರೆ ಸಿಂದಾತ್ಮೇಶನಂ ಕಾಣುತ ||
ನ್ಯಳ ಸಂಗಕ್ಕೊಳಗಾಗಿ ಚಂದನೆನುತುಂ ಕಾಯ್ಪೇರೆ ತೋಳ್ವಾಸದಿಂ |
ದೆಳೆದಾ ಕೋಮಳೆಯೊರ್ವ್ವಳೊತ್ತಿ ಬಿಗಿದಳ್ಶೀತಾತುರಂ ಪೋಪಿಸಂ || ೩೨

ಕಂ|| ವಿಚಕಿಲ ಗಂಧಿಯಚ ಲಸ |
ತ್ಕುಚ ಕುಲಗಿರಿ ದುರ್ಗದಲ್ಲಿ ನೆಲಸಿ ತದಂಗ ||
ಪ್ರಚುರ ಘುಸೃಣಾಂಗ ರಾಗ ಕ |
ವಚವಾಂತರ ಸೈಕಿಲ ರಸನೇಗೈದಪನೋ || ೩೩

ವೃ|| ಗಿರಿಸಾನು ಪ್ರಸರಜ್ಝರೋತ್ಕರ ತರಂಗಾಕೀರ್ಣವಾಬಿಂದುಬಂ|
ಧುರಮುಕ್ತಾ ಫಲಮಾಲಿಕಾ ಸಿತರುಕ್ಪ್ರಾಲೇಯ ಶುಭ್ರಾಂಬರಾ ||
ವರಣ ಶ್ವೇತ ವಿಭೂತಿ ಚಂದನವಿಲಿಪ್ತಾಂಗಶ್ರೀವೈಕ್ಯಮುಮ್ಮರ್ಸೀ |
ಶ್ವರ ಸಿದ್ಧರ್ಪ್ಪರಮುಕ್ತಿಕಾಂತೆಯೊಲಿಸಲ್ತಾಳ್ದಂತೆ ನೈಪಥ್ಯಮಂ || ೩೪

ವೃ|| ಹಿಮವಚ್ಛೈಲತರಂಗಿಣೀ ಕಟಪಟು ಪ್ರಾಲೇಯ ವಾರ್ಬಿಂದುಸಂ|
ಕ್ರಮಿತೋದ್ಯತ್ಪುಳಿನ ಸ್ಥಳಂಗಳೊಳೆ ಸಿಂದಾನಂದ ದಿಂದೊಂದೆ ಸಂ ||
ದು ಮನೋವೃತ್ತಿ ಮಹೇಶ್ವರಾಂಘ್ರಿಯೊಳೆ ರೋಮಾಂಚಂಗಳುಂಕಂಪಮುಂ
ಬೆಮರುಂ ತಳ್ತಿರೆ ಶೈವಯೋಗಿವರರಿರ್ದರ್ನಿರ್ಗತಶೀತಾತುರರ್ || ೩೫

ವಚನ|| ಇಂತತಿಶಯ ಪ್ರಭಾವ ವಿಭವಂ ಬಡೆದೇಳ್ತಂದ ಹೇಮಂತ ಸಮಯದಲ್ಲಿ—

ವೃ|| ರಮಣಿಯ ಕುಂಕುಮಾಂಕಿತ ತನುಪ್ರಭೆ ಚೆಂಬಿಸಿಲಾಗೆ ತದ್ರತ |
ಶ್ರಮ ಜನಿತೋಷ್ಣ ತುಂಗಕುಚಯುಗ್ಮಮೆ ವಕ್ಷದೊಳೊಪ್ಪೆ ತಳ್ತ ತೆ ||
ದ್ವಿಮಳಿನ ದೋರ್ಲತಾ ಕನಕ ಚಂಪಕದಾಮಮೆ ಕಂಠದೇಶದೊ |
ಳ್ಸಮನಿಸೆ ನೂಂಕಿದಂ ಹಿಮದ ಕಾಲಮ ನಾನರನಾಥಚಂದ್ರಮುಂ || ೩೬

ವಚನ|| ಇಂತು ಸಂತಸಂ ಮಿಗೆ ಶರಣಜನ ವನ ವಸಂತಂ ಕಾಂತೆಯೊಡನುಮಾಕಾಂತನಡಿದಾವರೆಯಂ ಭಕ್ತಿಯಿಂಭಜಿಸುತ್ತುಮಿರ್ದು ನಿಜದೇಶಕ್ಕೆ ಪೋಗಲೆಳಸಿ ಲಲನೆಗರುಪಿ ಘಳಿಲನೆ ಸಿಂಹಳೇಂದ್ರಂಗೆ ಸಚಿವೇಂದ್ರನಿಂ ಪೇಳಿಸಲೊಡನವಂ ಕೇಳ್ದು ನಿಜರಮಣಿಗಿಂತೆಂದಂ–

ಕಂ|| ಇನ್ನೆವರ ಮೆಮ್ಮಮಾತಂ |
ಮನ್ನಿಸಿ ಜಾಮಾತೃವಿರ್ದನಿದೆ ಸಾಲ್ಗುಮವಂ ||
ಗಿನ್ನಿರವೇಳ್ವುದು ಕಜ್ಜದ |
ಬಿನ್ನಣಮಲ್ತಬಳೆ ಕಳಿಪುವುದು ನಿಜಸುತೆಯಂ || ೩೭

ವಚನ|| ಎಂದು ಕಾಂತೆಯ ನೆಂತಕ್ಕೆ ತಿಳಿಪುತ್ತೀರ್ವರ್ಗರೇಕಚಿತ್ತರಾಗಿ ನಿಜಕುಮಾರಿಯ ನೊಡವೋಪಂತು ಮಾಡಿ ಶುಭಮುಹೂರ್ತದೊಳ್ಮಗಳುಮಳಿಯನುಮಂ ಬರಿಸಿ ಪಟ್ಟವಣೆಯೊಳ್ಕುಳ್ಳಿರಿಸಿ ತುಂಗಳಾಲಂಕಾರಂಗಳಿನಲಂಕರಿಸಿ ಕಳಿಪುವಾಗಳಾ ಕಳಾಧರೆ ನಿಜತನೂಜೆಯಮೊಗದಾವರೆಯ ನಮಂದ ಸ್ನೇಹರಸ ತರಂಗಿತ ಕಟಾಕ್ಷದಿ ನಭೀಕ್ಷಿಸಿ—

ವೃ|| ತಂಗಿ ನಿಜೇಶ್ವರಂಗೆ ಬಗೆದಂತಿರೆ ನೀಂ ಬೆಸಕೈವುದತ್ತೆಮಾ ||
ವಂಗಳ ಮಾತುಮಂ ಮರೆದು ಮಿರದಿ ರಾರ್ಯ ಹಿತೋಕ್ತಿಗಳ್ಗೆ ಚಿ ||
ತ್ತಂಗುಡು ಬಂಧುವರ್ಗ ದುಪಚಾರಮನಾಂತಿರುಮೇಶಭಕ್ತಿಯಂ |
ಪಿಂಗದಿರೊಳ್ಜಸಂ ಬಡೆದು ಬಾಳ್ದಮಗೀವು ದತಿಪ್ರಮೋದಮಂ || ೩೮

ವಚನ|| ಎಂದು ಬುದ್ಧಿವೇಳ್ದು ಶೇಷಾಕ್ಷತಮ ನಿಕ್ಕಿ ಪರಸಿ—

ವೃ|| ಚಮರದ ಕುಂಚದಾ ರತಿಯ ಸಜ್ಜೆಯ ಮಜ್ಜನದಂಗರಾಗ ದು |
ತ್ಸವದ ಸುಗಂಧ ವೀಟಿಕೆಯ ಸಿಂಗರದೊಳ್ನೆರಿಗ್ಗೆವ ಮಾಲೆಗ ||
ಟ್ಟುವ ತೊಡೆದಟ್ಟು ವಿಂಚರದೆ ಪಾಡುವ ಕನ್ನಡಿ ದೋರ್ಪ ಬೋನಮಂ |
ಸವೆವಡಿ ಯೂಡುವಾಳಿಯರುಮಂ ಪಡೆದಿತ್ತಳವಳ್ವಿಳಾಸದಿಂ || ೩೯

ವಚನ|| ಮತ್ತಂ—

ವೃ|| ರಸಚಿತ್ರಂ ರತ್ನಭೂಷಾವಳಿ ಮೃದುವಸನ ಶ್ರೇಣಿ ಮುಕ್ತಾತಪತ್ರ |
ಪ್ರಸರಂ ಪೊಂಬೆಟ್ಟೆ ಬಟ್ಟಲ್ಕನಕ ಕಳಶ ಮಾದರ್ಶಮಾಂದೋಳನಂ ದಂ ||
ತಿಸಮೂಹಂ ವಾಜಿವೃಂದಂ ಮೃಗಮದ ಘನಕಾಶ್ಮೀರಪತತ್ರಾಳಿ ಕೇಳೀ |
ಲಸದುದ್ಯತ್ಕೀರ ಪಾರಾವತ ಶಿಖಿಹರಿಣೀ ಹಂಸಶಾರೀ ಪ್ರತಾನಂ || ೪೦

ಮಣಿಮಂಚಂ ದಿವ್ಯನವ್ಯಾಂಬರ ಮೃದುತರ ತಲ್ಪಂ ಮೃಗೇಂದ್ರಾಸನಂ ಸ|
ದ್ಗುಣಭಾಸ್ವದ್ವೇಣು ವೀಣಾ ನಿಪುಣತರವಧೂವೃಂದ ಮುದ್ಗಾಯಕೀ ಸ್ತ್ರೀ||
ಗಣ ಮುದ್ಯನ್ನರ್ತಕೀ ಸಂಚಯ ಮಖಿಳ ಕಳಾವಿದ್ವಧೂಟೀ ಸಮೂಹಂ |
ಪ್ರಣಯಪ್ರೌಢ ಪ್ರಹಾಸ್ಯೋಚಿತ ಹಿತ ಸಲ್ಲಾಪ ಕಾಂತಾಕದಂಬಂ || ೪೧

ವಚನ|| ಎಂಬಿವೆಲ್ಲಮುಮಂ ಮಗಳ್ಗೆ ಬಳಿವಳಿ ಗೊಟ್ಟೊಡವೋಪಂತು ನಿಯಾಮಿಸಿ ಸಿಂಹಳೇಂದ್ರಂ ಮಂಗಳತೂರ್ಯತ್ರಯ ರವಂ ವಿಜೃಂಭಿಸೆ ನಿಜಪುರಮಂ ಪೊರಮಟ್ಟು ಕಿರಿದಂತರಮಂ ಕಳಿಪಿ ಮಗುಳ್ದು ಕಮಳಾವತಿಯಂ ಪೊಕ್ಕಿರ್ದ್ದ ನಿತ್ತಲ್ ರಾಜಶೇಖರನರೇಂದ್ರಂ ವಿಮಳತರ ತರಂಗಿಣೀತಟವಿಪುಳಗಿರಿಕಟಕ ವಿವಿಧಕಾಸಾರ ಪರಿಸರಸ್ಮಿತದಳಫಳಕುಸುಮ ವಿಸರ ವಿಳಸಿತ ದಿವ್ಯತರು ಮನೋಜ್ಞ ನಂದನಂಗಳೊಳ್ಬೀಡು ವಿಡುತ್ತ ಮಿನಿಯಳೊಡನೆ ಬಿನದಿಸುತ್ತುಂ ಮೆಲ್ಲಮೆಲ್ಲನೇಳ್ತಂದು ನಿಜರಾಜಧಾನಿಯಂ ಸಂಭ್ರಮಂ ಮಿಗೆಪುಗು ತರ್ಪನ್ನೆಗಂ

ಮಂದಾನಿಲರಗಳೆ|| ಆವೇಳೆ ಯೊಳತಿಸಂಭ್ರಮಮೆಸೆದಿರೆ | ಪೂವಲಿ ಪುರವೀಥಿಗಳೊಳ್ನೆರೆದಿರೆ | ಪವಳದ ರನ್ನದ ಗುಡಿಗಳ ಗುಡಿಗಳ್ | ನವಮೌಕ್ತಿಕ ರಂಗದ ದಾಂಗುಡಿಗಳ್ | ಮೆರೆದುವು ಮಿರುಗುವ ಮಿಸುನಿಯ ತೋರಣ | ಮರಿಕೆಯ ಪುರಜನ ದುತ್ಸವದೋರಣ | ಮಾನೆಯ ಮೇಲಣ ಪಳವಿಗೆ ಮಿಳಿರ್ದಿರೆ - ನಾನಾವಿಧವಾದ್ಯಧ್ವನಿಯಳುರ್ದಿರೆ | ಕರೆದುವು ಬಿರುದಿನ ಕಹಳೆಗಳಾಗಳ್ | ಪರೆದುದು ಪಳಹದ ರವಮೆಣ್ದೆಸೆಯೊಳ್ | ಗಿರಿಬಂಧುರ ಸಿಂಧುರತತಿ ನಡೆತರೆ | ಚರತ್ಯಂದದ ಕುಂದದ ಕಳಕಳಮಿರೆ | ಪೊಸಮೇಳದ ತಾಳದ ಮೃದುನಿನದಂ | ಪಸರಿಸೆ ಗೀತರವಂ ಕಡುಬಿನದಂ | ಬಡೆದಿದಿರ್ವಂದುದು ರಾಜಪ್ರಚಯಂ || ಬಿಡದೊಡವಂದುದು ನಾರೀನಿಚಯಂ | ಕಳಶಂ ಕಂನಡಿ ವೀಜನತತಿಯಂ | ತಳೆದಿಳಿಕೈಯುಂತೆ ಚೆಲ್ವಿಂರತಿಯಂ || ಸಲೆ ವಾರಾಂಗನೆಯಬ್ಬರಿಸುತಿರ್ದ್ದರ್ | ಕೆಲರಾರತಿ ವಿಡಿದೈತರುತಿರ್ದ್ದರ್ | ಮುತ್ತಿನ ಸತ್ತಿಗೆ ಮೊತ್ತಂಬೆತ್ತಿರೆ | ಸುತ್ತಿ ತುರಂಗಿಗಳೊತ್ತರಿಸುತ್ತಿರೆ | ವಂದಿಸೆ ವಂದಿಜನಂ ಜಯಜಯವೆನೆ | ಮುಂದೆಸೆ ಬಂದೆಸೆವ ವರತಿಶಯಮೆನೆ | ಕಡೆಗಂಗಳ ಕುಡಿವೆಳ ಗೆಡೆವುಗುತಿರೆ | ನಿಡುಮುಡಿ ಮುಗುಳಂ ಪುರುಡಿಸು ತುಗುತಿರೆ | ಪೆಣ್ಬಡೆ ಸೂಸಿತು ಲಾಜವ್ರಜಮಂ | ತಣ್ಪಸಿಲೆನೆ ಪಟವಾಸದ ರಜಮಂ | ತನುರುಚಿ ನಿರ್ಜಿತ ಸೌದಾಮಿನಿಯರ್ | ಘನಸಂಭ್ರಮದರೆಬರ್ಕಾಮಿನಿಯರ್ | ನೆಲವನೆ ನೆಲೆನೆಲೆಗಳ ನೇರುತ್ತುಂ | ಕಲಿತ ಗಟಾದ ರುಚಿವೀರುತ್ತುಂ

ನೋಡುತ್ತಿರೆ ಕರಿವರ ಮಸ್ತಕದೊಳ್ | ಕೋಡಿಲ್ಲದೆ ಬಗೆಗೊಗೆದುತ್ಸುಕದೊಳ್ | ಯುವತಿ ಸಹಿತ ಮವನೀಶ್ವರ ತನಯಂ | ಸುವಿಳಾಸ ತಿರಸ್ಕೃತ ಹರಿತನಯಂ | ಪಿರಿದುತ್ಸವದಿಂದೇಳ್ತಂದಾಗ | ಳ್ಭರದಿಂದರಮನೆಯಂ ಪುಗುವಾಗಳ್ ||

ವೃ||ಜಡಿಯೆ ಘನಸ್ತನಂ ಪೊಡರೆ ಪೂರ್ಣ ನಿತಂಬಮಪಾಂಗಕಾಂತಿ ಮುಂ|
ದಿಡೆ ಕುಸುಮಾಸ್ತ್ರಮಂ ಕೆದರೆ ತಣ್ಗದಿರಂ ರದನಾಂಶು ಬಳ್ಕೆ ತೆ ||
ಳ್ಗಡು ಮುಡಿ ಸೂಸೆ ಬಲ್ಮೊಗುಳನಂದಿದಿರ್ವಂದು ಮಹೋತ್ಸವಂ ಮನ |
ಕ್ಕೆಡೆಗುಡೆ ರನ್ನದಾರತಿಯ ನೆತ್ತಿದುದೊಲ್ದು ವಿಳಾಸಿನೀಜನಂ || ೪೨

ವಚನ|| ಇಂತು ಸಖೀಜನ ಮೆಸಗುವ ಮಂಗಳೋಪಚಾರಂಗಳಂ ಕೈಕೊಳುತ್ತುಂ ನಿಜಜನನೀಜನಕರಿರ್ಪೆಡೆಗೆ ರಮಣಿವೆರೆಸೇಳ್ತಂದು ಪೊಡಮಟ್ಟು ನಿಂದಾಗಳಮೃತಮತಿ ಮಹಾದೇವಿ ಸತ್ಯೇಂದ್ರ ಚೋಳೇಂದ್ರರಿರ್ವರುಂ ನಲವರಳೆಯಿತ್ತು ಪರಿತೋಷದಿಂ ಪರಸಿ ಕುಳ್ಳಿರಿಸಿ ಸರಸಪ್ರಸನ್ನಸ್ನಿಗ್ಧಮಧುರತರ ಕಟಾಕ್ಷಂಗಳಿನ ಭೀಕ್ಷಿಸಿ ಸಮಯೌವನ ರೂಪಲಾವಣ್ಯ ಸೌಶೀಲ್ಯಸಂಪದಕ್ಕೆ ಸಂತಸಂಬಟ್ಟು ಸಮುಚಿತ ಮಂಗಳಂಗಳಂ ರಚಿಸಿ ಸುಮುಹೂರ್ತದೊಳ್ಮನೆದುಂಬಿಸ ಲೊಡನೆ ನಿಜನಿತಂಬಿನಿಯೊಳ್ಕೂಡೆ ಸಾರತರಸಂಸಾರ ಸುಖಮ ನನುಭವಿಸುತ್ತಮಾ ರಾಜಶೇಖರಂ ಹರಚರಣ ಪೂಜಾಸಾಮ್ರಾಜ್ಯ ಧುರಂಧರಂ ಶರಣಜನ ಸಂತಾನ ಸಂತಾನಂ ಪರಮ ಹರ್ಷದಿವಿರುತ್ತುಮಿರ್ಪಾಗಳ್—

ವೃ|| ಕಳಕಂಠೀಕಳನಾದ ಕಾಹಳೆ ಮಿಳದ್ಭೃಂಗಾವಳೀ ರಾವಮುಂ |
ಜುಳೆ ಗೀತಂ ಶುಕಮಂದಿ ವೃಂದ ನಿನದಂ ಮಂದಾನಿಲಾಂದೋಳಿತೋ ||
ಜ್ಜ್ವಳವಲ್ಲೀ ಮೃದುಲಾಸ್ಯವೊಪ್ಪಿರೆ ವನಶ್ರೀವಲ್ಲಭಂ ಸಂಮುದಂ |
ದಳೆದೇಳ್ತಂದ ನಮಂದ ವೈಭವಯುತಂ ಚೈತ್ರಕ್ಷಮಾಧೀಶ್ವರಂ || ೪೩

ವಚನ|| ಅಂತುಮಲ್ಲದೆಯುಂ—

ವೃ|| ವನಿತಾವಕ್ತ್ರಾಂಬುಜಂ ಮುನ್ನಲರೆ ಸರಸಿಜಂಪಿಂತೆ ಕಾಂತಾಕಪೋಲೇಂ|
ದುನವಪ್ರದ್ಯೋತಮಂ ಮುಂ ತಳೆಯೆ ಹಿಮಕರಂ ಪಿಂತೆ ಭಾಮಾಮನಶ್ಚೋ||
ತನಗಂ ಮುಂ ಪಲ್ಲವಂ ಬೆತ್ತಿರೆ ಸರಸರಸಾಲವ್ರಜಂ ಪಿಂತೆ ತನ್ವೀ |
ತನು ವಲ್ಲೀಶ್ರೇಣಿ ಮುಂ ರಂಜಿಸೆ ವನಲತೆ ತಾಂ ಪಿಂತೆ ಬಂದಂ ಬಸಂತಂ ||೪೪

ವೃ||ಮಲಯೋರ್ವೀಧರ ತುಂಗ ಶೃಂಗವಿಚರದ್ವಿದ್ಯಾಧರೀ ಕೋಮಳಾಂ
ಗಲತಾಸೌರಭಶಾಲಿ ವಾಮನಕರಾ ಕೀರ್ಣೋದಕೋದ್ಯತ್ಕಣಾ ||
ವಲಿ ಮಾರ್ಗಸ್ಥಿತ ಚಂದನಾಗಗತನಾಗಾಪೀತಶೇಷಂ ಧರಾ |
ತಲ ಕಾನಂದಮ ನೊಂದಿಸುತ್ತೆ ಸುಳಿದಂ ಮತ್ತಲ್ಲಿ ಮಂದಾನಿಲಂ || ೪೫

ನಗಿಸುತ್ತಂ ಮಲ್ಲಿಕಾ ಕಾಮಿನಿಯು ನಳಿರವವ್ಯಾಜದಿಂ ಸೋಂಕಿ ಮೆಯ್ಯೊ|
ಳ್ಸಿಗೆವುತ್ತುಂಚೈತ್ರ ದೂತೀಯುವತಿಗೆ ಮುಕುಳವ್ಯಾಜದಿಂ ಘರ್ಮವಾರ್ಬಿಂ||
ದುಗಳಂ ಮೇಣ್ಮಾತವಲ್ಲೀ ವನಿತೆಗೆ ಪಡೆಯುತ್ತಂಕುರವ್ಯಾಜದಿಂ ನೆ|
ಟ್ಟಗೆ ರೋಮಾಂಚಂಗಳಂ ಸದ್ವಿಟನನೆ ಸುಳಿದಂ ವೇಗದೂರಂ ಸಮಿರಾರಂ || ೪೬

ವಚನ|| ಮತ್ತಮಾಗಳ್—

ವೃ||ತಳಿರ್ವೆಳ ಮಾವು ಪಲ್ಲವಿಪಶೋಕೆ ಮುಗುಳ್ತದಿರ್ಮುಕ್ತೆವೊಗ್ಗೆಯಂ
ತಳೆಯಲೊಡರ್ಚಿ ನಿಂದ ಪೊಸಮಲ್ಲಿಗೆ ಪುಷ್ಪಮನಾಂತ ಚಂಪಕಂ ||
ಪಳಿಯೆಲೆಯಿಕ್ಕಿ ಸಣ್ಣನನೆಯೇರಿದ ಪಾಟಳಿ ಪೂವನಾಂತು ಕಂ|
ಗೊಳಿಸುವ ಕರ್ಣಿಕಾರ ಮಲರ್ದೀವಿದ ಮುತ್ತ ಮದೆತ್ತನೋಳ್ಪುಡಂ ||೪೭

ಮೊಡಮಿಗಳಂತೆ ಮೂಡೆ ಪೊಸವೊಗ್ಗೆಗಳಾಮಧುದೂತಿಯಲ್ಲಿ ಸೊಂ|
ಪಿಡಿದಿರೆ ವಲ್ಲರೀತನು ಸುಮಸ್ತಬಕಸ್ತನಮಲ್ಲಿ ಪೊಣ್ಮೆ ಕ ||
ರ್ಪಡರ್ದತಮಾಲವಲ್ಲಿ ಬಡಬಾಸೆ ವೊಲೊಪ್ಪಿರೆ ಪದ್ಮಲೋಚನಂ|
ಬಿಡದಲರ್ದೊಪ್ಪೆ ಜೌವನಮನಾಂತವೊಲಾ ವನಲಕ್ಷ್ಮಿ ತೋರಿದಳ್ || ೪೮

ಕಂ|| ಗಿಳಿಗಳೆರಂಕೆಯ ಪಚ್ಚೆಯ|
ನಳಿಮಾಲೆಯ ನೀಲಮಾಲೆಯಂ ಮಾವಿನಚೆಂ ||
ದಳಿರ್ಗೆಂಪಂ ಬನಸಿರಿ ತಾಂ|
ತಳೆದಾ ಮಾಧವಮನೋಜ್ಞೆಯೆನಿಸುತ್ತೆಸೆದಳ್ || ೪೯

ವಚನ|| ಅದಲ್ಲದೆಯುಮಲ್ಲಿ—

ವೃ|| ಮದನಂ ಪೂಸರಿಲಿಂದೆ ಪೊಣ್ದಸೆ ತಪಸ್ಸಂಯುಂಕ್ತ ಕಾರ್ಕಶ್ಯಚಿ|
ತ್ತದೆ ತಾಂ ನಾಂಟದಿದೆಂದು ಬಂದು ಮಧುವೆಂದೆಂಬೋಜನಂದೊಟ್ಟೆ ಮುಂ||
ತ್ತದ ಪೂಗೆಂಡಮನಲ್ಲಿ ಬಲ್ಪರಲ ಮಾಡಲ್ಕೆಲಯಃ ಪಿಂಡಖಂ|
ಡದ ಸಾಲಿಟ್ಟದನೂದಿದಂತೆ ಮೆರೆಗುಂ ಭೃಂಗಾಳಿಯಿಂ ಗಾಳಿಯಿಂ || ೫೦

ಕಂ|| ಮಧುಸೇವನೆಯಿಂ ಸೊರ್ಕುತೆ|
ಮಧುಪಂ ಸುಮನಃಪ್ರಚಯಮ ನಲೆದೊಡೆ ಶಿಖಿಯೊಳ್ ||
ಮಧುರಿಪು ಜನ ಬೆಸದಿನದಂ|
ಮಧು ದಂಡಿಪತೆರದೆ ಮುತ್ತದಲರೊಳದೆಸೆಗುಂ || ೫೧

ವಚನ|| ಮತ್ತ ಮದಲ್ಲದೆಯುಂ—

ವೃ|| ಅಂಗಜಭೂಭುಜಂ ವಿಜಯಯಾತ್ರೆಗೆ ಪೋಗಲೊಡರ್ಚೆ ಚೈತ್ರನು |
ತ್ತುಂಗಪಿಕಧ್ವನಿಸ್ಫುಟಮಹಾ ಪಟಹಧ್ವನಿಗೆಯ್ಯೆ ಕೇಳ್ದು ಚೂ ||
ತಂಗಳೆನಿಪ್ಪ ವೀರಭಟರೇಳೆ ನವಾಂಕುರ ರೋಮರಾಜಿ ಸ |
ರ್ವಾಂಗದೊಳಂದು ಪಲ್ಲವಲಸಕ್ಕವಚಾವಳಿ ದೊಟ್ಟು ತೋರಿದಳ್ || ೫೨

ಜೀವಣಸಾಲೆ ತುಂಬಿಗಳ ಪುಷ್ಪಕಳಂಬನ ಶಸ್ತ್ರಶಾಲೆ ಕೀ |
ರಾವಳಿಕೋಕಿಲಾವಳಿಗಳಗ್ಗದಪಾಠದ ಪಟ್ಟಶಾಲೆ ಮ ||
ಲ್ಲೀವಧು ಲಾಸ್ಯಮಭ್ಯಸಿಪ ನರ್ತಶಾಲೆ ನವೀನಚೈತ್ರಲ |
ಕ್ಷ್ಮೀವರಚಿತ್ರಶಾಲೆ ಮಧುಭೂಭುಜ ನೋಲಗಸಾಲೆ ಮಾಮರಂ || ೫೩

ವಚನ|| ಮತ್ತಂ—

ವೃ|| ಗಿಳಿ ಗಿಳಿದಾಲಿ ಚೆಂದಳಿರೆ ಚಂದಿರಗಾವಿಯನೂತನಾಂಬರಂ |
ಸುಳಿಯದೆ ನಿಂದತುಂಬಿಗಳ ಸಾಲ್ಪವಿಭೃನ್ಮಣಿಮಾಲೆ ಪುಷ್ಪಸಂ ||
ಕುಳದ ರಜಂ ಸುಗಂಧದರಜಂ ತನಗಾಗಿರೆ ತಾಳ್ದು ಮಲ್ಲಿಕಾ |
ಲಳನೆಯೊಳೇಂ ಮನಂಬಿಡಿದನೋ ಬನದೊಳ್ಸಹಕಾರ ಪಲ್ಲವಂ || ೫೪

ಅಳಿಕುಳಝೇಂಕೃತಿ ಪ್ರಚುರಕಿಂಕಿಣಿಕಾರಣಿತಂ ಶುಕಸ್ವನಾ |
ಕುಳವಿಕಟಾಟ್ಟಹಾಸ ನಿನದಂಸುಮನಸ್ಸ್ಫುಟಹಾಸರೋಚಿ ಸ |
ತ್ಕುಳಮಣಿಮಾಲ್ಯ ಸುದ್ಗತರಜೋಭಸಿತಂ ಮಧುಮತ್ತ ಸಲ್ಲಿಕೋ ||
ಕಿಳರವ ಶೃಂಗನಾದನೆಸೆದಂ ತಳಿರ್ಗೈಯ ರಸಾಲಭೈರವಂ || ೫೫

ತಳಿರ್ಗಳೆ ದಟ್ಟಿಯಾಗೆ ಕೊನರೆಂಬಬೆರಲ್ಗದು ವಜ್ರಮುಷ್ಟಿಯಂ |
ತಳವಡೆ ತೋರಮಾಮಿಡಿ ಶಿಖಂಡ ಕದಂತಿರೆ ಮಧ್ಯದಲ್ಲಿ ಕಂ ||
ಗೊಳಿಪಳಿವಿಂಡು ತದ್ರಜಮೆ ಮೃದ್ರಜದಂತಿರೆ ಕೋಕಿಳಸ್ವರಂ |
ಕಳಕಳಮಾಗೆ ಮಾಮರಮದೊಪ್ಪಿತು ಮಾರನಮಲ್ಲನಂತೆವೋಲ್ || ೫೬

ಕಳರವಮಿತ್ತುದೆನ್ನ ಕಳಕಂಠನ ಕಂಠಕೆ ತನ್ನಕೋರಕಂ |
ಗಳ ರಸದಿಂದೆ ಪಣ್ಗಳರಸಂಗಳಿನೆನ್ನ ಶುಕಾಳಿಗಳ್ಗೆ ಮಂ ||
ಜುಳಮಧುರೋಕ್ತಿಯಿತ್ತುದದು ಮಲ್ಲದೆ ಪಲ್ಲವಬಾಣಮೀವುದೆ |
ನ್ನಳಿಯನೆ ಪೂಗಳಿಂ ಪೊರೆವುದೆಂದದನಾಮದನಂ ನಿರೀಕ್ಷಿಪಂ || ೫೭

ಚೆಂದಳಿರಂದ ವೇತ್ರಪೊಸಗಾಪೆ ಮದಾಳಿಗಳಿಂಚರಂ ನಯಂ |
ಗುಂದದಕಿಂಕಿಣೀ ಕ್ವಣಿತ ಮುದ್ಗತ ಕೋರಕ ಹಸ್ತಶಾಖೆಯೊ |
ಳ್ಪಿಂದಲರ್ಜೊಂಪಮೇ ಪಿಡಿದ ಚಾಮರಮಾಗಿರೆ ದೇಸಿವೆತ್ತು ತ |
ನ್ನಂದನರಂಗದೊಳ್ಕುಣಿದಳಾಮ್ರಲತಾನಟಿ ಮಚ್ಚೆ ಮನ್ಮಥಂ || ೫೮

ಕಂ|| ಪಲ್ಲವದೊಳಿರ್ದು ಕೋಗಿಲೆ |
ಮೆಲ್ಲನೆ ದನಿಗೈಯೆ ತತ್ಪ್ರಸೂನದೊಳಳಿಗಳ್ ||
ಮೆಲ್ಲುಲಿಗುಡೆ ಮಾವುಂ ಪೊಸ |
ಮಲ್ಲಿಗೆಯುಂ ಕೂಡಿ ಪಾಡುವಂತಿರೆ ತೋರ್ಕುಂ || ೫೯

ವಚನ|| ಅದಲ್ಲದೆಯುಂ—

ವೃ|| ಗಿಳಿಗಳ್ಮತ್ತೊಂದುಪಣ್ಣಂತುಡುಕುಗುಮಳಿಗಳ್ಪೋಗಿಮತ್ತೊಂದುಪೂವೊ|
ಕ್ಕಳಿವಂಡಂ ಪೀರ್ಗ್ಗುಮಾಕೋಕಿಳಶಿಶುಗೆಲೆ, ನೀನಲ್ಲದಾರುಂಟು ನಿನ್ನೊಳ್||
ತಳಿರೆಂದಿಂಗಪ್ಪುದೆಂದೇ ಬಯಸಿ ಮಧುಗೆ ಮೌಸವ್ರತಂ ಗೊಂಡುದೈ ಕೇ|
ಳೆಳಮಾವೇ ಪತ್ತರೊಳ್ಕಾಣದಿರಿದನೆನುತುಂ ಕಾಯಜಂ ಕಯ್ಯೊಳಿತ್ತಂ ||೬೦

ವಚನ|| ಮತ್ತಂ—

ವೃ|| ಅಳಿಕುಳಮೆಲ್ಲ ಪೀರ್ದ್ದೊಡರೆಯಾಗದಸನ್ಮಧು ಮಂದಮಾರುತಂ |
ಸೆಳೆದೊಡೆ ಕುಂದದಿರ್ಪ್ಪನರುಗಂಪಲರೋಳ್ಗಿಳಿವಿಂಡು ಪೀರ್ದೊಡಂ ||
ಕಳೆಯದೆ ತುಂಬಿ ತೋರ್ಪ್ಪರಸವಾಪೊಸಪಣ್ಣೊಳನೇಕಕೋಕಿಳಾ |
ವಳಿ ಮುರಿದೊಟ್ಟೆ ಪಿಂಗದ ತಳಿರ್ಕ್ಕಿರುಮಾಮರದೊಳ್ಮನೋಹರಂ || ೬೧

ಕಂ|| ಅಲರ್ಗೊಂಬಿನಲ್ಲಿ ತುಂಬಿಗ |
ಳುಲಿ ಮಿಳಿರ್ವೆಳದಳಿರನಾಂತಕೊಂಬುಗಳೊಳ್ಕೋ ||
ಗಿಲೆಗಳ ಕಳರುತಿ ಪಣ್ಗ |
ಳ್ನೆಲಸಿದ ನಿಡುಗೊಂಬಿನಲ್ಲಿ ಪುರುಳಿಗಳ ರವಂ || ೬೨

ಅಳಿಗಳೊಡನೊಡನೆ ದನಿಗುಡೆ |
ಗಿಳಿಗಳ್ನಲಿನಲಿದು ಮಾರವೀರನ ಬಿರುದಾ ||
ವಳಿಯಂ ಪಾಡುತ್ತಾಡಿದು |
ವೆಳಗಾಳಿಗೆ ತೊನೆವತಳಿರ್ಗಳುಯ್ಯಲನಾಗಳ್ || ೬೩

ವಚನ|| ಇಂತೊಪ್ಪುವ ಮಧುಮದನ ಮನೋಹರಂಗಳಾದ ಮಾಮರಂಗಳಲ್ಲದೆಯುಂ—

ಕಂ|| ಅಸುಗೆ ತಳಿರ್ತ್ತು ವಿಯೋಗಿಪ |
ಳಸುಗೆ ಕರಂ ಮುಳಿಗುಮೆಂದು ಮುಳಿದೊದೆಯೆ ವಧೂ ||
ವಿಸರಂ ತತ್ಪದಯಾವಕ |
ರಸಮುಮರ್ದವೊಲೆಸೆದುದದರ ಚೆಂದಳಿರ್ದುರುಗಲ್ || ೬೪

ಸಿರಿಯುಳ್ಳೊಡಳಿಗಳಿಂದೀ |
ವರದೊಳ್ಪಡದಿರ್ದ್ದ ತೊಲಗೆ ತೊಲಗುತೆ ವಿಕಚಾಂ ||
ಬುರುಹದೊಳೆ ನೆಲಸೆ ನೆಲಸಿದು |
ವರರೆ ಗತಶ್ರೀಕನಪ್ಪನಂ ಸೇವಿಪರಾರ್ || ೬೫

ಬನಸಿರಿ ಸುರವರಲೋಕದ |
ಬನಸಿರಿಗುರೆ ತೋರಲೆಂದು ನಿಜವಿಭವವನಂ ||
ದನುನಯದಿಂ ಕಟ್ಟಿದಕಾಂ |
ಚನತೋರಣಮೆನಿಸಿ ಕರ್ಣಿಕಾರಂ ಮೆರೆಗುಂ || ೬೬

ವೃ|| ಇದು ಮಧುದತ್ತ ಮೌಕ್ತಿಕಮೊ ಮಂಜುಳಚೂತಭುಜಂಗಸಂಗದಿಂ
ದೊದವಿದಘರ್ಮವಾರಿಕಣಮೋ ರತಿದೇವಿ ವಿನೋದದಿಂದೆ ಸೂ ||
ಸಿದಜಳಯಂತ್ರಚಂದನಗತೋದಕಶೀಕರಮೋ ಮದಾಳಿವೃಂ |
ದದ ಕೃತಪುಣ್ಯದೊಂದುರುಳಿಯೋ ಪೊಸಮಲ್ಲಿಗೆ ತಾಳ್ದಮೊಗ್ಗೆಯೋ ||೬೭

ವಚನ|| ಎನಿಸಿರಂಜಿಸೆ—

ಕಂ|| ಕಳೆದುದು ಮಧುಮದಮಧುಪಂ |
ಗೆಳ ವಿಪುಳಭ್ರಾಂತಿಯಂ ನಿಜಪ್ರಸವರಸಂ ||
ಗೆಳಿನಾ ವಿಚಕಿಲಲತೆ ನಿ |
ರ್ಮಳರೆಡೆಗೈದಿದೊಡೆ ಮಾಡರೇ ಪರಹಿತಮಂ || ೬೮

ವೃ|| ತರುಣಾಮ್ರಕೋರಕಗಾದಮೋಲ್ತೊಲಗಳೆಂದುಂ ಬಂದತಂಗಾಳಿಯಂ|
ಭರದಿಂದಪ್ಪುವಳಲ್ಲಿ ಜಾರೆ ವಸನಂಬೋಲ್ಜೀರ್ಣಪರ್ಣಂ ಸುಮಾ ||
ಭರಮಂ ಚುಂಬಿಪ ತುಂಬಿಗೀವಳಿವಳಾಗಳ್ಪಾಟಳೀನಾರಿ ಪಾ |
ದರಿಯೆಂದೊಳ್ಪೆಸರಿಟ್ಟನೀಕೆಗಜನೆಂದಂಗೋದ್ಭವಂ ಮುಚ್ಚರ್ವಂ || ೬೯

ವಚನ|| ಆನಂದನಾಂತರಾಳದಲ್ಲಿ—

ವೃ|| ತಿಳಿಗೊಳದಲ್ಲಿ ಸುತ್ತಿ ಸುಳಿದೆತ್ತಿ ಸರೋಜಪರಾಗಪೂಗಮಂ |
ಗಳಿಲನೆ ಪೊತ್ತು ಬರ್ಪೆಡೆಯೊಳುಯ್ಯಲನಾಡುವ ಗಾಡಿಕಾರ್ತಿಯ ||
ಕ್ಕಳ ಪೊರವಾಗ್ಗಳಪ್ಪಳಿಸೆ ತೊಪ್ಪನೆ ಬೀಳ್ದಲರೆಯ್ದೆ ನೊಂದು ಸಂ |
ಚಳಗತಿಯಿಂ ಮದಾಳಿನಿನದಚ್ಛಲದಿಂ ನರಳುತ್ತೆ ಬರ್ಪನಂ || ೭೦

ಗಿಳಿವಾ ತಿಂದುಪಚಾರಮಾಡಿ ತಳಿರ್ಗೈಯಿಂದಿತ್ತ ಬಾರೆಂದು ಕೋ |
ಕಿಳಚಂಚೂದಳಿತೋರುಕೋರಕ ರಸಸ್ನೇಹಂಗಳಿಂ ನೀವಿ ನಿ |
ಶ್ಚಳಭೃಂಗೀರವದಿಂದೆ ಮಂತ್ರಿಸಿ ರಸಾಲಂ ರಕ್ಷೆಗೈದಾತನಂ |
ಕೆಳೆಗೊಂಡಂ ತನಗಾತನಂದೆಸಗೆ ಲೇಸಂ ಮುಯ್ಯನೀವಂತೆವೋಲ್ || ೭೧

ಮಾವಿನೊಳೇರಿ ಮಲ್ಲಿಗೆಗೆ ಪಾರಿ ಮರಂದದೊಳಳ್ದು ಜಾರಿ ಕೆಂ |
ದಾವರೆಗೋಡಿ ಕೇಸರದೊಳಾಡಿ ಕರಂ ಮಧುವೀಂಟಿ ಪಾಡಿ ಮೆ ||
ಲ್ಲಾಗವರಮೆತ್ತಿ ಮಾಧವಿಯನೊತ್ತಿ ಮಹೋತ್ಸವದಿಂದೆ ಸುತ್ತಿ ಭೃಂ |
ಗಾವಳಿ ಧೂಳಿಯುಕ್ತಕುಸಮಾಳಿಯೊಳಾಂತುದು ಚಾರುಕೇಳಿಯಂ || ೭೨

ವಚನ|| ಮತ್ತಮನಂಗತೇಜದೊಡನೆ ಚಂಪಕನಿಕಾಯಂ ಪೆಂಪುವಡೆಯೆರತಿಯ ಮೊಗದೊಡನೆ ಸುರಯಿ ಸೊಂಪುವಡೆದಲರೆ ಜತಿಗಳ ಧೃತಿಯೊಡನೆ ಜಾತಿ ಬೀತಿರೆ ಮುನಿದಿನಿಯಳ್ಗೆ ಕಾಲ್ಗೆರಗಿ ಪಲ್ಗಿರಿವ ಕಾಮಿಜನವದನದೊಡನೆ ದಾಡಿಮಂಬಿರಿಯೆ ಪಥಿಕರ ಮುಖದೊಡನರನೇರಿಲ್ಪಣ್ತುಕಳ್ತಲಿಸೆ ಕೊಳದ ಜಳಂಗಳೊಡನೆ ತಿಳಿವೆಳ್ದಿಂಗಳುಜ್ಜ್ವಲಿಸೆ ವಿರಹಿಸಂತಾಪದೊಡನೆತಪನದ್ಯುತಿಕಡುವಿಸುಪುದಳೆದುವಿಜೃಂಭಿಸೆ ಬಂದಭುವನಜನಮನೋಜ್ಞಮಾದ ಮಧುಮಾಸದಲ್ಲಿ —

ವೃ|| ಅಳಿಮುಳಿಸೆಂಬಪಣ್ಣೊಲೆ ಕಳಲ್ದುದು ಸದ್ರತಿಯುತ್ಸವಾಂಕುರಂ |
ಮೊಳೆತುದು ರಾಗಮೆಂಬತಳಿರೊತ್ತಿದುದು ಸ್ಮರಕುಟ್ಮಳಾಳಿ ಸಂ ||
ಗಳಿಸಿದುದಲ್ಲಿ ಮೋಹಕುಸುಮಂ ಪೊಸತಾಗೆಲರ್ದತ್ತು ಸಂಗಸ |
ತ್ಫಳಮುಮರ್ದತ್ತು ಕಾದಲಬನಂಗಳೊಳಯ್ದೆ ಮನೋಜಮಾರುತಂ || ೭೩

ವಚನ|| ಅದಲ್ಲದೆಯುಮಲ್ಲಿ —

ವೃ|| ಕೊನರನೆ ಕೊಕ್ಕಿನಿಂ ಸೆಳೆದು ಖಂಡಿಸಿ ಸೋರ್ವ ರಸಪ್ರವಾಹಮಂ |
ಮನವೊಸೆದೀಂಟಿ ಗಂಟಲೊಳೆ ನುಣ್ದನಿ ಪೊಣ್ಮೆ ವಿಯೋಗಿವೀಥಿಜೀ ||
ವನಮುದು ಕಂಪಸಂಗೊಳೆ ಪುಗಿಲ್ಪುಗಿಲೆಂಬ ಪಿಕಸ್ವನಂಗಳಂ |
ಮನಸಿಜನೊಲ್ದು ಕೇಳ್ದು ಭುಜಮೊಯ್ದು ಬೆರಲ್ಮಿಡಿದಾವಸಂತನಂ || ೭೪

ಪೊಗಳ್ದಂದಂ ಚತುರಂಗಸೈನ್ಯಮನಿತಂ ನೀಂ ಕೂಡು ನೀಡಿತ್ತ ಮೂ |
ಜಗಮಂ ಮೋಹಿಪಪುಷ್ಪಚಾಪಸುಮನೋಬಾಣಂಗಳಂ ಕಯ್ಗೆಯೋ ||
ಗಿಗಣಂ ಮಾರ್ಮಲೆತಿರ್ಪ್ಪದೆತ್ತ ಬಿಡದತ್ತಲ್ಪೋಪಮೇಳೆಂದು ಸಂ |
ಪಗೆಜೋಡಂ ಮಿಗೆತೊಟ್ಟು ದಿಗ್ವಿಜಯ ಯಾತ್ರಾರಂಭಮಂ ತಾಳ್ದಿದಂ|| ೭೫

ವಚನ|| ಆಗಳ್ —

ವೃ|| ವಸಂತವನಪಾಲಕಂ ತಳಿರ ತೋರಣ ಶ್ರೇಣಿಯಿಂ |
ರಸಂಬಿಡಿದಪಣ್ಗಳಿಂದಲರ್ದ ಪುಷ್ಪಗುಚ್ಛಂಗಳಿಂ ||
ಮುಸುಂಕಿ ವನಮೆಲ್ಲಮಂ ಕರೆದು ಕಾಮನಂ ಪ್ರೇಮದಿಂ |
ಜಸಂಬಡೆದಬಾಣಮಂ ಪಿಡಿದು ಕಾಣ್ಕೆಯಂ ನೀಡಿದಂ || ೭೬

ವಚನ|| ಇಂತು ವಿಶ್ವಜನಮನಮಂ ಬನಮನೊಮ್ಮೆ ಸೊಂಪೇರಿಸುತ್ತುಂ ಬಂದಬಸಂತಮಾಸದೊಳೊಂದು ವಾಸರದುಷಃಕಾಲದೊಳುಮಾಕಾಂತನಂ ಪೂಜಿಸಿದನಂತರಂ—

ವೃ|| ರಮಣೀಸಸ್ಮೇರವಕ್ತ್ರಾಂಬುರುಹವಿಸರದೊಳ್ಕಾಮಿನೀದೋರ್ಲತಾವಿ|
ಭ್ರಮದೊಳ್ಕಾಂತಾಕಚಾಳಿಪ್ರಚಯದೊಳಬಲಾಂಘ್ರಿಪ್ರವಾಳೌಘದೊಳ್ಚಂ ||
ದ್ರಮುಖೀಸಂಗೀತಚಂಚತ್ಪಿಕಕಳರುತಿಯೊಳ್ಮಾನಿನೀ ಮಂದಹಾಸೋ |
ದ್ಗಮದೊಳ್ತಾನಿರ್ದ್ದ ನಾಸ್ಥಾನದೊಳತುಳವನಸ್ಪರ್ಧಿಯೊಳ್ಪ್ರಾವಸಂತಂ||೭೭

ಕುಂದಮಂದಹಾಸಮಂಜುಳಾಂಬುಜಪ್ರಭಾನನೇ |
ಚಂದನೇಂದುಗೌರಶಂಕರಾಂಕಪೀಠಿಕಾಶ್ರಿತೇ ||
ನಂದಿತೇಂದಿರಾದಿಶಕ್ತಿವಂದಿತಾಂಘ್ರಿಪಂಕಜೇ |
ಚಂದವೊಂದೆ ರಕ್ಷಿಸೆನ್ನನಿಂದು ಸರ್ವಮಂಗಳೇ || ೭೮

ಗದ್ಯ|| ಇದು ವಿನಮದಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್ ಹೇಮಂತ ವಸಂತಋತು ವರ್ಣನಂ ನವಮಾಶ್ವಾಸಂ

ಸಂಪೂರ್ಣಂ



## ದಶಮಾಶ್ವಾಸಂ

(ವನವಿಹಾರಜಲಕ್ರೀಡಾವರ್ಣನಂ)

---

ಕಂ|| ಶ್ರೀಗಿರಿರಾಜಸುತಾ ಸುಖ |
ಸಾಗರ ರಾಕಾಶಶಾಂಕ ನಕಳಂಕ ನಶೇ ||
ಮಾಗಮ ನುತ ನಭವಂ ಬಿಡ |
ದೀಗೆಮಗೆ ನಿಜಾಂಘ್ರಿಭಕ್ತಿಯಂ ಶಿವಲಿಂಗಂ || ೧

ವಚನ|| ಅಂತು ಮಾಯುವರಾಜಂ ರಾಜಸುತ್ತಿಪ್ಪಿನ ಮೊರ್ವ್ವಂ ದ್ವಾರಪಾಲನಿವಾರಿತಂ ವೇತ್ರಧರ ನಿವೇಧಿತನಾ ಮಹಾಸ್ಥಾನಮಂ ಪೊಕ್ಕು ಮೆಯ್ಯಿಕ್ಕಿ ಕಯ್ಯಂ ಮುಗಿದು ನಿಂದು—

ವೃ|| ವನಪಾಲಂ ಕಾಣ್ಕೆಗೈದಂ ವಿಚಕಿಲದಲರಂ ಪಚ್ಚೆಯಂ ಬಾಳೆವಣ್ಣೊ|
ಳ್ಪೊನೆಯುಂದಾಳಿಂಬವಣ್ಣಂಸುರಯಿಯನುರುಚಾಂಪೇಯಮಂಚೈತ್ರದೂತೀ||
ಘನಗುಚ್ಛವ್ರಾತಮಂ ಪಾಟಳಿಯನೆಸೆವಶೋಕಪ್ರಸೂನಾಳಿಯಂ ಮಾಂ |
ಗೊನರಂ ಮಾಧೂಫಳಶ್ರೇಣಿಯನರೆವಿರಿದಂಭೋಜಮಂ ಕೂರ್ಮೆಯಿಂದಂ||

ವಚನ|| ಅಂತಿತ್ತು ಸಂತಸಂ ಮಿಗೆ—

ವೃ|| ಮುಗುಳ ತೊಡಂಬೆ ಮಾಧವಿಗೆ ಮಾಮರದೊಳ್ಕಳಿಕಾಳಿ ಚೆಲ್ವಮ |
ಲ್ಲಿಗೆಗೆ ಪೊದಳ್ದಪೂಗುಡಿ ಪಯೋಜಿನಿಗುಳ್ಳರಲಿಂಪುವೆತ್ತಸಂ ||
ಪಗೆಗಲಜೊರ್ಂಪಮುದ್ಗಮದಮಂಜರಿ ಪಾಟಳಿಗಾಗೆ ಬಂದನಿಂ |
ದಗಣಿತಕೋಕಿಳಾಳಿಕುಳಸಂಮದಕಾರಿ ಮನೋಜ್ಞಮಾಧವಂ || ೩

ಎಳದಳಿರಿಂದ್ರಗೋಪಮಳಿಮಾಲಿಕೆ ನೀಲದಮಾಲೆ ಮಲ್ಲಿಕಾ |
ಸುಳಳಿತಕುಟ್ಮಳಸ್ತಬಕಮೊಪ್ಪವಮುತ್ತಿನಕುಚ್ಚು ಕೀರಮುಂ ||
ಡಳಿಯಮುಖಂ ಪ್ರವಾಳಮದಿಮುರ್ತ್ತಿಯಪೂಗುಡಿ ಚಾಮರಂ ಸಮು |
ಜ್ಜ್ವಳಿಸಿರೆ ಚೈತ್ರಪಾರ್ಥಿಯವಹಿತ್ರಮಿದೆಂದೆನಿಸಿತ್ತು ನಂದನಂ || ೪

ಕಂ|| ಆನಂದನಮಂ ವಿಜಿತ ಮ |
ಹಾನಂದನಮಂ ನಿಜಾಂಕರಾಳಾಶ್ರಿತಲೋ |
ಕಾನಂದನಮಂ ತೋಷಿತ |
ಮಾನಂದನಮಂ ನಿರೀಕ್ಷಿಸಲ್ಕಡೆ ನೃಪತೀ || ೫

ವ|| ಎಂದು ಬಿನ್ನಪಂಗೆಯ್ದ ತೋಟಪಾಳಂಗೆ ಪಸಾಯನಮನಿತ್ತು ಪಟ್ಟವಣಿಯಿಂದೆ ಳೋಲಗಮಂ ಪಱೆಯಿಸಿ ವನಕೇಳೀಲೋಲಮಾನಸಂ ಮಾನವೇಶ್ವರಂ ಮಹೋತ್ಸವಂಬೆರಸಂತಃಪುರಕ್ಕೆೞ್ತಂದು ಸರ್ವಮಂಗಳಾಮಹಾದೇವಿಯಿಪ್ಪ ರ್ಮಣಿಮಯ ಮಂದಿರದೊಳಗನೆ ಪೊಕ್ಕು ನಿರೀಕ್ಷಿಪಾಗಳ್—

ವೃ|| ತೊಳಗುವ ಭೂಷಣಪ್ರಭೆ ಮುಖೇಂದುಲಸದ್ದ್ಯುತಿಕಾಯಕಾಂತಿ ಕಂ|
ಗೊಳಿಸೆ ಕರಾಗ್ರಕಂಕಣಝುಣತ್ಕೃತಿ ಪೊಣ್ಮೆ ಮೃಗಾಕ್ಷಿ ಯೊರ್ವ್ವಳು ||
ಜ್ಜ್ವಳತರ ಮಾದಪೊಂದೆರೆಯ ನೋಸರಿಸುತ್ತಿರೆ ಕಂಡನಿಂದು ಮಂ |
ಡಳಮುಖಿಯಂ ಮನೋರಮೆಯ ನಾಸ್ವಪರೂಪಿನ ಮಿಾನಕೇತನಂ || ೬

ವ|| ಅಪ್ರಸ್ತಾವದೊಳ್—

ಕಂ|| ಉಲಿಯೆ ಕಲಕಾಂಚಿ ಮುಡಿಯಿಂ |
ದಲರುಗೆ ಬಡನಡು ಬಳುಂಕೆ ಪೊಡರೆ ನಿತಂಬಂ ||
ಸೆಲೆಮೊಲೆಗಳಲುಗೆ ಬಿಡದೇ |
ಳ್ವಲತಾಂಗಿಯಕೈಯನೊಯ್ಯನರಸಂ ಪಿಡಿದಂ || ೭

ವಚನ|| ಅಂತು ಪಿಡಿದೇಳಲೀಯದೆ ಮಣಿಮಂಚದೊಳ ವಳ್ಳಡಿಗಾಡಿಯಿಂ ಕುಳ್ಳಿರ್ದ್ದ—

ಕಂ|| ಕುರುಳಂ ಕೂರುಗುರಿಂ ನೇ |
ವರಿಸುತೆ ಮಣಿಹಾರಮಂ ಕರಾಬ್ಜದೆ ತಿರುಪು ||
ತ್ತ್ರಸಿಯ ಮೊಗದಾವರೆಯಂ |
ನರಪತಿ ನಡೆನೋಡಿ ನೇಹದಿಂ ದಿಂತೆಂದಂ || ೮

ವಿನುತ ಮಧುಲಕ್ಷ್ಮಿ ನಿಜನಂ |
ದನಾವಲೋಕನ ಮನೆಳಸಿ ಮಾಧವಯುತೆ ಭೋಂ ||
ಕನೆ ಬಂದು ನಿಂದು ಚಂದಾ್ರ |
ನನೆ ನಿನ್ನಂ ಕರೆದಪಳ್ಪಿಕಸ್ವನಮಿಷದಿಂ || ೯

ವಚನ|| ಅದುಕಾರಣದಿಂ—

ವೃ|| ಕಳರವಮಂ ಪಿಕಾಂಗನೆಗೆ ಮಂಜುಮೃದೂಕ್ತಿಗಳಂ ಪೊದಳ್ದಪೆ |
ಣ್ಗಿಳಿಗೆ ನವೀನಯಾನಮನನೂನಮರಾಳಿಗೆ ಶಿಕ್ಷೆಗೈಯಲೋ ||
ಪಳೆ ನಡೆ ನಂದನಕ್ಕೆ ವನಲಕ್ಷ್ಮಿಗೆ ಕೌತುಕಮಪ್ಪಿನಂ ನಿರಾ |
ಕುಳಮೆನಗುತ್ಸವಂ ಬಳೆವಿನಂ ಮೃಗಶಾಬವಿಲೋಲಲೋಚನೇ || ೧೦

ವಚನ|| ಎನೆ ನಿಜವಲ್ಲಭೆಯುತಿಪ್ರಸನ್ನ ಮಧುರತರಕಟಾಕ್ಷ ಪಾತದಿನುಚಿತವಚನನಿಚಯದಿನೊಡಂಬಟ್ಟುದಂ ಪ್ರಕಟಿಸಲೊಡನವಳೊಡಗೂಡಿ ಗಾಡಿಯಿಂದೆಳ್ದನಂತ ಕಾಂತಾಜನಂಬೆರಸು ಪೊರಮಟ್ಟು ಚೈತ್ರೋದ್ಯಾನಕೇಳೀಪ್ರಸ್ಥಾನಭೇರಿಯಂ ಪೊಯ್ಸಲೊಡಂ—

ಕಂ|| ಘನರಾಜಹಂಸಗಮನ |
ಕ್ಕನುಕೂಲಮಿದೆಂದ್ದು ಗಗನದೊಡನುಸಿರ್ವವೊಲಾ ||
ಘನರಾಜಹಂಸ ಗಮನಮ |
ನೆನಸುಂ ಪಬ್ಬಿರ್ದುದು ಪಟಹಪಟುರವ ಪಟಲಂ || ೧೧

ವಚನ|| ಆಗಳ್ಪಣ್ಣಿಬಂದ ಸಿಂಧುರೇಂದ್ರಮ ನಿಂದ್ರಾಣಿವೆರಸು ಕಾಮುರ್ಗಿಲ ನಾರೋಹಿಪ ಮಹೇಂದ್ರನಂತೆ ನರೇಂದ್ರಚಂದ್ರಂ ನಿಜಮನೋಹರಿ ಯೊಡನಾರೋಹಿಸಿ ರಾಜವೀಥಿಯೊಳ್ಬಪ್ಪಾಗಳ್—

ವೃ|| ಇದು ಮಧುಮಿತ್ರ ಮತ್ತಗಜರಾಜಿಯೊ ನೋಡಿದು ಪುಷ್ಪಚಾಪಪಾ|
ಖ್ಯದ ಸುರವಲ್ಲರೀತತಿಯೊ ಭಾವಿಪೊಡಿಂತಿದು ಕಾಮತತ್ತ್ವಸಾ ||
ರದ ನವಕೋಶರಾಶಿಯೊ ವಿಚಾರಿಪೊಡಿಂತಿದು ದರ್ಪಕಪ್ರತಾ |
ಪದ ಪರಿಜೊಂದು ಸಂದಣಿಯೊ ಪೇಳೆನೆ ಬಂದುದು ಭಾಮಿನೀಜನಂ|| ೧೨

ಕಂ|| ಪಿಡಿಗಳನೇರಿ ಕೆಲಂಬ |
ರ್ಮ್ಮಡದಿಯುರರೆಬಸ್ಸೆರ್ಖಾಸನಂಗಳೊಳೆ ಕೆಲರ್ ||
ಪಿಡಿಗುದುರೆ ಗಳೊಳ್ಪೆರವ |
ರ್ಪೊಡವಿಯೊ ಳಡಿಯಿಟ್ಟು ತಳರ್ದರ್*ರತಿಸಂಭ್ರಮದಿಂ || ೧೩

ವೃ|| ಪರಿಕಿಪುದೀಗಳೀ ಗಜದ ಕುಂಭದಚೆಲ್ವುಮನೆನ್ನದೊಂದು ಭಾ |
ಸುರತೆಯನೆಂದು ತದ್ಗುರುಪಯೋಧರ ಮೆಳ್ಗರಿಪಂತೆ ಬೆನ್ನನೊ ||
ತ್ತೆ ರುಚಿರ ತನ್ಮುಖೇಂದುವ ನಭೀಕ್ಷಿಸಲೈದಿದ ಚಂದ್ರಬಿಂಬದಂ |
ತಿರೆ ಧವಳಾತಪತ್ರ ಮಿಭದಗ್ರದೆ ಬಂದನಮಂ ವಧೂಯುತಂ || ೧೪

ವಚನ|| ಅಂತನಂತಸಂಭ್ರಮ ಮಿಂಬುವಡೆಯೆ ಕುಂಭಿನೀ ಕಾಂತ ನಾವ ನೋಪಕಂಠ ಮಂ ಮುಟ್ಟವರೆತೊಟ್ಟನೆ ಕಟ್ಟದಿರೊಳ್—

ವೃ|| ಅಳಿಕುಳ ಪಕ್ಷತಿಕ್ಷಪಿತ ಪದ್ಮಪರಾಗ ರಜೋಂಕ ಮುದ್ಧಕೋ |
ಕಿಳ ಕಳನಾದ ಬೃಂಹಿತ ಮಮಂದ ಮರಂದ ಮದಾಂಬು ತತ್ಸರ ||
ಸ್ಸ್ಥಳ ಜಳಕೇಳಿಗೆಯ್ದು ಪೊರಮಟ್ಟುದಿದೆಂಬುದ ನಿಂಬುಕೈದು ಕೋ |
ಮಳ ಮಳಯಾನಿಳಾಂಗಜಗಜಂ ಪರಿದತ್ತಿದಿರೋಳ್ಮಹೀಶನಾ || ೧೫

ವಚನ|| ಅದಂ ಮನದೆಗೊಂಡು ಮದಗಜಸ್ಕಂಧದಿ ನಿಳಿತಂದು ಫಳಕುಸುಮ ಪರಿರಚಿತ ಚಾರುತರ ತೋರಣಾನ್ವಿತ ಮಾದುದ್ಯಾನ ಪ್ರತೋಳಿಕಾ ದ್ವಾರಮಂ ಪೊಕ್ಕು ಸವ್ಯಪಾರ್ಶ್ವಗ ಸರ್ವಮಂಗಳಾಪಾಂಗ ಸಂಗತನುಂ ವನವಿಹರಣ ಸಮುಚಿತ ಪರಿಮಿತ ಪರಿಜನಾವೃತನುಂ ವನಪಾಲ ಪುರಃಪ್ರದರ್ಶಿತಾನಂತತರುಲತಾ ಸಂದೋಹ ಸಂದರ್ಶನಾನಂದ ಕಂದಳಿತ ಹೃದಯಾರವಿಂದನುಂ ನಿಜವದನ ತನುಸಹಜ ಸೌರಭ್ಯಸಮಾಕೃಷ್ಟಮದವದಳಿ ಪರಿಸರಣ ಕರಣ ಚಣ ಚರಕರ ಪರಿವೀಜ್ಯಮಾನ ಧವಳ ಚಾಮರ ಜನಿತ ಪವನ ಪರಿಪತಿತಾನೇಕ ಸರಜಃ ಕುಸುಮರಸ ವಿಸರ ಕರ್ದಮಿತಧರಣೀ ಭಾಗನುಂ ನರ್ಮಸಚಿವ ಪ್ರಸಾರಿತ ಕರಪಲ್ಲವನ್ಯಸ್ತಹಸ್ತ ಕಮಳನುಂ ಲೀಲಾವಲೋಕನ ಸಾಂದ್ರ ಚಂದ್ರಿಕಾ ನಿರಸ್ತನಿಬಿಡತರ ತರುಪಲ್ಲವ ಪ್ರಕರ ಯವನಿಕಾಂತರ್ಗತ ತತ ತಮಸ್ತೋಮನುಮಾಗಿ ನಡೆತಪ್ಪಾಗಳ್—

ಕಂ|| ನಗೆವೊಗ ಪುಲರ್ದಂ*ಬುಜಮಂ |
ನಗೆ ನಗೆಗೆಣ್ಗೆಗೆ ನವೀನ ದಳಿತೋತ್ಪಳಮಂ ||
ನಗೆ ಬೆಳ್ದಿಂಗಳಸಿರಿಯಂ |
ನಗೆ ನಡೆತಂದಳ್ನರೇಂದ್ರವಧು ನಂದನದೊಳ್ || ೧೬

ವಚನ|| ಮತ್ತಂ—

ವೃ|| ಮಣಿಯನೆ ಕಾತಕಲ್ಪಲತೆ ಸಿಂಜಿಸಿಯಂ ತೆಗೆದಿಟ್ಟ ಪುಷ್ಪಮಾ |
ರ್ಗಣನ ಧನುಶ್ಶಲಾಕೆ ಮುಗುಳೇರಿದ ಮಲ್ಲಿಗೆ ಸುತ್ತುತುಂ ನಭೋ ||
ಮಣಿರುಚಿಯಂ ತೆರಂಬೊಳೆವ ಪದ್ಮಿನಿ ತಾನೆಸೆಸುತ್ತೆ ತಾಳ್ದ ಸ ||
ನ್ಮಣಿ ಪೀಠಿಲಚ್ಚಮುತ್ತು ಕನಕಾಂಬರದಿಂ ಕಮಳಾಕ್ಷಿ ತೋರಿದಳ್ || ೧೭

ವಚನ|| ಇಂತೊಪ್ಪಿ ಬಪ್ಪ ನಿಜ ವಲ್ಲಭೆವೆರಸು ಬರೆವರೆ—

ವೃ|| ತಳಿರ್ಗಳ ನಾಂತು ನಿಂದಸುಗೆ ಕುಟ್ಮಳಪಙ್ಕ್ತಿ ಪೊದಳ್ದ ಚಂಪಕಂ |
ವಿಳಸಿತಮಾದ ಪೂಗುಡಿಗಳಿಂದೆಡೆ ಗೊಂಡದಿರ್ಗಂತಿ ಕಾಯ್ಗಳಂ ||
ತಳೆದು ನಿಲುಂಬಿನಿಂದ ಪೊಸತೆಂಗು ಫಲಂಗಳ ಬಿಣ್ಪನಾಳ್ದು ಸಾ |
ಗಳಿಸಿದ ಮಾವು ತೀವಿದ ಬನಂ ಬಗೆಗೊಂಡಿರೆ ಕಂಡನಾ ನೃಪಂ || ೧೮

ಸುರಯಿಯ ಸೊಕ್ಕುಗಂಪು ಪೊಸಸಂಪಗೆಯೊಳ್ಪಿಸುಗಂಪು ತೋರ್ಪ ಪಾ|
ದರಿಗಳ ತಣ್ಪುಗಂಪು ಸರಸೀರುಹದೊಳ್ಪಿನಿಗಂಪು ಮಲ್ಲಿಕೋ ||
ತ್ಕರದಬೆಡಂಗುಗಂಪು ಮಧುದೂತಿಯ ತಳ್ತಿನಿಗಂಪು ಚೂತವ |
ಲ್ಲರಿಯಲರಚ್ಚಗಂಪು ಬಗೆಗೊಂಡುದು ತದ್ವನದೊಳ್ನರೇಂದ್ರನಾ || ೧೯

ಕಂ|| ಎಲರಲೆಯೆ ನೆಗೆದು ಬಾಗೊಲೆ |
ವಲಗೊಂಚಲ್ಧವಳಚಾಮರಕ್ಕೆಣೆವರೆ ಸ ||
ಲ್ಲಲಿತಮಧುದೂತಿ ತಾನಿದು |
ಗೆಲೆವಂದುದು ಚೈತ್ರಚಾಮರ ಗ್ರಾಹಿಣಿಯಂ || ೨೦

ವಚನ|| ಎಂದರಸಿಯು ಕೆಳದಿಯಪ್ಪ ಕಳಾರಮೆ ನುಡಿಯೆ ನೋಡುತ್ತುಂ ಪಡೆಯೆ ಸೌಂದರ್ಯಶಾರದೆಯೆಂಬಳಿಂತೆಂದಳ್—

ಕಂ|| ಮಲ್ಲಿಗೆಯ ಮುಗುಳಕುಲಮಿಡಿ |
ದೆಲ್ಲೆಡೆಯೊಳ್ತೋರೆ ಮಿಳಿರ್ದು ಬಳಸಿರೆ ವಿಳಸ ||
ತ್ಪಲ್ಲವತತಿ ಮೆರೆವುದು ರತಿ |
ವಲ್ಲಭಮುಕ್ತಾತಪತ್ರಮೆನೆ ತರುಣಾಮ್ರಂ || ೨೧

ವಚನ|| ಮತ್ತಂ—

ಕಂ|| ಕಾಮುನ ಸಾಮಜಮಿದು ಮಧು |
ಭೂಮೀಶನ ಕೋಶಮತುಳವಿಚಕಿಲಲತಿಕಾ ||
ಕಾಮಿನಿಯರಸಂ ಮಾಮರ |
ನೀಮರಮನ್ಯಕ್ಷಿತೀಜಮೇಂ ಮಾಮರಸೇ || ೨೨

ವಚನ|| ಅವಳ ಜಾಣ್ಮಾತುಗೇಳ್ದು ಚೆನ್ನಾದುದೆಂದು ಮೆಚ್ಚುತ್ತುಂ ಬರ್ಪಲ್ಲಿ—

ವೃ॥ಪ್ರಿಯದಿಂದಪ್ಪಿರ್ದ್ದ ಮಲ್ಲೀವಧುವತನುಸುಖಕ್ಕೊಲ್ದು ಮೆಯ್ಯಿತ್ತ ಚೂತ।
ಪ್ರಿಯನಾಗಳ್ಕೋರಕಂ ಪೊಂಪುಳಿಯೆನಿಸೆ ಕರಂ ಕಂಪಸಂ ಪೊರ್ಮೆ ಘರ್ಮೋ॥
ದಯತೋಯಂಬೋಲ್ಮರಂದಂ ಸುರಿಯೆ ತವೆ ತದೀಯಾಳಿಮಾಲಾಳಕಶ್ರೀ ।
ಣಿಯನಾದಂ ತಿದ್ದಿರ್ದ್ದವಂತೊಪ್ಪಿದುದಲೆವತಳಿತ್ರ್ತಳ್ತಿರಲ್ಪಾಣಿಯಿಂದಂ ॥ ೨೩

ವಚನ॥ ಅದಂ ನಿಂದು ನೋಳ್ಪರಸಂಗೆ ನರ್ಮಸಚಿವನಿಂತೆಂದಂ—

ವೃ॥ ಅಳಿನೀಲಂ ಮಿಡಿ ಪಚ್ಚೆ ಕೀರಮುಖಮುದ್ಯತ್ಪದ್ಮರಾಗಂ ಕೊಸ।
ರ್ವಿಳಸದ್ವಿದ್ರುಮಮು ಲ್ಲಿತಳ್ತೆಸೆವಮಲ್ಲೀಕುಟ್ಮಳಂಮುತ್ತು ಚೆಂ॥
ದಳಿರಂದಂಬಡೆದಿರ್ದ್ದ ಪಟ್ಟೆಯೆನೆ ಚೈತ್ರಂ ಪಂಚರತ್ನಂಗಳಿಂ।
ಕೆಳೆಯಂ ಪಂಚಶರಂಗೆ ನಿರ್ಮಿಸಿದ ಗೂಡಾರಂಬೊಲೀ ಮಾಮರಂ॥ ೨೪

ವಚನ॥ ಮೆರೆದಪುದೆಂಬ ನುಡಿಯನವ ಧರಿಸಿನಡೆವಾಗಳ್ಮತ್ತೊಂದುಕುಸುಮ ಮಿಳಿತರ ಸಾಲ ರಸಾರುಹದ ಕೆಳಗೆ—

ವೃ॥ ಅರಲಪರಾಗಮೆಂಬ ಪೊಸಬೇಳ್ವೆಯ ಬೂದಿಯನಿಟ್ಟುಮಲ್ಲಿಕಾ।
ತರುಣಿಯ ಭೃಂಗನೀಲಮಣಿಮಾಲೆಯನೊಯ್ವೆಲರೆಂಬ ಚೋರನಂ॥
ಪರಭೃತಸಂದು ಕಂಡು ಮಿಗೆ ಕೂಗೆ ಭೆಯಂಬಡೆದೇಳ್ದು ಕಣ್ಣನೀ।
ರ್ಸುರಿವವೊಲಾಕೆ ತದ್ವಿಕಚಪುಷ್ಪ ಗಳನ್ಮಧುಬಿಂದು ತೋರುಗುಂ॥ ೨೫

ವಚನ॥ ಅದಲ್ಲದೆಯುಮುದರ ಕೆಲದಲ್ಲಿ—

ಕಂ॥ ತಳಿಗೊರ್*ಂಬಿಂ ಮೇಗಣ್ಗೊಗೆ।
ವಳಿಮಾಲೆ ಮನೋಜ್ಞ ಮಾದುದಾಮ್ರಂ ಮಲ್ಲೀ॥
ಲಳನೆಯೊಡವೆರೆ ದೆಲರ ನುರೆ।
ಮುಳಿದಿರಿಯಲ್ಜಡಿದ ಕೈದುವೆನೆ ಕರತಳದಿಂ॥ ೨೬

ವಚನ॥ ಅದಂ ನಿರೀಕ್ಷಿಪ ನೃಪಂಗೆ ದೇವಿ ನುಡಿದಪಳೆಂದು ಕಳಾರಮೆಯುಂ ತೆಂದಳ್—

ಕಂ॥ ಎಲರಲುಗಿದೊಡಲವರ್*ಡಿ ತ।
ನ್ನಲರ್ಗಣ್ಗೊಳ್ಗೂಸೆಮಲ್ಲಿಕಾವಧು ಬಂದುಂ॥
ಬಲಿಯೂದುವಂತೆಸೆಯೆಬಾ।
ಷ್ಪಲವಂ ಸುರಿವಂತೆ ಮಧುಕಣಂ ಬಿಡೆ ಮೆರೆದಳ್॥ ೨೭

ವಚನ॥ ಎಂಬುದುಮದಕ್ಕೆ ಮಚ್ಚುತಿಪ್ಪಿರ್ನಂ ಪೆರೆತೊಂದು ಮಲ್ಲಿಕಾ ವಲ್ಲಿಯಂ ತೋರಿತಾನುಘಿಂತೆಂದಳ್—

ವೃ|| ಅಳಿವಿಂಡಿಂಗಲರ್ವಂಡನಲ್ಲಿ ಗಿಳಿಗಳ್ಗಿಂಬಾದಪಣ್ಣಂ ಪಿಕಾ |
ವಳಿಗಾಕೋರಕಮಂ ಪ್ರಸೂನವಿಳಸತ್ಸೌರಭ್ಯಮಂ ಮಾರುತಂ ||
ಗೆಳೆಮಾಡಿತ್ತಿದಿದಕ್ಕೆ ಮಿಕ್ಕಮರನೊಂದುಂ ಸಾಟಿಯಲ್ಲೆಂದು ಮಂ |
ಜುಳಮಲ್ಲೀವಧು ಬಣ್ಣಿಪಳ್ಪ್ರಗತಭೃಂಗೀನಿಸ್ವನ ವ್ಯಾಜದಿಂ || ೨೮

ವಚನ|| ಎನೆ ಚೆನ್ನಾದುದೆಂದು ಮುಂದಣ್ಗೆ ನಡೆತಂದೊಂದು ರಸಾಲಸರಳ ಶಾಖಾಗ್ರದೊಳ್ತನಿವಣ್ಣಂ ಮನದನ್ನ ಳೊಡನೆ ಸವಿವರಗಿಳಿಯಂ ನಿಜಾಪಾಂಗ ಪಲ್ಲವದಿಂ ನಲ್ಲಳ್ಗೆ ತೋರಿ—

ವೃ|| ಎಳದಳಿರಂ ಕರ್ದುಂಕಿ ಕಸರೊಂದಿದತದ್ರಸಮಿಾಂಟಿದತ್ತು ಕೋ |
ಕಿಳನಳಿ ಧೂಳಿಯೊಳ್ಪೆರೆದ ಪುಷ್ಪರಸಂಗಳ ನುಂಡುದಿಲ್ಲಿ ಕೇಳ್ ||
ಗಿಳಿಯವೊಲೇ ನಿವೆಲ್ಲವಿನಿ ವಣ್ಣಿನಿದಂ ಸವಿದಪ್ಪುವೇ ಯೆನು |
ತ್ತೆಳಸಿ ಮನೋಜನಿಟ್ಟನಿದು ಪಂಡಿತಪಕ್ಕಿಯೆನುತ್ತೆ ನಾಮಮಂ || ೨೯

ವಚನ|| ಎಂದದರ ಪರಿಸರದೊಳೊಪ್ಪುವಡೆದಲರ್ದ ಚಂಪಕಮಂ ತೋರಿ—

ವೃ|| ಪಾರುವ ಪಾಯ್ವ ಸಂದಣಿಪ ಸುತ್ತುವ ಪತ್ತುವ ಭೋಂಕನೈದುವಿಂ |
ಪೇರಿದ ಪೂದೊಡಂಬೆಯನೆ ನೋಡುವ ಪಾಡುವ ಜೋಲ್ವಬೀಳ್ವಬಾ ||
ಯಾರುವ ಮತ್ತೆಮತ್ತೆ ಮಧುವೀಂಟುವ ಸೊರ್ಕುವಳಿಪ್ರತಾನಮಂ |
ಜಾರಿಸಿದತ್ತು ಸಂಪಗೆ ಮಧುಪ್ರಿಯರುಜ್ಜ್ವಲ ಸೇವ್ಯರಕ್ಕುಮೇ || ೩೦

ವಚನ|| ಎಂದು ಚತುರಜನಚಕ್ರೇಶ್ವರಂ ನುಡಿದು ನಡೆವಾಗಳದರ ಮುಗುಳಂ ಬಗೆದು ಭಾವಿಸಿ ನಿಜಸಖಿಗೆ ದೇವಿಯಿಂತೆಂದಳ್—

ಕಂ|| ಅಳಿಸೀಶಿಂಜಿನಿಗಿದು ತಾ |
ನಳವಡದೆಂದುಳಿದು ಕಳೆದು ಚಂಪಕದಲರಂ ||
ಕೆಳದಿ ಮನೋಜಂ ತಳ್ವದೆ |
ತಳೆದಂ ಮಿಕ್ಕಲರ ತಳಿರ ಶರಸಮುದಯಮಂ || ೩೧

ವಚನ|| ಎಂಬನುಡಿಯಂ ಕೇಳ್ದು ಮಚ್ಚರ್ತಲ್ಲಿಂ ತಳರ್ದು ಮಧುಲಕ್ಷ್ಮೀ ಮಧುರತರವಿಳಾಸಮಂ ಬಗೆಗೊಂಡು ಪೊಗಳುತ್ತುಂ ಬರೆವರೆ ವನಮಧ್ಯದತೆರಂಬೊಳೆವ ಕೆರಪಿನೊಳಳವಟ್ಟ ಕೊಳವೇಗ್ಗಳ ಕೇಗ್ಗಳೊಳಗೆ ತಮಾಲದಳದಳಿರಂ ಕೊರೆದು ಚಿತ್ರಪತ್ರಮಪ್ಪಂತೆ ಪತ್ತಿಸಿನಟ್ಟ ಪೊಂಬಾಳೆಯಬಾಳ್ಗಂಬಂಗಳಿಂ ಸೋಗೆವೆರಸಿದಪುಂಡ್ರೇಕ್ಷುದಂಡಂಗಳನಮರ್ಚಿಬಾಳವೇಗ್ಗಳಿಂ ಬಿಗಿದಡೆಯೊಳ್ಸಂಪಗೆಯ ಬಿರಿಮುಗುಳ್ಗಳಂ ತೆತ್ತಿಸಿ ನಿಬಿಡಮೆನಿಸಿ ನಿಮಿರ್ಚಿದಪೊಂಗೇದಗೆಯ ನುಣ್ಗರಿಯಬಲ್ಲಂತೆಗಳಿಂ ಚಂದನರಸಂಗಳಿಂ ತೊಯ್ದುಳಿಯದವನದಮೇಲ್ಪೊದಕೆಯಿಂದೊಳಗೆ ಬಾಳೆಲೆಯ ಪಲಗೆಗಳ ಪರಿಸರದೊಳೊಂದಿ ಸಂದುವಿಡದಂತೆ ತರಂಗೊಳಿಸಿರಚಿಸಿದ ಕರ್ಣಿಕಾರದ ಪಲಗೆ ಗಟ್ಟಿನೆಡೆಯೆಡೆಯೊಳರೆಯೆಸಳ್ಗಳಂ ನೆಗಪಿ ಕೀಲಿಸಿದಪೊಂದಾವರೆಯ ಮೊಗ್ಗೆಗಳನು

ಗೊಬ್ಬಗರಿಗಳಿಂ ಮಲ್ಲಿಗೆಮುಗುಳಸೂಸಕಂಗಳಂತೊಡರ್ಚಿ ನಿಮಿರ್ಚಿದ ಚೂತಪಲ್ಲವದ ಚುಂಚುಲೋನೆಯಿಂ ಸರಸಪರಿಮಳಕೆ ಸಾಳ್ಗೊಂಡೆರಗಲವ್ವಳಿಪಳಿ ಪ್ರತಾನಮನೊಳಗಣ್ಗೆ ಪೋಗಲೀಯದೆ ಸೋದುಕಳಿವಳಗೌಂಗಿನ ಬಾಗಿಲ್ವಾಡದ ಕಾಪಿನ ಚಾಂಪೇಯನಿರ್ಮಿತಮಾದ ಜಂತ್ರದಪುತ್ತಳಿಗಳಿಂ ಕುಂಕುಮ ರಸದೊಳಳ್ದಿದ ಕುಮುದ ಮುಕುಳದ ಮೊಳೆಗಳಂ ತೊಡರ್ಚಿ ಮಾಡಿದ ಮೃಣಾಳನಾಳ ದೊಳ್ಗದಂಗಳಿಂ ರಂಜಿಸಿ ಕಂಪಿನ ಕರಂಡಕಮುಂ ತಣ್ಪಿನ ತವರ್ಮನೆಯುಂ ಸಿಂಗರದ ಲೀಲಾಭವನಮು ಮನಿಸಿರ್ದ್ದವಸಂತಮಂಟಪದ ಮಧ್ಯದ ಮಕರಂದರಸದ ತುಂತುರಂ ತೂರುವ ಪಜ್ಜಳಿಪಗೊಜ್ಜಗೆಯರಲ ಜಂತ್ರದ ಬೆಳ್ಮುಗಿಲ ಕೆಳಗಳವಡಿಸಿದ ಸುರಯಿಯರಲ ಪರಾಗದ ಪೊಂಜಗೆಲಿಯ ಮೇಲಣಸುಗೆದಳಿರಲವ್ವಾರ್ಸಿನೊಳರಸಿವೆರಸಿ ಕುಳ್ಳಿರ್ದ್ದ ನರೇಂದ್ರಂ ಚಂದ್ರಧರಪೂಜಗೆ ಮನಂದಂದು ಸುಂದರೀಜನಮುಂ ಬನದೊಳ್ಪೂಗೊಯ್ಯಲೆಳಸಿ ಗಾನವಿದ್ಯಾಧರಿ ಯೆಂಬ ವೀಣಾಪಾಣಿಯ ನಗೆಮೊಗಮಂ ನಡೆನೋಡಿ ದಾಗಳ್—

ವೃ|| ಗಮಕಂ ತಳ್ತಿರೆ ಠಾಯೆ ಮಿಂಚಿರೆ ಚಮತ್ಕಾರಂಕರಂ **ಪೊಣ್ಮೆ** ದೇ|
ಸೆ ಮನಂಬೊಕ್ಕಿರೆ ಮೂರ್ಛನಾಪ್ರಸರಮುಂ ಚೆಲ್ವಾಗೆ ಪಂಚ ಪ್ರಪಂ ||
ಚಮದಿಂ ಬಾಗಿರೆ ತೇನತೇನವೊದವಲ್ತಾನಾಲಯಂ ಮುಂಚೆ ಸಂ |
ಭ್ರಮದಿಂ ಬಾಜಿಸಿದ ಳ್ಬಜಾವಣೆಯಿನಂದಂಬೆತ್ತವಳ್ವೀಣೆಯಂ || ೩೨

ವಚನ|| ಅದಂ ಕೇಳ್ದು ಮೆಚ್ಚುತ್ತಿರ್ದ್ದ ನಿತ್ತಳ್ವಿಳಾಸಿನೀಜನಂ ಪರಿತಂದು ಪೂಗೊಯ್ಯಲೆಂದು ಮನಂದಂದು ಸಂದಣಿಸಿ ನಿಂದು—

ವೃ|| ನಡು ನಸುಬಳ್ಕೆ ನೇತ್ರರುಚಿ ನಿಳ್ಕೆಮುಖೇಂದು ಮರೀಚಿತುಳ್ಕೆ **ಪೊಂ** |
ಗೊಡಮೊಲೆ **ಪೊಣ್ಮೆ** ಘರ್ಮಜಳಮುಣ್ಮೆ ಮನೋಭವನಣ್ಮೆ ಬಟ್ಟಬ ||
ಲ್ಮುಡಿ ಕಡುಜಾರೆ ಮಂದಗತಿಮೀರೆ ಮದಾಳಿಗಳೊಂದಿ ಪಾರೆ ಮೇ |
ಣ್ಜಡಿಯೆ ನಿತಂಬ ಮೈದಿದುದಳುಂಬ ಮುದಾತ್ತ ವಧೂಕದಂಬಕಂ || ೩೩

ವಚನ|| ಅಂತೈದಿ ವಂದು ಕುಸುಮಾಕರ ವನಮಧ್ಯದೊಳ್ನಿಂದು—

ಕಂ|| ಚೆಂದಳಿರ ಕರಂಡಕಮರ |
ವಿಂದ ದಳಸ್ಫಟಿಕೆ ಕದಳಿಯೆಲೆ ಪಡಲಿಗೆ ಚೆ ||
ಲ್ವೊಂದಿರೆ ಕರದೊಳ್ತಳೆದೊಲ |
ವಿಂದಂ ನೆರೆನೆರೆದು ಪರೆದು ಪೂಗೊಯ್ವೆಡೆಯೊಳ್ || ೩೪

ಕರತಳ ದರುಣ ದ್ಯುತಿತ |
ಳ್ತಿರೆ ಬಂದುಗೆ ಗೆತ್ತು ನೋಡೆ ಕಣ್ಗದಿರ ಳುರ್ದೊರ್* ||
ಪ್ಪಿರೆ ಶಂಕೆ ತೊಲಗೆ ಮಲ್ಲಿಗೆ |
ಯರಲಂ ಮನಮೊಲ್ದು ಕೊಯ್ದಳೆಳವೆಣ್ಣೊರ್ವಳ್ || ೩೫

ವಚನ|| ಮತ್ತಂ—

ಕಂ|| ವನವನಧಿಯಲ್ಲಿ ಜನಿಸಿದ |
ಘನಮೌಕ್ತಿಕದಂತೆ ಮೆರೆವ ಮಲ್ಲಿಗೆ ಮುಗುಳಂ ||
ವನಜಾಲಯೆ ಯಂತೊಪ್ಪುವ |
ವನಜಾನನೆ ಯೊರ್ವ್ವಳಾಯ್ದಳತಿಸಂಭ್ರಮದಿಂ || ೩೬

ಅಳಿಗೆ ಪಗೆಯಾದೊಡೇನೆ |
ನ್ನಳಕಾಳಿಗೆ ಕೆಳೆಯಿದೆಂದು ಸಂಪಗೆಯ ಸಮು ||
ಜ್ಜ್ವಳ ಮುಕುಳ ಕುಳಮ ನಾಯ್ದ |
ಳ್ಕಳಶಸ್ತನೆ ಕರಜ ರುಚಿರ ರುಚಿ ತುಳ್ಕುವಿನಂ || ೩೭

ಮಿಸುನಿಯೊಳೆಸಗಿದ ಪೂವೆನೆ |
ಮಿಸುಗುವ ನವಕರ್ಣಿಕಾರಮಂ ಕೊಯ್ವಳಬೆ ||
ಳ್ಪೆಸೆವ ಕರಜಾಂಶು ತಳ್ತಿರೆ |
ರಸಲಿಪ್ತಂ ಕನಕ ಚಷಕಮೆನೆ ಕಣ್ಗೊಳಿಕುಂ || ೩೮

ಮೊದಲೊಳ್ಸಂಪಗೆಯರಲಂ |
ಸುದತಿ ಕರಂ ಕೊಯ್ದು ಮುಡಿದು ಬಳಿಕುಳಿದ ಲರಂ ||
ಚದುರೆ ಸೆಮಿನ ಪೊರ್ವ್ವಳ್ಮೃಗ |
ಮದಗಂಧಿ ಗಜೇಂದ್ರ ಯಾನೆ ತಿರಿದಳದೊರ್ವ್ವಳ್ || ೩೯

ವಚನ|| ಪೆರತೊಂದು ಚಂದನ ಮಹೀಜದಲ್ಲಿ—

ಕಂ|| ಜಡೆ ಮರವಾವೆಂದು ನವಿ |
ಲ್ಪಿಡಿಯ ಲೊಡರ್ಚಿರೆ ವರಾಂಗಿ ಬೆದರ್ದಿ*ೞ್ಕ್ಷಿಸೆ ಕ ||
ಣ್ಗಡೆವೆಳಗು ಗಂಡು ಮಿಂಚೆಂ |
ದೊಡನದು ಗರಿಗೆದರ್ದು* ನಲಿದು ನರ್ತಿಸಿತಾಗಳ್ || ೪೦

ವಚನ|| ಮತ್ತ ಮೊಂದೆಡೆಯೊಳ್—

ಕಂ|| ಮರದಲೆ ಪೊದರೊಳ್ಮೃಗರೆ |
ದಿರುತರಲಂ ಕೊಯ್ಯಲೊರ್ವ್ವಳಿಡೆ ಕಯ್ಯನದಂ ||
ತರುಣಿ ಪೆರಳ್ತಳಿ ಗೆತ್ತೇಂ |
ಕರಮಿಟ್ಟಳೊ ಕೆಲದ ಕೆಳದಿಯನ್ನಗೆ ಬನದೊಳ್ || ೪೧

ವಚನ|| ಮತ್ತಮೊರ್ವ್ವಳ್—

ಕಂ|| ತಳಿಗೆರ್ಯ್ಯಲೆಂದು ಕನಕೋ |
ಜ್ಜ್ವಳ ರುಚಿತನು ವಡದರ್ದ ನವತಮಾಲದ ತರುವಂ ||
ಸೆಳೆಮಿಂಚು ಜಳದ ಮಂಡಲ |
ದೊಳೆ ಥಳಥಳಿಸಂತೆ ಕಣ್ಗದೇಂ ತೊಳಗಿದಳೋ || ೪೨

ವಚನ|| ಅಶೋಭಾವತಿಯಲ್ಲದೆಯುಂ—

ಕಂ|| ತರುಣತಮಾಲದ ತರುವಂ |
ತರುಣಿಕರಂ ಪತ್ತಿಪೊಕ್ಕವಳ್ಸೆನೆಯಿಸಿದಳ್ ||
ಸ್ಮರನಸಿಲತೆಯಂ ಕಾರೊರೆ |
ಗಿರದೊಳಪುಗಿಪೊಂದು ಭಾವಮಂ ಬನದೆಡೆಯೊಳ್ || ೪೩

ಚೆಂದಳಿರೊಳೊಂದೆ ಮೈ ಮೊಗ |
ಮೊಂದೊಗೆದ.ದು ಕುಂಕುಮಾಂಕಿತಂ ಸಂಜಯುಕೆಂ ||
ಪೊಂದಿದ ಮೂಡುವ ಪರಿಪೂ |
ರ್ಣೇಂದುಗೆ ಪಡಿಯೆನಿಸುತಸುಗೆ ಯಡರ್ದಂಗನೆಯಾ || ೪೪

ವಚನ|| ಪೆರತೊಂದೆಡೆಯೊಳೊರ್ವ್ವ ಪೃಥುನಿತಂಬೆ—

ಕಂ|| ಜಡಿವನಿತಂಬಂ ಮುಡಿವೊಲೆ |
ಯಡರಲ್ಬಿಡದಿರೆ ವರಾಂಗಿಯಸುಗೆಯುಮರದೊಳ್ ||
ಪದೆದಳ್ಬುಡದೊಳ್ಪದೆದೊದೆ |
ದೊಡನಿಡಿದೆಳದಳಿರ ನದರೊಳ ವಳತಿಭರದಿಂ || ೪೫

ವ|| ಆತಳಿರಂ ತನ್ನ ಸೋಮ್ಮುರ್ಡಿಯೊಳ್ಮಡಿದು ನಳಿನಾಕರಕ್ಕೆ ಬಂದು—

ಕಂ|| ಕೊಳದಳಲರ್ದಬ್ಜದಲರಂ |
ನಳಿನೇಕ್ಷಣೆ ಮುರಿವೆನೆಂದು ಪುಗೆ ತೆರೆವೊಯ್ಲಿಂ ||
ಮುಳುಗುತ್ತೇಳುತೆ ಭಯದಿಂ |
ತಳಮಳಗೊಳ್ವಂತೆ ಕಣ್ಗದೇಂ ರಂಜಿಸಿತೋ || ೪೬

ವಚನ|| ಪೆರತೊಂದು ತಾಣದೊಳ್ಕಾಮರಸನಂ ಪಬ್ಬಿರ್ದ ಮಲ್ಲಿಗೆಯಲ್ಲಿಗೈತಂದು—

ವೃ|| ಬಿಡುಮುಡಿ ಸೂಸೆ ಮುಂತಳೆದ ಪೂಗಳನೀಗಳೆ ನವ್ಯಪುಷ್ಪಮಂ |
ಮುಡಿಸೆನಗೆಂಬವೋಲ್ಕಲಿತಕಂಕಣ ನಿಕ್ವಣ ಮುಣ್ಮೆ ತತ್ಕರಂ ||
ಬಿಡಿವವೊಲಲ್ಲಿ ಪಲ್ಲವಮುನಾಲತೆಯೊಳ್ಪುರುಡಿಂದೆ ಕೋರಕಂ |
ಬಡೆವವೊಲೇಳೆ ಮೈಬೆಮರದೊರ್ವ್ವಳರಲ್ದಿರಿದಳ್ವಿಳಾಸದಿಂ || ೪೭

ವಚನ|| ಪೆರತೊಂದೆಡೆಯೊಳ್—

ವೃ|| ಮಲ್ಲಿಗೆ ಮೇಲೆಪರ್ಬಿ ಮುಗುಳೊತ್ತಿರೆ ಕೆಯ್ಯೊಲೊಡರ್ಚಿಸಿಂದಸಂ|
ಫುಲ್ಲಸರೋರುಹಾಕ್ಷಿಯ ಘನಸ್ತನಮುಂಟಿರೆ ಕೊಂಬುಮೋಳ್ಪಸ ||
ತ್ಪಲ್ಲವಪಾಣಿಯಂ ತರುಣಚೂತಯುವಾಂಗಮೆ ಕಂಪಿಪಂತದೇಂ |
ನಿಲ್ಲದೆ ಪಾಯೆ ಕಂಪಿಸುತೆ ಕಣ್ಗೆಸೆದಿರ್ದುದೊ ನೋಟಕರ್ಕಳಾ || ೪೮

ಕಂ|| ಅಳಿವೆರಸಿದಲರ ಗೊಂಚಲ |
ನೆಳವೆಣ್ಣಿಡಿದಿರೆ ಕರಾಗ್ರದೊಳ್ಮರೆದುದು ಮಂ ||
ಜುಳಶಶಿಮಂಡಳಮಂ ನವ |
ನಳಿನಂ ಸೆರೆವಿಡಿಯೆ ತೋರ್ಪವೋಲ್ಪನದೆಡೆಯೊಳ್ || ೪೯

ಪೂಗುಡಿಯ ನುಡಿವೆಡೆಯೊಳೆ ಪ |
ರಾಗಂ ಪರಕಲಿಸೆ ಮೆಯ್ಯೊಳಾಮರಗೊಂಬಂ ||
ಬಾಗೊತ್ತಿ ತಳಿರನುಡಿವ |
ಳ್ಪೂಗಣೆಯನ ಕರಿಣಿಯಂತಿರೇನೊಪ್ಪಿದಳೋ || ೫೦

ನಲ್ಲಳೊರ್ವಳೆಳಮಾವಿನಲ್ಲಿ ಸ |
ತ್ಪಲ್ಲವಪ್ರಕರಮಂ ಕರಾಗ್ರದಿಂ ||
ಮೆಲ್ಲನೊತ್ತಿ ಮುರಿದಾನೆ ಕಂದಿತಾ |
ಪಲ್ಲವಕ್ಕೆ ಮೊದಲಾಕರಾಂಬುಜಂ || ೫೧

ಕಂ|| ಮಗಮಗಿಪ ಬೆಮರನಾಂತೇಂ |
ಸೊಗಯಿಸಿದಳೊ ಕಣ್ಗೆಕಮಳೆ ಕಮಳಮರಂದಂ ||
ಮಿಗೆ ಪತ್ತಿರೆ ತೋರ್ಪವೊಲಾ |
ಮೃಗಾಕ್ಷಿ ಮೃಗೆರೆಗೆ ಪರಮೆಗಳ್ಬನದೆಡೆಯೊಳ್ || ೫೨

ವೃ|| ಕರದಿಂದೊರ್ಕೊಂಬನಿಂಬಾಗಿರೆ ಪಿಡಿದೆಳೆಯಳ್ಕಿ ಮತ್ತೊಂದು ಕೈದಾ
ವರೆಯಂಮೇಲೆತ್ತಿ ಪೂಗೊಯ್ವೆಡೆ ಯೊಳವಳವಕಾತ್ತಬ್ಜಮಂಮುತ್ತಭೃಂಗೋ
ತ್ಕರಮಾಗಳ್ಬೆರ್ಚೆ ಕೊಂಬಂ ಬಿಡೆ ತೆರು ಕರುಣಂಬೆತ್ತವೋಲ್ಪಲ್ಲವಶ್ರೀ |
ಕರದಿಂದಂ ಸೋದದಂ ಪಾಯ್ದೊಲೆವನೆವದೆ ಪುಷ್ಪೌಘಮಂ ಸೂಸಿತಾಗಳ್ ||

ವಚನ|| ಮತ್ತಮೊಂದಾಮ್ರಮಹೀಜದಲ್ಲಿ —

ಕಂ|| ತಳಿಗೊಯ್ವೆಳೆಯಳ ಚೆಂದುಟಿ |
ದಳಿರಂ ತಳಿರ್ಗೆತ್ತು ಕರ್ದುಕಿದುದು ಪಿಕನೀಮಂ ||
ಚುಳಪಲ್ಲವಮೆಲ್ಲಮನೀ |
ಗಳೆ ಪರಿದಪಳೆಂದು ಮುಳಿಸಿನಿಂ ಕರ್ದುಕುವವೋಲ್ || ೫೪

ವಚನ|| ಮತ್ತಮೊರ್ವಳ್ಮತ್ತಕಾಶಿನಿ ಪೆರತೊಂದು ಸರಳ ಚೂತಶಾಖಾಂತರಾಳದೊಳ್—

ಕಂ|| ಪೂಗೊಯ್ಯಲೆತ್ತೆ ತೋಳಂ |
ಮೇಗಣ್ಗೆ ನಿಸೂಗೆದ ದಕ್ಷಿಣಸ್ತನಮುಕುಳಂ ||
ಪೂಗಣೆಯ ನೀಕ್ಷಿಪರ ನಿಸ |
ಲಾಗಳ್ತೆ ಗೆದಬ್ಜ ಬಾಣಮೆನೆ ಕಂಗೊಳಿಕುಂ || ೫೫

ವಚನ|| ವಿಳಾಸವತಿ ಮತ್ತೊರ್ವಳ್—

ವೃ|| ಸೆಳೆನಡು ಬಳ್ಕೆ ತೋರವೊಲೆ ಮೇಲ್ವದನೊಯ್ಯನೆ ನೂಂಕೆ ಕಣ್ಣನು |
ಣ್ಬೆಳಗಡರ್ದೊರ್ಪ್ಪೆ ಪೀನಜಘನಂ ಜಡಿಯುತ್ತಿರೆ ಬಾಹುಮೂಲಮುಂ ||
ಪೊಳೆಯೆ ಬಳಲ್ದು ಜಾರೆಮುಡಿ ಮುಗ್ಧೆ ಪದಾಗ್ರದೆ ನಿಂದು ನಿಳ್ಕಿ ಕೆಂ |
ದಳಮನಮರ್ಚಿಕೊಯ್ದಳೆವಮಾವಿನಕೆಂದಳಿರಂ ವಿಳಾಸದಿಂ || ೫೬

ಕಂ|| ಎಳೆಯುಳೆಳದಳಿರಿನುಜ್ಜ್ವಳ |
ಕಳಶಮನರ್ಚಿಪವೊಲಿಳಿಪಿದಳ್ಕುಚದೊಳ್ಮಂ ||
ಜುಳಹೃದಯಸ್ಥಿತಮದನಂ |
ಗೆಳಸಿತ್ತಪಳೆನೆ ರಸಾಲಪಲ್ಲವಶರಮಂ || ೫೭

ವಚನ|| ಆವಿಳಾಸಾನ್ವಿತೆಯರು ಮಲ್ಲದೆ ಮತ್ತೆ ಕೆಲಂಬ ವಿದಗ್ಧೆಯ ನ್ನೆರೆದು—

ಲಲಿತರಗಳೆ|| ಅಲ್ಲಿ ಮಾಮರದಲ್ಲಿ ಮಲ್ಲಿಕಾಲತೆಯಲ್ಲಿ | ಯೆಳಯಸುಗೆಮರದಲ್ಲಿ ಜಲರುಹಾಕರದಲ್ಲಿ | ಸಂಪಿಗೆಯತರುಗಳೊಳ್ಸಂಪಿಡಿದಸುರಯಿಯೊಳ್ | ಪಾದರಿಯಬನದಲ್ಲಿ ಮಾಧವಿಯ ಲತೆಯಲ್ಲಿ | ತಿಳಕವಕುಳಾದಿತರುನಿವಹದಾರವೆಗಳೊಳ್ || ದಳಫಳಕುಸುಮವಿಸರವಿದಿತವಿಟಪಂಗಳೊಳ್ | ಪೂಗೊಯ್ಯಲೆಂದಬಲೆಯ ನ್ನೆರೆದು ಬಗೆದಂದು | ಬೇಗದಿಂ ಪರಿತಂದು ಪರಿತೋಷದಿಂ ನಿಂದು | ಕಡೆಗಣ್ಣಕುಡಿವೆಳಗು ಬಿಡದದರೆ ನಡೆನೋಡೆ | ನಿಡುಗೊಂಬನೆಡಗಯ್ಯೊಳ ಡಸಿಪಿಡಿದೊಳಗ್ಗಡೆ | ವೆರಸಿನೆಲೆವೊಲಿಯೊಗೆಯೆ ಬಲಗೈಯನಿಮಿರ್ದೆತ್ತಿ | ಕರಕರಜರುಚಿರ ರುಚಿತಳಿರಲರ್ಗಳಂ ಮುತ್ತಿ | ಮುಸುಕುತಿರೆ ಮುಡಿ ಸಡಿಲೆ ಪೊಸಮುಗುಳ್ಗಳಂ ಕಿರಿದು | ವಿಸುಪಕಿಸಲಯುಚಯವನೊಸಗೆ ವಿಗೆ ನೆರೆ ಪರಿದು | ನನೆಗೊನೆಯನಲರ್ದ ಲರಕೊನರ್ಗಳಂ ಕೊಯ್ಕೊಯ್ದು | ವನಜದಳದೊಳ್ಕವಳಿಯೆಲೆಯೆಲೆಗಳೊಳ್ಪೊಯ್ದು | ಕುಳಿರ್ವಹಿಮಜಳದೆ ಚಳೆಯಂ ಗೊಟ್ಟು ಬೇರಾಯ್ದು | ನಳಿನದೆಳ ಎಳೆಗಳಂ ಗಳಿಲನೆ ಸರಂಗೆಯ್ದು ಸುಯ್ಗಂಪು ಮೆಯ್ಗಂಪುಕ್ಕೆಬಾಯ್ಗಂಪುಬೆರಸುತಿರೆ | ಕಯ್ಗಂಪು ಕೆಂದಾವರೆಯ ಸಿರಿಯನೊರಸುತಿರೆ | ಮಲ್ಲಿಗೆಯ ಹಾರಮಂ ಪಲ್ಲವದ ಪದಕಮಂ | ಸಲ್ಲಲಿತಮಂಜರಿಯ ಕರ್ಣಾವತಂಸಮಂ | ಸುರಯಿಯರೆವಿರಿದಲರ ಮುಡಿಯ ಮುತ್ತಿನ ಬಲೆಯ | ಸುರುತರದ ಸರಸಿಜದಕರ್ಣಿಕೆಯ ಮುದ್ರಿಕೆಯ | ನೆಸೆವಪೊಸಬಂದುಗೆಯ ವಿಸುಪ ಮುಗುಳಂದುಗೆಯ | ನಸುಗೆಯರಲುಂಗುರ ಮನುತ್ಪಳದ ಮಂಟಿಗೆಯ | ನುಜ್ಜಳಿಪ ಗೊಜ್ಜಗೆಯ ಸಜ್ಜುಕದ ಚಳಿಕಿಗೆಯ | ನಜ್ಜಗೆಯ ಪಜ್ಜಳಿಪ ಬಜ್ಜರದ ಬಾಪುರಿಯ |

ನಾಂಪ ರೊಳಲಂಪೆಸೆವ ಸಂಪಗೆಯ ಮೇಖಲೆಯ | ನಿಂಪಡರ್ದ ಸುರಹೊನ್ನೆ ಮುಗುಳ ಮೃದು ಕಂಠಿಕೆಯ | ನೆಸಗಿ ಮಿಕ್ಕಲರ್ಗಳಿಂ ಬಾಸಿಗಗಳಂ ರಚಿಸಿ | ಪೊಸಜವ್ವನೆಯರಲ್ಲಿ ಪೋಗ ಲುರೆ ಸಡಗರಿಸಿ | ಶಿವಪೂಜೆಗಳವಟ್ಟಕುಸುಮಮಂ ಬೇರಾಯ್ದು | ತವೆ ಬಹುವಿಚಿತ್ರತರ ಮಾಲಿಕೆಗಳಂ ಸವೆದು | ಮುಡಿಯಳಿಯೆ ನಡುಸೆಳೆಯೆ ಸುಯ್ನುಮಿರೆ ಮೆಯ್ಬೆಮರೆ | ತೊಡೆ ಸೆಡೆಯೆ ಅಡಿ ಪಡೆಯೆ ಪುಗುಳ್ಗಳಂ ಮುಗುಳ್ಗಳಂ | ಸೂಸುತುಂ ಬೀಸುತುಂ ನಳಿತೋಳ ವಳಿಜಾಳ | ಮೆಳಸಿ ಬರೆ ಬಳಸಿ ನೆರೆದಾವರಿಸಿ ಗಾವರಿಸಿ | ಕರದಿಂದಮುರದಿಂದಧರದಿಂದೆ ಭರದಿಂದೆ | ಪೊಡೆಯುತುಂ ನಡೆಯುತುಂ ಬಳ್ಕುತುಂ ತುಳ್ಕುತುಂ | ಕಣ್ಬೆಳಗತಣ್ಬೆಳಗನೈತಂದು | ಸೈತಂದು | ಭೂಪತಿಗೆ ಕೈಮುಗಿದು ಪೂವುಟ್ಟಿಯಂ ತೆಗೆದು | ಹರಿಸದಿಂ ನೋಡುತಿರೆ ಕರತಳಕೆ ನೀಡುತಿರೆ ||

ವಚನ|| ಆಗಳಾರಾಜಶೇಖರನರೇಂದ್ರಂ ಪ್ರಭಾತಪದ್ಮದಂತಿರಾಮೋದಾಂತರಂಗನಾಗಿ ಕಲ್ಪತರು ಸಸ್ಯದಂತೆ ಸುರಭಿಪಯದೊಳ್ಮುಳುಂಗಿ ಶಾರದಶಶಾಂಕನಂತೆ ವಿಮಳಾಂಬರದಿನಳಂ ಕರಿಸಿ ಯಾಮಿನೀಪ್ರ್ರಮದಂತೆ ಭಸಿತರುಚಿದಾಳ್ದು ಧನಂಜಯನಂತೆ ರುದ್ರಾಕ್ಷದಿಂರಂಜಿಸಿ ಪರಮೇಷ್ಠಿಯಂತೆ ಸದ್ಮಾಸನಮನವಷ್ಟಂಭಿಸಿ ಬೃಹಸ್ಪತಿಯಂತೆ ಸುಮನೋಜಯಮೂಲಮಂ ತ್ರಮಂ ಬಗೆಯೊಳನುಗೊಳಿಸಿ ನಗರಾಜನಂತಚಲಾಂಗನಾಗಿ ಧನಿಯಂತೆ ಲಕ್ಷ್ಯೈಕಾಗ್ರಚಿತ್ತನೆ ನಿಸಿ ಕಲ್ಯಾಣಗೃಹದಂತೆ ಶಿವಪ್ರಭಾವಮಂ ಪಡೆದಿನಿಸಾನುಂ ಬೇಗಮಿದ್ದು—

ವೃ|| ಶಿವಲಿಂಗಾಖ್ಯಮನೊಲ್ದು ಪೂಜಿಸಿದನುದ್ಯತ್ಸೌರಭಾಂಬುಸ್ಸರೋ |
ಭವಮುಖ್ಯಪ್ರಸವಾತಿಶೋಭಿತಸುಗಂಧಾಚ್ಛಾಕ್ಷತಸ್ನಿಗ್ಧಧೂ ||
ಪವಿರಾಜದ್ರುಚಿದೀಪಸತ್ಫಳಮಹಾ ನೈವೇದ್ಯಮುದ್ವೀಟಿಕಾ |
ಳಿವಿಳಾಸಾಸ್ಪದಗೀತವಾದ್ಯರವದಿಂ ಭೂಭಾಮಿನೀ ಭೂಷಣಂ || ೫೮

ವಚನ|| ಅಂತುಪೂಜಿಸಿ ಪರಮಭಕ್ತಿಯಿಂ ಪ್ರದಕ್ಷಿಣನಮಸ್ಕಾರಂಗಳಂರಚಿಸಿ—

ವೃ|| ಧನಪತಿಮಿತ್ರ ಗಾತ್ರರುಚಿನಿರ್ಜಿತಮಿತ್ರ ಕರಾಳಕಾಲಮ |
ರ್ದನ ಗರಕಾಲಕಂಧರ ಧರಾಧರಧನ್ವ ಶಶಾಂಕಖಂಡಮಂ ||
ಡನ ಸದಖಂಡಚಿನ್ಮಯ ಸತಪ್ರಜಪಾಲ ಕಪಾಲಶೂಲರಂ |
ಜನಕರ ದೇವಭೇವ ಜಗತೀಧರಮಂದಿರ ಮಂಗಳಾಕರಾ || ೫೯

ವಚನ|| ಎಂದು ಪೊಗಳ್ದು ಪೊಡಮಟ್ಟು ಮುದಂದಳೆದು—

ವೃ|| ಆಸರನಾಥನಾಕುಸುಮಭೂಷಣಮಂ ಪಡೆದಿತ್ತು ಪಾರ್ವತೀ |
ಜಾನಿಗೆ ತಾನುಮಾತ್ಮರಮೆಯುಂ ಬಳಿಯಂ ತಳೆದಿರ್ಪಿನಂ ಪರಿ ||
ಮ್ಲಾನಸಖೀಮುಖಾಬ್ಜಮನಭೀಕ್ಷಿಪ ನಲ್ಲಳಪಾಂಗದಿಂಗಿತಂ |
ಮಾನಸದೊಳ್ತೊಡರ್ಚಿದುದು ತಣ್ಗೊಳದೊಳ್ಜಳಕೇಳಿಯಾಂಪುದಂ || ೬೦

ವಚನ|| ಆಗಳಾಯುವರಾಜಂ ನಿಜರಮಣಿಯಾನನಾಬ್ಜಮಂ ನಿರೀಕ್ಷಿಸಿ—

ವೃ|| ಸರಸಿಜವಕ್ತ್ರೆ ಚಕ್ರಮಿಥುನಸ್ತನೆ ಜಾಳಮೃಣಾಳಬಾಹುವ |
ಲ್ಲರಿ ಕುಮುದಾಕ್ಷಿ ಭೃಂಗಕಚೆ ಶೈವಲಮಂಜುಳರೋಮರಾಜಿ ಬಂ ||
ಧುರಪುಳಿನೋಲ್ಲಸಜ್ಜಘನೆ ನಿನ್ನಿರವಂ ತಳೆದೊಪ್ಪುತಿರ್ಪ್ಪತ |
ತ್ಸರಸಿಗೆ ಮಾಡಲಿಂದು ನವಸಂಗತಿಯಂ ನಡೆ ಮನ್ಮನೋಹರವೇ || ೬೧

ವಚನ|| ಎಂಬುದು ಮತೀವ ಹರ್ಷೋದಯಮನೊಳಕೊಂಡು ತೊಳಪಕಟಾಕ್ಷ ರುಚಿ ಮಂದಸ್ಮಿತ ದ್ಯುತಿಗೂಡಿ ತದ್ವಾಣಿಗೆ ಪಸಾಯಮನಿತ್ತಂತೆ ಮೇಲ್ವಾಯ್ದು ಪಸರಿಸೆಯುಂ ತನ್ನ ಮೇಲ್ನಡೆಗೆ ಮಚ್ಚರಿಪಂಚೆಯೊಳ್ಪಳಂಚುವೆನೆಂದು ಭಾಷೆಗುಡುವಂತೆ ಪಾಯವಟ್ಟಂ ದನಿಗುಡುತ್ತುಮಿರೆಯುಂ ಪೂದುರುಂಬಿಂಗೆರಗಿ ಪಾಡುವ ಪರಮೆವರಿಗಳಿಂಚರಕ್ಕೆ ಮಚ್ಚಿ ತಲೆ ದೂಗಿದಪುದೆಂಬಂತೆ ಕರ್ಣಪೂರಂ ಕಂಪಿಸೆಯುಂ ಜಳಕೇಳಿಯು ಪೊಕ್ಕುಳಿಯೊಳ್ಗುರುಪಯೋಧರ ಭಾರಮನಾಂಪುದೆನಗೆಸದಳಮೆಂಮ ಬಳುಂಕುವಂತೆ ಬಡನಡುಬಳುಂಕೆಯುಂ ಸರಸಿಯಂ ಪೊಕ್ಕಪೆವೆಂಬಸಮ್ಮದದಿಂ ಕುಣಿವಂತೆ ಕುಚಚಕ್ರಯುಗಂ ಕದಕ್ಕದಿಸೆಯುಮುಮುರಸಾಮಜ ದೊಡನನೇಕ ಕರಿಣಿಗಳ್ವೆರಸು ನೀರಾಟಕ್ಕೆ ತಳರ್ವಭ್ರಮುವೆಂಬಂತೆ ಮನಃಪ್ರಿಯನೊಡನನೇಕಸಖಿಯ ವೆರಸು ಸಂಭ್ರಮಂ ಮಿಗೆ ಸಲಿಲಕೇಳಿಗೆಳಸಿ ಸರ್ವಮಂಗಳಾದೇವಿ ತನ್ನಂದನದೊಳ್ನಡೆತಂದು ಕಾಸಾರದ ತೀರದ ನುಣ್ಬಸಲೆಯ ನಲಂಕರಿಸಿ ನಿಂದು ನೀಡುಂ ನಿರೀಕ್ಷಿಪಾಗಳ್—

ವೃ|| ಮರುದ-ದ್ಧೂತಪಯಃ ಪ್ರಕೀರ್ಣಕಣಜಾಳಲಂ ಮೇಲೆ ಸಾಲಿಟ್ಟು ಪ |
ಟ್ಟರಣ ಶ್ರೇಣಿಯುಮೊಂದೆ ರತ್ನರಚಿತೋದ್ಯತ್ತೋರಣಶ್ರೀಯನೂ ||
ರ್ಮಿರವಂ ವಾದ್ಯಮದಾಗಲಾರತಿಯ ಚೆಲ್ವಂ ಪೋಲೆ ಪದ್ಮಂ ಮಹೀ |
ಶ್ವರನಂ ತಾನಿದಿರ್ಗೊಳ್ಗೆಂಬು ದೆಂಬಬಗೆಯಂ ತಾಳ್ದತ್ತು ಪದ್ಮಾಕರಂ || ೬೨

ವಚನ|| ಮತ್ತಮಾ ತಿಳಿಗೊಳಂ—

ಕಂ|| ಲುಲಿತ ಜಲಲವ ಲಲಿತ ನವ |
ಜಲರುಹ ದಳವಿಸರ ಲಸಿತ ವಿಮಳ ಮರಾಳಾ ||
ವಲಿಕಲಿತ ನಳಿನ ಮಧುಮದ |
ಚಲದಳಿಕುಲ ಮಿಲಿತ ಮಂದಮಾರುತ ಮಹಿತಂ || ೬೩

ವಚನ|| ಮತ್ತಂ—

ವೃ|| ಬಾಲಮಧುವ್ರತ ಪ್ರತತಿ ಪಾಡೆ ರತೋದ್ಧತ ಚಕ್ರಚಕ್ರಪ |
ಕ್ಷ್ಮಾಳಿಯೆ ತಾಳಮಾಗಿರೆ ಸರೋಜಿನಿ ನರ್ತಿಸೆ ನೀರಪಕ್ಷಿಗ ||
ಳ್ಲೀಲೆಯೊಳೊಂದುತುಗ್ಘಡಿಸೆ ಸೀಗುರಿಯಾಗಿರೆ ವೀಚಿಮಾಲೆ ತಾ |
ನೋಲಗಶಾಲೆಯಾದುದು ಕೊಳಂ ಕಮಳಾಸನ ರಾಜಹಂಸನಾ || ೬೪

ಕಂ|| ದರ ದಳ ದರವಿಂದ ಬೃಂದ ಗಂಧಾ |
ದರ ಸರದುನ್ಮದ ಭೃಂಗನಾದ ಗೀತಂ ||
ತರಳತರ ತರಂಗರಂಗದಂಗಂ |
ಸರಸಿ ಸುಲಾಸಿಸಿಯಂತೆ ಕಣ್ಗೆ ತೋರ್ಕುಂ || ೬೫

ವೃ|| ತಡಿಯೊಳ್ಳಿಂದತಟಿತ್ಕಟಾಕ್ಷೆಯ ಕಟಾಕ್ಷಜ್ಯೋತ್ಸ್ನೆಯಿಂ ತೀವಿ ಪಾ |
ಲ್ಗಡಲಂ ಪೋಲ್ತಿರೆ ತತ್ಸರಂ ನೊರೆಯ ಸಾಲ್ಯೇಪಾಹಿಯಂ ಪೋಲೆ ಮೇ ||
ಲೆಡೆಗೊಂಡೊಪ್ಪುವ ನೀಲನೀರಜವನಂ ಸ್ವರ್ಣಾಂಬುಜೋದ್ಯದ್ರಜಂ |
ಕುಡೆ ಪೀತಾಂಬರ ಲಕ್ಷ್ಮಿಯಂ ಮಲಗಿದಂ ಭೋಜಾಕ್ಷನಂತೊಪ್ಪುಗುಂ|| ೬೬

ವಚನ|| ಮತ್ತಮಲ್ಲಿ—

ಕಂ|| ಬಿರಿಯಿಗಳನೆಚ್ಚು ರಕ್ತಂ |
ಬೊರೆದರಲಂಬಂ ಸರೋಂಬುವೊಳೊತ್ತಿಮುಲ್ಕೆಂ ||
ದರಲಂಬನಿಳಿಪಿದಂತಿರೆ |
ತರುಣಿಯರ ಸರಕ್ತ ಕೋಕರಂ ಮಾರ್ಪೊಳೆಗುಂ || ೬೭

ವಚನ|| ಅಂತದಂ ನೋಡಿ ಕಾಂತಾಜನಂ ಸಂತಸಂ ಮಿಗೆ ಪುಗಲೆಳಸಿ ಮೆಲ್ಲನಿಳಿತರುತ್ತಮಿಪ್ಪಲ್ಲಿ—

ಕಂ|| ಎಳವಳಿಕಿನ ಸೋಪಾನದೊ |
ಳಿಳಿವಳಪದಯಾವಕದ್ರವಂ ಪತ್ತಿರೆ ಕಂ ||
ಡೆಳೆಯುಳ ದೊರ್ವ್ವಳ್ತಳಿರಂ |
ದೆಳಸಿ ಕರಂ ತುಡಿಕಿ ನಗಿಸಿದಳ್ಕೆಳದಿಯರಂ || ೬೮

ಗುರುಕುಚಭರದಿಂ ಬಳ್ಕುವ |
ಧರಾಧಿಪತಿ ಪತ್ನಿಗೀವ ಪೋಲ್ಕೈಲಾಗಂ ||
ಸರಸಿ ತೆರೆದೋಳ ತುದಿಯೊ |
ಳ್ಕರವೊಗೆವ ರವಿಂದದಿಂದದೇಂ ರಾಜಿಸಿತೋ || ೬೯

ವೃ|| ಕರದೊಳ್ಪೊನ್ನ ಂಡೆಯುಂಚೀಕ್ಕೊಳವಿಯೆಸೆಯೆಕಾಂಚೀರವಂಚಾರುಮು
ರರವಂ ಕೈಗೆಣ್ಮೆಕಾಸಾರದ ಪರಿಸರದೊಳ್ನಿಂದು ನಿಂದೀಕ್ಷಿಸುತ್ತಾ || [ಂಜೇ
ದರಿಸುತ್ತಂದಂ ಮಿಗಲ್ಮೆಲ್ಲನೆ ಮಿಸುಗೆ ಮೊಗಂ ನೋಡಿ ನೀರಾಟಕೆಂದೊ |
ರ್ವ್ವರನೊರ್ವರ್ಚ್ಚಲ್ಲದಿಂದಂ ಕರೆದುನೆರೆದುಕಾಂತಾಳಿನೀರ್ಪ್ಪೊಕ್ಕುದಾಗಳ್

ಕಂ|| ತರುಣೀನಿತಂಬಕುಚಗಿರ |
ವರಂಗಳಿಟ್ಟಣಿಸೆ ತತ್ಸರಶ್ಯರಧಿ ಕರಂ ||
ಪರಿವರ್ಧಿಸಿದಂತುರ್ವಿದು |
ದರರೆ ತದಾನನಸುಧಾಂಶುಬಿಂಬದ್ಯುತಿಯಿಂ || ೭೧

ವೃ|| ಕರದಿಂ ಸೂಂಕಿತುಳುಂಕಿಕೂಂಕಿಜಳವಂತೇಂಕಾಡಿಮೇಲೋರ್ವರೋ
ರ್ವರೊಳಿಟ್ಟಾಡಿ ಮುಳುಂಗಿ ಮೂಡಿಪೊಳೆದಾಪೊನ್ನಂಡೆಯಿಂಪೊಯ್ದುಪಾ||
ಯ್ದರದೀಸಾಡಿ ಕಡಂಗಿ ಚೀರ್ಕೊಳವಿಯಂ ಮೇಲೊತ್ತಿ ಬೆಂಬತ್ತಿ ಮುಂ |
ಬರಿದಬ್ಜಾಕರದಂಬುಕೇಳಿವಡೆದಪ್ಪರ್ಂಕೇಜಪತ್ರಾಕ್ಷಿಯರ್ || ೭೨

ಕಂ|| ಅರಸನೆಸಪನಿತರೊಳೆ ಕ |
ಪ್ಪುರದಂಬುವ ನೊತ್ತಲೆಂದು ಕಮಳಾಕ್ಷಿ ಕಟಾ ||
ಕ್ಷರುಚಿ ಹಿಮವಿಮಳಜಳಮಂ |
ಪರಪಿದಳೊಮ್ಮೊದಲೋಳಾಸ್ಯಶಶಿರುಚಿಸಹಿತಂ | ೭೩

ವಚನ|| ಮತ್ತಮದಲ್ಲದೆಯುಂ—

ಚಂದನ ಚಂದ್ರಿಕೆಯಂ ರಮ |
ಣೀಂದುಕರಂ ಸೂಸೆ ಮುಗಿದುದದು ಕಾಂತೆಯನೇ ||
ತ್ರೇಂದೀವರಮಾಸ್ಯಾಂಬುಜ |
ಮಂದಲದು*ದು ಕೊಳದೊಳೆಳೆಗಿದೇನಚ್ಚರಿಯೋ || ೭೪

ವಚನ|| ಮತ್ತಮೊರ್ವಳ್—

ವೃ|| ನೃಪಕರವಾರಿಯಂತ್ರಮುಖಮುಕ್ತಮೃಗೋದ್ಭವಮಿಶ್ರಧಾರೆಗ |
ಳ್ದ್ವಿಪಪತಿಕುಂಭಸನ್ನಿಭಕುಚಾಚಲಮಂ ಮುಗಿಲಂತೆ ಮುತ್ತೆ ತ||
ಚ್ಚಪಲಕಟಾಕ್ಷಮಲ್ಲಿ ಸೆಳೆಮಿಂಚೆನೆ ಮಿಂಚಿರೆ ಚಂದನೋದಕ |
ಸ್ನಪಿತೆ ತದೀಯಬಿಂದು ಮಳೆಯಂತಿರೆ ಕಾಸ್ಸಿರಿಯಂತಿರೊಪ್ಪಿದಳ್ || ೭೫

ಮುಡಿಮುಗಿಲಲ್ಲಿ ಬಳ್ಮಳೆ ಮುಖೇಂದುಗೆ ಚಂದ್ರಿಕೆತೆಱೆಕ್ಕೆವೆತ್ತಪೊಂ |
ಗೊಡವೊಲೆವೆಟ್ಟುಗಳ್ಗೆ ನವನಿರ್ಝರಮೊಪ್ಪುವಬಾಹುವಲ್ಲಿಗಿಂ ||
ಪಿಡಿದಡರ್ಜ್ಜಗುಚ್ಛಮೆನಿಸಿತ್ತು ನರೇಶ್ವರನಾತ್ಮಹಸ್ತದಿಂ |
ಪಿಡಿದಲರ್ದೊಟ್ಟಿಯಿಂ ಸುರಿಯೆ ಸೂಸುವಚಂದನವಾರಿ ನಾರಿಯಾ || ೭೬

ಕಂ|| ವರನೊತ್ತೆ ಕುಂಕುಮಾಂಬುವ |
ನರವಿಂದಾನನೆಯ ಮೊಗದೊಳೆಳೆಯುತ್ತಸೆದ ||
ತ್ತರವಿಂದದರಲ ಮಕರಂ |
ದರಸಂ ಸುರಿವಂತೆ ಕಣ್ಗೆ ಕಮಳಾಕರದೊಳ್ || ೭೭

ಕಂ॥ ಲೋಲಾಕ್ಷಿಯ ನಗೆಮೊಗದೊ |
ಳ್ಲೀಲೆಯಿನಿನನೊತ್ತೆ ಕತ್ತುರಿಯಧಾರೆ ಕರಂ ||
ಕಾಲಾಹಿ ಚಂದ್ರಬಿಂಬಮ |
ನಾಲಂಬಿಸಿ ತುಡುಕಿದಂತದೇನೊಪ್ಪಿದುದೋ || ೭೮

ಮೊಗಸಸಿಯ ಹಸನಚಂದ್ರಿಕೆ |
ಗಗಿವ ವೊಲದಿರ್ದನಿಯಳುರುತರಸ್ತನಚಕ್ರ ||
ಕ್ಕೊಗುಮಿಗೆ ಯಿಂದೆಳಮಿಸಿಲಂ |
ನೆಗಳ್ವಂತಿನನೊತ್ತಿದಂ ಸಕುಂಕುಮಜಳಮಂ || ೭೯

ರಮಣಿಯ ಕಬರಿಯೊಳರಸಂ |
ಹಿಮಜಳಮಂ ಸುರಿಯೆ ಮುಗುಳ್ಗಳೊಡವೆರೆದಿಳಿದ ||
ತ್ತಮದರ್ಗಲಿವರಲೊಡನೆ ಕಾ |
ರ ಮುಗಿಳೊಳಿತರ್ಪ್ಪ ವಿಮಳ ಜಳವೃಷ್ಟಿಯವೋಲ್ || ೮೦

ವೃ॥ ಹಿಮಮಿಶ್ರಾಂಬುವನೊಯ್ಯನೋಪನಿದಿರೊಳ್ನಿಂದಂಗನಾಚಂದನಾಂ
ಕಮನೋಜ್ಞಾಂಗದೊಳೊತ್ತೆ ನಾಂದು ಪನಿಯಂ ಸೂಸುತ್ತದಿಂಬಾದುದಾ ||
ಹಿಮರೋಚಿಷ್ಕರಪಾತದಿಂ ಹಿಮರುಚಿಗ್ರಾವಸ್ಫುರತ್ಪುತ್ರಿಕಾಂ |
ಗಮೆ ತಾನೊಲ್ದೊಸರ್ದಿಕ್ಕುವಂತೆ ವಿಳಸನ್ಮುಕ್ತಾಚ್ಛವಾರ್ಬಿಂದುವಂ || ೮೧

ಕಂ|| ಒಡಬಾಸೆಯೆಂಬ ಜಗುನೆಯೊ |
ಳೊಡವೆರೆಯಲ್ಕುಚಹಿಮಾದ್ರಿಯಿಂದೈದುವಜಾಂ ||
ಗಡಲೆನೆ ಹಿಮಾಂಬು ಪೊಸಪೊಂ |
ಗೊಡದಿಂ ವಧು ಸೂಸೆ ಸುರಿಯುತುಂ ಸೊಗಯಿಸುಗುರಿ || ೮೨

ಕೆಳದಿಯ ಮೇಲೆ ಹಿಮಾಂಬುವ |
ತುಳುಂಕಲೆಂದೊರ್ವ್ವಳಟ್ಟೆ ಮುಳುಗಿರೆ ಕೊಳದೊ ||
ಳ್ಜಳರುಹಮನವಳ ಮೊಗಮೆಂ |
ದೆಳಸಿ ಕರಂ ಪೊಯ್ದಳಂಬುವಂ ಸಂಭ್ರಮದಿಂ || ೮೩

ನಳಿನಿಯ ನಾಲಿಂಗಿಸಿ ಪೂ |
ಗೊಳಲೆಂದುರೆ ಬಾಗಿ ನಿಂದಳಂಗದೊಳೋರ್ವ್ವಳ್ ||
ತಳಿಯೆ ಘುಸೃಣಾಂಬುವಂ ತಂ |
ಗೊಳಮುಗಿಲಮರೇಂದ್ರ ಚಾಪಲತೆಯೆನೆ ಮೆರೆದಳ್ || ೮೪

ಕಂ|| ಅರಸನಿರದೊತ್ತೆ ಕತ್ತುರಿ |
ಯರಸಂ ಕಿರುವಾಸೆ ವಿಡಿದು ಮೇಲಿಳಿದಿಳಿಪಿ ||
ತ್ತರರೆ ಕರಿವಾವು ಕಪ್ಪಿರ್ದಿ |
ದುರಗನನುರೆ ನುಂಗುವಂದಮಂ ತಿಳಿಗೊಳದೊಳ್ || ೮೫

ವರನೊತ್ತಿದ ಘುಸೃಣರಸಂ |
ಗುರುಕುಚ ನಗಧಾತು ಸಿರ್ಝರ ಪ್ಲವ ಮಿಳಿವಂ ||
ತಿರೆ ನುಸುಳ್ದೈತರೆ ತಳ್ತೀಂ |
ಕರ ಮೆಸೆದುದೊ ಚಾಸೆವಳ್ಳಿತಳಿರೇರಿದವೋಳ್ || ೮೬

ಯಾಮಿನಿಯಂಗದೊಳುದಯಿಪ |
ಸೋಮಂ ಕೆಂಗದಿರನಿದಿರೊಳುರೆ ಕರೆವವೊಲಾ ||
ಶ್ಯಾಮಾಂಗಿಯಂಗಲತೆಯೊ |
ಳ್ಭೂಮೀಶ್ವರಚಂದ್ರನೊತ್ತಿದಂ ಕುಂಕುಮಮಂ || ೮೭

ಹೃದಯಸ್ಥಿತಮುದಸಂ ಸಂ |
ಮದದಿಂ ಜಳಕೇಳಿಗೆಳಸಿ ತಾನುಂ ಪಿಡಿದೆ ||
ತ್ತಿದಪೊನ್ನ ಕಳಸಮೆನಿಸಿದು |
ದದರೊಳಿದಿರ್ಚ್ಚಿರ್ದದವಧೂಜನದ ಕುಚಕಳಶಂ || ೮೮

ಓಪಳ ಕುಚದೊಳ್ಕುಂಕುಮ |
ಲೇಪಂ ಚಲದಿಂದೆ ತೊಲಗೆ ನಖಪದಮಪರಾ ||
ಶಾಪರ್ವತದಗ್ರದೊಳಿಕ |
ಲಾಪತಿಕಲೆ ಸಂಜೆ ಸರಿಯೆ ತೋರ್ಪ್ಪವೊಲೆಸೆಗುಂ || ೮೯

ವಚನ|| ಆಗಳರಸಿ ಸರಸಿಯೊಳ್ಬಂದು ಸರಿಸದೊಳರಸನಂ ಸರಸದಿಂ ನಿರೀಕ್ಷಿಸಿ—

ವೃ|| ಸೂಸಿದುದೊಂದು ಚಂದನಮೆ ಕಾಮಿನಿ ತನ್ನ ಮುಖಪ್ರಕಾಶಮಂ |
ಸೂಸದೆ ನೀಳ್ದ ಕಣ್ಮರಲ ಕೋರೆಯನುಣ್ಗದಿರೆಂಬಜೊನ್ನಮಂ ||
ಸೂಸದೆ ಕೂಡೆ ಕುಂದಣದ ಕುಂಭಮನೇಳಿಪುರೋಜದಂಶುವಂ |
ಸೂಸದೆ ಮಂದಹಾಸರಸಮಂ ಸಲೆ ಸೂಸದೆ ನಲ್ಲನಂಗದೊಲ್ || ೯೦

ವಚನ|| ಮತ್ತಂ—

ವೃ|| ತಳಿಯೆ ವಧೂಜನಂ ಮೃಗಮದೋದಕಮಂ ನೃಪನಲ್ಲಿ ನಾಂದುಕಂ |
ಗೊಳಿಸಿದನರ್ಕಜಾಂಬು ಮುಸುಕಿರ್ದ್ದಮರೇಂದ್ರಗಜೇಂದ್ರದಂತೆ ಮೇ ||
ಲ್ಮುಳುಕೆ ಹಿಮಾಂಬುವಂ ನನೆದು ಚಂದ್ರಿಕೆತೀವಿದ ಚಂದ್ರನಂತೆ ಮಂ |
ಜುಳಘುಸೃಣೋದಮಂ ಸುರಿಯೆ ತಳ್ತು ತಳಿತ್ತರ್ನವಾಮೃದಂತೆವೋಲ್ || ೯೧

ಕಂ|| ಲಲನಾಕುಚದೊಳ್ಮೃಗಮದ |
ಜಳಬಿಂದುಗಳೆಸೆದುವರಸನ ಸೊತ್ತಲೊಡಂ ತ ||
ಳ್ತಲರ್ವುದನೆ ಪಾರ್ದು ಸಾರ್ದ |
ಬ್ಜಲಸತ್ಕೋಶಮನೆ ಮುತ್ತಿದೆಳೆಅಳಿಗಳವೊಲ್ || ೯೨

ವಚನ|| ಅಗಳ್—

ಕಂ|| ವನಜಿನಿ ಕರದಿಂ ಮೃಗಮದ |
ವನಧಾರೆಯನೆತ್ತಿ ಸೂಸಿದಳಾತ್ಮನುಪೊರ ||
ಲ್ದನೆ ವನಜದಿಂದೆ ರಮಣೀ |
ಜನಾಸ್ಯಕಂಜಕ್ಕೆ ಕವಿದುವಳಿಗಳ್ಕೊಳದೊಳ್ || ೯೩

ಎಳೆಯಳ್ಗಳಿಸೋಜ್ಜ್ವಳಕು |
ಟ್ಮಳಮಂ ಕೊಯ್ಯಲ್ಕೆ ಸಾರ್ದು ನಳಿನಾಕರದೊಳ್ ||
ಮುಳುಗುವಳ ಮೊಲೆಯನಬ್ಜದ |
ಕಳಿಕೆಯಿದೆಂದೆಳಸಿ ಪಾಯ್ದು ನಗಿಸಿದಳೊರ್ವಳ್ || ೯೪

ಮೊಲೆಯುಲರ್ದಬ್ಜದೊಳಿರೆ ತನು |
ವೆಲೆವರೆಯೊಳಡಂಗೆ ಬಾಗಿ ಪೂಗೊಯ್ವಳ ತೋ ||
ರ್ಪಲಘುತರಜಘನ ಭರಮೇಂ |
ಗೆಲೆವಂದುದೊ ಕೊಳದೊಳೇಳ್ವ ಕರಿಶಿರದಿರವಂ || ೯೫

ವೃ|| ಸ್ಮರಣಬಾಣಸರೋಜಕೆ ಕೂರ್ಪನಾ |
ತರುಣಿ ಕಣ್ಗಡೆಯಿಂದುಪದೇಶಿಪಂ ||
ತರರೆ ಪೂಗೊಳದೊಳ್ಮರಿದಾಂತು ಪಂ |
ಕರುಹಮಂ ನಡನೋಳ್ಪವಳೊಪ್ಪಿದಳ್ || ೯೬

ವಚನ|| ಇಂತನಂತಸಂಭ್ರಮಂ ಮಿಗೆ ಸಲಿಲಕೇಳಿಯಂ ತಳೆದನಂತರಂ—

ಕಂ|| ಅರೆವಿರಿದಂಬುಜದಲರಂ |
ಕರತಳದೊಳ್ತಳೆದು ಕನಕವನಜರಜಂಗ ||
ಳ್ಪೊರೆದಿರೆ ನಿಜತನುಲತೆಯೊ |
ಳ್ಸಿರಿಯೆನೆ ನಿಂದರಸಿ ಸರಸಿಯಂ ಪೊರಮಟ್ಟಳ್ || ೯೭

ವಚನ|| ಮತ್ತಮಾಗಳ್—

ಕಂ|| ಎಳೆವಾಸೆ ತೊಡರ್ದುದೆನೆ ಮಿಸು |
ಪೆಳವಾಸೆಯದೆಸೆಯೆ ನಿಂದಳಂ ಕೈವಿಡಿದೊ ||
ಲ್ದೆಳೆವಾಸೆಯಾಂತನಂಬುಜ |
ದೆಳೆವಾಸೆಡೆಗೊಂಡ ಪುಳಿನದೆಡೆಗವನೀಶಂ || ೯೮

ವೃ|| ನನೆಗಳ್ಪೋರ್ವೆರ್ವೊಲು ವ್ರ್ವಸೂಸೆಮುಡಿಯಿಂವಾರ್ಬಿಂದುಗಳ್ಗಂಡದೊ
ಳ್ಪನದಶ್ಯಾಮಳಕುಂತಳಂ ಶಶಿಯೊಳಂಕಂ ತೋರ್ಪವೋಲ್ತೋರೆ ಕ ||
ಣ್ಗೊನೆ ರೋಡಾಡೆ ವಿಲೋಹಿತಂ ವಿರಹಿರಕ್ತಾಕ್ತಾಂಗಜಾಸ್ತ್ರಂಗಳಂ |
ವನಿತಾನೀಕಮದಿಂಬುವೆತ್ತು ಪೊರಮಟ್ಟೈದಿತ್ತು ಕಾಸಾರಮಂ || ೯೯

ಕಂ|| ಅಂಗನೆಯರಂಗ ಕಾಂತಿಯು |
ಪಾಂಗದ್ಯುತಿ ಮುಸುಕಿದಂತಿರೆಸೆದುದು ಕೊಳದೊಳ್ ||
ಪಿಂಗದವರೆತ್ತಿ ಸೂಸೆ ಕ |
ರಂಗಿಪ ಕುಂಕುಮ ಮಃಮಮಳ ಚಂದನರಸಮುಂ || ೧೦೦

ಕಂ|| ತಳಿರ್ವಣ್ಣವಾಂತಕಡೆಗ |
ಣ್ಬೆಳರ್ವಣ್ಣಂಬಡೆದತುಟಿದಳಿರ್ಪರೆದಳಕಂ ||
ಮಿಳಿರ್ವ ನಿರಿವಿಣಿಲು ಮೆಸೆದುದು |
ತಳರ್ವೆಳವೆಣ್ಗಳ್ಗೆ ಕುಳಿರ್ವಕೊಳದಿಂದಾಗಳ್ || ೧೦೧

ವೃ|| ಪೋಗಳೆಂದು ತಡಿಯೊಳ್ಧರಣೀಶ |
ಸ್ತ್ರೀಗಣಂ ಸೆಲಸಿ ನೋಳ್ಪುದುಮಾಗಳ್ ||
ರಾಗದಿಂ ಸರಸಿಗೊಳ್ಪುಡೆಯಿಾವಂ |
ತಾಗಿ ಪಬ್ಬಿದಲರ್ಗಣ್ಬೆಳಗೆತ್ತಂ || ೧೦೨

ಕಂ|| ಅಂಬರಮುದಮರೆ ನಾಂದು ನಿ |
ರಂಬರೆಯಂತಿರ್ದ್ದ ಯುವತಿಗಿತ್ತಪಳೆನೆ ಪೀ ||
ತಾಂಬರಮಂ ಸರಸಿ ಸುವ |
ರ್ಣಾಂಬುಜರಜಮೆಲರ ಪೊಯ್ಗಳಿಂ ನೆಗೆದೆಸೆಗುಂ || ೧೦೩

ತರಳೆಯರೆಮುಗುಳ್ಪಂಬುಜ |
ದರಲಂ ಕೊಯ್ದೊಯ್ದರೆಂದು ಮರಿದುಂಬಿಗಳಾ ||
ಸರಸಿಯೊಡನಳ್ತು ದೂರುವ |
ಸರಮೆನೆ ಕರಮೆಸೆದುದವರಗಾವರಮುದರೊಳ್ || ೧೦೪

ತೆರೆಮುಸಗೆ ನೆಗೆದು ನಿಂದಂ |
ಬುರುಹದೊಳೆಳವಿಣಾಂಗಳಿರೆ ವಿರಾಜಿಸಿದುದು ಶ ||
ತ್ಸರಸಿ ಪೊರಮಟ್ಟು ಪೋಪಾ |
ತರುಣಿಯರಂ ನಿಳ್ಕಿನೀಕ್ಷಿಪಂತಿರೆ ಕೊಳದೊಳ್ || ೧೦೫

ವೃ || ಕರದಿಂದಂ ಪಿಕ್ಕಿ ಬಲ್ಪಿಂದಲರ್ದಕುಮುದಮಂ ಸೂಡೆ ಕಂಜಾಕ್ಷಿ ಕಾಶ್ಮೀ |
ರರಸಂ ಕಸ್ತೂರಿಯುಂ ಕೂಡಿರೆ ಬಿಡದದರೊಳ್ಕೇಳಿಯಿಂ ಪೀಲಿಗಣ್ಣಂ ||
ತಿರೆ ತಾಂ ಶಕ್ಕೇಶಬಂಧಂ ನವಿಲೆನೆ ಕರಮೊಪ್ಪಿತ್ತು ಕಚ್ಚಿರ್ದ್ದಕಾಕೋ |
ದರನೆಂಬಂತಾಗೆ ನೇಲುತ್ತೆಸೆವ ನವಸರಃ ಪ್ರಾಪ್ತಶೈವಾಲಪಾಶಂ || ೧೦೬

ಕಂ|| ಕುರುಳೆಂಬಮಾಲೆದುಂಬಿಗ |
ಳರವಿಂದಾಕರಸರೋಜದೊಳ್ಮಧುಕಣಮಂ ||
ಬರೆಪೀರ್ದ್ದಳ್ಕಿಸಲಾರದೆ |
ಭರದಿಂ ಕಾರುವವೊಲಿಳಿವಜಳಕಣಮೆಸೆಗುಂ || ೧೦೭

ವಚನ|| ಇಂತುಮಾಸಾರ್ವಭೌಮಲಲಾಮಂ ನಿರ್ವರ್ತಿತಜಲವಿಹಾರನಾಗಿ ಕಾಸಾರತಟದೊಳ್ಕಾಸಾರಘನಕಚಭರೆಯರೊಡಗೂಡಿ ನಿಂದಿರ್ಪ್ಪಾಗಳ್ಕೋಶರಕ್ಷಕರ್ನ್ನೀಡಿದವಿಮಳ ವಸನಸುಗಂಧಮಾಲ್ಯಮಣಿಭೂಷಣಂಗಳಂ ತಾನಮರಸಿ ಯುಮಾಪೃಥುನಿತಂಬೆಯರುಂ ಪರಿಗ್ರಹಿಸಿ ಬೇರೆಬೇರೆ ಪಸದನಂಗೊಂಡು ಪರಮಹರ್ಷದಿಂದಿನಿಸಾನುಂಬೇಗಮಿರ್ದ್ದು ವನಮಹತ್ತರನಂ ಕಡೆದು—

ಕಂ|| ಇದು ಮಾಮರಕಿದು ಮಲ್ಲಿಗೆ |
ಗಿದು ಸಂಪಗೆಗಿದು ಸರೋವರಕ್ಕಿದಶೋಕ ||
ಕ್ಕಿದು ಲತೆವನೆಗೆಂದಿತ್ತಂ |
ಪದಪಿಂ ಬಹುಭೂಷಣಾಂಬರಂಗಳನರಸಂ || ೧೦೮

ವಚನ|| ಅಂತಿತ್ತು ಮತ್ತ ಮಿರದೆ—

ಕಂ|| ಆವನನಂದನಮಧ್ಯದ |
ದೇವಾವನಿಜಾತಮೀತನೆಂಬವೊಲಿತ್ತಂ ||
ಶ್ರೀವಿಬುಧತತಿಗೆ ವಸುರತ್ನಾ |
ವಳಿಯಂ ರಾಜಶೇಖರಕ್ಷಿತಿಪಾಲಂ || ೧೦೯

ವಚನ|| ಅಂತು ವಿತರಣವಿಳಾಸಮಂ ನಿರ್ವರ್ತಿಸಿ ಕೆಳದಿಯರಂ ಕರಿಣಿಗಳನೇರಲ್ನಿಯಾಮಿಸಿ ನಿರತಿಶಯ ವಿಭವಂ ಮಿಗೆ ನಿಜನಿತಂಬಿನಿವೆರಸು ವನಮಂ ಪೊರಮಟ್ಟು ಕರೀಂದ್ರ ಕಂಧ

ರಾರೂಢನಾಗಿ ಪಟುಭಟಪಟಲ ಪರಿವೃತ ಜಯರವಮುಖರಮುಖವಂದಿಸಂದೋಹ ವಂದ್ಯಮಾನನಮಂದದುಂದುಭಿಮೃದಂಗಢಕ್ಕಾ ಕಹಳಾದಿ ವಾದ್ಯಾನವದ್ಯರವ ಪೂರಿತದಶದಿಶಾವಳಯ ನಾನರೇಂದ್ರವೃಂದಾರಕಂ ನಡೆತಂದು ನಿಜರಾಜಧಾನಿಯಂ ಪುಗುವಾಗಳ್—

ವೃ|| ಏಳಸತ್ಸೌಧಂಗಳೊಳ್ಸಜ್ಜೆಗಳ ನೆಲೆಗಳೊಳ್ದೇವ ಕೂಟಂಗಳೊಳ್ಕಿಂ |
ದೆಳವೆಣ್ಗಳ್ಕಂತು ಏಂತೊಪ್ಪುಗುಮೆ ಹರಿಗವಿಾಚೆಲ್ವು ಕೈಸಾರ್ಗುಮೇ ಕೇ||
ಳ್ಕೆಳದೀ ನೋಡೆಂದು ನೋಡುತ್ತೆಸೆಯೆ ಬಿಡದೆ ತನ್ನಂದಮಂ ಬಂದು ಪೊಕ್ಕಂ|
ಲಳನಾಯುಕ್ತಂ ನಿಜಾಂತಃ ಪುರಮ ನುರುಶಿವಾದ್ವೈತ ವಿದ್ಯಾ ಸಮುದ್ರಂ ||

ಅಳಿಪ್ರಭ ಲಲಾಟಗ ಜಳಾಳಕೆ ಖಳಾಪಹೆ ಬಳಾನ್ವಿತೆ ಮಿಳಿದ್ಘನ ಗುಣೆ |
ಬಳಾನುಜ ಬಲಿಪ್ರಿಯೆ ತಳಾಂಚಿತ ಜಳೋದ್ಭವೆ ಬಳಾಹಿತ ಮುಖಾಮರನತೆ ||
ಗಳಾನ್ವಿತ ಹಲಾಹಲ ಬಿಲೇಶಯ ಕಳೇವರ ವಿಳಾಸದೆ ಕಳಂಕರಹಿತೆ |
ಕಳಾಧರ ಕಳಾಧರೆ ಸುಲೋಚನೆ ಕಳೋಜ್ವಳೆ ಶಿಲೋಚ್ಚಯ ಸುತೇಜಯಜಯ

ಗದ್ಯ|| ಇದು ವಿನಮದಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿವೃತ ಪಗಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್ ರಾಜಶೇಖರ ವನವಿಹಾರಾದಿ ವರ್ಣನಂ ದಶಮಾಶ್ವಾಸಂ ಸಂಪೂರ್ಣಂ



## ಏಕಾದಶಾಶ್ವಾಸಂ

(ಸೂರ್ಯಾಸ್ತಮಯ, ಚಂದ್ರೋದಯ, ಚಂದ್ರಿಕಾ ವಿಹಾರಾಹಾದಿ ವರ್ಣನಂಗಳ್)

---

ಕಂ|| ಶ್ರೀ ಚಂಡಿಕಾ ಮುಖೇಂದು ವಿ |
ಲೋಚನ ರುಚಿಚಂದ್ರಿಕಾ ಚಕೋರಂ ಸತತ ||
ಶ್ಲಾಘ ಚತುರಂ ಭವಪಾಶ ವಿ |
ಮೋಚಕ ನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವಚನ|| ಅನಂತರ ಮರಸನ ಮಾಣಿಕ್ಯ ಸುತಂಬೆರಸು ರಾಜಗೃಹದ್ವಾರದ ಪಜ್ಜಳಿಪ ಬಜ್ಜರದ ಸೆಜ್ಜೆವನೆ ಯೊಳೊಡ್ಡೋಲಗಂ ಗೊಟ್ಟಿರುತ್ತು ಮಿರೆಮಿರೆ—

ಕಂ|| ಗಗನ ಗೆಜನಿಟಿಲ ತಟದಿಂ |
ಜಗುಳ್ದಂತೆ ಪುರಾಣರಶ್ಮಿ ಮಣಿಮಯ ಮುಕುರಂ ||
ಮಿಗೆ ಮೆರೆದುದರರೆ ಪಶ್ಚಿಮ |
ನಗದಗ್ರದೊಳಿಳಿದು ತೊರ್ಪ್ಪದಿನ ಕರಬಿಂಬಂ || ೨

ವಚನ|| ಅಂತುಮಲ್ಲದೆಯುಂ—

ಕಂ|| ಪಡುವೆಟ್ಟ ನಡೆಯೊಳೊಪ್ಪುವ |
ಕಡೆಲೊಡೆಯನ ಮಡದಿ ತೇದ ಸಿಂಧೂರದ ಕೆಂ ||
ಪಿಡಿ. ದೆಸೆವ ಸಾಣೆಗೆಯಿದೆನೆ |
ಬೆಡಂಗು ವಡೆದಿರ್ದ್ದ ದಸ್ತ ಭಾಸ್ಕರಬಿಂಬಂ || ೩

ವಚನ|| ಮತ್ತಂ—

ಕಂ|| ಇದುಸಂಧ್ಯಾನಟರುದ್ರನ |
ವಿದಿತಜಟಾ ಕ್ಷ್ಮಬ್ಧ ಫಣಿ ಮಹಾಬಿಲಮಂ ತ ||
ಳ್ವದೆ ಖಗಲೊಗೆದಿರೆ ಪೊಳೆವ |
ಗ್ಗದ ಫಣಮಣಿ ಯೆನಿಸಿ ಶರುಣ ರುಚಿರವಿಬಿಂಬಂ || ೪

ಶರಧಿಗತಪ್ರತಿಬಿಂಬಂ |
ಸರಿಸದೊಳಿರೆ ಬದ್ಧರಶ್ಮಿಯುತ ರವಿಬಿಂಬಂ ||
ಹರನಾಟ್ಯಕೆ ಕಾಲನಟಂ |
ಕರಮೆತ್ತಿದ ಪೊನ್ನ ತಾಳಮೆನೆ ಕಣ್ಗೊಳಿಕುಂ || ೫

ಒದೆಯೆ ನಭೋಲಕ್ಷ್ಮೀವಧು |
ಪದಪಿಂ ವರುಣಾಶೆಯೆಂಬಶೋಕೆಯ ಲತೆ ಕೆಂ ||
ಪೊದವಿದ ತಳಿರಂ ತಳೆದಂ |
ದದೆ ತಳ್ತೆಸೆದಿರ್ದ್ದ ದರರೆ ಸಂಧ್ಯಾರಾಗಂ || ೬

ಅರುಣಂ ಬಳಲ್ದ ತುರಗೋ |
ತ್ಕರಮಂ ವ್ಯೈದೊಳೆಯ ಲಬ್ಧಿಯೊಳ್ತೆಗೆದು ಕೆಲ ||
ಕ್ಕಿರಿಸಿದ ರನ್ನದ ಪಲ್ಲಣ |
ದಿರವೆನೆ ನೆರೆನೆಗೆದ ಸಂಜೆಗೆಂಪಸೆದಿರ್ಕ್ಕುಂ || ೭

ವಚನ|| ಅಂತುಮಲ್ಲದೆಯುಂ—

ವೃ|| ಗಗನಾಂಭೋರಾಶಿಯೊಳ್ತಳ್ತಿಸೆವ ಪವಳವೋ ಪಶ್ಚಿಮಾಶಾಂಗನಾಂಗ|
ಪ್ರಗತೋದ್ಯತ್ಕುಂಕುಮಕ್ಷೋದಮೋ ವರುಣಗೃಹದ್ವಾರಸೌವರ್ಣಹರ್ಮ್ಯ
ಸ್ಥಗಿತ ಶ್ರೀಪದ್ಮರಾಗಪ್ರಭೆಯೋ ಮದನ ಯಾತ್ರಾದಿಯೊಳ್ಪೊಯ್ದ ಕೆಂಬ ||
ಟ್ಟೆಗಳೊಳ್ಗುಡಾರವೋ ಪೇಳೆನೆ ಪಸರಿಸಿ ಸಂಧ್ಯಾರುಣಜ್ಯೋತಿ ತೋರ್ಕುಂ||

ವೃ|| ಎನ್ನ ತನೂಜೆ ನಿನ್ನರಸಿಯೊಳ್ಕೆಳೆಗೊಂಡೊಡನಿರ್ಪ್ಪಳಾಗಳುಂ |
ನಿನ್ನ ತನೂಜೆ ಯೆನ್ನರಸಿ ಕೇಳದರಿಂದೆಮಗಿಲ್ಲ ಭೇದಮಿ ||
ನ್ನಿನ್ನ ಮಗಂಗೆ ಕಾಯದಿರೆನುತ್ತೆ ಸರೋನಿಧಿ ಬಂದಭಾನುವಂ |
ಮನ್ನಿಸುತಿತ್ತ ಪೀತವಸನಂ ನಿಜಮೆಂದೆನೆ ಸಂಜೆ ರಂಜಿಕುಂ || ೯

ವಚನ|| ಮತ್ತಮಾಗಳ್—

ಕಂ|| ಇನವಿರಹಿಣಿ ಪದ್ಮಿನಿ ಕಾಂ |
ತನಗಲ್ಕೆಯ ನಾಂತಿರುಸುಗೆ ಮುಳಿವ ನಿಶಾಕಾಂ ||
ತನ ಕರಕೆ ಬೆರ್ಚ್ಚಿ ಮುಚ್ಚಿದ |
ಳೆನೆ ಮೊಗಮಂ ಮುಗಿವ ಪಂಕಜಂ ಕರಮೆಸೆಗುಂ || ೧೦

ಅಲರಂಬಂಗಂ ಬಾಗದಿ |
ದಲರ್ದ*ಂಬುಜಮೆಂದು ಬಂದು ತಜ್ಜಯ ಯಾತ್ರಾ ||
ವಿಲಸತ್ಸಮಯದೆ ಮುಗಿಯಿಪು |
ದೆಲರೆನೆ ಮುಗಿವಂಬುಜೋತ್ಕರಂ ಕರಮೆಸೆಗುಂ || ೧೧

ಹರನೇತ್ರಸಖಂ ಗಡ ಮುರ |
ಹರನೇತ್ರಂಗಡ ವಿಧಾತೃಜನಕಂಗಡ ತಾ ||
ವರೆಯ ದಕರೆಯಾದುದು ಗಡ |
ಸಿರಿಯೆನೆ ತಿಳಿ ಕಾಲವಶಮ ನಾರ್ಕಳಿದ ಪರೋ || ೧೨

ಎಲೆನೈದಿಲೆ ಸಿರಿಯಿದರೊ |
ಳ್ನೆಲಸಿದೆ ಯೆನೆ ಮೊರೆವ ನೆವದಿ ನಳಿಯದು ನೋಳ್ಪಂ ||
ತಲರ್ದುದದ ನರಿದು ಭಯದಿಂ |
ಜಲಜಿನಿ ಮುಚ್ಚುವ ವ್ವೋಲ್ಲಿ ಮುಗಿದುದು ಕಮಳಂ || ೧೩

ಎಳಲುತ್ತಿರೆ ಪಕ್ಷ್ಮಂ ತನು |
ಬಳಲುತ್ತಿರೆ ಚಿತ್ತ ಮಿನಿಯಳಂ ನೆನೆನೆನೆಯು ||
ತ್ತಳಲುತ್ತಿರೆ ಜೀವನ ಮದು |
ತೊಳಲುತ್ತಿರೆ ಸುಳಿದು ಸುಯ್ದುದೊಂದು ರಥಾಂಗಂ || ೧೪

ಕಂ|| ನಲ್ಲಳಗಲ್ದಳಲುವ್ವಿರ್ಗರೆ |
ಮೆಲ್ಲನೆ ಚಾಯಲ್ಲಿ ಪಾಸೆದಳೆದು ರಥಾಂಗಂ ||
ಫುಲ್ಲಶರನಿಸುಗೆಗಾರದೆ |
ಫುಲ್ಲಂ ಕರ್ಚ್ಚಿದವೊಲಾಗ ಳೇಸೂಪ್ಪಿದುದೋ || ೧೫

ವೃ|| ನಳಿನದಳಂಗಳಲ್ಲಿ ಪುಳಿನಸ್ಥಳದಲ್ಲಿ ಲತಾವಿತಾನ ದೊ |
ಳ್ತಿಳಿಗೊಳದಲ್ಲಿ ತನ್ನ ಮನದನ್ನಳ ನೊಲ್ದರಸುತ್ತೆ ಸುತ್ತಿಕ ||
ಣ್ಗೊಂದಳಲಿ ಕರಂಗಿ ಕಂಪಿಸಿ ಪಲುಂಬಿ ಬಳಲ್ದು ತೊಳಲ್ದಳಲ್ದು ಮೇ |
ಣ್ಕಳವಳಿಸಿತ್ತು ಕಾಂತೆಯ ನಗಲ್ದೆಣೆವಕ್ಕಿ ನಿಶಾಪ್ರವೇಶದೊಳ್ || ೧೬

ಕಂ|| ಇಲ್ಲಿ ನಡೆತಂದೆವಪ್ಪಿದೆ |
ಎಲ್ಲಿ ಬಿಸಂಗೊಂಡೆವಿಲ್ಲಿ ಬಾಯ್ಗೂಡಿದೆವಿ ||
ಲ್ಲಿಲ್ಲಿ ನೆರೆದಿದ್ದೆವೆಂದ |
ಲ್ಲಲ್ಲಿ ಕರಂ ನಿಂದು ನೆನೆದು ಸುಯ್ಯುದು ಕೋಕಂ || ೧೭

ಪೊಸಕಳ್ತಲೆಯದು ತನುವಂ |
ಮುಸುಂಕೆ ಕಬ್ಬಕ್ಕಿ ಗೆತ್ತಗಲ್ವುದು ಚಕ್ರ ||
ಪ್ರಸರಂ ರಸೆಯೊಳದಲ್ಲದೊ |
ಡೆಸೆವಿರುಳೊಳಗೆಲ್ಕೆಯದಕದೇಂ ಸಮನಿಸುವೇ || ೧೮

ವೃ|| ಘನಸಂದಾಶ್ಯತಾಗತೀವ್ರಾನಲನೊಳೊಲವಿನಿಂ ಕಾಸಿತಿಗ್ಮಾಂಶುವೆಂದಂ|
ಬ ನವೀನಸ್ವರ್ಣ ಸತ್ಪಿಂಡ ಮನಮಳ ನಭಶ್ರೀಗಲಂಕಾರಮಂ ಮಾ||
ಳ್ಪೆನೆನುತ್ತಿಚ್ಛೈಸಿ ಪೂರ್ವೇತರ ಶರನಿಧಿಯೊಳ್ಕಾಲ ಮೆಂಬೋಜನಲ್ದ |
ಲ್ಜನಿಸುತ್ತುರ್ಬೆಳ್ದುದೋ ಕಬ್ಬೊಗೆಯೆನೆ ದೆಸೆದೀವಿತ್ತು ಘೋರಾಂಧಕಾರಂ ||
ನಿಜಕರದಿಂದೆ ರಾಜವಸುವೆಲ್ಲಮ ನೊಯ್ಯನೆ ಕಳ್ದು ನೀಲನೀ |
ರಜನಿಯ ಚಾಯ ಮುದ್ರಿಸಿ ಪಿಸುಣ್ಗಿಡೆದಪ್ಪಳೆನುತ್ತೆ ಮತ್ತೆ ನೀ ||
ರಜನಿಯೊಳೊಲ್ದು ಪುಷ್ಪವತಿ ಯೊಳ್ದಿವದೊಳ್ಬೆರೆದಿಂತು ಸತ್ಪಥ |
ತ್ಯಜನಮನಾಳ್ದು ಬಿಳ್ದಳಿದ ಸೂರ್ಯನ ದುರ್ಯಶಮುಷ್ಟ್ರದೀತಮಂ || ೨೦

ವಚನ|| ಮತ್ತಂ—

ವೃ|| ಪುರ[illegible]ಸ್ಮರನರ್ತನೋತ್ಸವದೊಳೋಸರಿಸಿರ್ದ ಕರೀಂದ್ರಚರ್ಮಮೋ |
ಸರಸಿಯನಾಳಿಮತ್[illegible]ತತಿಯಾಳಿಪಕಂಮಡುವೋ ನಭಸ್ತನಾ ||
ಲರುಚಿರಪಲ್ಲವಾವಲಿಯ[illegible]
ಲುರವಣಿಸುತ್ತೆ ಬಪ್ಪ ಬಲಿಭೆ[illegible]ವಿದತಾರಗೆದುತ್ತುಗಳ್ಗೆ ಮೇ |
[illegible]ನಜಾಲವೊ ಮಬ್ಬಿನೇಳ್ಗೆಯೋ || ೨೧

ಉಡುವೊಡೆ ನೀಲಚೇಲಮಲರ್ಗಣ್ಗಿರದೆಚ್ಚುವೊಡಂಜನಂ ಬಳ |
ಲ್ಮುಡಿಯೊಳೆ ತಾಳ್ದೊವಡುತ್ಪಳದಳಸ್ರಜಮಂಗದೊಳಣ್ಪುಗೈದು ಬೊ ||
ಟ್ಟಿಡುವೊಡೆ ಭಾಳದಲ್ಲಿ ಮೃಗನಾಭಿಜಮಿಂದ್ರಮಣಿ ವಿಭೂಷಣಂ |
ತುಡುವೊಡೆ ಜೋಡೆಯಗ್ಗ್ರ ಪಿರಿದಾದುಗು ಪರ್ಬಿದಮರ್ಬ್ಬ ಲೋಕಮಂ||

ವ|| ದ್ರುತವಿಳಂಬಿತವೃತ್ತಂ—

ವೃ|| ಬಿಗಿದಬೆಳ್ಳಿಯ ನುಣ್ಮಣಿಯಂತೆ ವೋ |
ಲ್ಭಗಣವೊಪ್ಪಿರೆ ಕಾಲವನೇಚರಂ ||
ಜಗದಲೋಚನಮೀನಕೆ ಬೀಸಿದಾ |
ನೆಗೆಳ್ದಕರ್ಬ್ಬಲೆವೋಲ್ತುಮವೊಪ್ಪುಗುಂ ||　　೨೩

ವಚನ|| ಅಂತಿಟ್ಟಣಿಸಿ ಪರ್ಬಿದಂಧಕಾರದಲ್ಲಿ—

ವೃ|| ಬಳೆಗಳ್ಗಲ್ಕೆನದಂತೆ ಕಣ್ಬೆಳಗದೆತ್ತಂ ಸೂಸದಂತಿಟ್ಟಮಂ |
ಜುಳಭೂಷಾಳಿಯ ಶಿಂಜಿತಂ ನೆಗಳದಂತಾಸ್ಯಾಬ್ಜಗಂಧಕ್ಕೆ ಮಂ ||
ಡಳಿಗೊಂಡಾರಡಿಮಿಂಡು ಗಾವರಿಸದಂತೋರಂತೆ ಜಾಣ್ಮೆಕ್ಕೆ ಪುಂ |
ಶ್ಚಳಿಯರ್ಬ್ಬಂದುಪಕಾಂತಸೂಚಿತನಿಶಾಂತಾಂತಂಗಳಂ ಪೊರ್ದಿದರ್ ||　೨೪

ವಚನ|| ಅವರೊಳೊರ್ವ್ವಳ್—

ಕಂ|| ಕ್ಷಣರುಚಿರುಚಿರೇಕ್ಷಣೆ ಪಾ |
ರ್ವಣವಿಧುಮುಖಿ ಪಾಣ್ಬೆ ಪೋಗೆಲಳವಲ್ಲದೆ ತೆ ||
ಲ್ಲಣಿಸಿ ಪೆಡಂಮೆಟ್ಟುತ್ತಂ |
ಗಣಕ್ಕೈದುತೆ ಸುಯ್ದು ಬೈದಳಾಕಮುಳಜನಂ ||　　೨೫

ಮಾರನೃಪಂ ಕಾರೊರೆಯೊ |
ಳ್ಕೂರಸಿಯುಂ ಪುಗಿಸುವಂತೆ ವೀಧಿಯ ತಮದೊಳ್ ||
ಜಾರೆ ಘನಧೀರೆ ತನುರುಚಿ |
ಸಾರಾಂಗೆ ಪೊದಳ್ದು ಪೊಕ್ಕು ಬರ್ಪ್ಪವಳೆಸೆದಳ್ ||　　೨೬

ರಸೆಯಂ ಪರ್ಬಿದಮರ್ಬ್ಬಿನೊ |
ಳಸಮಶರಂ ನಿಜಶರಂಗಳಿಂ ಗುರಿನೋಡು ||
ತ್ತಸತಿಯರನಿಸುವನವರ್ಗಳ |
ಬಿಸರುಹದಳಧವಳವಿಪುಳ ಕೇಕರ ರುಚಿಯಿಂ ||　　೨೭

ವೃ|| ಉಟ್ಟು ತಮಾಲಪಟ್ಟೆಯನೆ ಕತ್ತುರಿಯಂ ನಿಜದೇಹದಲ್ಲಿಗ |
ಣ್ಪಿಟ್ಟು ಸುರೇಂದ್ರನೀಲಮಣಿಭೂಷಣಮಂ ತಳೆದುತ್ಪಳಸ್ರಜಂ ||
ಬಟ್ಟದುರುಂಬಿನೊಳ್ಮೆರೆಯೆ ನೀಲದ ಚೇಲದ ಮೇಲುದಾಂತು ಕ |
ಣ್ಗೆಟ್ಟಳಮಾದಳೊರ್ವ್ವಳಿಳಿಯಳ್ತಮಮಂ ಪದೆದಪ್ಪಿದಂತೆವೋಲ್ || ೨೮

ವಚನ|| ಆಗಳೊರ್ವ್ವಳ್ದೂತಿ ಧೂರ್ತನಿರ್ಪ್ಪಸಂಕೇತಸದನಕ್ಕೆ ನಿಜಸಖಿಯ ನೊಡಗೊಂಡೇಳ್ತಂದು ಕಳಿಪುವಲ್ಲಿ—

ವೃ|| ಮುಳಿಯದಿರಾಳಿ ನಿನ್ನ ಮನದಾಸೆರಮಾತುಮನಾಡಿ ಪೊಳ್ತ ನೀಂ|
ಕಳಿಯದಿರಾತನೊಳ್ನಖರದಕ್ಷತಸಂತತಿಯಂ ರತಾಂತದೊ ||
ಳ್ತಳೆಯದಿರುಟ್ಟುದಂ ಕಳೆಯದಿರ್ನ್ನೆರೆದೀಗಳೆ ಬೇಗಬರ್ಪ್ಪುದು |
ತ್ಪಳಸಖಮಂಡಳೋದಯಕೆ ಮುನ್ನಮೆನುತ್ತರೆ ಬುದ್ಧಿವೇಳಿದಳ್ || ೨೯

ವಚನ|| ಅವಳಂದುದನಪ್ಪುಕ್ಕೆದುಪಕಾಂತನೆಡೆಗೆ ಬಂದು—

ವೃ|| ಉಡುಗಣದಂತೆ ಮೈಯೊಳಿಡಿದೊಪ್ಪೆ ಬೆಮರ್ನ್ನಿಜನೇತ್ರಕೈರವಂ |
ಬಿಡದನುರಾಗಮಂ ಕಳೆಯೆ ಪೆರ್ಮ್ಮಲೆಯೆಂಬೆಣೆವಕ್ಕಿ ಗಾಸಿಯಂ ||
ಪಡೆದಿರೆ ತತ್ಕರಾಹತಿಯಿಸಂದಿನನಿಲ್ಲದವೇಳೆಯಲ್ಲಿರು |
ಳ್ಮಡದಿವೊಲಂಬರಂಬೆರಸು ಪಾಣ್ಬೆ ಕಳಾನಿಧಿಯೊಂದುಗೂಡಿದಳ್ || ೩೦

ವಚನ|| ಮತ್ತಮೊಂದೆಡೆಯೊಳೊರ್ವ್ವಳ್ಪಾಣ್ಬೆ—

ವೃ||ಉಗುಗೊರ್*ನೆನಾಂಟದಂತೆ ಪಿಡಿ ಬಲ್ಮೊಲೆಯಂ ನಿರಿಯಂ ಸಡಿಲ್ಚಿ ನೀ |
ನುಗಿಯದಿರುಟ್ಟುದಂ ಜಡಿದು ಪೊಯ್ಯದಿರೊಯ್ಯನೆ ಮೆಯ್ಯ ಬಾಸುಳಂ ||
ನೆಗೆಪದಿರೆನ್ನ ಚೆಂದುಟಿಗೆ ಪಲ್ಮೊನೆ ನಾಂಟದಮಾಳ್ಕೆಯಿಂದೆ ಮೆ |
ಲ್ಲಗೆ ಮಿಗೆ ಚುಂಬಿಸೆಂದಸತಿ ಶಿಕ್ಷಿಸಿದಳ್ಪ್ರಿಸಪಾಣ್ಬನೊರ್ವ್ವನಂ || ೩೧

ವ|| ಅದಲ್ಲದೆ ಪೆರತೊಂದುಶಾಣದೊಳೊರ್ವ್ವಜಾತಿಜಾರೆ ಜೌವನದ ಜಾರನಂ ಕಂಡು—

ಕಂ|| ಇನನಿಲ್ಲನಿಂದುಬಾರಂ |
ಘನತಿಮಿರಮಿದಪ್ಪುದಕಟ ನೇಹಮದಿಲ್ಲಂ ||
ಮನೆಯೊಳ್ಸೊಡರಿದೆ ಪೋದುದು |
ಜನರಹಿತಂ ನೆರೆಯಿದೆಂದು ಪದಿರಿಂ ನುಡಿದಳ್ || ೩೨

ವ|| ಅದಂ ಕೇಳ್ದಧಿರದ್ಯೈತಂದವಂ ಮದನಕೇಳಿವಡೆದೆಸೆದಿರ್ದ್ದನಲ್ಲಿ ಮತ್ತಮೊಂದೆಡೆಯೊಳ್—

ವೃ|| ತೊಡೆ ಕಡುಕಂಪಿಸುತ್ತು ಮಿದೆ ಮೈ ಬೆಮರುತ್ತಿದೆ ಕೆತ್ತು ಗುಂದದಿ |
ಟ್ಟೆಡೆವೊಳೆ ಮೋಹಿಸುತ್ತಿದೆ ವಿಲೋಚನ ಮುಂಚಿತ ಚಂಚಲತ್ವಮಂ ||

ಬಿಡದಿದೆ ಗದ್ಗದಂಬಡೆದ ಮಾತಿದೆ ಭೀತಿಯೊ ಕೂತ್ತರ್ರೀತಿಯೋ |
ಮಡದಿಗೆನುತ್ತೆ ಶಂಕಿಪನ ಸಂದೆಗಮಂ ಬಿಡಿಸಿತ್ತು ಮುಂಬದಂ || ೩೩

ವಚನ|| ಮತ್ತಂ—

ವೃ||ವದನೇಂದು ಜೋತ್ಸ್ನೆಯೆತ್ತಂ ಕವಿದವುದೆನುತುಂ ಪಾಣ್ಬ ನಾಸ್ಯಾಬ್ಜದೊ
ಳ್ಚಿದಳಕ್ಕುಂಕಣ್ಗದಿಮ್ಮಗ್ಗಂಚುಗುಮೆನುತದನಾವಿಾಲನಂಗೈದಳಕ್ಕುಂ| [ಳ್ಮ|
ಮದಭೃಂಗಂ ಬರ್ಕ್ಕವೆಂದಳ್ಕುತೆಪಿರಿದು ನಿಜಶ್ವಾಸಮಂಸೂಸೆಳಕ್ಕುಂ ||
ವಿದಿತಂತಾನೆಂಬಿನಂ ಜಣ್ಮೆಗುತುಪತಿಯೊಳ್ಕೂಡಿದಳ್ಜೋಡೆಯೊರ್ವ್ವಳ್|| ೩೪

ವಚನ|| ಮತ್ತವೊಂದು ಪಾಳ್ದೇಗುಲದಲ್ಲಿ —

ವೃ|| ಗಳನಿನದಕ್ಕೆ ಕಾತರಿಪಕಂಠವುನೊಯ್ಯನೆ ಸಂತವಿಟ್ಟು ಮೈ |
ಗಳ ಮುಸಪಿಂಗೆ ಮೈಮೆರೆವ ಚಿತ್ತಮನೆಳ್ಚರಿಸುತ್ತ ದೈನ್ಯಮಂ ||
ಗಳಪಲೊಡರ್ಚ್ಚಗದ್ಗದಿಪ ಮಾತುಗಳಂ ಮರೆಪಿಕ್ಕಿಪೊಯ್ಯಲಂ |
ದೆಳಸುವಕಯ್ಯನೋಸರಿಸಿ ಕೂಡುವ ಪಾಣ್ಬೆಯ ಜಾಣ್ಮೆ ಸಾಲದೇ || ೩೫

ಕಂ|| ಆಗಳೆ ಮುಳಿಸಾಗಳೆ ತಿಳಿ |
ವಾಗಳೆ ಪೊಸಬ್ಬೆಗುಳಾಗಳೇ ಪೊಯ್ಗಳ್ಮ ||
ತ್ತಾಗಳೆ ಸವಿಸುಸಿಲೆಸಗುವ |
ಳಾಗಳೆ ಪಾಣ್ಬಂಗೆ ಸುರತ ಸುರಲತೆ ನಿಜದಿಂ || ೩೬

ವೃ|| ಮೆಲ್ಲನೆ ಬರ್ಪ್ಪಮೆಲ್ಲನಮುರ್ದ್ದ*ಪ್ಪುವಮೆಲ್ಲನೆಚುಂಬಿಪಳ್ಕರಿಂ|
ಮೆಲ್ಲನೆ ನೋಳ್ಪ ಮೆಲ್ಲನುಸಿರಿಕ್ಕುವ ಮೆಲ್ಲಸೆಲಲ್ಲೆಗೈವ ಮೇ ||
ಣ್ಮೆಲ್ಲನೆ ಪಾಯ್ವ ಮೆಲ್ಲನೊಡಗೂಡುವ ಮೆಲ್ಲನೆಸೌಖ್ಯವಾಂಪ ಕ |
ಣ್ಮೆಲ್ಲನೆಗಳ್ತಿ ದೋರಿ ಪೊಸಜಾಣ್ಮೆಯ ಪಾಣ್ಬೆಯರಿರ್ದ್ದರೋಪರೊಳ್|| ೩೭

ಕಂ|| ಇಡಿದ ತಮಮೆಂಬ ಜಗುನೆಯ |
ಮಡುವಿನ ಮಧ್ಯದೊಳೆ ಸುಳಿವ ಮೀಂಗಳಿ ವೆಂಬಂ ||
ತಿಡಿ ಕಿರುದು ಕುರುಗಿ ಮಿರುಗುತೆ |
ಕಡುಸೊಗಸಂ ಪಡೆದು ಮೆರೆರೆ ತಾರೆಗಳಾಗಳ್ || ೩೮

ವಚನ|| ಮತ್ತಂ—

ಕಂ|| ದಿನಮಣಿ ಯೆನ್ನೊಳಗಿರೆ ಮು |
ತ್ತಿನ ಮಣಿಯೇವಾಳ್ತೆಯೆಂದು ವನನಿಧಿ ಪೊಸಮು ||
ತ್ತಿನ ಮಣಿಗಳ ನಿದೆ ಚೆಲ್ಲಿದ |
ನೆನೆ ಮಣಿಸಿಭ ತಾರೆಗಳ್ಮಸಂಗೊಳಿಸಿರ್ಕ್ಕು || ೩೯

ಬಿಸಜಾಪ್ತನ ಬಿಸುವಿಸಿಲಿಂ |
ಬಸವಳಿದಾಕಾಶಂ ಕೇಶವಾಂಗದೆ ನಿಶೆಸಿಂ ||
ಪಿಸಿದ ಮಲಯರುಹ ರಸಕಣ |
ವಿಸರಂ ತಳ್ತಂತೆ ತಾರೆಗಳ್ಸೊಗಯಿಸುಗುಂ || ೪೦

ವೃ|| ಇನನಪರಾಂಬು ರಾಶಿಯೊಳೆ ಬೀಳ್ದಳಿಯುತ್ತಿರೆ ಕಂಡಗಲ್ಕೆಗಿ |
ಚ್ಚಿರ್ನ ಸೆಕೆಪತ್ತೆ ತಾಳಲಳವಲ್ಲದೆ ವಾಸರಲಕ್ಷ್ಮಿ ಕಣ್ಣನೀ ||
ರ್ವನಿಗಳನ್ನೈದೆ ಸೆಳ್ಪುಗುರ್ಗ*ಳಿಂ ಮಿಡಿಯಲ್ಸಿಡಿದಲ್ಲಿ ತಳ್ತುವೆಂ |
ದೆನೆ ರಮಣೀಯ ವಾದುವಮರಾಧ್ವದೊಳೆಲ್ಲೆಡೆಯಲ್ಲಿ ತಾರೆಗಳ್ || ೪೧

ಕಂ|| ಸುರಪಶಿಖಿ ಶಮನನೈಋತಿ |
ವರುಣಾ ನಿಲ ಧನಪತೀಶ ರೂಲವಿಂ ಕೆದರ್ದಂ ||
ತಿರೆ ಪುಷ್ಪಾಂಜಲಿಯುಂ ಶಂ |
ಕರಂಗೆ ಸಂಧ್ಯಾನಟಂಗೆ ನೆಗೆದುದು ಭಗಣಂ || ೪೨

ವಚನ|| ಅನಂತರದಲ್ಲಿ—

ವೃ|| ನಳಿನಂಕುಂದೆ ವಿಕಾಸವೊಂದೆ ಕುಮುದಂ ಸೊಂಪಿಂದೆ ಚಂದ್ರೋಪಳಂ
ಜಳಮಂ ಬೀರೆ ಪಯೋಧಿ ಮೀರೆ ವಿರಹಿವ್ರಾತಕ್ಕೆ ಕಾಯ್ಪೇರೆ ಕೋ ||
ಮಳೆಯ ಪರ್ಪಡೆ ಚಕೋರಿ ಸೋಡೆ ಮದನಂ ಪಂಚಾಸ್ತ್ರಮಂ ಪೂಡೆ ಚಾ |
ಪಳೆಯುಜ್ಜೋರ್ಡೆಯ ರೋಡೆ ಮೂಡಿದುದು ತೇಜೋಮಂದಿರಂ ಚಂದಿರಂ||

ಅಂಬರಪುಷ್ಪ ವಾಟಿಯೊಳರಲ್ದುಡು ಪುಷ್ಪಕದಂಬಮುಂ ಚಕೋ |
ರಾಂಬಕಿ ಪೂರ್ವದಿಗ್ವಧು ಕರಂ ತಿರಿಯಲ್ಕರಮೆತ್ತಿ ನಿಕ್ಕಿರಾ ||
ಗಾಂಬರದಂತೆ ಸಂಜೆ ನಸುಜಾರೆ ಜಲಕ್ಕನೆ ಪೊಣ್ಮಿದೊಂದುರೋ |
ಜಂ ಬಗೆವಂದು ರಂಜಿಪವೊಲುಜ್ಜ್ವಳವಾದುದು ಚಂದ್ರಮಂಡಳಂ || ೪೪

ವಚನ|| ಅಂತುಮಲ್ಲದೆಯುಂ—

ವೃ|| ಇದು ತಮಮೆಂಬ ಶಂಬರಧಿಯಂ ಸಲೆ ಪೀರ್ವಮಹೌರ್ವವಹ್ನಿಯೋ |
ಇದು ತಮಮೆಂಬ ಕರ್ಪಿಡಿದಕಾನನಮಂ ಸುಡುವಗ್ನಿಪಿಂಡವೋ ||
ಇದು ತಮಮೆಂಬ ಕೃಷ್ಣಭುಜಗವ್ರಜಮಂ ತವೆಕೊಲ್ವತಾರ್ಕ್ಷ್ಯವೋ |
ಇದು ತಮಮೆಂಬರಕ್ಕಸನ ನಿಕ್ಕುವ ಚಕ್ರಮೊ ಚಂದ್ರಬಿಂಬವೋ || ೪೫

ವಚನ|| ಮತ್ತಂ—

ಕಂ|| ತಿಮಿರ ಭ್ರಮರ ವ್ರಜಮಾ |
ಕ್ರಮಿಸಿರೆ ಭಗಣಪ್ರಸೂನ ಕುಲಕಿಂದ್ರ ದಿಶಾ ||

ರಮಣಿ ತೆಮರಲ್ಕೆ ಚಂಪಕ |
ಸುಮಕಂತುಕ ಮಿಟ್ಟಳೆನಿಕುಮಾವಿಧುಬಿಂಬಂ || ೪೬

ಸಿಡಿದ ಕಿಡಿ ಬಳಸಿದುಡುಗಣ |
ಮದುರ್ದ*ರಿ ಸಂಧ್ಯಾಂಶುವೆನೆ ತವೋಯುಮ ನೊಡಲಂ ||
ಸುಡಲೆಸಪಕಾಲಶೂಲಿಯ |
ಕಿಡಿಗಣ್ಗೆಣೆವಂದುದರುಣರುಚಿ ವಿಧುಬಿಂಬಂ || ೪೭

ಬಳಸಿದ ಕೆಂಬೆಳಗಿನಿಸಿನಿ |
ಸಳಿದುದು ಬೆಳ್ವೆಳಗು ಬಳೆದು ದೀಕ್ಷಿಸುವೆಳವೆ ||
ಣ್ಗಳ ಕಣ್ಗಳ ನುಣ್ಬೆಳಗುಸ್ಗಿಗ |
ಳಳುರ್ದಂತಿರೆ ಮೂಡಿ ಮೋಹಿಸುವ ಮೃಗಧರನಾ || ೪೮

ಒರಸೆ ಮದಮೈದೆ ಪೊರೆದಂ |
ತಿರೆ ಕರೆಯುಡುರಾಜಿ ಫೂತ್ಕರಿಸಿ ದಂಬುಕಣೋ ||
ತ್ಕರ ದಂತಿರೆ ಚಂದಿರ ನಿಂ |
ದಿರನಾನೆಯ ಪುಷ್ಕರಂಬೊಲೇ ನೊಪ್ಪಿದನೋ || ೪೯

ವೃ|| ನೀಲನಭಸ್ಸ್ಥಳಾಚ್ಯುತ ಲಲಾಟ ತಟಚ್ಯುತ ರಕ್ತಧಾರೆಗ |
ಳ್ಪಾಲಿಡುತೊಕ್ಕುಮಿಕ್ಕ ಪರೆದಂತಿರೆ ಪರ್ಬಿದಸಂಜೆಗೆಂಪು ತ ||
ತ್ಕಾಲ ಕಪಾಲಪಾಣಿಧೃತಚಂದ್ರಕಪಾಲಮೆ ಪೀರ್ದುದೆಂಬಿನಂ |
ಬಾಲರಸಾಲ ಪಲ್ಲವ ಸಮುದ್ಯುತಿ ತದ್ಯುತಿ ಪಿಂಗಿತಾಕ್ಷಣಂ || ೫೦

ಅಮಿತಾಖಂಡಾಂತರಿಕ್ಷೋನ್ನತಸುತಶಿವಲಿಂಗಾಂಘ್ರಿಯಂ ನೋಡಲುದ್ಯ |
ತ್ನಮುಮೆಂಬಾಸೂಕರಾಕಾರದ ಹರಿ ಧರೆಯೊಳ್ಪೊಕ್ಕಪೋಲ್ಪೋಗೆ ತಲ್ಲಿಂ ||
ಗಮುಹಾಶೀರ್ಷಾಗ್ರಮಂ ನೋಡುವಜವದೆಮರಾಳಾಂಗಮಂತಾಳ್ದಜಂಸಂ |
ಭ್ರಮದಿಂ ಪಾರ್ವಂತೆಕಣ್ಗೊಪ್ಪಿದುದಮೃತಕಳಾಪೂರಿತಾಂಗಂಸುಧಾಂಗಂ ||

ವಚನ|| ಮತ್ತಂ—

ಕಂ|| ಚೆನ್ನಾದುದಮೃತಕರಬಿಂ |
ಬಂನೋಳ್ಪರ ಕಣ್ಗೆ ಜೊನ್ನಮೆಂಬಮಹೇಶಂ ||
ತನ್ನಮಿಯಚ್ಚಿಕುರದೊಳೆ ಸ |
ಮುನ್ನತಸಿತನೀರಜಾತಮಂ ಸೂಡಿದವೊಲ್ || ೫೧

ವೃ|| ಭಗಣಮೌಕ್ತಿಕ ಧರಾಭೃತ್ಕೃಷ್ಣನಂ |
ದಗಿಯಲಿಂದ್ರಹರಿದದ್ರಿಭಾಂಡದಿಂ ||
ತೆಗೆದು ತಾಳ್ದನವನೀತಪಿಂಡಮಂ |
ಬಗೆಯೆ ಪೋಲ್ತುದಮೃತಾಂಶುಮಂಡಳಂ || ೫೩

ವೃ|| ವ್ಯೋಮಶ್ರೀಪತಿಪಾಂಚಜನ್ಯಮುಡುಮಾರ್ಗಾಗಾರಮುಕ್ತಾಮಯೋ
ದ್ದಾಮಶ್ರೀಕಳಶಂ ನಭೋಂಬುಧಿ ಸಿತಾಂಭೋಜಂ ವಿಯದ್ದಂತಿವ ||
ಕ್ತ್ರಾವೋದಾವಹ ಚಂದ್ರಕಾಂತಮುಕುರಂ ಚೆಲ್ವಾದುದಾಕಾಶಮಾ |
ರಾಮಾಜಾತಸಿತಾತಪತ್ರಮವದಾತಂ ಬಿಂಬಮುಬ್ಜಾರಿಯಾ || ೫೪

ಕಂ|| ಚಂಚಚ್ಚಕೋರಪಾಂಥ |
ಮ್ರ್ಮಂಚುವಸಂಭ್ರಮದಿನೀಂಟೆ ರಜನೀಸತಿ ಶೋ ||
ಭಾಂಚಿತಹಿಮಕರಕಲಶದಿ |
ನೀಂ ಚಂದ್ರಿಕೆಯೆಂಬ ಜಲಮನೆರೆದಳೊ ನಭದೊಳ್ || ೫೫

ತಮಮೆಂದು ವಿಧುಂತುದನಾ |
ಮಮನಿಟ್ಟದರಂಗೆರುಚಿಯುನಾಂತುದಿದೆಂದಾ ||
ಹಿಮರುಚಿ ಕರದಿಂ ಸದೆದಂ |
ತಿಮಿರಮನಿಸಿಸುಳಿಯದಂತೆ ಬಿಡದೆಲ್ಲೆಡೆಯೊಳ್ || ೫೬

ಎಳವಳಿಕನ ಕರಗದೊಳು |
ಜ್ಜ್ವಳಜಳಮಂ ತೀವಿ ರಜನಿ ಪರಿಮಳಕೆಂದು ||
ತ್ಪಳಮಿಳಿಪಿದೊಡದು ತೋರ್ಪ್ಪವೊ |
ಲಳಿಮಳಿಸಂ ಶಶಿಕಳಂಕಮೇಂ ರಂಜಿಸಿತೋ || ೫೭

ವೃ|| ಭುವನಮನೆಲ್ಲಮಂ ಪುದಿದು ತೀವಿದಚಂದ್ರಿಕೆಯೆಂಬ ಪಾಲ್ಗಡ |
ಲ್ತವಕದಿನೆನ್ನ ಪುತ್ರನನಿಳಾಜನಮಿಾಕ್ಷಿಸೆ ದೃಷ್ಟಿಪಾತದಿಂ ||
ನವೆದಪನೆಂದು ತೂಪರಿದಶೀಕರದಂತಿರೆ ತಾರಕಾಳಿಯೊ |
ಪ್ಪುವಪಣೆಗಿಟ್ಟಕಜ್ಜಳದ ಬೊಟ್ಟಿನಲೊಪ್ಪಿದುದಿಂದುಲಾಂಛನಂ || ೫೮

ತಿಮಿರೋದ್ಯದ್ಯಮುನಾತರಂಗಿಣಿ ಪಿತಂ ತಾನೆತ್ತವೋದಂ ಗಡೆಂ |
ದು ಮಹಾದುಃಖದಿನೆಂಟುದಿಕ್ಕಿನೊಳೆ ನೋಡುತ್ತಿರ್ಪ್ಪದುಂ ಕೂಡೆ ಚಂ ||
ದ್ರಮನಾರಕ್ತತೆವೆತ್ತು ಮತ್ತುದಿಸೆ ತಾತಭ್ರಾಂತಿಯಿಂದಪ್ಪಿದ |
ಕ್ಕ್ರಮದಿಂದೆಂಬವೊಲಿಂಬುವೆತ್ತುದು ಕಳಂಕಂ ತತ್ಸುಧಾಧಾಮನಾ || ೫೯

ಗಿರಿಶಲಲಾಟಲೋಚನಧನಂಜಯನಿಂ ಪರಿದಗ್ಧನಾದಭಾ |
ಸುರಕುಸುಮೇಷುಪಂಕರುಹನಾಭನ ನಾಭಿಸಿತಾಂಬುಜಾತದೊಳ್ ||
ಮರಳಿ ಜಲಕ್ಕನುದ್ಭವಿಪನೆಂಬವೊಲೊಪ್ಪಿದುದಭ್ರಮಧ್ಯದೊ |
ಳ್ಕರಮೆಸೆದಿರ್ಪ ಚಂದ್ರಮನ ನುಣ್ಗರೆ ನೋಳ್ಪೊಡದೊಂದುಚೆಲ್ವಿನಿಂ || ೬೦

ಕಂ|| ಇದು ಪೂರ್ವದಿಶಾವಧುವಿ |
ತ್ರಿದಶಶಿಮಣಿಮುಕುರಮಮೃತಕರಮಂಡಳಮ ||
ಲ್ತಿದು ಚಿಹ್ನಮಲ್ತುಮಧ್ಯದೊ |
ಳೊದವಿದಮಾಪ್ಪೂರ್ಳಪು ವಿಷ್ಣುಪದವಿಷ್ಣುವಿನಾ || ೬೧

ವೃ|| ಚಂದ್ರಿಕಾಜಲಧಿ ತೀವಿ ಲೋಕಮಂ |
ಸಾಂದ್ರಮಾಗಿ ನೆಗೆದುರ್ವೆ ಭೀತಿಯಿಂ ||
ಚಂದ್ರಮಧ್ಯವಟಪತ್ರದಲ್ಲಿ ಲ |
ಕ್ಷ್ಮೀಂದ್ರನಿರ್ಪನೆನೆ ಲಕ್ಷ್ಮವೊಪ್ಪುಗುಂ || ೬೨

ದೆಸೆವೆಣ್ಗಳಂಗಮಂ ಮಿಗೆ |
ಮುಸುಕಿದ ತಿಮಿರಗ್ರಹಂಗಳಂ ಕೂಪ್ಪಿರ್ದೋ ||
ಡಿಸಿದಂ ಮೃಗಾಂಕ ಮಾಂತ್ರಿಕ |
ನಸಮಜ್ಯೋತ್ಸ್ನಾವಿಭೂತಿಯಂ ತಳಿದಾಗಳ್ || ೬೩

ಎರಳೆವರಿ ತನ್ನ ಕೋಡಿ |
ಟ್ಟೊರಸಿದೊಡೆ ಸುಧಾಂಗನಂಗಮಂ ಸೀಳ್ದಡೆಯಿಂ ||
ಸುರಿದು ಪಸರಿಸಿತೊ ಪೊಸಪಾ |
ಲ್ಸರಿಯೆನೆ ಬೆಳ್ದಿಂಗಳು ಮಿಳಿದದೇಂ ಮುಸುಕಿದುದೋ || ೬೪

ವೃ|| ಮಿಸುಪನಿಶಾನಿತಂಬಿನಿಗೆ ಬೆಳ್ಳುಡೆ ಯಾದುದು ಭಾನುರೋಚಿಯಿಂ|
ಬಸವಳಿದೀಧರಾಂಗನೆಗೆ ಚಂದನಲೇಪನಮಾದುದಂಬುಜ ||
ಪ್ರಸರದಗಲ್ಕೆಯಿಂ ನೆಗೆದ ತುಂಬಿಗೆ ಮಲ್ಲಿಗೆಮಾಲೆಯಾದುದಾ |
ಪಸಿದಚಕೋರಿಗಳ್ಗೆ ಸುಧೆಯಾದುದು ಕಾಂತಿ ಸುಧಾಮಯೂಖನಾ|| ೬೫

ಮೊಗೆಮೊಗೆದೀಂಟಿ ಯಿಾಂಟಿ ತನುಮಧ್ಯಕೆ ತಳ್ವದೆ ಸುತ್ತಿಸುತ್ತಿ ವೇ |
ಣಿಗೆ ಮಿಗೆ ಸೂಡಿಸೂಡಿ ಲಲಿತಾಂಗದೊಳೊಯ್ಯನೆ ಪೂಸಿಪೂಸಿ ಮೆ ||
ಲ್ಲಗೆ ಬಿಡದೆಬ್ಬಿರ್ಯೆಬ್ಬಿರ್ ಬಗೆದಂದು ಮುಳುಂಗಿಮುಳುಂಗಿ ಕೌತುಕಂ |
ಬಗೆಗೊಳೆ ನೋಡಿನೋಡಿ ನಲಿದತ್ತಬಳಾಜನಮಚ್ಚಜೊನ್ನಮಂ || ೬೬

ಧರೆಯೆಲ್ಲಂ ಚಾರುಚಂದ್ರೋಪಳ ವಿರಚಿತಮಾದಂತೆ ತೋರ್ದತ್ತು ಮೇಲಂ |
ಬರಮೆಲ್ಲಂ ಕೂಡೆ ಧೌತಾಂಬರದ ನವವಿತಾನಂಬೊಲಿಂಬಾದುದಾಶೋ ||
ತ್ಕರಮೆಲ್ಲಂ ಚಂದನಾಲೇಪನದೆ ಬಳಿದವೋಲೊಪ್ಪುತಿರ್ದತ್ತು ಧಾತ್ರೀ |
ನರರೆಲ್ಲಂ ಚಂದ್ರಸಾರೂಪ್ಯಮನೆ ಪಡೆದರೆಂಬಂತೆ ಕಣ್ಗೊಪ್ಪುತಿರ್ದರ್ || ೬೭

ಗಗನಮೆನಿಪ್ಪ ಪಾಳ್ಗೊಲದೊಳರ್ಕಸಮುದ್ಧೃತಿಗೈದು ಸಂಜೆಯೆಂ |
ಬಗಿನಿಯನಿಟ್ಟು ಮರ್ಬೆನಿಪ ಗೊಬ್ಬರಮಂ ತಳಿದಲ್ಲಿ ಚೆಲ್ಲಿ ತಾ ||
ರಗೆಗಳೆನಿಪ್ಪ ಬಿಳ್ತುಗಳ ನಂತವ ಕೈಂದವ ಬಂಬರೌಷ್ಯ ಕುಂ |
ಭಗತಸುಧಾಮರೀಚಿ ಜಳಮಂ ಸುರಿದು ಸಲೆ ಕಾಲಪಾಮರಂ || ೬೮

ಇದು ಚಂದ್ರಾತಪಮಲ್ತು ತೀವಿದಸುಧಾಪಾರಾಕರಂ ಮೇಲೆ ತೋ |
ರ್ಪುದಿದಂಭೋಜವಿರೋಧಿಮಂಡಳಮು ಮಲ್ತಲ್ಲೀಸುತ್ತಿರ್ಪಂಜೆ ಮ ||
ತ್ತಿದು ತಾಂ ಲಾಂಛನಮಲ್ತು ತದ್ವದನದೊಳ್ಕಚ್ಚಿರ್ದನೀಲಾಬ್ಜಮಿಂ |
ತಿದು ತಾರಾತತಿಯಲ್ತು ಪಕ್ಷಯುಗಳ ವ್ಯಾಕೀರ್ಣಬಿಂದುವ್ರಜಂ || ೬೯

ವ|| ಎಂಬಸಂಭ್ರಮಮನಪ್ಪು ಕೈದೊಪ್ಪುವ ಸಾಂದ್ರಚಂದ್ರಿಕಾಸಂಪದಮನಭೀಕ್ಷಿಸಿ-

ವೃ|| ಅವಧರಿಸೆನ್ನ ಬಿನ್ನಪಮನುರ್ವಿಪ ಪೂರ್ವದ ಪಾರ್ವಣೇಂದುಸಂ |
ಭವನವರುಂದ್ರಚಂದ್ರಿಕೆಯೊಳಾಂಪುದು ರಾತ್ರಿ ವಿಹಾರಕೇಳಿಯು ||
ತ್ಸವಮನೆನುತ್ತೆ ಕೈಮುಗಿದ ನಾಗರಿಕಂ ಗುಡಲಿತ್ತು ತಳ್ವದೇ |
ಳ್ದವನಿಪರೂಪ ಪಂಚಶರ ನೋಲಗದಿಂ ನಡೆತಂದ ನಳ್ತಿಯಿಂ || ೭೦

ವ|| ಅಂತೈತಂದಂತಃಪುರಮಂ ಪೊಕ್ಕು ಸುಗಂಧೋದಕ ಕೃತಸ್ನಾನನುಂ ವಿಭೂತಿ ರುದ್ರಾಕ್ಷ ವಿಳಸಿತ ಕಳೇವರನುಂ ಪರಿರಚಿತ ಶಿವಲಿಂಗಸಮರ್ಚನ ತತ್ಪ್ರಸಾದ ಪಾದೋದಕಾಸ್ವಾದನ ಸಂತುಷ್ಟಹೃದಯನುಂ ಸಾರಕರ್ಪೂರ ಸುರಭಿ ಪರಿಮಿಳಿತ ತಾಂಬೂಲ ನಿಜಮುಖಾಂತರ್ವಳಯನುಂ ಸರಸ ಪರಿಮಳ ಮಧುರ ಮಾಲತೀ ಮಾಲಿಕಾಲಂಕೃತ ಮನೋಜ್ಞ ಕಬರೀಭರನುಂ ಮೃಗಮದ ಲಲಾಮಲಸಿತ ಲಲಾಟ ತಟನು ಮಮಳಮೌಕ್ತಿಕ ಕರ್ಣಾಭರಣ ಕಮನೀಯ ಮುಖಮಂಡಳನುಂ ಭಗಣಭಾಸುರ ರುಚಿ ನಿಚಯ ನಿಚಿತರುಚಿರತರ ತಾರಾಹಾರ ರಮಣೀಯ ವಿತತೋರಸ್ಥಳ ನುಮತಿ ವಿಶದ ವಜ್ರಮಣಿ ಖಚಿತ ಕಂಕಣಾಭಿರಾಮ ಕರಾಗ್ರನು ಮನೇಕ ಮಣಿಗಣಾಗಣಿತ ಭೂಷಣ ಭೂಷಿತಾವಯವ ನುಮಭಿನವ ಕಸ್ತೂರಿಕಾಕಾಶ್ಮೀರ ಕದಂಬ ಕರ್ದಮಾನುಲಿಪ್ತ ವಕ್ಷಸ್ಥಳ ನುಮತಿನವೀನ ದಿವ್ಯಾಂಬರಾವೃತ ಸೌಂದರ್ಯ ವಿಗ್ರಹನು ಮಾಗಿ ನಾಗರಿಕಾದಿ ಭೋಗಸಖರಿಂದ ನುಕೂಲದಕ್ಷಿಣ ದುಷ್ಟಶಠರೆಂಬ ಶೃಂಗಾರರಸ ಪ್ರಧಾನ ನಾಯಕರಿಂ ಧೀರೋದಾತ್ತ ಮುಖಸರ್ವ ರಸಪ್ರಧಾನ ನಾಯಕರಿಂದಾವೃತನಾಗಿ ರಾಗದಿಂ ಸಚಿವಸುತಸಮೇತಂ ಚಂದ್ರಿಕಾವಿಹರಣಂಗೈಯಲ್ಕನಂದಂದು ನೃಪೇಂದ್ರ ಚಂದ್ರನಿಜ

ಕಟಾಕ್ಷವೀಕ್ಷಣ ಸಾಂದ್ರಚಂದ್ರ ಚಂದ್ರಿಕಾದ್ವಿಗುಣಿತ ಚಂದ್ರಿಕಾ ವಿಳಾಸನುಮಾಗಿ ಮದನ ಮದಮಧುಕರ ಮಧುರ ಮಾಲತೀ ಮಾಲಾನು ಕಾರಿಯಂ ಸೊಳಗೇರಿಯಂ ಪುಗುತಂದಿಂದ್ರದಿಗ್ಭಾಗದೊಳಂದಂಬಡೆದಿಂದುಬಿಂಬಮನ ವಲೋಕಿಸಾಗಳ್ನಾಗರಿಕಂ ಕೈಮುಗಿದಿಂತೆಂದಂ—

ಕಂ|| ಜೊನ್ನಂಪಾಲ್ಗಡಲಂತಿದೆ |
ಜೊನ್ನೊಡಲಂ ನಳಿನನಾವೆಯಂತಿದೆಚಿಹ್ನಂ ||
ತನ್ನಂಪೆತ್ತಳ ತವರೆನು |
ತುಂ ನೋಡಲ್ಕಳರ್ವ*ಮದನನಂತಿದೆ ನೃಪತೀ || ೭೧

ವಚನ|| ಅಂತುಮಲ್ಲದೆ—

ವೃ|| ಸಂಜೆಗೆ ರಾಗಮಾಗೆ ನಗೆ ನೈದಿಲಮಂದತಮೋಸಿತಾಂಬರಂ |
ತಾಂ ಜರಿದೊಪ್ಪೆ ರಾತ್ರಿಗುಡುಘರ್ಮಪಯಃಕಣಮೇಳೆ ಮೈಯೊಳೆ ||
ತ್ತಂ ಜವದಿಂ ನಭಸ್ಸ್ಥಳಿಗೆ ಸೋಂಕಿ ಕರಾಗ್ರದೆಕಣ್ಗೆ ರಂಜಿಪೀ |
ಮಂಜುಳಚಂದ್ರಮಂಗೆ ಮಹಿಯಲ್ಲಿ ಕಳಾನಿಧಿನಾಮಮೊಪ್ಪದೇ || ೭೨

ವಚನ|| ಎನೆ ಮುಗುಳ್ತು ಮತ್ತಮೊರ್ವನಿಂತೆಂದಂ—

ವೃ|| ದ್ವಿಜಚಕ್ರಕ್ಕನಿಮಿತ್ತಮಾತ್ಮಕರದಿಂ ಸಂತಾಪಮಂ ಮಾಡಿಯುಂ |
ದ್ವಿಜರಾಜಂ ಕಮಲಾರಿಯಾಗಿ ವಿಧು ಹಂಸದ್ವೇಷಿ ಮೇಣಾಗಿಯುಂ ||
ನಿಜದಿಂದಬ್ಜನಭಂಗಲಕ್ಷಣಯುತಂ ತಾನಾಗಿ ದೋಷಾಕರಂ |
ರಜನೀಸಂಚರನಾಗಿಯುಂ ಕುವಲಯಾಪ್ತಂ ನೋಡಿದೇಂ ಚಿತ್ರಮೋ|| ೭೩

ವಚನ|| ಎನೆ ಕೇಳ್ದು ಮಿತಮಚನನಿಂತೆಂದಂ—

ವೃ|| ದ್ವಿಜರಾಜಾಭಿಧೆಯೊಪ್ಪದೇ ಸಸಿತಪಕ್ಷಂಗೇನನಂತಾಶ್ರಯಂ |
ಗೆ ಜಗದ್ವಿಶ್ರುತಮಾಗದೇ ವಿಧುಸಮಾಖ್ಯಾಸಂ ಘನಶ್ರೀಯುತಂ ||
ಗೆ ಜನಂ ಮಚ್ಚದೆಯಬ್ಜಸಾಮಮಸೆ ದಲ್ದೋಷಾಕರಾಹ್ವಾನಮೀ |
ರಜನೀಚಾರಿಗೆ ಸಲ್ಲದೇ ಕುವಲಯಾಪ್ತಂ ರಾಜನೇಸಲ್ಲಸೇ || ೭೪

ವಚನ|| ಎಂದು ಮತ್ತಮಿಂತೆಂದಂ—

ಕಂ|| ಕುವಲಯಕಧಿಪತಿಯಪ್ಪನೆ |
ತವೆ ಲಕ್ಷಣಯುಕ್ತನಲ್ಲದಿರ್ದೊಡೆ ರಾಜಂ ||
ಕುವಲಯ ಕಧಿಪತಿಯಪ್ಪನೆ |
ತವೆ ಲಕ್ಷಣ ಯುಕ್ತ ನಲ್ಲದಿರ್ದೊಡೆ ರಾಜಂ || ೭೫

ಸುರತಿ ವರಚಕ್ರ ರುಚಿವಿ |
ಸ್ಫುರಿತ ಸಿತದ್ಯುತಿ ಮಹೋತ್ಪಳ ಪ್ರಿಯಮಿತ್ರಂ ||
ವರಮಂಡಳಾಂಕನೀಹಿಮ |
ಕರನೆಸೆದಪನಾದಿನೇಶನೆನೆ ನೋಡರಸಾ || ೭೬

ವಚನ|| ಎಂಬಚತುರವಚನ ನಿಚಯಮಂ ಕೇಳ್ದು ಮೆಚ್ಚುತ್ತುಂ ನುನುಜಮನೋಜನ ಲ್ಲಿಂ ಮುಂದಣ್ಗೆ ನಡೆತರುತ್ತಿರೆ ತೊಟ್ಟನೆ ಕಟ್ಟಿದಿರೊಳ್—

ವೃ|| ಸುತವಾರಸ್ತ್ರೀಕುಚಾಗ್ರಚ್ಯುತ ಮೃಗಮದಕಾಶ್ಮೀರಕರ್ಪೂರಧೂಳೀ
ಕೃತ ಧೂಳೀಕೇಳಿಚಂಚದ್ಭ್ರಮರ ಚಲಶಿಖಂಡಂ ಶದೀಯಾಲಯಾಲಂ ||
ಬಿಶಘಂಟಾನಾದ ಕೋಲಾಹಲರುತಿ ವಿದಳತ್ಕೈರವಾನೀತ ಮಧ್ವಂ |
ಚಿಶಲಾಲಂ ಲೀಲೆಯಿಂ ಬಾಲಕನೆನೆ ಸುಳಿದಂ ಸ್ವೈರಚಾರಂ ಸಮೀರಂ || ೭೭

ವಚನ|| ಅಂತು ಸುಳಿವ ಮಂದಾನಿಲನಂ ಮನದಕ್ಕರಿಂದಾಲಿಂಗಿಸುತುಂ ಬರೆವರೆ ಮದನ ಮಹಾರಾಜನ ಮನ್ನಣೆಯ ವಿಳಾಸಿನಿಯು ರೊಂದುಗೂಡಿ—

ವೃ|| ತರಳಾಪಾಂಗಪ್ರಕಾಶಂ ಕೆದರೆ ಮದಣಬಾಣಂಗಳಂ ಮಂಜುಮಂಜೀ |
ರರವಂ ಕಂದರ್ಪಬಾಣಾಸನಗುಣರುಚಿಯಂ ಸೂಸೆ ಮಂದಸ್ಮಿತಂ ಶಂ ||
ಬರಸಂಹೃತ್ಕೀರ್ತಿಯಂಮುಂತಿಡೆರತಿಪಲಸತ್ತೇಜಮಂ ಬೀರೆ ಬಿಂಬಾ |
ಧರರಾಗಂರಾಗಮಂಸೋಳ್ಪರೊಳೆಪಡೆಯುತುಂ ಪೋಯ್ತುಪಣ್ಯಾಪ್ರತಾನಂ||

ವಚನ|| ಆದನಾನಾಗರಿಕನರಸಂಗೆ ತೋರುತ್ತೈತರುತ್ತಿರೆಯಿರೆ—

ವೃ|| ಮನೆಮನೆದಪ್ಪದೊಪ್ಪಿದುದು ಮಾರನ ಪೆಂಪು ಮಹೋತ್ಪಲಾಸ್ತ್ರಕೀ |
ರ್ತನೆ ಮಕರಾಂಕ ಸಂಭ್ರಮಮನಂಗನ ಕೂರ್ಪುಮನೋಜ್ಞ ಪುಷ್ಪಧ ||
ನ್ವನ ಬಿರುದಾಂಕಮಾಲೆ ಮಧುಮಿತ್ರನ ಪೂಜೆ ಮನೋನಿವಾಸನಿಂ |
ಪಿನಕಥೆ ಮನ್ಮಥಕ್ಷಿತಿಪನಾಪ್ಪುರ್ವಮನೋಜನ ಮಂಗಳೋತ್ಸವಂ || ೭೯

ವಚನ|| ಮತ್ತಮಲ್ಲಿ—

ವೃ|| ನಗೆವೆಳ್ಪಂಬೆಳೆಜೊನ್ನಮಂ ಪರಪಿ ಕಾಂತಾಸ್ಯಾಂಬು ಜಾತಂಗಳಂ |
ನಗಿಪಭೂಷಣ ರೋಚಿರಾತಪಮನಾಗಳ್ಬೀರಿ ಕೂರ್ತೋಪರ ||
ಕ್ಷಿಗಳೆಂಬುತ್ಪಳಮಂ ಮರಲ್ಚುವರಜಸ್ರಂ ತಮ್ಮ ಮಾಗೆಂಬಸಂ |
ಪಗೆಯಿಂ ಮಚ್ಚಿರ್ಪರಾಣ್ಮದುಂಬಿಗಳನೇನಂ ಮಾಡರಬ್ಜಾಕ್ಷಿಯರ್ || ೮೦

ನಗೆಗಣ್ಣೋ ನವನೀಲ ನೀರರುಹವೋ ರಾಕಾನಿಶಾಕಾಂತನೋ |
ಮೊಗವೋ ಚೆಂದುಟಿಯೋ ರಸಾಲದಳವೋಂಧಮಿಲ್ಲವೋ ಕಾರಕ ||

ಮ್ಮುರ್ಗಿಲೋ ಪೊಂಗಳಸಂಗಳೋ ಮೊಲೆಗಳೋ ಕುಂಭೀಂದ್ರಕುಂಭಂಗಳೋ
ಬಗೆಗೊಳ್ವೀಜಘನಂಗಳೊ ಎನೆ ವಿಟರ್ವಿಭ್ರಾಜಿಕುಂ ವೇಶ್ಯೆಯರ್ || ೮೧

ವೃ|| ಕೊರಲೊಳ್ಕೊಂಕಿನ ಮಾತು ಮುದ್ದುಮೊಗದೊಳ್ಮಂದಸ್ಮಿತಂನೋಡದಂ|
ತಿರೆ ನೋಳ್ಪೊಂದು ವಿಡಾಯಮಕ್ಷಿಯೊಳೆ ಪುರ್ಬೊಳ್ಜರ್ಬು ಸೌಗಂಧಬಂ ||
ಧುರಮುಂದಶ್ವಸಿತಂ ಸುನಾಸಿಕೆಯೊಳೆಂದುಂ ಯೌವನಶ್ರೀವಿಳಾ |
ಸರುಚಿಸ್ಫೂರ್ತಿ ನಿಜಾಂಗದೊಳ್ಮೆರೆಯೆ ಕಣ್ಗಿಂಬಾದರಬ್ಜಾಕ್ಷಿಯರ್ || ೮೨

ನಗೆನೋಟಂ ಪೊಸಮಾತು ರೀತಿಗೆಮಕಂ ಗಾಂಭೀರ್ಯಮೌದಾರ್ಯಮು
ಚ್ಚಿಗಮುತ್ಸಾಹಮಲಂಪು ಸೊಂಪು ಸೊಗಸೊಯ್ಯಾರಂ ಬೆಡಂಗಳ್ಕರ ||
ಪ್ಪುಗೆಚೆಲ್ಲಂ ಚೆದುರೋಜೆ ಚಾಟುತನಮುಂದಂ ಬಂದಮೊಳ್ವೇಟಮಿ |
ಚ್ಛೆಗೆಸಂದೊಂದುವ ಕೂಟಮೆಲ್ಲಮವರ್ಗೆ*ಇಂಪೈಸಂದು ಮಚ್ಚರ್ದ್ದರ್ದೋ||

ವಚನ|| ಮತ್ತಮಿಂತೊಪ್ಪುವಸಿಂಗರದ ಸೀಮೆಯೆನಿಪಭಾಮಿನಿಯ ರೊಳೊರ್ವಕಾಮಿನಿ ಯೊತ್ತಗೊಳಲಿಂದು ನಿಜಗೃಹದ್ವಾರದ ಮಣಿಮಯ ಸ್ತಂಭಮಂ ನೆಮ್ಮಿ—

ವೃ|| ನಗೆಮೊಗಮಿಟ್ಟ ಕುಂಕುಮದಬೊಟ್ಟು ತುರುಂಬಿದಜಾದಿದೋರೆವ |
ಲ್ಮೃಗಮದದಣ್ಪು ತೊಟ್ಟನವಕಂಚುಕಮುಟ್ಟ ಸಿತಾಂಬರಂ ಕರಂ ||
ಝುಗಝುಗಿಪಚ್ಚರನ್ನದೊಡಮೊಪ್ಪುವಮಾಣಿಕಗೊಪ್ಪುಚೊಲ್ಲೆಯಂ |
ಬಗೆಗೊಳಿಸಿರ್ಪಸೋರ್ಮುಡಿ ಘನಸ್ತನಮೊಪ್ಪಿರೆ ನೀರೆ ತೋರಿದಳ್ || ೮೪

ವಚನ|| ಮತ್ತಮೊರ್ವಳಗಣ್ಯಲಾವಣ್ಯ ತಾರುಣ್ಯವತಿ—

ವೃ|| ಬಡನಡು ಬಟ್ಟಬಲ್ಮೊಲೆ ಬಳಲ್ಮುಡಿ ನಲ್ನುಡಿ ನೀಳ್ದಕಣ್ಮರ |
ಲ್ನಿಡುಮೆರಲಿಂಪು ಸೊಂಪಿಡಿದ ಚಂದುಟಿ ನುಣ್ದೊಡೆ ಚೆಲ್ವುದಾಳ್ದಮೆ ||
ಲ್ಲಡಿಕಡುಬಿಣ್ಪುಮೆತ್ತಮಾತುರುಗಿರ್ದವೆ ಸಣ್ಣಪುರ್ಬು ತೆ |
ಳ್ಪೊಡೆ ಸುಲಿಪಲ್ಗಳಂದದ ಕದಂಪಿರದೊಪ್ಪಿರೆ ಕಣ್ಗೆ ತೋರಿದಳ್ || ೮೫

ವಚನ|| ಮತ್ತಮೊರ್ವಳಪೂರ್ವಸೌಂದರ್ಯಸೌಭಾಗ್ಯವತಿ—

ವೃ|| ತೊಡೆದಜವಾದಿಯಿಂ ಮುಡಿದಕಮ್ಮರಲಿಂ ಪಿಡಿದಂಬುಜಾತದಿಂ |
ಜಡಿವಸಿತಂಬದಿಂ ಸುಡಿವಕೈಗಿಳಿಯಿಂ ಕೊಡದಂದಮಾಗಿ ಪೆಂ ||
ಪಡರ್ದಕುಚಂಗಳಿಂ ಕುಡಿತೆಗಂಗಳಿನಿಂಪಿಡಿದಾಸ್ಯಬಿಂಬದಿಂ |
ಬಡನಡುವಿಂದೆ ಚೆಲ್ವಿಡಿದ ಪೆಣ್ಮಣಿಯುಂ ನಡೆನೋಡದಂ ನೃಪಂ || ೮೬

ವಚನ|| ಮತ್ತಮೊರ್ವಳ್ಪ್ರಶಸ್ತನೆಚಿತ್ತಜನಮತ್ತಶಾಶಿನಿಯಂತೆ ಮುತ್ತಿನ ಮತ್ತವಾ ರಣಮಂ ತ್ರಿಭಂಗಿಯಿಂ ನೆಮ್ಮಿನಿಂದು—

ವೃ|| ಮೇಲಂಗೈದುಮಿರ್ಸುತೆ ಸುತಿಯಂ ವೀಣೆಯಂವಕ್ಷದೊಳ್ಮೇ |
ಣ್ಮಾಳುತ್ತುಂ ಪೆರ್ವೊಲೆಗೆ ಮೊಲೆ ತಾಂಪುಟ್ಟಿ ತೆಂಬಂತೆ ತೋರಲ್ ||
ಕೇಳಲ್ಕೆಂದೈತರೆ ವಿಟವೃಗಂ ಬಾಜಿಸುತ್ತಿರ್ದಳೊರ್ವಳ್ |
ಳ್ವೇಳಾವಳ್ಯಾದ್ಯಖಿಳವಿಲಸದ್ರಾಗಮಂ ರಕ್ತಿಯಿಂದಂ || ೮೭

ವಚನ|| ಅಲ್ಲಿ ಪೆರಳೊರ್ವಳ್ಳಾಣೆ ವೀಣೆಯಂ ಶ್ರುತಿಗೈದು ಸೋರೆಯಂ ಸ್ತನಾಗ್ರದೊಳ್ಳೊಂಕಿ ಸರಳತರ ಕರಾಂಗುಲಿಯನಿಟ್ಟು—

ಕಂ|| ಸುಲಲಿತೆ ವರಾಳಿಕುಂತಳೆ |
ವಿಲಸತ್ಕಲ್ಯಾಣಿ ಶಂಕರಾಭರಣಸಮು ||
ಜ್ಜ್ವಲವೇಣಿ ರಾಗರಂಜಿತೆ |
ಚಲಿಸದೆ ಪೊಸದೇಸಿ ಸೋಮಮುಖಿ ಬಾಜಿಸಿದಳ್ || ೮೮

ವಚನ|| ಅದಂ ಕೇಳ್ದು ಮೆಚ್ಚುತ್ತುಂ ಸಂಗೀತಸರ್ವಜ್ಞಂ ಮುಂದೆಸೆಗೆ ನಡೆತರುತ್ತುಮಿರೆಯಿರೆ ನಿಜಗೃಹದ ಮುಂದಣಮಣಿಯಾಂಕಣದೊಳ್ವಿದಗ್ಧೆಯನ್ನೆರೆದೆಳವೆಣ್ಗಳೊಡಗೂಡಿ ಗಾಡಿಯಿಂ ನಿಂದು ಶಶಿಕಾಂತದೊರಳೊಳ್ಕಂಬರಲ್ಕೆಸಕ್ಕಿಯಂ ಪೊಯ್ದಿಂದ್ರನೀಲದೊನಕೆಯಂ ನಿಡುದೋಳ್ಗಳಿಂನೆಗಪಿ—

ತ್ರಿಪದಿ|| ಮದನಂಗೆ ಜಯಮಕ್ಕೆ ಮಧುಗೆ ಸಂಪದಮಕ್ಕೆ |
ಬಿದುಗದಿರಿಂತು ನೆಲಸಿಕ್ಕೆರತಿಗೆ ಸಂ |
ಮದಮೆಂದು ತೊಲಗದಿರುತಿಕ್ಕೆ || ೮೯

ಮನದಿಚ್ಛೆಯಿಂ ಮುಂಚಿ ತನುವಿತ್ತು ನಲ್ಲರೊಂ |
ದನುವರಿದೊಂದಿ ಸವಿದೋರ್ಪ ಸೂಳೆಯರಾ |
ಮನೆಯ ಮುಂದಿರದೆ ಸುರಧೇನು || ೯೦

ಸುರತಕ್ಕೆ ಚೆಟ್ಟೈಸಿ ಮೇಲ್ವರಿವ ಕಾಂತನ ಕಂಡು |
ಕರಗಿ ಕಾತರಿಸಿ ನೆರೆವನೀರೆಯ ಮನೆ |
ಸಿರಿಗಂಬುಜಾತಮೆನಿಸದೇ || ೯೧

ಪೊರಮಿಂಚುಗೈವನಂ ಬರುವಾತುಗಾರನಂ |
ಕರುಬನಂ ಕಪಟಹೃದಯನಂ ಧೂರ್ತನಂ |
ತೊರೆಯದುದೆಗ್ಗತನವಲ್ತೆ || ೯೨

ಒರ್ವನೊಳ್ವೊಂಚಿಸಿ ಕೊರ್ವಿದಬೇಟಮ |
ನೊರ್ವನೊಳಿಲ್ಲದಿದ್ದೊಡಂ ತನಿವೇಟ |
ಮುರ್ವಿಸಿ ಪಣವಂ ಪಡೆವುದು || ೯೩

ತಾನೇ ಮೇಲಿಕ್ಕದೆ ಮಾನವಂ ಬಲಿದು ಕಾ |
ಮಾನುರಾಗತೆಯು ಮಸಕಿತ್ತು ಮೇಲಿಕ್ಕ |
ಲಾನೇಮುವರಿದು ಸೆರೆವುದು || ೯೪

ಸಗೆನೋಟನುಡಿಗಳಿಂ ತೆಗೆದು ಭುಜಂಗರ |
ಬಗೆಯ ಬಂದವರೊಳೊಡಗೂಡಿ ಮೋಹಿಪ |
ಳ್ಮಗುಳಂಬನರಸಿಗೆಣೆಯಲ್ತೆ || ೯೫

ಸ್ತನದ ಬಿಣ್ಪನೆ ನೋಡಿ ಮನಮಿಕ್ಕುವವ್ವಿರ್ಟ |
ಕ್ಕರ್ನಕಪಂಕಜದ ಬಿರಿಮುಗುಳನೆ ನೋಡಿ |
ಮನಮಿಕ್ಕುವಂತೆ ಮರಿದುಂಬಿ || ೯೬

ಚದುರಂಗನೆತ್ತಮಿಂಪೊದವಿದಪಾಡು ಸ |
ಕ್ಕದದೋದು ಹಾಸ್ಯಮಿನಿಗಬ್ಬಮೊಳ್ಪದಿ |
ಲ್ಲದಸೂಳೆವನೆಯೆ ಬರುವನೆ || ೯೭

ವಚನ|| ಎಂದು ಸುಪ್ವಿವಾಡನೆವದಿಂ [ವೇಶ್ಯಾನೀತಿಯುನೆಳೆವೆಣ್ಗಳ್ಗುಪದೇಶಿಪ ವಿದಗ್ಧೆಯರ ವಿಳಾಸಮನಿಳಾಪತಿತಿಳಕಂ ನಿರೀಕ್ಷಿಸುತ್ತುಂ ಬರುತ್ತಿರೆ ಮುಂದೊಂದೆಡೆಯಲ್ಲಿ—

ವೃ|| ಮೊಳೆವೆಳೆಲಜ್ಜೆ ಮೋಹಿಪ ಮುಗುಳ್ಮೊಲೆ ಮುದ್ದಿನಿಮಾತುಮಿಂಚನು|
ಚ್ಚಳಿಸುವ ಚೆಲ್ಲೆನೋಟ ಮಳಿಕುಂತಳ ಮುಜ್ಜ್ವಳಕಾಯ ಕಾಂತಿ ಮಂ ||
ಜುಳ ಮಧುರಾಧರಂ ಮಿಸುಪ ಸುಣ್ಗದಪುಣ್ಮುವ ಬಾಸೆ ಬೇಟಮುಂ |
ಬಳೆಯಿಸಿ ನೋಳ್ಪರೊಳ್ಮೆರೆವ ಮುಗ್ಧೆಯ ನೀಕ್ಷಿಸಿದಂ ನರೇಶ್ವರಂ || ೯೮

ವಚನ|| ಆಗಳ್ವಿಟನಿಂತೆಂದಂ—

ವೃ|| ನೋಡಿದೊಡಾಗಳಂತೆ ತಲೆವಾಗುವ ನೋಡದೊಡೊಲ್ದು ನೋಳ್ಪಮಾ
ತಾಡಿಸೆ ಸುಮ್ಮನಿರ್ಪನುಡಿಗುಂದಿರೆ ಮೆಲ್ಲನೆ ಸೊಲ್ಲಿಪಿಚ್ಛೆಯಿಂ ||
ಕೂಡಲೊಡರ್ಚೆ ಮೈದೆಗೆವಗಲ್ದಿರಲೊಯ್ಯನೆ ಸಾರ್ವಮುಗ್ಧೆಯೇಂ |
ಮಾಡಳೆ ಮಚ್ಚಿದೋಪನ ಮನಕ್ಕೆ ಮನೋಜಮಹೋತ್ಸವಂಗಳಂ || ೯೯

ವಚನ|| ಎಂಬನುಡಿಗೇಳ್ದಿವಂ ತನ್ನನುಭವಮುಂ ಪ್ರಕಟಿಸಿದಪನೆಂದು ನಸುನಗುತ್ತಲ್ಲಿಂ ತಳರುತ್ತಿರೆ ಮತ್ತೊಂದೆಡೆಯೊಳೊರ್ವಮುಗ್ಧೆಯೊಳಗೊಳಗೆ ಬಳೆದಳವಿಗಳಿದವಿರಹಾನಳನಿಂ ದಳವಳಿದು ಕಳವಳಿಸಿ ಕಳೆಗುಂದಿ ದಂದಮುಂ ನೆವಮಿಟ್ಟುಮರಸಿ ಧೈರ್ಯಂಗುಂದದಿರೆ ಕೆಳದಿ ದಿಳದಿಂತೆಂದಳ್—

ವೃ|| ಬೆಳರ್ಗ*ಂಪಂ ತಳೆದಿರ್ದ ಜೆಂದುಟಿದಳಿನ್ನಿರ್ಸ್ಸಾರವಾದತ್ತು ಮೈ |
ಗೆಳೆ ಕಂಪಂ ಪಡೆಯಲ್ಕೆಬಂದು ಪೆರಪಿಂಗುತ್ತಿರ್ಪುದೀನಿನ್ನ ಸು ||
ಯ್ಗಳೆ ತಾಗುತ್ತಿರೆ ಕೈಯೊಳಾಂತಕವಳಂ ಕಂದಿತ್ತಿದೇಂ ಕಾಂತೆ ನಿ |
ನ್ನಳವಂ ಪೇಳೆನೆ ನೀಳ್ದಕಣ್ಮಲರ್*ಳಿಂ ಬಾಷ್ಪಾಂಬುವಂ ತುಂಬಿದಳ್ ||೧೦೦

ವಚನ|| ಅಂತು ಕಣ್ಣೀರ್ಗಳಂ ತುಂಬಿ ತನ್ನೊಳಗನರಿದಾಪ್ರಿಯವಯಸ್ಯೆಯೊಳ್ಮರಸಲಾಗದೆಂದಿಂತೆಂದಳ್—

ವೃ|| ಎನಗಿನ್ನಾರ್ಹಿತೆಯುರ್ಸ್ಸರೋಜಮುಖಿ ಕೇಳ್ನಿನ್ನಿಂದೆ ನೀಂ ಪೋಗಿ ಕಾಂ|
ತನೊಳೋರಂತಿನಿವಾತನಾಡಿ ಮುನಿಸಂ ಬೇರ್ಕೈದು ನೇಹಂ ಮನ ||
ಕ್ಕನುವಪ್ಪಂತಿರೆ ಮಾಡಿ ತಳ್ವದೊಡಗೊಂಡೈತರ್ಪುದೆಂದಂದು ಕಾ |
ಮಿನಿ ಚೆನ್ನೈದಿಲಮಾಲೆಗೂಡಿ ಮಣಿಹಾರಂಗೊಟ್ಟು ತಳ್ತಪ್ಪಿದಳ್ || ೧೦೧

ವಚನ|| ಅಲ್ಲಿಂ ಬಳಿಯಿನವಳ್ನಿಜಸಖಿ ಸಖನಿರ್ದೆಡೆಗೆಬಂದು—

ಕಂ|| ಮುಗ್ಧೆ ಭವದ್ವಿರಹದೊಳೆವಿ |
ದಗ್ಧೆಯೆ ತಾನಾದಳಿಂದು ನೀಂ ಸೆರೆದೊಡೆ ಕೇ ||
ಳ್ಸ್ನಿಗ್ಧತೆಯಿಂದೆ ವಿದಗ್ಧೆಯೆ |
ಮುಗ್ಧೆಯೆ ನಿಪ್ಪಳ್ಬಳಿಕ್ಕಿದೇನಚ್ಚರಿಯೋ || ೧೦೨

ವೃ|| ಇದುಚಿತ್ರಂನಿನ್ನಶೈತ್ಯಾಸ್ಪದಹೃದಯದೊಳೊರ್ಮ್ಮೊರ್ಮ್ಮೆತಾನಿರ್ದುಬೆಂ
ದದೆ ಕಂದಿರ್ದಳ್ಭವದ್ವಲ್ಲಭೆಯವಳ ವಿಯೋಗಾಗ್ನಿಸಂತಪ್ತಚಿತ್ತಾ || [ದಂ
ಗ್ರದೊಳಿರ್ದ್ದುಂ ನೀನಜಸ್ರಂ ಕೊರಗಿದುದಿನಿತಿಲ್ಲಂಗಜಂ ಪಕ್ಷಪಾತಾ |
ಭ್ಯುದಯಕ್ಕಿಂಬಾದನೆಂಬಳಪೊಸನುಡಿ ಗೇಳ್ದೈದಿದಂ ಕಾಂತನಾಗಳ್ ||೧೦೩

ವಚನ|| ಅನಂತರಂ—

ವೃ|| ಬರೆತೆಗೆದಪ್ಪಿ ಬಾಯ್ದೆರೆಯನೊಯ್ಯನೆ ಚುಂಬಿಸಿ ಮುದ್ದುಗೈದು ಮೋ |
ಹರಸಮ ಸಂತರಂಗದೊಳಮುರ್ಚ್ಚೆ ನಿಮಿರ್ಚ್ಚೆ ನಖಕ್ಷತಂಗಳಂ ||
ಗುರುಕುಚದಲ್ಲಿ ಸತ್ಕಳೆಗಳುಣ್ಮುವ ತಾಣಮ ನಂಟಿ ಸಾರ್ದ್ದು ಸಾ |
ದರಮುಚಿತೋಕ್ತಿಯಂ ನುಡಿದು ಪೊಂಪುಳಿಯಿಂ ಪೊದಿಸುತ್ತೆ ನಲ್ಲಳಾ ||೧೦೪

ನುಡಿನುಡಿಗೊರ್ಮೆ ಮುದ್ದಿಸಿ ಮುಖಾಂಬುಜಮಂ ನಡೆನೋಡಿ ಚುಂಬಿಸು
ತ್ತೊಡನೊಡನಪ್ಪಿ ನುಣ್ಗುರುಳನೊಯ್ಯನೆ ತಿರ್ದ್ದುವೊದಳ್ದಲಜ್ಜೆ ಬೇ ||
ರ್ಪಡೆ ಪಡೆದಲ್ಲಿ ಕಾತರಮನಂದವಳೊಳ್ಕಳೆವೆತ್ತು ಕಾಣ್ಕೆಯಿಂ |
ದಡಿಗಡಿಗುರ್ವೆ ಮನ್ಮಥರಸಂ ನೆರೆದಂ ಮನದನ್ನನೊಲ್ಮೆಯಿಂ || ೧೦೫

ವಚನ|| ಇಂತು ನೆರೆದನಂತರಂ ರತಾಂತಶ್ರಾಂತಿಯಂ ತೀರ್ಚಲೆಂದು ನೆಲೆವಾಡದೊಳ್ಗಿಂದೆಳೆಗಾಳಿಗೆರ್ದೆಗೊಟ್ಟು ನಿಂದಮುಗ್ಧೆಯರಂ ನಾಗರಿಕನರಸಂಗೆ ತೋರುತ್ತುಮಿರೆ ಮುಂದೊಂದೆಡೆಯೊಳೊರ್ವಳೆಳೆವರೆಯದ ನಳಿನಾಕ್ಷಿ—

ವೃ|| ಕನಕ ಸರೋಜ ಕೋರಕ ಸಮಸ್ತನಮಂಡಳಮಧ್ಯದಲ್ಲಿ ಮಾ |
ನಿನಿ ಮನದನ್ನನಿತ್ತ ಸಖರೇಖೆಯ ಸೊಯ್ಯನೆ ನೋಡುವಾಗಳಾ ||
ತನೆ ಬರುತಲ್ಲಿ ಬಿಂಬಿಸೆ ನಿರೀಕ್ಷಿಸಿ ಬಿಂಬಮನಪ್ಪಿಕೊಂಡು ಜುಂ |
ಮನೆ ಪುಳಕಂಗಳೇಳೆ ರತಿಗೆಯ್ಯಲೊಡರ್ಚುವಳೇಂ ಪ್ರಮುಗ್ಧೆಯೋ || ೧೦೬

ವಚನ|| ಅವಳನರಸಂಗೆ ಕರಸಂಜ್ಞೆಯಿಂನಾಗರಿಕಂ ತೋರುತ್ತುಮಿರೆಯಿರೆ ಪೆರತೊಂದೆಡೆಯೊಳೊರ್ವಳ್ಚೆಗಾತ್ರವಾಗಳ ಮೊಗಮಂ ಕಿಸುಗಣ್ಣಿ ನೋಡಿ ದಾಕ್ಷಿಣ್ಯಮ ನುಳಿದಿಂತೆಂದಳ್

ವೃ|| ಮೊಗಮಂ ನೋಳ್ಪುದುಮಾಗಳಂತೆ ತಳೆವಾಗುತ್ತಿರ್ಪರ್ಸಂಪ್ರೀತಿಯಿಂ|
ಮಿಗೆ ಮಾತಾಡಿಸೆ ಸುಮ್ಮನಿರ್ಪರ್ ನಗಿಸಲ್ಕೆಂದಲ್ಲಿ ಸಾತ್ರ್ಗಂದು ಮೆ ||
ಲ್ನಗೆಮಾತಂ ಬಿಡದಾಡೆ ನೋಡೆ ಕುಚಭಾರಸ್ರಸ್ತ ಚೇಲಾಂಚಲಂ |
ದೆಗೆಯೆಲ್ಕೋಪಿಪೆ ಕೂರ್ಪರೇ ಮರವಿಟನ್ನಿರ್ನಾಟವಂ ಕಂಡವರ್ || ೧೦೭

ವಚನ|| ಮತ್ತಮದಲ್ಲದಿತ್ತಲೊಂದುಮಣಿಮಂದಿರದೊಳ್ಕಾಣಿಳಿಯದೆ ನಲ್ಲನೊಳ್ನೆರೆದು ಮಾಗಳ್ಪೊರಮಟ್ಟುಬರ್ಪುದು ಮರಿದಿಗ್ದರ್ಬರ್ದೆ ಬಳಿಕಿಂತೆಂದಳ್—

ವೃ|| ಸೂಳೆತನಕ್ಕಿದೇಂ ಸೊಗಸೆ ಲಜ್ಜೆ ನಿಜಾಲಯಕ್ಕೈದಿ ದೋಪರೊ |
ಳ್ಮೇಳಕೆ ಮೆಯ್ಯನೀಯದೆ ಕರಾಗ್ರದೆ ಪೊಯ್ಯದೆ ತಳ್ಕೆಗೈಯದು ||
ರ್ಜೀಳದೆ ತಳ್ತು ಸೀಳದೆ ನಖಾಗ್ರದೆ ತಾಳದೆ ಚುಂಬನಂಗಳಂ |
ಪೇಳದೆ ಮಾರಮಂತ್ರಮನಿದೇಂ ರತಿವಿದ್ಯೆಗೆ ಮುಯ್ಯನಾಂಪುದೇ || ೧೦೮

ವಚನ|| ಮತ್ತ ಮೊರ್ವಳ್ವಿದಗ್ಧೆಮುಗ್ಧೆಗೆ ಬುದ್ಧಿವೇಳ್ದಳದೆಂತೆಂದೊಡೆ—

ವೃ|| ಗರ್ವಂಗುಂದದಿರಿಂದುವಕ್ತ್ರೆ ಘನಗರ್ವಂ ದಾಳದಪ್ರೀತಿವ |
ಟ್ಟೊರ್ವಂಗಂ ಮನಮಿಕ್ಕದಿರ್ಸೊರ್ವಡ ಸೆಂದುಂ ಮಾಡದಿರ್ಕೂಟದೊಳ್ ||
ಪರ್ವಿರ್ದರ್ಗಳ ದಾಸೆಯಂ ಬಳಸದಿರ್ಕೊಟ್ಟಲ್ಲದೊಲ್ದಪ್ಪದಿ |
ಸ್ಸರ್ವತ್ರಾತಿಶಯಂ ತ್ಯಜೇದೆನಿಪುದಂ ನೀಂ ಮಾರದಿಮ್ಮಾನಿನೀ || ೧೦೯

ವೃ|| ನೋಡಿದೊಡಿನ್ನು ಮೊರ್ಮೆನಡೆನೋಡಳೆಯೆಂದನೆ ನೋಡುಸಾರ್ದುಮಾ
ತಾಡಿದೊಡಿನ್ನು ಮೊರ್ಮೆ ನುಡಿಯಳ್ಗಡಯೆಂದನೆ ಮಾತನಾಡು ಜಾ ||
ಣ್ಗೂಡಿ ವಿಳಾಸದಿಂ ಸುಳಿದೊಡಿನ್ನು ಮಿವಳ್ಸುಳಿದೆಯ್ದಳೇಯೆನು |
ತ್ತಾಡೆ ಭುಜಂಗರಲ್ಲಿ ಸುಳಿದಗ್ಗಳಬೇಟಮನುಂಟು ಮಾಡು ನೀಂ || ೧೧೦

ವಚನ|| ಮತ್ತಮೊರ್ವ್ವಳ್ತನ್ನ ತನೂಭವೆಯ ಸೌಕುಮಾರ್ಯ ಮಾಧುರ್ಯಂಗಳಂ ಪೊ
ಗಳ್ದು ತನ್ನ ಕೆಳದಿಗಿಂತೆಂದಳ್—

ವೃ|| ಮುಡಿಕಡು ಬಿಣ್ಪೆದೆಂದು ಸೆಡೆವಳ್ಮುಡಿದಪ್ಪಳೆ ಪುಷ್ಪಮಾಲೆಯುಂ |
ಜಡಿವ ಘನಸ್ತನಕ್ಕೆ ಮಣಿವಳ್ತಣಿ ಹಾರಮನಾಂಪಳೇ ಕರಂ ||
ಪೊಡರ್ವ*ನಿತಂಬಭಾರಕಲಸುತ್ತಡಿ ಯಿಕ್ಕುವ ಕಾಂತೆ ಕಾಂಚಿಯುಂ |
ತುಡುವಳೆ ಸಿಂಗರಂಬಡೆಯದೆನ್ನ ಪುಗಳ್ಪಿಟರಂ ಮರಳ್ಚುವಳ್ || ೧೧೧

ಕಂ|| ಕೂರದ ಕಡೆಗಣ್ಣೋಟದ |
ಕೂರದನಂ ಕೂರಿಸುವಳುರೋಜಂಗಳ ಬ ||
ಲ್ಭಾರದ ಬಗೆಯಂ ಕಾಣಿಸಿ |
ಬಾರದನಂ ಬರಿಪಳೆನ್ನಸುತೆ ಮನೆಗಾಗಳ್ || ೧೧೨

ವಚನ|| ಅದಲ್ಲದೆ ಪೆರತೊಂದೆಡೆಯೊಳೊರ್ವ್ವಳ್—

ಕಂ|| ಎಳೆಯಳೆ ಕಟಾಕ್ಷಪಾಶದಿ |
ಸೆಳೆಯೆಳೆಯುವ ಮೃಗಮನಂದದೊಳ್ಶಿಕಳೆವೋಲ್ ||
ಪೊಳೆಯಳೆ ಶೃಂಗಾರರಸದ |
ಪೊಳೆಯೆಳೆಯದರಾರೊ ಪೊನ್ನನಿವಳ್ಗತಿಧನಿಕರ್ || ೧೧೩

ಪಿಡಿನಡೆ ಪಿಡಿನಡು ಪೊಸಕೈ |
ಪಿಡಿಮೊಗಮುಡುಪತಿಯ ಕದಿರನಾಳ್ವಲರ್ಗಣ್ಕೆಂ ||
ಪಿಡಿದಧರದಳಂ ಕಡುವಿ |
ಣ್ಪಿಡಿಕಿರಿದನಿತಂಬಮೆನ್ನ ತನುಭವೆಗೆಸೆಗುಂ || ೧೧೪

ವೃ|| ನೋಡದೆ ಪೋದೊಡೊಂದರಿಯೆನೆನ್ನ ತನೂಜೆಯ ಸೌಮ್ಯಕರೂಪರ್ಯಿಂ
ನೋಡಿದೊಡಾಗಳಂಗಜಮಹಾಶಿಖಿ ಮೂಡದೆ ಬಲ್ಪು ಬಾಡದ ||
ಳ್ಕಾಡದೆ ಚಿತ್ತಮೋಡದೆ ಮದಂ ಪಿಕಿ ಕೋಡದೆ ಕೂಗಿ ಮೂರ್ಛೆಯಂ |
ಮಾಡದೆಕಾಯ್ಪುಗೂಡದೆ ಸುಧಾರುಚಿ ಕಾಡದೆ ಕಂತು ಮಾಣ್ಗುಮೇ||೧೧೫

ವಚನ|| ಎಂಬನೇಕ ವಿಧವಿದಗ್ಧಾಲಾಪಂಗಳಂ ಕೇಳುತ್ತುಂ ಬರುತ್ತಿರೆ ಮುಂದೊಂದು
ಮಣಿಮಯದ್ವಾರದೊಳಂದಂಬಡೆದು ನಿಂದಸುಂದರಿಯ ಮಗಂಗೆಯ್ಯೊಳ್ಸಿಂಗರವನೆ ಕುಳ್ಳಿರ್ದ-
ವೃ|| ಜಡೆಯ ಬೆಡಂಗಿ ನಣ್ಣೊಸಲನಾಯಕೆ ಚೆಂದುಟಿಯುಂದಗಾತ್ರೆ ಮೆ |
ಲ್ನುಡಿಯ ಮೃಗಾಕ್ಷಿ ತೆಳ್ಗದಪಿನಂಗನೆ ಬಲ್ಮೊಲೆಯಬ್ಜಗಂಧಿ ನು ||
ಣ್ಗೊಡೆಯಲತಾಂಗಿ ಮೆಲ್ಲಡಿಯ ಮುಗ್ಧೆ ನಿತಂಬದನೀರೆ ನಿನ್ನೊಳೋ |
ತೊಡವೆರೆದಿರ್ಪನಾವನವನಂಗಜ ಪಟ್ಟಮನಾಳ್ದನಾಗನೇ || ೧೧೬

ವಚನ|| ಎಂದು ಸರಸವಚನದಿಂ ಬಣ್ಣಿಪರಗಿಳಿಗೆ ನರುದಂಬುಲಗುಟುಂಕು ಗುಡುವವಳ ಬಾಯ್ದೆರೆಯುಂ ಕಂಡೆನಗಂ ಬಾಯೊರೆತಪುದೆಂಬವಿದೂಷಕನ ನುಡಿಗೆ ಮುಗುಳ್ನಗೆನಗುತ್ತರಸನಿರ್ಪನಿತರೊಳೊರ್ವ್ವ ತುಂಬುಜಾವನದ ಬಿಂಬಾಧರೆ ನಿಜವಿರಹವೀತಿಹೋತ್ರವಿಧುರಿತವೀಧಿಯೊಳ್ಪುರ್ದಂ ಕಂಡನ್ಯಭಂಗಿಯುಂ ತಳೆದವಳ ಮನದನ್ನಂ ದನಿವಳಿದಪ್ಪಿ ನುಡಿಯಿಸುವಲ್ಲಿ—

ವೃ|| ಏನೆಲೆ ಬಾಲೆ ಯೇಕೆಲೆ ಭುಜಂಗ ಇದೆಲ್ಲಿಗೆ ಪೋಪೆ ಪರ್ಬಿದು |
ದ್ಯಾನಕದೇಕೆ ನೀಮ್ಮುರ್ಗಳುಗಲೀಪೊಸಜೊನ್ನದೊಳುಂಟೆ ಉಂಟು ಕಾ ||
ಮಾಸಲವಗ್ಗಿಯೇಂ ನುಡಿಯುಲೇನೊಡವಪ್ಪೆನೆ ಬೇಡವೊರ್ವ್ವಳೇ |
ನೀನೆಲೆಯಾದೊಡೇನಗಿವೆ ಯಿಲ್ಲೆನೆ ಕೈವಿಡಿದಪ್ಪಿದಂ ಏಟು ||　　　　೧೧೭

ಕಂ|| ಕಂಡಿನಿಯನೆಂದು ತಿಳಿದಾ |
ಖಂಡಲಸಂಪದಮೆ ಸಾರ್ದ್ದವೋಲ್ಸಂಭ್ರಮದಿಂ ||
ಪಿಂಡೇಳ್ವ ಪುಳಕದೊಡನೊಡ |
ಗೊಂಡೊಯ್ಯುತಾತ್ಮಗೃಹದೊಳವ ಸೊಡವೆರೆದಳ್ || ೧೧೮

ವಚನ|| ಮತ್ತೊಂದು ಚಂದನರಸ ಧವಳಿತ ಕೇಳೀನಿಳಯಮಧ್ಯ ಮಂಡಿತ ಮಣಿಮಯ ಮಂಚಾಗ್ರದ ಮರಿಯುಂಚಿದುಪ್ಪುಳ ಮೇಲೊಂದಿದ ತಳ್ಪದೊಳೊರ್ವ್ವ ಬೇಟಗಾತ್ರಿ ತೋಟಗಾತ್ರಿಯಂತೆ—

ವೃ|| ಮುಗುಳಂಬಂ ಗೆಣೆಯಾದನಂ ಬರಿಸಿ ತದ್ಬಾಹಾ ಲಸತ್ಕಲ್ಪವ |
ಲ್ಲಿಗಡರ್ಪ್ಪಂ ಕುಡುವಂತೆ ಕೊಟ್ಟು ತನುವಂ ಸೀವೋರ್ಯ್ವವೋಲ್ಪವರ್ಮಾ ||
ರಿಗಳಿಂ ತೋಯ್ದದರಲ್ಲಿ ಚೆಂದಳಿರ್ಗಳಂ ತಾನಾಗಿಪಂ ತೊತ್ತಿ ಕೂ |
ರುಗುರಿಂ ಪೂಗುಡಿ ಮೂಡಿಪಂತೆ ಮೊಲೆಯಂ ಕೈದೀವಿ ಕಣ್ಗೊಪ್ಪಿದಳ್||೧೧೯

ಕಂ|| ತನುರುಹ ಮಗೆವೊಯ್ದವೊಲಿರೆ |
ತನು ತಳ್ತಿರೆ ಲಜ್ಜೆಯೊಂದೆ ತನುತೆಯ ನೊಲ್ದಾಂ ||
ತನು ನಯಮನತನು ಸುಖದ ಸು |
ತನು ಏಂತನುಭವಿಸುತಿರ್ದ್ದಳಿನಿಯ ನೊಳೊರ್ವ್ವಳ್ ||　೧೨೦

ವೃ|| ನೊಸಲ ಲಲಾಮಮುಂ ಸ್ತನದ ಚಂದನಮುಂತೊಡೆದಂತೆ ಪೋಗೆರಂ|
ಜಿಸುವ ಲತಾಂಗಮುಂ ಜಘನಮುಂ ಪದವೆತ್ತಿರೆ ಕರ್ಣಪೂರಮುಂ ||
ಪೊಸಮುಡಿಪೂಗಳುಂ ಜಗುಳೆ ನುಣ್ಗೊಡೆಯುಂ ನಡುವುಂ ಕಡಂಗಿ ಕಂ |
ಪಿಸೆ ಗಳನಾದಮುಂ ಶ್ವಸಿತಮುಂ ನೆಗಳುತ್ತಿರೆ ತಳ್ತು ಕೂಡಿದಳ್ ||　೧೨೧

ವಚನ|| ಅದಲ್ಲದೆ ಬೇರೊಂದೆಡೆಯೊಳೊರ್ವ್ವಳ್ಕೆರೆದು ಸದೆವಟ್ಟು ಬೆಮರಾರಿ ಸಲ್ಕೆಂದು ಮಂದಿರದ ಮುಂದಣ ಮತ್ತವಾರಣಮಂ ನೆಮ್ಮಿ ನಿಂದಿಪ್ಪುದು ಮವಳಮೊಗದ ಕಳೆಯಂ ಕಂಡೊರ್ವ್ವ ಸೊಬಗ ಬೊಜಗನೊತ್ತಗುಡಲೊಡನೆ ಪಿಡಿದುದಂ ಕಂಡು ಪೊರ್ದ್ದಿ ತಿಳಿದಿಂತೆಂದಂ—

ವೃ॥ ಎಲೆಕಿರುಸೂಳೆ ನೀಂ ನೆರೆದಸೇದೆಯ ನಾರಿಸದೊತ್ತೆಯಾಂತೆಯಿಸಾ |
ಕಲೆಗಳೆ ಸೂಚಿಕುಂ ಸುಖಮದೇಂದೊರಕೊಳ್ವುದೆ ನಿನ್ನೊಳೀಗಳೆಂ ‖
ದುಲಿವವಿಟಂಗೆ ಮಾರ್ನ್ನುಡಿದ ಳೊಂದಳಿಪೀರ್ದ್ದೊಡೆಪೋಪುದೇ ನವಾ |
ಬ್ಜಲಲಿತಸೌರಭಂ ಬಳಿಕ ವೊಂದಳಿ ಸಾರ್ದ್ದೊಡೆ ಸೌಖ್ಯಮಾಯದೇ ‖ ೧೨೨

ವಚನ॥ ಎಂಬ ಗಣಿಕೆಯ ಚಾಟುಭಣಿತಿಯಂ ಕೇಳ್ವರಸನೊಳ್ಪೀಠಮರ್ದಕ ನಿಂತೆಂದಂ--

ಕಂ॥ ಸ್ಮರಸೆರವಿಲ್ಲದೆ ತೋಳ |
ಲ್ಲಿರುತಿರ್ದ್ದೊಡ ಮಧಿಕವಿತ್ತ ಮಿತ್ತಪೆನೆಂದೆಂ ‖
ಬರೊಳೊಡ ವೆರೆವುದು ವೇಶ್ಯಾ |
ಚರಿತ ಮಿದಲ್ಲದೊಡದೆಂತು ಸಿರಿವಡೆದಪರೋ ‖ ೧೨೩

ವಚನ॥ ಎಂಬ ಮಾತಂ ಕೇಳ್ದು ನಿಜಮೆಂದಲ್ಲಿಂ ಮುಂಡಣ್ಗೆ ಬಪ್ಪರ್ಗಳೊರ್ವ್ವಳ್ಕುಸುಮ ಕೋಮಳೆ ತನ್ನ ಕೆಳದಿಗಿಂತೆಂದಳ್—

ಕಂ॥ ಕುಡುವೊಡವೆಗಾಗಿ ಪೋಗೆಂ |
ದೊಡ ನೊಡನೆ ಮ್ಮಬ್ಬೆ ಸೂಂಕುವ ಳ್ತನ್ನವೊಲೆಂ ‖
ದಡದುರ್ಬ್ಬಿ ಬಳೆದವೊಡೆ ಪೇ |
ರೊಡಲೀ ಜಟ್ಟಿಗ ನೊಳೆಂತು ನೆರೆವೆಂ ಕೆಳದೀ ‖ ೧೨೪

ವಚನ॥ ಅದಂ ಕೇಳ್ದು ವಿದೂಷಕಂ ಪರಿದು ಪೋಗಿನಿಂದು ನಿರೀಕ್ಷಿಸಿ ಕಯ್ಯಂ ನೀಡಿ ನಿಮ್ಮಬ್ಬಯನೆ ನೆವಮಿಟ್ಟು ಕಳಿಪಲ್ವೇಳ್ಕುಮೆಂದು ನರೇಂದ್ರನ ಮೊಗಕ್ಕೆ ಮುಗುಳ್ನಗೆಯಂ ಸೂಸುತ್ತಿರೆ ಮತ್ತೊಂದು ನೆಲೆವಾಡದೊಳ್ಮನದನ್ನ ನಗಲೆ ಮರುಗುವ ಚಪಲಚಿತ್ತೆಗೆ ಸಖಿಯಿಂತೆಂದಳ್—

ವೃ॥ ಬಂದೊಡೆ ನೋಡೆ ಬಾರದೊಡೆ ದೂದವಿಯಟ್ಟುವೆ ಬೇಡ ಕೋಪಮಿಂ |
ನ್ನೆಂದಡಿಗಾತನೊಲ್ದೆರಗೆ ಗರ್ವಿಪೆ ಸೈತಿರೆ ಸುರ್ಕಿ ಸುಯ್ವೆ ವೈ ‖
ಸಂದ ಮರ್ದಪ್ಪಲಾತುರಿಸೆ ಮೈಗುಡೆ ಮಾಣ್ದೊಡೆ ಕಾಮವಹ್ನಿಯಿಂ |
ಬೆಂದಪೆ ಪೋಪವೋಲ್ಜಡಿವೆ ಪೋದೊಡೆ ಸೈರಿಸೆ ನೀಂ ನಿದೇಂಸಖೀ ‖ ೧೨೫

ವಚನ॥ ಇವಳ್ಕಲಹಾಂತರಿತೆ ಯಪ್ಪಳೆಂದು ನಾಗರಿಕಂ ನುಡಿಯುತ್ತಿರೆ ಮತ್ತೊಂದು ಪಜ್ಜಳಿಪ ಬಜ್ಜರದ ಸೆಜ್ಜೆವನೆಯ ಸಿರಿಮಂಚದ ಶಿರೀಷ ಮೃದುಳ ತಳ್ಪಸ್ಥಳದಲ್ಲಿ—

ವೃ॥ ಬಿರಿಮುಗುಳಾದ ಜಾದಿಯರಳಂ ಮುಡಿಯೊಳ್ಮುಡಿದಿಟ್ಟು ಮುತ್ತಿನಾ
ಭರಣಮ ನುಟ್ಟು ಚೀನಲಲಿತಾಂಬರಮಂ ತೊಡೆದಂಗದಲ್ಲಿ ಕ ‖
ತ್ತೂರಿಯನು ಲೇಪಮಂ ಗೃಹಮ ನಾಮಣಿ ಮಂಚಮ ನೊಯ್ಯನೊಲ್ದುಸಿಂ |
ಗರಿಸಿ ನಿಜೇಶನಾಗಮನಮಂ ಮನದೊಳ್ಬಯಸುತ್ತೆ ಬಾಡಿದಳ್ ‖ ೧೨೬

ವಚನ|| ಅವಳಂ ನಿರೀಕ್ಷಿಸುತ್ತವಳ್ವಾಸಕಸಜ್ಜಿಕೆಯೆಂದು ನುಡಿವ ಮಾತನಾಕರ್ಣಿಸುತ್ತುಂ ನರೇಶ್ವರ ನಿಪ್ಪ್ರವಸರದೊಳೊರ್ವ್ವಭುಜಂಗಂ ನಿಜಸಖಂಗಿಂತೆಂದಂ—

ವೃ|| ಮಾನ ಮಿದೇಕೆ ಮಾನಿನಿ ಮನೋಭವನಾಣೆ ಬಿಡೆಂದೊಡಾಂಕರಂ
ಜಾನಿಸಿ ಬಾಷ್ಪವಾರಿಗರೆವಳ್ಮೊಗನೋಡಿದೊಡಂತೆ ನಾಣ್ಚುವಳ್ ||
ಪೀನಕುಚಾಂಚಲಂದೆಗೆಯೆ ಕೋಪಿಪಳಪ್ಪಿದೊಡೊಲ್ದು ನಕ್ಕಪ |
ಳಾತ್ತನದರಿಂದೆ ಸಂದಕಿಲಕಿಂಚಿತಮಂಚಿತಮೆನ್ನ ನಲ್ಲಳಾ || ೧೨೭

ವಚನ|| ಎನೆ ಕೇಳ್ದವಂ ಮುಂ ಪೇಳ್ದನೊಡನೆ ತನ್ನಿನಿಯಳ ವೃತ್ತಾಂತಮಂ ಮಗುಳ್ದು ಪೇಳ್ದನದೆಂತೆಂದೊಡೆ—

ವೃ|| ಮುಳಿದೆನ್ನೊಳ್ಮನದನ್ನ ಳೊಯ್ಯನೊರಗಿರ್ದ್ದಳ್ನಿದ್ರೆಗೈದಂದದಿಂ |
ತಿಳಿದಾನೆಬ್ಬಿಸಲಲ್ಲಿ ತೋರಮುಡಿಯೊಳ್ಪೂಮಾಲೆಯುಂ ಸೂಡಿ ಮಂ ||
ಜುಳಕಾಶ್ಮೀರವಿಲೇಪಮಂ ಮೊಲೆಗೆ ಲೇಪಂಗೈವುದುಂ ಪೊರ್ದ್ದಿವೊಂ |
ತುಳಿವೋದಳ್ಪುಟಮೇಳ್ದು ಪೊಯ್ದುಳೊಡೆದಳ್ನಾಯ್ದಪ್ಪಿದಳ್ನಕ್ಕಪಳ್ || ೧೨೮

ವಚನ|| ಎಂಬವಮಾತುಗೇಳ್ದವಳುಂ ಕಿಲಕಿಂಚಿತೆಯಕ್ಕುಮೆಂದು ವಿಟಂ ನುಡಿಯುತ್ತಿರೆ ಕೇಳ್ದಲ್ಲಿಂ ಮೆಲ್ಲನಿಳಾಧಿಪನಡಿಯಿಡುತ್ತಿರೆ ಮುಂದೊಂದುಮಂದಿರದಲ್ಲಿ ಸಾಪರಾಧನಾಯಕಂ ತಿಳುಪುತ್ತಿರೆ ಖಂಡಿತೆಯುಖಂಡಿತೇರ್ಷ್ಯೆಯಿಂ ನೋಡಿ—

ವೃ|| ಬೇಡಮಿದೇಕೆ ನಿನ್ನರಸೆ ನಾಡೆ ಸಯೋಕ್ತಿಯನಾಡುತಿಪ್ಪೆ ನೀಂ |
ನೋಡಿದೊಡಿಂತುಟಪ್ಪರೊಳರೇ ಯೆನಿಪಂತಿರ ನಿನ್ನಮೆಯ್ಯೊಳೀ ||
ಬಾಡದಬಾಸುಳೀಯಧರದೊಳ್ಗಲೆಯಿಾಕರಜಕ್ಷತಂಗಳೀ |
ಪಾಡಳಿದಂಗಮೀಯಿರವಿವೆಲ್ಲವನೀಕ್ಷಿಸಿ ನಂಬಲಕ್ಕುಮೇ || ೧೨೯

ವಚನ|| ಎಂಬಳ ನುಡಿಗೇಳುತ್ತಿಪ್ಪಿನಂ ಪೆರತೊಂದು ಮಣಿಮಯನಿಳಯಾಂತರಾಳದಲ್ಲಿ—

ವೃ|| ಚುಂಬಿಸುತಿತ್ತ ತಂಬುಲವನಲ್ಲದೆ ಮೆಲ್ಲದ ನಲ್ಲಳಂಗಗಂ |
ಧಂ ಬಗೆಗೊಂಡ ದೂವಟಮನಲ್ಲದೆ ತಾಳದ ತತ್ಕಚವ್ರಜಾ ||
ಲಂಬಿತಪುಷ್ಪಮಾಲೆಗಳ ನಲ್ಲದೆ ಸೂಡದ ತತ್ಕುಚಂಗಳೋ |
ಳ್ತುಂಬಿದಯಕ್ಷಕರ್ದಮವನಲ್ಲದೆ ಪೂಸದ ಕಾಂತನೊಪ್ಪಿದಂ || ೧೩೦

ವಚನ|| ಮತ್ತಮವನ ಮನದನ್ನಳ್ಮನೆಗೆ ಬಂದನಿಜ ಸಖಿಗಾತನಂ ತೋರಿ—

ವೃ|| ನುಡಿಯೆಮಗೊಂದೆ ನೋಟಮೆಮಗೊಂದೆವಿಳಾಸಮದೊಂದೆಚೆಲ್ವನಿ
ಮ್ಮಡಿಸುವಸಾರಯೌವನಮುಮೊಂದೆ ಗುಣೋನ್ನತಿಯೊಂದೆ ಕೂರ್ಪ್ಪುಬೇ||
ರ್ಪ್ಪಡಿಸದ ಬೇಟಮೊಂದೆ ರತಿಯೊಂದೆ ಮನಸ್ಸ್ಥಿತಿಯೊಂದೆ ಸೌಖ್ಯಮಂ |
ಪಡೆದಪೆವಾವಗಂ ಕೆಳದಿ ಕೇಳದರಿಂದೆಮಗಾಸ್ಪರ್ಮಾನರೇ || ೧೩೧

ವ|| ಎಂದು ತಮ್ಮಿರ್ವ್ವರ ಸಮಾನುರಾಗಸೌಭಾಗ್ಯ ವಿಭ್ರಮಮುಮಂ ಸಂಭ್ರಮಂ ಮಿಗೆ ಸಮದ ಸರಸೋಕ್ತಿಗಳಿಂ ಬಣ್ಣಿಸುತಿರ್ಪ್ಪನ ಮಿವಳ್ಸ್ವಾಧೀನ ಪತಿಕೆಯಕ್ಕುಮೆಂದು ನುಡಿವೆ ನಾಗರಿಕನ ನುಡಿಯಂ ಬಗೆಗೊಂಡರಸನಲ್ಲಿಂ ಬರುತಿರ್ಪ್ಪಲ್ಲಿ ಮುಂದೊಂದು ಮಣಿವಾಗಿಲೊಳೊರ್ವ್ವ ಸರಸಹೃದಯಂ ತರುಣಿಯನಗಲ್ದು ಮುಂದುಗೆಟ್ಟ ವಳಿರವಂ ನೆನೆನೆನೆದು ಸುಯ್ಯು ಕೆಳೆಯನೊಡನಿಂತೆಂದಂ—

ವೃ|| ಪರಕಾಂತಾಕರಜಾತದಂತಹತಿಯಂ ತಾಳ್ದಿರ್ದ್ದಲಾನೆನ್ನ ಸೌಂ |
ದರಿಯಾನೋಡುವ ನೋಟವಾಭ್ರುಕುಟಿಯಾ ನಿಂದಂದವಾಕಂಪಿಪೊಂ ||
ದಿರವಾಬೆಚ್ಚನೆ ಪಾಯ್ವಸುಯ್ಗಳೊದವಾಕಣ್ಣೀರ್ಗಳಾಕೋಪನಿ |
ರ್ಭರವಾಕೆತ್ತುವಪಲ್ಲವಾಧರಮದೇಂ ಮಚ್ಚಿತ್ತದೊಳ್ನಿಂದುದೋ || ೧೩೨

ವ|| ಅದಲ್ಲದೆಯುಂ—

ಕಂ|| ಪಳಿವುದು ಕೆಂದಾವರೆಯಂ |
ಮುಳಿದೊಡೆ ತಿಳಿದೊಡೆ ಪೊದಳ್ದಪೊಂದಾವರೆಯಂ ||
ಕಳಿವೆತ್ತುನಕ್ಕೊಡೆನ್ನಿನಿ |
ಯಳತೊಳಗುವ ವದನಮುಲರ್ದ*ಬೆಳ್ದಾವರೆಯಂ || ೧೩೩

ವ|| ಎಂದು ಪಳಯಿಸುತ್ತಿರ್ದ್ದ ನಿತ್ತಲ್ಮತ್ತೊಂದು ಮಣಿಭವನದಲ್ಲಿ—

ವೃ|| ಮನದನ್ನಳ್ಮಸದನ್ನನಂದಗಲೆ ಚಿಂತಾಕ್ರಾಂತೆಯಾಗಿರ್ದ್ದ ಕಾಂ |
ಚನಮಂಚಾಗ್ರದೆ ಮಗ್ಗುಲಿಕ್ಕಿ ಮಗುಳ್ದಾ*ತಂ ಬಂದು ಕೂಡಿರ್ದ್ದನ ||
ಲ್ಗನಸಂ ಕಂಡಖಿಳಾಂಗಮುಂ ಪುಳಕಮಂ ತಾಳ್ದೊಪ್ಪಲೆಚ್ಚತ್ತು ಕಾಂ |
ತನ ರೂಪಂ ಬರೆದಿರ್ದ್ದ ಚಿತ್ರಪಟಮಂ ತಳ್ಕೈಪಳೇಂ ಮೋಹವೋ || ೧೩೪

ವಚನ|| ಮತ್ತಮೊರ್ವ್ವಳ್ಮಚ್ಚುಗಾತಿ ಕಡುಕೂರ್ತ್ತುದಂ ಕಂಡು ಕಾಡುವಕಪಟ ವಿಟನಿರ್ದ್ದೆಡೆಗೆ ತಾನೇ ಬಂದು—

ವೃ|| ನಿನಗಾಂ ಕೂರ್ತ್ತುದೆ ಕುಂದೆ ನೋಡದೆ ಕರಂ ಮಾತಾಡದಾಳೀಜನಂ |
ಮನೆಗೇಳ್ತಂದೊಡೆ ಮಾತುಗೇಳದವರೊಳ್ನೀಂ ಪೇಳದೇನೊಂದನಿಂ ||
ದನಿಮಿತ್ತಂ ಮುನಿದಿರ್ಪ್ಪುದೇನುಚಿತಮೇ ಪೇಳೆಂದು ಕಣ್ಣೀರ ಪೇ |
ರ್ವ್ವೊನಲಿಂ ನಂದಿಸಿದಳ್ಪ್ರಕೋಪಶಿಖಿಯಂ ಪಾಯ್ದಪ್ಪಿದಳ್ನಲ್ಲಸಂ || ೧೩೫

ವ|| ಅಂತಪ್ಪಿ ನಿಜನಿಕೇತನಕ್ಕೊಡಗೊಂಡು ಪೋಗಿ ಪೊಸಸುಸಿಲ್ಗೆ ಮನಮಿತ್ತು ಮಣಿ ಮಂಚದೊಳಿರ್ವ್ವರುಂ ಕುಳ್ಳಿರ್ದ್ದ ಬಳ್ಳಿವರಿವ ನಿಡುನೇಹದಿಂದಡರೆ ನೋಡಿ—

ವೃ|| ತೋಳ್ತೊಡೆವಕ್ಷಮುಂ ಜಘನಮುಂ ಮನಮುಂ ಮೊಗಮುಂ ಪರಸ್ಪರಂ
ತಳ್ತಿರೆ ಕಂಪನಂಬಡೆದ ಕೈದಳದಿಂ ಪೊಡೆದೀಳ್ದು ಸೀಳ್ದು ಮೇ ||

ಲೇಳ್ವರೆ ನುಣ್ಗೊರಲ್ದನಿ ಸುಧಾಧರವುಂ ಸವಿದುಕ್ಕಿರ್ ಸೊಕ್ಕಿರ್ ಸೊ |
ಳ್ಗೆಳ್ತಡವಾಗದಂತೆ ನೆರೆದಸ್ಸುರತಾಬ್ಧಿಯೊಳಾಳುತೇಳ್ವವೋಲ್ ‖ ೧೩೭

ವ‖ ಇಂತಪ್ಪ ಮಧ್ಯಮನಾಯಿಕೆಯರ ವಿವಿಧವಿಳಾಸವುಂ ನಾಗರಿಕನರಿವುತ್ತುಂ ಬರೆವರೆ ಭೂಲೋಕಮುಕುರಪತಾಕಂ ಮುಂದಣ್ಗೆ ನಡೆನಡೆಯೆ ಮತ್ತೊಂದೆಡೆಯೊಳೊರ್ವ್ವ ವಿದಗ್ಧೆ ವಿರಹತಾಪವುಂ ಸೈರಿಸಲಾರದಾಳಿಯ ಮೊಗವುಂ ನೋಡಿ—

ವೃ‖ ಮದನಂ ತಾಂ ಮಧುಮತ್ತನೀಶಶಿಕರಂ ದೋಷಾಕರಂ ಚಂದನಂ |
ಮದಸರ್ಪಪ್ರಕರೋಪಸೇವಿ ಶಿಖಿಮಿತ್ರಂ ಮಾರುತಂ ತಾಪಮಿಾ ‖
ವುದು ಯುಕ್ತಂ ಸುಧೆಗೊಂಬಹಂಸೆ ಗುಣಿಪದ್ಮಂ ಕ್ಷೀರಪೂರ್ಣಂ ಸರಂ |
ಸುದತೀ ಕೇಳ್ಸುಮನಃ ಪ್ರಿಯಂ ಮಧುಕರಂ ಪೇಳಲ್ಕಯ್ವುದೇಂ ತಕ್ಕುದೇ ‖

ವಚನ‖ ಅದಲ್ಲದೆಯುಂ—

ವೃ‖ ಕಳಿವೆನದೆಂತೊ ಕಾಮಿನಿ ದಿನಂಗಳ ತಿಂಗಳ ಪೆಂಗಳಂಗವುಂ |
ತಿಳಿಯದೆ ನಲ್ಲನೈದೆ ಬಗೆ ನಿಲ್ಲದು ನಲ್ಲದಿ ದೊಲ್ಲ ದೇನುವಂ ‖
ಮುಳಿದಿಸುವಂಗ ಜಾತನ ವಿಘಾತನ ಶಾತನ ವಾಸ್ತ್ರ ಪಾತದಿಂ |
ದಳಿದಪೆನಾತನಂ ಕರೆಯಲಾಗದೆ ಬೇಗದೆ ರಾಗದಿಂ ಸಖೀ ‖ ೧೩೮

ವ‖ ಎಂದುನುಡಿದ ನಿಜಸಖಿಯ ನಿರ್ವೇದೋಕ್ತಿಯಂ ಕೇಳಲಾರದ ವಳಿನಿಯನಿದ್ದೆಡೆಗೆ ವರಿತಂದು ವಿನಯದಿನಿಂತೆಂದಳ್—

ವೃ‖ ಸಸಿಗೆ ಸಮಾನವಾದು ದವಳಾಸ್ಯಮದುಂ ಕಡುವೆಳ್ಪು ತಳ್ತು ರಂ |
ಜಿಸಿ ಬಿಸಕಾಂಡಕಂಗಲತೆ ತಾಂ ಸಮದಾಕೃತಿವೆತ್ತುದಂತದುಂ ¶
ಲಸದರುಣಾಬ್ಜ ಪತ್ರದೆ ತದಕ್ಷಿ ಸುಹೃತ್ತ್ವಮನಾಂತು ದಂತದುಂ |
ಕುಸುಮಕಳಂಬನಂಬು ಬಗೆಗುಂದಿಸಿದತ್ತದು ಮಬ್ಜಗಂಧಿಯಾ ‖ ೧೩೯

ಅಸುಗೊಳಳೆಂದು ತಾಂ ಬೆಸಸಿಯುಂ ಸಸಿಯಂ ಸಸಿಯಂ ಸಮಂತು ರಂ |
ಜಿಸುವ ಬಸಂತನಂ ಸಮದನಂ ಮದನಂ ಮದನಂತಶೌರ್ಯಮಂ ‖
ಪಸರಿಪೆನೆಂದು ಗರ್ಜಿಸರಲಂ ಸರಲಂ ಸರಲಾಂಗುಲಿದ್ವಯಂ |
ಮಿಸುಗಿರಲೆಚ್ಚು ಕೂಡೆ ತವಿಪಂ ತವೆಪಂ ತವೆ ಪಂಕಜಾಕ್ಷಿಯೊಳ್ ‖ ೧೪೦

ವಚನ‖ ಎಂದು ಚತುರೋಕ್ತಿ ಜಳಮನೆರೆದು ಮುಳಿಸಂ ಕಳೆದೆಗೆವಂತೆ ತೆಗದು ಬಗೆನೆಲದೊಳ್ಬೇಟವೆಂಬ ಸಸಿಯಂ ಬೆಳ್ವರಿಯಿಸಿ ವಿನಯದಿಂ ದೊಡಗೊಂಡು ಬಂದು ನಿಧುವನನಿಕೇತನವುಂ ಪುಗಿಸಲೊಡನೆ ವಸಂತರಾಜನಂ ಕಂಡ ವನಲಕ್ಷ್ಮಿಯಂತೆ ಸೊಂಪೇರಿ ಕಮುಳಕಾಮುಕನಂ ಕಂಡ ಕಮಳಿನಿಯಂತೆ ಮೊಗಮುಳರ್ದಲರಂ ಕಂಡಳಿಯಂತೆ ಬಳಿಸಾರ್ದ್ದು ಮುಗಿಲಂ ಕಂಡಮಯೂರಿಯಂತೆ ಮೆಯ್ಯುಬ್ಬಿರ್ ಮಾವಂ ಸಾರ್ದ್ದಮಲ್ಲಿಗೆಯುಂ ತಮರ್ದಪ್ಪಿ ಸಸಿಗಳರಸ

ನ ಸರಸಕರಂ ಸೋಂಕಿ ದಸಸಿಗಲ್ಲ ಪುತ್ಥಳಿಯಂತೆ ಕರಗಿ ಬಿಂಬಫಳವಂ ಕಂಡರಾಜಶುಕ್ತಿಯಂತೆ ಬಿಂಬಾಧರವಂ ಕರ್ದುಂಕಿ ಕಾತರಂ ಕೈವಿಗೆ ಕಡುಸೊಬಗಿಂ ಕಾಂತನೊಡನೆ ಕಾಂಚನ ಮಂಚದ ಕಮಳದಳ ಧವಳಮೃದುಳತರ ವಿಪುಳ ಮರಾಳ ತೂಳಕಲ್ಪಿತಾನಲ್ಪ ತಲ್ಪದೊಳ್ಮೆಲ್ಪಿಂ ಕುಳ್ಳಿರ್ದು ಕಳಾವಿಳಾಸಂ ಬಡೆದು ಕಾಮಕೇಳಿ ಗುಜ್ಜುಗಿಸಿ ಸಜ್ಜುಗೈವಾಗಳ್—

ವೃ|| ಬೆಮರ್ದಂಗಂ ಪತ್ತಿದತ್ತೀರ ವಕೆಯುಸುಗಿ ನೀನೆಂದು ಪದ್ಮಾಸ್ಯೆತಾಂ ಪೇ
ಳೆ ಮಹೋತ್ಸಾಹಾನ್ವಿತಂ ವಲ್ಲಭನಿಡೆ ಕುಚಮಧ್ಯಕ್ಕೆ ಹಸ್ತಾಬ್ಜವಂ ಮ ||
ತ್ತೆಮನೋಜಜ್ವಾಂಗಂಪೊದಳ್ದುಬ್ಬಿದೊಡೊಡೆದುದುಜಾರಿತ್ತುಬಾಹಾಹಿತದ್ದೇ
ಹ ಮಹಾಶ್ರೀಖಂಡ ಶಾಖಾಗ್ರದೆಹೆರೆಗಳೆಯುತ್ತಿಪ್ಪರ್ದೆಂಬಂದದಿಂದಂ ||

ಕೊರಲೊಳ್ತಳ್ತಿರೆ ಬಾಹುವಲ್ಲರಿ ಯುರೋಜದ್ವಂದ್ವದಿಂದೊತ್ತಿ ಪೇ |
ರುರಮಂ ಸಾರ್ದ್ದಮರ್ದಪ್ಪಿ ನೋಡಿ ಕಡೆಗಣ್ಣಿಂ ದಕ್ಕರಿಂ ಪಲ್ಲವಾ ||
ಧರಮಂ ಚುಂಬಿಸಿ ನೀವಿ ಜಾರೆ ಜಘನಾಭೋಗಂ ಪೊದಳ್ದುರ್ವ್ವೆ ಸಾಂ |
ದರಿ ನಾನಾಕಳೆವೆತ್ತು ಸೋಂಕಿ ನೆರೆದಳ್ಕಾದಲ್ಮೆಯಿಂ ಕಾಂತನೊಳ್ || ೧೪೨

ಕಂ|| ನೆರೆವೆರೆಯನುಳಿದು ಚೆಂದುಟಿ |
ವೆರೆವಿಡಿದ ಮರ್ದಿಂಟೆ ಪಟುಭುಜಂಗಂ ಶಂಖಂ ||
ವೊರೆಯಿಟ್ಟಪುದೆನೆ ಮದನಂ |
ಗುರೆ ಮೆರೆದುದು ಗಳನಿನಾದಮದುಕಳರವೆಯಾ || ೧೪೩

ವಚನ|| ಇಂತುಕಂತುಕೇಳಿ ಸುಖಾಸ್ವಾದನೋನ್ಮತ್ತಚಿತ್ತರೊಪ್ಪುತ್ತಿರೆ ಮತ್ತೊಂದು ಮುತ್ತಿನ ನೆಲೆವಾಡದೊಳವಳಯ ದೊಳಗಣ ತಳತಳಿಪ ಮನೋಜ್ಞಮಣಿಮಯಮಂಚಾಗ್ರದಲ್ಲಿ

ವೃ|| ಇಂದೆನಗೆನ್ನ ನಲ್ಲನೊಡಗೂಟಮದಪ್ಪುದೆ ಯೆಂದಗಲ್ದ ಪೂ |
ರ್ಣೇಂದು ನಿಭಾಸ್ಯೆ ಚಿಂತಿಸುವ ವೇಳೆಯೊಳೊಪ್ಪುವ ವಾಮ ಬಾಹು ವಿ ||
ಸ್ಪಂದಮನಾನೆ ಬಂದೊಡವನಾಗಳೆ ಭಾಷೆನುತೇಳ್ದ ರೋಮಹ |
ರ್ಷಂದಳೆದಪ್ಪಿದಳ್ಪತಿಯನಾ ಭುಜದಿಂದಮೆ ಪೂರ್ಣರಾಗದಿಂ || ೧೪೪

ಪುಳಕದ ಮೆಯ್ಯೊಳಪ್ಪುತೆ ಬೆಮರ್ತ ಘನಸ್ತನಮಂಡಳಂಗಳಂ |
ಕೆಳೆಗೊಳಿಸುತ್ತೆ ವಕ್ಷದೊಳೆ ಕಂಪಿಪಕೈದಳದಿಂದೆ ಪೊಯ್ದು ವಾ ||
ಯ್ದೆಳಿವಸುಖಾಶ್ರುವಿಂ ನನೆದಕಣ್ಮಲರಿಂ ಸಡೆನೋಡಿ ಮುಂಬದಂ |
ಗಳಿಯಿಸೆ ಕೂಡಿಗದ್ಗದದ ಕಂಠದೆ ಕೂಜಿತಮಂ ನೆಗಳ್ಚಿದಳ್ || ೧೪೫

ವ|| ಇಂತು ಸಮಾನುರಾಗದಿಂ ನೆರೆದಗಲದಿರ್ದ್ದಾತನಂ ನೋಡಿ ನಾಗರಿಕನಿಂತೆಂದಂ—

ಕಂ|| ಅಸಿಯೊಳುಸಿರೆಲರನಾ ಸ್ವಾ |
ದಿಸುತಧರಾಮೃತವನೀಂಟಿ ಭೋಗಿತ್ವಮನಾಂ ||
ತಸಮುಕುಚಕಲಶನಿಧಿಗಾ |
ದೆಸೆವಂಗೆ ಭುಜಂಗನಾಮಮೇಂ ಬಗೆವೃಗದೇ || ೧೪೬

ವಚನ|| ಎಂಬಮಾತಂ ಮನವೊಸೆದಾಕರ್ಣಿಸುತ್ತಿರೆ ಮತ್ತಮೊರ್ವ್ವಳ್ಮೆಚ್ಚುಗಾತ್ತಿ ಮನದನ್ನನ ಮಾತಾಗಿ ಕೆಳದಿಗಿಂತೆಂದಳ್—

ವೃ|| ಮೊಗದೊಳ್ನೋೞ್ಪನೆ ಮುಗ್ಧಭಾವಮವನೈತಪ್ಪಂದದೊಳ್ನೋೞ್ಪನೇ |
ಮಿಗೆಸೌಜನ್ಯಕಳಾಪ್ರಕಾಶತೆಯಿಮಂ ನೋೞ್ಪಂದದೊಳ್ನೋೞ್ಪನೇ ||
ನೆಗಳ್ದ*ಕ್ಕಸ್ಸೆವಿವಾತನಾಡಿ ನೆರೆವಾಗಳ್ನೋೞ್ಪನೇ ಕಾಂತೆ ಕೇ |
ಳ್ಮಗುಳಂಬಂಗೆಣೆಯೀತನಿರ್ಕೆನಗೆ ತೋಳೊಳ್ಜನ್ಮಜನ್ಮಂಗಳೊಳ್ || ೧೪೭

ವಚನ|| ಅಲ್ಲಿ ಮತ್ತಮೊರ್ವ್ವಳ್—

ವೃ|| ಕಡೆಗಣ್ಣಲ್ಲಮನಿತ್ತೊಡಲ್ಲದೆಳಸಂ ಮೈಸಾರ್ದ್ದ ನಿಂದಲ್ಲದೊ |
ಳ್ನುಡಿಯಾಡಂ ನಿಜವಕ್ಷದೊಳ್ಗುರುಕುಚಂ ತಳ್ತಲ್ಲದಾಲಿಂಗಿಸಂ ||
ತೊಡೆ ಕಂಪಂಬಡೆದಲ್ಲದೊಂದಿ ಬೆರಸಂ ಕಾಮಾಂಬು ಕಯ್ಮಾರಿ ಮೆ |
ಲ್ಲಡೆ ತಾನೇ ಸರಿದಲ್ಲದೊಲ್ದು ನೆರೆಯಂ ಮತ್ಪ್ರಾಣಕಾಂತಂ ಸಖೀ ||೧೪೮

ವ|| ಮತ್ತ ಮೊರ್ವ್ವಳ್ಚಲ್ಲಗಾತಿ ದೂದವಿಯೊಡನೆ ನಗೆಮಿಸುಗೆ ಮೊಗಮಂ ನೋಡಿ—

ವೃ|| ಸುರಿಯೆ ಸುಖಾಶ್ರುವಳ್ವಳಿವಳೆಂದತಿದೈನ್ಯಮನಾಡಿ ಕಂಪನಂ |
ನೆರೆಯೆ ಭಯಾರ್ತ್ತೆಗೆತ್ತಗಿದು ನೋಡಿ ಕರಾಗ್ರದೆ ಪೊಯ್ಯೆ ಕೋಪನಿ ||
ರ್ಭರಯುತೆಯೆಂದು ಬಾಡಿ ಸುರತಾಂತದೊಳಕ್ಷಿಗಳಂ ಮುಗುಳ್ಚೆ ಪ |
ಟ್ಟರೆ ಪರಮಾಯು ತೀವಿತಿವಳ್ಗೆಂದಿರದೋಡಿದನೊರ್ವ್ವನೂರಿಚಂ || ೧೪೯

ವಚನ|| ಎಂದುಸಿದ್ದುನಿಜಸಖಿಯ ಬಗೆಗೆ ನಗೆಯಂ ಪಡೆದಿರ್ದ್ದಳಿತ್ತಲ್ಮತ್ತೊರ್ವ್ವ ವಿದಗ್ಧಾಂಗನೆ ಪಚ್ಚೆದ ಬೆಳ್ದಿಂಗಳೊಳ್ನಿಜಗೃಹದ್ವಾರದ ಪೊಂಜಗಲಿಯೊಳ್ಬಳಸಿದಬೆಲೆವೆಣ್ಗಳನಡುವೆ ಗಾಡಿಯಿಂ ಕುಳ್ಳಿರ್ದ್ದಿಂತೆಂಳ್—

ವೃ|| ನಯಸಂಪನ್ನ ನತೀವಯೌವನಯುತಂ ರೂಪಾನ್ವಿತಂ ನರ್ಮಗೋ |
ಷ್ಠಿಯ ನಾಳ್ವಂ ಕಡುಸೀರ ನೂರ್ಜಿತಯಶಂ ಪಂಚಾಸ್ತ್ರಶಾಸ್ತ್ರಾರ್ಥನಿ ||
ಷ್ಠಯುಚಿತ್ತಂ ಸುಭಗಂ ಪ್ರಸನ್ನನುಚಿತಜ್ಞಂಚಾಗಿ ಸಂಭೋಗ ಸಂ |
ಪ್ರಿಯನುತ್ಸಾಹಿಯೆನಿಪ್ಪನೊಳ್ನೆರೆವ ಪೆಣ್ಣಾಗ್ರರಂಭೆಯುಂ ಸಾಟಿಯೇ || ೧೫೦

ವೃ|| ಖಲನೋಳ್ಕಾತರನೊಳ್ಕಳಾರಹಿತನೊಳ್ಕಾಪಟ್ಯಮಂ ಮಾಳ್ಪದು |
ರ್ಬಲನೊಳ್ದುರ್ಮುಖನೊಳ್ದುರುಕ್ತಿಪರನೊಳ್ದುರ್ಮಾರ್ಗದೊಳ್ಕೂರ್ಪನಾ ||
ಣೆಲಿಯೊಳ್ನಿಷ್ಠುರನೊಳ್ನಿತಾಂತಶಠನೊಳ್ನಿಸ್ನೇಹಮುಂ ತೋರ್ಪ ಸಂ |
ಚಲನೊಳ್ಸದ್ಗುಣಹೀನನೊಳ್ನೆರೆವ ಕೂಟಂ ನಂಜಿನೂಟಂ ಸಖೀ || ೧೫೧

ವಚನ|| ಆದಂಕೇಳುತಿರ್ಪನಿತರೊಳಲ್ಲಿ ಪೆರತೊಂದುತಾಣದೊಳ್ಕಳ್ಳಿರ್ದುರಿಚನಿರವಂನೋಡಿ ನೀನೀತನೊಳ್ಕೂರ್ಪುದುಂಟೇಸಖಿಯೆಂದುಬೆಸಗೊಂಡಾಳಿಯೊಡನೊರ್ವಳ್ಸುಭಗೆ—

ವೃ|| ಬರ್ಪುದು ಮಾಗಳೆಳ್ದು ಪಿಡಿದಿಟ್ಟುದನುರ್ಚ್ಛವಸೊತ್ತಿ ಸಾಯ್ಪನು |
ಳ್ಳಾರ್ಪುಮಿಗಲ್ಕಡಂಗಿ ಕಡುಕಾತರ ಮುಣ್ಮರೆ ಕಾಯಜೀವಮಂ ||
ಬೇರ್ಪಡಿಪಂತೆ ಕೂಡುವನಿದೇಂ ಸಖಿ ಕೂಟಮೊ ಬೇಟಡೋಟಮೋ |
ಕೂರ್ಪುದನೀತನಂ ಕುಡುವಪೊಂಗಳನಾನಿರದೊಟ್ಟಿ ಸುಟ್ಟಪೆಂ || ೧೫೨

ವಚನ|| ಎಂಬ ನುಡಿಗೇಳ್ದ ವನಿಪಂಗೆ ವಿಟನಿಂತೆಂದಂ—

ವೃ|| ನಗೆಯರಿದ್ದೈದಿ ನಾಣರಿದು ಮುದ್ದಿಸಿ ಪೊಂಪುಳಿವೆತ್ತ ಮೆಯ್ಯಪೊ |
ರ್ದುಗೆಯರಿದಂಟಿ ಸೋಲವರಿದೀಕ್ಷಿಸಿ ಕಾತರಮುಣ್ಮೆ ಮುಂಚುವಾ ||
ಬಗೆಯರಿದಪ್ಪಿ ಭಾವವರಿದೋತೊಡಗೂಡಿ ನಿತಾಂತ ಸೌಖ್ಯಮಂ |
ನೆಗಳದಗಾಂಪನೇನೊಲಿಸಲಾರ್ಪನೆಸೂಳೆಯರಂ ಧರಿತ್ರಿಯೊಳ್ || ೧೫೩

ವಚನ|| ಎಂದರಸನಚಿತ್ತಕ್ಕೆ ಸರಿವೋದನಲ್ಲದೆ ಮತ್ತೊಂದು ಮರಕತ ರತ್ನದಮೊಗಸಾಲೆಯೊಳ್ಕಳ್ಳಿರ್ದುಸೂಳೆ ಮಾತಾಗಿವಿಟಂ ವಿಟನೊಡನೆ ನುಡಿದನದೆಂತೆನೆ—

ವೃ|| ಎಳಸುತ್ತಪ್ಪಿದೊಡಕ್ಷಿಯೊಳ್ಸುಖಜಳಂ ಮೆಯ್ದೋರದಾಸ್ಯಾಬ್ಜದೊ |
ಳ್ಕಳೆ ಕೈಮೀರದೆ ನೀವಿ ಜಾರದೆ ಸುಸಿಲ್ಗೈವಲ್ಲಿ ನಾಣ್ಗೊಂಡೊಡು ||
ತ್ಪುಳಕಂ ಮೂಡದೆ ದೈನ್ಯಮಾಡದೆ ನಿತಂಬಂ ಮುಂಬದಂ ಗೂಡದಿ |
ರ್ಪಳ ಕೂಟಂ ಬಿಡದೇಳ ರಾಟಮದನಾವಂ ನಚ್ಚುವಂ ಮೆಚ್ಚುವಂ || ೧೫೪

ವ|| ಮತ್ತವೊರ್ವನಿದಿರೊಳ್ಕೈತರ್ಪ ಟಕ್ಕಗಾರ್ತಿಯಂ ಕರಸಂಜ್ಞೆಯಿಂ ಕೆಳೆಯಂಗೆ ತೋರಿ ಮೆಲ್ಲನಿಂತೆಂದಂ—

ವೃ|| ಮಿಸುಗುವಬಟ್ಟಬಲ್ಮೊಲೆಯನೀವಧು ಮೇಲುದನಿಕ್ಕುವಂತೆ ಕಾ |
ಣಿಸಿ ಕಚಗಂಧಕಾರ್ದರಗುವಾರಡಿಯಂ ನಡೆ ನೋಡುವಂತೆ ಕಾ ||
ಣಿಸಿ ಸವಿನೋಟಮಂ ಜಗುಳ್ವಕಾಂಚಿಯ ನೆತ್ತುವಪಾಂಗಿ ನಿಂದೆಕಾ |
ಣಿಸಿ ಸುಳಿನಾಭಿಯಂ ಬೊಜಗರಂಗದೆ ಕಾಣಿಪಳಂಗಜಾಗ್ನಿಯಂ || ೧೫೫

ವಚನ|| ಅಂತುಮಲ್ಲದೆಯುಂ—

ವೃ||ಮೊದಲೊಳ್ನೀಡದೆಬೇಟವಂಂ ಪಡೆದು ಕೂರ್ತೈತಂದ ಕಾಂತಗ್ಗೆಸಂ|
ಪದವಂ ಕಾಣಿಸಿ ಕೊಟ್ಟುದೊಲ್ಲದೆ ಕುಲಸ್ತ್ರೀಯಂತೆ ಕೂರ್ತಪ್ಪಿ ಸಂ ||
ಮುದಮಂಪುಟ್ಟಿಸಿ ಮತ್ತೆಮತ್ತೆ ಬಗೆಯೆಂತಿರ್ದ್ದಂತೆ ಕೂಡುತ್ತೆ ಸೋ |
ಲ್ತುದ ನೊಲ್ಪೀಕ್ಷಿಸಿ ಚಿಕ್ಕದೊಂದುಮುಳಿಸಿಂ ಸರ್ವಸ್ವಮಂ ಕೊಂಡಪಳ್ ||

ವಚನ|| ಎನಲಾನುಮಿವಳ ಬಗೆಯಂ ಮುಂಬಲ್ಲೆನೆಂದು ಕೇಳ್ದವಂ ಮಗುಳುತ್ತರಂಗುಡುತಿರ್ದ್ದನಲ್ಲಿ ಮತ್ತೊಂದು ತಾಣದೊಳೊರ್ವನೊರ್ವ ಳೊಳ್ಸರ್ವವಲ್ಲಭೆ ಯಾದ ನಿನ್ನೊಲ್ಮೆಯನೆಂತುನಂಬಲಕ್ಕುಮೆಂದು ನುಡಿಯಲೊಡೆ ನವಳಿಂತೆಂದಳ್—

ವೃ||ಸೂಳೆಯಗಾರ್*ವನಾದೊಡೊಪೆದೊತ್ತೆಯನಿತ್ತನತೋಳೊಳಿರ್ದ್ದವೆ |
ಯ್ಮೆಳಕೆ ಮೆಯ್ಯನೀವುದುಃಚಿತಂ ಮನಮಿತ್ತೊಡೆಸಾಲದೇಮನಂ ||
ಮೇಳಿಸಿನಿಂದುದರ್ಕೆ ಕುರುಪಲ್ತೆಸದಾದರವುಂ ನಿರಾಶೆಯುಂ |
ಕೇಳಿಗೆ ಮುಂಚುವಿಂದ್ರಿಯಮುಮಂಗದೊಳುಬ್ಬುವ ಸಾತ್ವಿಕಂಗಳುಂ ||

ವಚನ|| ಇದುಮಂ ನಂಬದೊಡೆ ಕುರುಲಂ ಬೆರಲಂ ಬೇಡಿತ್ತಪೆಂತೂದಳಿಲ್ಲೆಂದು ನುಡಿದ ನಲ್ಮೆಗಾತ್ತಿಯ ನುಡ್ಮಾತಂ ಕೇಳ್ದು ಸಂತಸಂದಾಳ್ದು—

ವೃ|ಬೆರಲಂಕೊಟ್ಟೊಡೆಬೇಟಮೇಂಕುರುಳುಮಂಕೊಯ್ದಿತ್ತೊಡೇಂಕೂರ್ಮೆಕೇ
ಳರವಿಂದಾನನೆ ಮನ್ಮನಃಪ್ರಿಯಮುದಲ್ತೀದೇಹಮಂನಲ್ಮೆಮುಂ ||
ಬರಿಯುತ್ತಿತ್ತೊಡಿವಲ್ಲಮೇಂ ಪೊರಗೆ ಪೇರಂ ತೆತ್ತವಸ್ಸಂಕಮೀ |
ವರೆ ಶೀರ್ಷಂಗುಡೆ ಕಣ್ಗಳೇಂ ಪೊರಗೆ ಕೂರ್ಪೊಂದಿರ್ದ್ದೊಡೊಂದಕ್ಷಯಂ||

ವಚನ|| ಎಂದವಸ್ಸಮಪ್ರೇಮದಿಂ ನೆರೆದಿರ್ದ್ದರಿತ್ತಲೊರ್ವ ಬರ್ದ್ದಬಹುಧನಸಂಪನ್ನರಾದ ಚೆಲ್ವ ಬೋಜಗರೆಳವೆಣ್ಗಳಾಲಯಕ್ಕೆ ಪೋಪುದಂ ಕಂಡು ಸೈರಿಸಲಾರದ ಸೊಯೆಯಿಂದವಕ್ಕೆಳ್ವಂತೆ—

ವೃ|| ಹರೆಯಮದಿರ್ದ್ದೊಡೇಸೊ ನೆರೆವುಜ್ಜುಗಮುಂಟೆ ವಿಳಾಸಮುಂಟೆ ಕಂ |
ಠರವಮದುಂಟೆ ಸತ್ಕರಣಮುಂಸ ಕಳಾಜ್ಞತೆಯುಂಟೆ ಕಾಲಮುಂ ||
ಪರಕಿಪುದುಂಟೆ ನಲ್ನುಡಿಗಳುಂಟೆ ರತೇಚ್ಛೆಯಸಂತೆ ಪೆರ್ಚ್ಚಿವಾ |
ಪರಿಕರಮುಂಟೆ ಲಜ್ಜೆವೆರೆದೀಕೆಯರೊಳ್ರತಿ ಲಜ್ಜೆಯಲ್ಲವೇ ||　　೧೫೯

ವ|| ಎಂಬನಿತರೋಳ್ವಿಟಂ ಕೇಳ್ದವಳಿದಿಗ್ಗೆವಂದು—

ವೃ|| ಎವೆಮರೆಯಾದೊಡೊಂದಿನಿತು ಸೈರಿಸಲಾರದ ಕೂರ್ಮೆ ಪೇರ್ಮೆವೆ
ತ್ತವಿಭವಮಂ ವಿಚಾರಿಸದ ಪೊರ್ದ್ದಗೆ ವಂಚನೆಗೆಯ್ಯದಂಗವೊ ||
ಪ್ಪುವ ವಿವಿಧೋಪಚಾರವಚನಕ್ಕೆರ್ದೆಯಿಕ್ಕದ ಮುಚ್ಚುವಿತ್ತಮೀ |
ವವನಿವನಲ್ಲವೆಂಬಬಗೆ ಪೊರ್ದ್ದದನಲ್ಮೆ ವಿದಗ್ಧೆಗುಂಟೆ ಪೇಳ್ ||　　೧೬೦

ವ|| ಎಂದವಳಂ ನಾಣ್ಚಿಸಿದನದಲ್ಲದೆ ಮತ್ತಮೊಂದೆಡೆಯೊಳೊರ್ವಳ್ಮದಲೆ ವಾತಾಗಿ ನುಡಿಯೆ ಮುಳಿದ ಮಗಳ ಮೊಗಮಂ ನೋಡಿ—

ವೃ|| ಪೋದೊಡೆ ಬಾರದೀಸೊಗಸು ಜೌವನಮೀಗಳೆ ವಿತ್ತಮುಳ್ಳರಾ |
ರಾದೊಡಮೇನೊ ಮೇಣ್ಬರಿಸಿ ಮೆಲ್ಲೆರ್ದೆಯಂ ಮೊದಲೊತ್ತೆಗೊಂಡು ಮ ||
ತ್ತಾದರಿಸುತ್ತೆ ಮನ್ಮಥಸುಖಾಬ್ಧಿಯೊಳಳ್ಳಿಸಿ ತಂಗಿ ದೇಹಮಂ |
ತೇದು ರತಂಗಳೊಳ್ಪಣಮನಾಂ ಪಡೆಯೆಂದೊಡಿದೊಂದುದೋಷಮೇ||೧೬೧

ವ|| ಎಂದು ನಿಜಾಭಿಪ್ರಾಯಮಂ ಮರಸಿ ನುಡಿಯೆ ಕೇಳ್ದ ಮಗಳ್ಮಗುಳ್ದಿಂತೆಂದಳ್—

ವೃ|| ಮೊಲೆ ಮುಗುಳೊತ್ತುವಂದು ಮೊದಲಿಂದುವರಂ ಬಗೆದಂತಿರಿಚ್ಚೆಯಂ
ಸಲಿಸಿ ಸಮೀಪದೊಳ್ನಿಲಸಿ ಮಗ್ಗುಲೊಳೊಗ್ಗಿರ್ಸಿ ಬೇಟಕೂಟಮಂ ||
ಕಲಿಸಿ ಕಲಾಳಿಯಿಂದೊಲಿಸಿ ಕೂರ್ತರ್ಮನಃಪ್ರಿಯನಂ ಬಿಡೆಂದು ನೀ |
ನೆಲೆಮುದುಪಾರಿದೊಳ್ತೆ ನುಡಿಯಲ್ಬಗೆದಂದುದನೆಂತು ಸೈರಿಪೆಂ || ೧೬೨

ವ|| ಪೆರಳೊರ್ವಳ್ಪೆರತೊಂದೆಡೆಯೊಳ್ಕುಂಟಿಣಿವಾತಾಗಿ ಕನಲ್ದು ತನ್ನ ಕೆಳದಿಗಿಂತೆಂದಳ್

ವೃ|| ಮಸಗಿದ ಮಾರಿಯಂತೆ ಮುಳಿವಳ್ಪುಲಿಯಂತಿರೆ ಪೂಣ್ದು ಗರ್ಜಿಪ |
ಳ್ಪಸಿದಹಿಯಂತೆ ಪಲ್ಮೊರೆವಳಗ್ಗದ ರಕ್ಕಸಿಯಂತೆ ರಂಜಿಪಳ್ ||
ಮುಸುಮೆನೆ ತನ್ನ ಮುತ್ತ ಮುಸುಡಿಂದಿರದೇಡಿಪಳೆನ್ನ ನಲ್ಲನೊ |
ಳ್ಬೆಸುಗೆಯ ಬಿಚ್ಚರ್ಲಾಟಿಪಳಿವಳ್ಮದಿಗುಂಟಣಿ ಸಾಯಳೇವೆನಾಂ || ೧೬೩

ವ|| ಮತ್ತಮೊರ್ವಳ್ತನ್ನ ಕೆಳದಿ ವಿಟರೊಳ್ಮಾಳ್ಪ ಕೇಣಮಂ ಕಂಡಿಂತೆಂದಳ್—

ವೃ|| ವಿವಿಧವಿಳಾಸಮಂ ಮೆರೆದು ವಕ್ತ್ರಸುಧಾರುಚಿಯಿಂದೆ ಪೊಣ್ಮುವೀ |
ಸವಿನಗೆಯೆಂಬ ಸಾರಸುಧೆಯಂ ಸಲೆ ತೋರಿ ಭುಜಂಗವರ್ಗಮಂ ||
ಸವಿನಯಮೊಲ್ದು ಮಚ್ಚಿರ್ಪುದಿದಲ್ಲದೆ ಸೋಮ್ಮುರ್ಡಿಯೆಂಬ ಕೇಕಿಯಂ |
ತವೆ ಮುಳಿದಾಳಿ ಪಿಂದಿರುಗಿ ಕಾಣಿಸಿ ಪೋಗಿಪುದೇಂ ಸುಬುದ್ಧಿಯೇ||೧೬೪

ವ|| ಮತ್ತಮೊರ್ವಳ್ಕೈತವಂ ಕೈಮಿಕ್ಕ ಕಾಳ್ಬೊಜಗನ ಮಾತಾಗಿ ಕಡುಕನಲ್ದು ಕೆಳದಿಯೊಡನಿಂತೆಂದಳ್—

ವೃ|| ದಿನದಿನದಲ್ಲಿ ತಾಳ್ದಿರವಿನೊಳ್ಬೊಡಮಂ ಪೊರಮಿಂಚುಗೈದು ಬಂ |
ದೆನಗಿನಿವಾತನಾಡಿ ಧನಮಂ ಪಿರಿದಿತ್ತಪನೆಂಬ ಮಾಳ್ಕೆಯಂ ||
ಮನದೊಳಮಚ್ಚಿರ್ ಮಚ್ಚಿರ್ ನೆರೆದಿದ್ದಿರ್ನಿತುಂದಿನ ಮೇಳ್ದು ಪೋದನಾ |
ತನ ಬಲಿಗಟ್ಟಿ ಮನ್ಮಥಬಳಾರಿಗೆ ಪೇರ್ಗ್ಗಿರಿಮಾಡಿ ಪೊಯ್ದಪೇಂ || ೧೬೫

ವ|| ಮತ್ತಮೊರ್ವಳ್—

ವೃ|| ಬಳಿವಳಿಯಲ್ಲಿ ಬರ್ಪ್ಪನುಪಚಾರವನಾಡುವ ನೊಯ್ಯನಿದ್ದೊರ್ಡಾ ,
ಗಳೆ ಬಳಿಕೇಳ್ದು ಕಾಲ್ವಿಡಿದು ನಂಬಿಪನಿತ್ತಪ ನೀಗಳೆಂದು ತ ||
ನ್ನೊಳೆ ಸಲೆ ತಾನೆ ಸೂರುಳಿಸಿ ತಪ್ಪುವನೇಕೆನೆ ಬಾಯ್ಗೆ ಬಂದವೋ |
ಲ್ಗಳಪುವ ನಾವಗಂ ಧನಮನೀಯದೆ ಚಾಳಿಪನೆಂತು ಮಾಳ್ಪೆನಾಂ || ೧೬೬

ವ|| ಮತ್ತಮೊಂದೆಡೆಯೊಳ್—

ವೃ|| ಇಲ್ಲದದೋಷಮಂ ಬರಿದೆ ಕಲ್ಪಿಪ ನಲ್ಪಮೆನಿಪ್ಪ ತಪ್ಪನೊ |
ಯ್ದೆಲ್ಲರೊಳಾಡುವಂ ಪುರುಡಿಪಂ ಪುರುಳುಳ್ಳೊಡೆ ಮೆಚ್ಚನಿತ್ತುದಂ ||
ಸೊಲ್ಲಿಪನುಬ್ಬಸಂಬಡಿಪನೇಕೆನೆ ಲೆಕ್ಕಿಸನೆಯ್ದೆ ಸೂರುಳಿ |
ಟ್ಟಲ್ಲದೆ ನಂಬನೀದುರುಳನಂ ನೆರೆ ನೀಗುವೆನೆಂತು ಪೇಳ್ಸಖೀ || ೧೬೭

ವಚನ|| ಇಂತನೇಕರಸಭರಿತವಾದ ಚತುರೋಕ್ತಿಗಳನಾಕರ್ಣಿಸುತ್ತುಂ ರಸಿಕ ಸಖ ನಿಕರವನವಸಂತಂ ಸಂತಸಂಬಿಗೆ ಮುಂದಣ್ಗೆ ಪೋಗೆಪೋಗೆ ಮತ್ತೊರ್ವಳ್ತನ್ನಮಗಲ್ದಿರ್ದ್ದ ವಿಟನಂ ಮಚ್ಚಿಪ್ಪುದಂ ಕಂಡು—

ಕಂ|| ನಾಗಿಣಿವೊಲೀಭುಜಂಗನ |
　　ಭೋಗಕೆ ತನುವಿತ್ತೆ ಸಂಪದಂ ಬಡೆದಪೆಯೆಂ ||
　　ತಾಗಳ್ತನಗಿಲ್ಲದುದೀ |
　　ವಾಗರಿಮೆಯದೆಂತೊ ವಕ್ರಗತಿ ನಿನಗಕ್ಕುಂ || ೧೬೮

ವಚನ|| ಎನುತ್ತಿರೆ ಮತ್ತೊಂದು ಕೇಳೀನಿಳಯದೊಳ್ಮಳಿದಿರ್ದ ಮನದನ್ನಳಂ ತಿಳಿದಲೆಂದು ವಿಟಂ ನುಡಿಯಿಸುವಲ್ಲಿ—

ವೃ|| ಎಲೆ ಕಾಯ್ಪೇರಿದೆ ಚೈತ್ರವಲ್ಲರಿಯೆ ಗಂಧಂಗುಂದದಿರ್ದಪ್ಪೆಕಂ |
ಮುಲರೇ ಮೇರೆಯನೊತ್ತಿ ವರ್ತಿಸುವೆ ಸಂವರ್ತಾಬ್ಧಿಯೇ ಬಂದುದೇ ||
ಕಲಿ ಮತ್ತೇಂ ಕೃತವೋ ಕೃಪಾನ್ವಿತಮೇ ಚಿತ್ತಂ ಕೌರವಕ್ಷೋಣಿಭೃ |
ದ್ಬಲಮೋ ಕರ್ಣಕಠೋರವಾನುಡಿಯಿದೇಂ ಪಾರ್ಥಾಸ್ತ್ರಮೋ ಮಟ್ಟಿವಿರ್ ||

ವಚನ|| ಎಂಬ ಮಹಾಪ್ರೌಢೆಯರ ಜಾಣ್ಣುಡಿಗಳಂ ಕೇಳ್ದು ಮೆಚ್ಚುರ್ತ್ತಿಪ್ಪನ್ನೆಗ ಮೊಂದು ಮುತ್ತಿನ ಮೊಗಸಾಲೆಯ ಮುಂದಣ ಕನಕಮಯಕಮನೀಯವೇದಿಕಾಗ್ರದ ಕುಸುಮತಳ್ಪದೊಳ್ಕುಳ್ಳಿರ್ದ ವಲ್ಲಭೆ ನಲ್ಲನಂ ನೆಮ್ಮಿ ಚಲ್ಲದಿಂ ಮೆಲ್ಲನಿಂತೆಂದಳ್—

ಕಂ|| ವಾದಿಸಮುನಾಂತನಾಮುಮು |
　　ನಾದಂ ತಳೆದಾತನಳೆದುದೇಂ ಭೋಗಿಜನಾ ||
　　ಹ್ಲಾದಕನಾವಂ ತಾರಕ |
　　ಭೇದಕನಾವಂ ಕುಮಾರನಲ್ತೆ ಮೃಗಾಕ್ಷೀ || ೧೭೦

ವಚನ॥ ಎನೆ ಮುಗುಳ್ದವಳೊಡನವನಿಂತೆಂದಂ—

ಕಂ॥ ವನದ ಸಮುದ್ರದ ಪರ್ಯಾ |
ಯನಾಮದೊಳ್ಗಮಿಪುದೇಂ ತದಾಶ್ರಯಮೇಂ ಜೇ ॥
ವನಕೆ ಮುನಿಪವನದಾವಂ |
ವನನಿಧಿಯೆಂತಪ್ಪುದೆನಗೆ ಪೇಳ್ಕಮಳಾಕ್ಷೀ ॥ ೧೭೧

॥ ವಿಧ್ರುಮಮುಹಿತಂ ॥

ವಚನ॥ ಮತ್ತಮೊಂದು ಸೆಜ್ಜೆವನೆಯೊಳೊರ್ವ್ವ ಕ್ಕರಿಗಬೊಜಗಂ ಸೊಕ್ಕ್ಕಿಂ ಜೌವನೆಗೆ ಸಕ್ಕದದ ಬಹಿಲ್ಲಾಪಿಯಂ ಪೇಳ್ದನದೆಂತೆನೆ—

ವೃ॥ ಬ್ರಹ್ಮಾಣೀ ಕಾ ಜನೇಷ್ಟಂ ದದತಿ ಝುಡಿತಿ ಕೇ ತಾಪಸಾಂಗಂಚ ಕೀದೃ|
ಕ್ಕ್ರೀತಾ ಕಾ ಕುತ್ರ ಪಿಶ್ವಂ ನಿವಸತಿ ವಿಬುಧಾ ಬೋಧನಂ ಕಿಂ ನೃಪಾಲಃ ॥
ಕಸ್ಯೈ ಸಂನದ್ಧ ಈಶಃ ಪತಿರಿತಿ ವಿದಿತಃ ಕಸ್ಯ ವಂದ್ಯಾಚ ಕೌ ಕಿಂ |
ವಕ್ತೀಶಂ ಕೌ ಜಗತ್ಸಂಹರಣಕೌ ಮಂಗಳೋಕ್ತಿಃ ಕವೇಃ ಕಾ ॥ ೧೭೨

ವಚನ॥ ಎನೆ ಕೇಳ್ದವಳ್ಕಾಳಿದಾಸಕವಿರಚಿತಕಾವ್ಯಾದಿಯಂತಲ್ಲಾಪಿಯಿನುತ್ತರಂಪೇಳ್ದವನ ಚಿತ್ತಂಬಡೆದಿದ್ದಳಿತ್ತಲ್ಮತ್ತೊಂದೆಡೆಯೊಳೊರ್ವ್ವಮತ್ತ ಕಾಮಾನಿ ಕಾಂತನೊಳ್ಪ್ರಹೇಳಿಕೆಯಂ ಸೊಲ್ಲಿಸಿದಳದೆಂತೆನೆ—

ಶ್ಲೋ॥ ರಣೇನ ಸಾಧ್ಯತೇ ಸರ್ವಂ |
ಮತೇನ ಧ್ರೀಯತೇ ಮಹೀ ॥
ಅಸಾರೆ ಕ್ರೀಡತೇ ಹಂಸಃ |
ಕವಿಶೇಷೇ ಕಿಮದ್ಭುತಂ ॥ ೧೭೩

ವಚನ॥ ಇಂತಪ್ಪನೇಕಚತುರಗ್ರಂಥಂಗಳಂ ಕೇಳ್ದು ಮಚ್ಚಿರ್ಕ್ಕು ಚತುರಜನಮನಶ್ಚಕೋರಚಂದ್ರಂ ನಾಗರಿಕನೊಳೊಪ್ಪಗಳುತ್ತಿರೆ ಮತ್ತೊಂದು ಮಣಿಭವನದಂಗಣದೊಳಾತ್ಮತೆಯೊಡನೆ ಮುಳಿದು ಮಗಳ್ನಿಂದಿರ್ಪುದುಮವಳ್ಪಿಡಿದಿಂತೆಂದಳ್—

ವೃ॥ ಮಗಳೆ ಮದೋಜ್ಞಮಾತೆ ಮಿಗಿಲಿತ್ತೊಡೆ ಮಾರದಿರಾತನಾಜ್ಞೆಯಂ |
ಮುಗುಧೆ ಕಳಲ್ಚು ಮೂಢತೆಯ ಮೇಣದ ಪುತ್ಥಳಿಯಂತೆ ಮೆಯ್ಯನಿ ॥
ತ್ತಗಲದೆ ಕೂಡಿ ಮೋಹಿಸಿ ಧನಂಬಡೆ ಮೌನಮಿದೇಕೆ ಮಂದಿರಂ |
ಬುಗುನಡೆ ಮಸ್ತಕಂದೊಸೆಯದಿರ್ಕ್ಕಡುಮೂರ್ಖತೆಬೇಡ ಕಾಮಿನೀ ॥ ೧೭೪

ವಚನ॥ ಮತ್ತೊಂದು ಗೃಹಾಂತರಾಳದೊಳ್ಕುಳ್ಳಿರ್ದ ಜಘನ್ಯಭುಜಂಗನಂ ತೋರಿ ಕೆಳದಿಯೊಡನೆ ಪದಿರಿಂದಿಂತೆಂದಳ್—

ವೃ|| ಪರಮಶ್ಲಾಘ್ಯಗುಣಾ ಸದಾ ಮದಹಿತಂ ಶೌರ್ಯೋತ್ತರಂ ಗಂಧಬಂ|
ಧುರನೆಂದುಂ ನರಸಾರಮೇಯನಬಳಾಪ್ರೇಮಾಸ್ಪದೋದ್ಯದ್ವನೇ ||
ಚರನೇತ್ರಾಸ್ಯನನಂಗರೂಪನತನು ಕ್ರೀಡಾವಿನೋದಂ ಮನೋ |
ಹರನೀತಂ ನಸುಪಿಂಗೆ ಬಕ್ಕರ್ಮೆನಗೀಗಳ್ಪ್ರಾರವಶ್ಯಂ ಸಖೀ ||    ೧೭೫

ವಚನ|| ಎನೆ ತನ್ನಂ ಪೊಗಳ್ದ ಪಳಂದು ಮುದಂಬಡೆದಿರ್ದ್ದನಲ್ಲಿ ಮತ್ತೊಂದೆಡೆಯೊಳ್ಳ ಶಿಕಾಂತಕಾಂತಕೇಳೀನಿಳೇತನದೊಳ್ಚಂಚತ್ಕಾಂಚನಮಂಚದ ಮೃದುಳಧವಳಶಯ್ಯಾತಳದೊಳೊಯ್ಯನೆ ರಯ್ಯಮೆನೆ ಕಯ್ಯಂ ಪಿಡಿದು ಮೆಯ್ಯಂ ಸೋಂಕಿ ಮನದಂನಳೊಡನೆ ಮದನಕೇಳಿಗೆಳಸಿ ಮಹೋತ್ಸವದಿಂ ಮನೋರಮುಣಂ ಕುಳ್ಳಿರ್ದ್ದ ನೇಹಂ ಮಿಗೆ ನಿರೀಕ್ಷಿಸಿ—

ವೃ|| ಅಂದುಗೆಯಂ ಕಳಲ್ಚಿ ಪೊಸಮುಕುತಿಯಂ ಬಿಡದೇರನೂಂಕಿ ತ |
ಳ್ತಂದದ ಹಾರವಂ ಕೊರಲ ಹತ್ತಸರಕ್ಕೆ ತೊಡರ್ಚಿ ಸಾರ್ಚಿ ಚೆ ||
ಲ್ವೊಂದಿದಕೇಶಮಂ ಬಿಗಿದು ಬಂಧಿಸಿ ನೋಳ್ಪನಿಜೇಶನಿಚ್ಛೆಯಂ |
ಸುಂದರಿ ನೋಡಿ ಕಯ್ಗಡಗಮಂ ತೆಗೆದಾತನ ಕೈಗಮುರ್ಚಿದಳ್ ||    ೧೭೬

ಹಸನರಸಂ ಮುಖಾಂಬುಜರಸಂ ಬೆರಸುತ್ತಿರೆ ಕುಂಡಲಂಗಳುಂ |
ಮಿಸುಪಕುಚಂಗಳುಂ ಕುಣಿಯೆ ನುಣ್ದೊಡೆಯುಂ ನಡುವುಂ ಕಡಂಗಿ ಕಂ ||
ಪಿಸೆ ನರುಸುಯ್ಗಳುಂ ಭ್ರಮರಕಂ ಪರೆದೊಪ್ಪಿರೆ ಘರ್ಮವಾರಿಗ |
ಳ್ಸಸಿಲ ರಸಂಗಳುಂ ಸುರಿಯೆ ಜಾಣೆ ಜವಂಗೆಡದೊತ್ತಿ ಕೂಡಿದಳ್ ||೧೭೭

ಪ್ರಿಯಕರಜಕ್ಷತೇಂದು ಕಳೆಯೊಂದೆ ಭಯಂಬಡೆದಂತುರೋಜಚ |
ಕ್ರಯುಗಳವುಂ ಕದಕ್ಕದಿಸೆ ಸಂಪಗೆಗಂಪನಮುರ್ಚ್ಚತೇಳ್ವಸುಯ್ ||
ರಯದೊಳೆ ತಾಗೆ ತಲ್ಲಣಿಪವೋಲ್ಚಲಿಸುತ್ತಿರೆ ಕುಂತಳಾಳಿ ಕಾಂ |
ತೆಯ ಜಡೆವಾವು ಪೊಯ್ದೊಡಗಿದಂತೆ ಬೆಮರ್ತ್ತುದು ವಕ್ತ್ರಚಂದ್ರಮಂ||೧೭೮

ವಚನ|| ಇಂತು ಸವಿಸುಸಿಲ ಸೊಗಮನನುಭವಿಸಿದನಂತರಂ—

ವೃ|| ಮುಗಿದಲರ್ಗಂಗಳಿಂ ಪರೆದಕುಂತಳದಿಂ ಬಿಡದೇಳ್ವಸುಯ್ಗಳಿಂ |
ತೆಗೆಬಗೆಗೊಂಡು ಮೆಯ್ಮರೆವಚಿತ್ತದಿನುಣ್ಮುವ ಘರ್ಮವಾರಿಯಿಂ ||
ಮಿಗೆ ರಸವಾರಿದಿಂದುಟಿಯಿನಾರತಿಮೂರ್ಛಿತೆ ಜೋಲ್ವದೇಹದಿಂ |
ಸೊಗಯಿಸಿದಳ್ಭುಜಂಗಪರಿದಷ್ಟತೆಯಂ ತವೆಸೂಚಿಪಂದದಿಂ ||    ೧೭೯

ವಚನ|| ಅವಳಂ ನಾಗರಿಕಂ ನೋಡಿ ಪೊಗಳ್ವನಿತರೊಳೊರ್ವ್ವವೃದ್ಧನೊತ್ತ ಗುಡಲೆಂದು ಬಂದಿರೆ ಮತ್ತೊರ್ವ್ವಳ್ಚಪಲೆ ಮೆಲ್ಲನೆ ಪೊರ್ದ್ದಿ ನಗುತಿಂತೆಂದಳ್—

ವೃ|| ತರಳನಿದಾವನೊತ್ತೆಗುಡಬಂದಪನಕ್ಕಟ ಕಾಣನೇಕೆ ಕ |
ಣ್ಣುರುಡನೊ ದಂಡಮಂ ಪಿಡಿದನಲ್ಲವೆನುತ್ತಿದೆ ಶೀರ್ಷಕಂಪನಂ ||
ತೆರೆಯಿದು ನೋಳ್ಪೊಡಾಸ್ಯರಸದಿಂ ನೆಗೆದಿದ್ದುದೊ ಗಡ್ಡವಿಾಸೆಯೊ |
ಳ್ಪರೆದಿದೆ ಬೆಳ್ಪ ನಿರ್ಗತ ರದದ್ಯುತಿಗೊಂಡುದೊ ತಾನಿದದ್ಭುತಂ || ೧೮೦

ವಚನ|| ಮತ್ತಮದಲ್ಲದೊರ್ವ ವೃದ್ಧಾಂಗನೆ ತಲೆವಾಗಿಲೊಳ್ನಿಂದು ಬೆಲೆವೆಣ್ಗಳಂಗಸಂಗದಿಂಗಿತಮಂ ಬಲ್ಲ ಬದ್ದಿನ ಬೋಜಗರಂ ಮರುಳ್ಮಾಳ್ಪ ಬಲ್ಮೆಗೊಲ್ಮೆಗಾನೇ ನೋಂತೆನೆಂದು ಸಿರ್ವನಿತರೊಳಾ ಕರ್ಣಿಸಿ ವಿದೂಷಕನವಳಿದ್ದೆಡೆಗೆ ಸರಸರನೆ ಪೋಗಿ—

ಕಂ|| ಉದರದ ವಳಿಗಳ್ನಿನ್ನಯ |
ವದನಮನೈದಿದುವು ಕುಚದ ಬಿಣ್ಪುದರಮನೈ ||
ದಿದುದಳಕವೈದಿದುದು ಕ |
ಣ್ಗದಿರಿದು ಮುದಿಪಾರಿ ಪೇಳಿದೇನಚ್ಚರಿಯೋ || ೧೮೧

ವ|| ಪೆರತೊಂದೆಡೆಯೊಳೊರ್ವಂ ಪರಿಹಾಸರಸಪ್ರಕಾಶಕಂ—

ವೃ|| ನೆಗೆದಪೆಯೋಧರದ್ವಯಮಿದೇಕೆಲೆ ಬಿಳ್ದುದು ಬರ್ದೆ ಪೇಳ್ವುದೆಂ |
ದಗಿಯದೆ ಕೇಳೆ ಪೇಳ್ದಳವನೊಳ್ವಿಟನೀಂ ರತಿಕಾಲದಲ್ಲಿ ಕೆಂ ||
ಪುಗೆ ಕರಮಿಟ್ಟು ಮರ್ದಿಸುತೆ ಹೂಂಕೃತಿಗೆಯ್ದೊಡನರ್ಧಚಂದ್ರನಂ |
ಮಿಗೆ ಕುಡೆ ಕಾಮಗೇಹಕದನಾಮದನಂಗಿದು ಪೇಳಲೈದುಗುಂ || ೧೮೨

ವಚನ|| ಮತ್ತಂ—

ಕಂ|| ಎಳೆಯಳೆ ನೀನಲ್ಲಳೆ ಪೇ |
ಳೆಳೆಯಳೆ ನಿನ್ನಳಕ ಕಾಂತಿಯೆಲ್ಲಿದೆ ಪೇಳೆ ||
ನ್ನೊಳೆ ನೀನಬಳೆಯೆ ಪೆರತೇಂ |
ತಿಳಿವೊಡೆ ನೀನಬಳೆಯೆಂಬುದರಿಯದೆ ಲೋಕಂ || ೧೮೩

ವಚನ|| ಎಂಬವಮಾತಂ ಕೇಳ್ದು ವಿನೋದಮುಕರಂದ ಮಧುವ್ರತಂ ನಸುನಗುತ್ತಂ ಬರೆವರೆ ಮುಂದೊಂದುಚಂದ್ರಮಣಿ ರಮಣೀಯಕುಟ್ಟಿಮಸ್ಥಳದೊಳುನ್ಮತ್ತಯೌವನಾಂಗಿಯೊರ್ವಳ್ಸರ್ವಲ್ಲಭಾಜನಮಧ್ಯದಲ್ಲಿ—

ವೃ|| ಬಿಡುಮುಡಿ ಬೆನ್ನೊಳಾಡೆ ಕುರುಳುಂ ಪಣೆಯೊಳ್ಕುಣಿದಾಡೆ ಪೊಣ್ಮೆ ಪೊಂ
ಗೊಡವೊಲೆಯಲ್ಲಿ ಹಾರವೊಲೆದಾಡೆ ನಿಜಶ್ವಸಿತೋರುಸೌರಭ ||
ಕ್ಕೊಡನೆಡೆಯಾಡೆ ತುಂಬಿ ಮಿಳಿರ್ದಾಡೆ ಕಟಾಕ್ಷಮರೀಚಿ ಕುಂಡಲಂ |
ಬಿಡದಮರ್ದಾಡೆ ಗಂಡದೊಡನಾಡಿದಳಂಗನೆ ಚಂಡನೃತ್ತಿಯಿಂ || ೧೮೪

ಜಡಿಯುತ್ತಿರೆ ಸುಣ್ಮೊಲೆಯುಂ ಮುಡಿಯುಂ |
ಪೊಡರುತ್ತಿರೆ ಪೂರ್ಣಘನಂ ಜಘನಂ ||
ಸಡಿಯುತ್ತಿರೆ ತೆಳ್ನಡುವುಂ ತೊಡೆಯುಂ |
ಪೊಡೆದಳ್ಪಿಡಿದಳ್ಪುಟಚೆಂಡನವಳ್ || ೧೮೫

ವಚನ|| ಮತ್ತಂ—

ವೃ|| ಸಿರಿಗಾನಾವಾಸಮಾದೆಂ ಹರಿಗೆ ನಯನಮಾಬೊಮ್ಮನೆನ್ನಾತ್ಮಜಂ ಭಾ|
ಸ್ಕರನಾಪ್ತಂ ನೋಡದೆನ್ನೊಂದಳವನೆಲೆ ಕಲಂಕಾಶ್ರಯಂ ರಾಹುದಷ್ಟಂ ||
ಚಿರದೋಷಾವಿಷ್ಟನಾದಂ ಕ್ಷಯಿ ಪಗೆತನಗೊಂಡಂ ಗಡಾ ಯೆನ್ನೊಳೀಚಂ |
ದಿರನೆಂದಂಭೋರುಹಂ ಪೊಯ್ದಪುದಿದನೆನೆ ತತ್ಪಾಣಿ ಪೊಯ್ದತ್ತು ಚೆಂಡಂ ||

ವಚನ|| ಅಂತವಳಂದವಂ ಕಂಡಿದು ನೋಟಕಚೋಜಗರೆರ್ದೆಯೊಳ್ಕಂತುಕಾಲಾಗ್ನಿಯಂ ಪೊಯ್ವಂದಮಲ್ಲದೆ ಕಂತುಕಮಂ ಪೊಯ್ವಂದಮಲ್ತೆಂದುನಾಗರಿಕಂ ಸೊಲ್ಲಿಸುತ್ತಂ ಬರೆವರೆ ಮತ್ತಮೊಂದು ಬಿತ್ತರಂ ಬಡೆದ ಬಜ್ಜರದ ಸೌಧಾಂಕಣದೊಳ್ಕೈಗೈಯ್ದ ಪದ್ಮರಾಗರುಚಿನಿಚಯ ಕವಚಿತಸಮುತ್ತುಂಗಶಾತಕುಂಭ ಸ್ತಂಭಂಗಳಿಂ ಸಮುಚಿತಸ್ಥಾನದೊಳಿರಿಸಿ ನಿರ್ಮಿಸಿದ ಮರಕತಾದಿಮಣಿಮಯ ಮಯೂರ ಮಂಡಿತ ಮಧ್ಯಸ್ಥಳತುಳಾದಂಡದಿನೆಡೆಯೊಳ್ತೊಡರ್ಚಿದ ಮಳರಮಣೀಯಮಣಿಮುಕುರ ಘನಕಳಶ ಘಂಟಿಕಾಝುಣಝುಣಿತಕಿಂಕಿಣೀ ಜಾಲಮಾಲಿಕಾ ಪಙ್ತಿಯಿಂ ತುದಿವಳಸಿನೊಳೆಳಲೆ ಬಿಟ್ಟಳವಡಿಸಿದ ರುಚಿರಚಾಮರ ಹೇಮ ಚಂಪಕೋದ್ದಾಮದಾಮವಿಚಿತ್ರಚಿತ್ರಾಂಬರವಿತಾನದಿ ನಮರ್ಚಿ ರಚಿಸಿದ ಕಮನೀಯತಪನೀಯಶೃಂಖಲಾಚತುಷ್ಕಸಂಘಟಿತ ಸಮುಜ್ಜ್ವಳ ವಜ್ರಮಣಿಪರ್ಯಂಕಿತ ಪಟ್ಟದಿನಳಂಕೃತಿ ವೆತ್ತಸೆವ ನವಿಲುಯ್ಯಲೆಡೆಗನಂಗಲಕ್ಷ್ಮಿಯಂತೆಸಖೀಜನಂ ಬೆರಸುಬಂದಾಂದೋಳಕೇಳೀಸಮಯ ಸಮುಚಿತೋಪಚಾರಮಂ ಮೆರೆದು—

ವೃ|| ಏರೆ ಮದಂ ಮನೋಜ ಜಯಲಕ್ಷ್ಮಿಗೆ ಪೂರ್ಣವಿಳಾಸವಾರ್ಧಿ ನೀ|
ರೇರೆ ಸಖೀಜನಕ್ಕೆ ಪದೆದೀಕ್ಷಿಪ ರಂಗದೊಳಂಗಜಾಗ್ನಿ ಕಾ |
ಯ್ವೇರೆ ನಿಜಾಂಘ್ರಿಪಂಕಜ ನಿಪಾತಭಯಂ ಶಶಿಗೇರೆ ನೀರೆ ತಾ |
ನೇರಿದಳುಯ್ಯಲಂ ಬಗೆಗೆ ಸಂತಸವೇರೆ ವಸಂತರಾಜನಾ || ೧೮೭

ವಚನ|| ಅಂತೇರಿ ಮಣೆಯಂ ಮೆಟ್ಟಿ ಮಣಿದು ನಿಂದು—

ವೃ|| ಮೆಯ್ಯಕುಂಕುಮ ಮಿನದ್ಯುತಿಯೆತ್ತಂಪರ್ಬಿರೆ ಬಿರ್ಚಿದಚಕ್ರಮುಂ|
ರಯ್ಯಮಾಗುತಲರ್ದಬ್ಜಮುಮಾಶೀತಾಂಶುಗೆ ದಾಳಿಯಪೋಪವೋಲ್ ||
ಸುಯ್ಯಗಾಳಿಗಲೆವಂಚಲದಿಂದಂ ತೋಪ್ಪಕುಚಂ ಮೊಗವೊಪ್ಪಲಂ |
ದುಯ್ಯಲಾಡಿಸುತೆ ನೋಳ್ಪರಕಣ್ಣಂ ಕಾಮಿನಿ ಯಾಡಿದಳುಯ್ಯಲಂ || ೧೮೮

ವಚನ|| ಮತ್ತಮೊರ್ವ್ವಳಪೂರ್ವಸೌಂದರ್ಯವತಿ ತನ್ನ ಪೊನ್ನ ಕಜ್ಜೆ ಮಾಡದ ಕೆಲದರಾಜಾಂಕಣದ ಪಚ್ಚೆಯ ಕುಟ್ಟಿಮಸ್ಥಳದೊಳಳವಟ್ಟರನ್ನದುಯ್ಯಲನೇರಿ ಚಂದ್ರಿಕಾಸಾಂದ್ರಪೀಯೂಷವಾರ್ಧಿಯೊಳೋಲಾಡುತೊಗೆತಸ್ಫಟಿಕಮಳೆಯಂತೆ ಕಮನೀಯತೆಯನಪ್ಪುಕೈದು—

ವೃ|| ಗಗನಸರೋಜಮಿಲ್ಲೆನಿಪವಾಕ್ಯಮನಿಲ್ಲೆನಿಪಂತೆ ಸುಶ್ರೋಗಂ |
ಬಗೆಗೊಳೆ ಬಾನೊಳಾಗಳದರೊಳ್ಮರಿದುಂಬಿಗಳಾಡುವಂತೆ ಮೆ ||
ಲ್ಲಗೆ ನೆಗೆದಾಡೆ ಮುಂಗುರುಳಸಾಲ್ಗಿರಗಳ್ದರಿಯೊಳ್ಪಳಂಚಲೆಂ|
ದಗಿಯದೆ ಪಾರುವಂತೆಸೆಯೆ ಪೆರ್ಮೆಲೆಗೆಳ್ಪದೆದುಯ್ಯಲಾಡಿದಳ್ || ೧೮೯

ವಚನ|| ಮತ್ತಮೊರ್ವ್ವಳಲಘುತರ ನಿತಂಬಬಿಂಬೆ ಸಂಭ್ರಮಂಬೆರಸು ಸಖೀಜನ ಮಧ್ಯದೊಳಂದಂಬಡೆದಾಂದೋಳವ ನಾಡುವಾಗಳ್—

ಕಂ|| ಅಳಿಪಿಂ ನೋಳ್ಪರ ದೃಷ್ಟಿಗ |
ಳಳಂಕೆಯಿಂ ನೂಂಕೆ ಭೋಂಕನೊಗೆವವೊಲೆನಭ ||
ಸ್ಸ್ಥಳಕಮದುರ್ಗ ತನ್ಮನಂ ಬರ |
ಸೆಳೆಯೆ ಮಗುಳ್ದಿಳಿವ ಭಾವವಮಂ ಬಗೆಗಿತ್ತಳ್ || ೧೯೦

ವಚನ|| ಇಂತೊಪ್ಪುವನಂತ ಕಾಂತಕಾಂತಾ ಸಂತಾನ ಕೆಂತುಪ್ರಧಾನ ನಾನಾ ವಿಳಸಿತ ವಿಳಾಸಮನಿಳಾಪತಿಸುತನಲ್ಲಿಗಲ್ಲಿಗೆ ನಿಂದು ನಿಂದೀಕ್ಷಿಸುತ್ತೆ ಮಿತವಚನ ಮುಖಸಖನಿಕರದೊಳ್ನುಡಿಯುತ್ತಂ ನಡೆತರುತ್ತಮಿರ್ಪ್ಪಾಗಳ್—

ವೃ|| ಕೂಜತ್ಕಾರಂಡಕಾದಂಬಕಮುಖವಿಕಿರತ್ಪಕ್ಷತಿಕ್ಷುಬ್ಧಬದ್ಧಾಂ |
ಭೋಜಭ್ರಾಜಿಷ್ಣು ಬದ್ಧಾದರ ಸರದಳಿಸುಸ್ನಿಗ್ಧಗಂಧಾನುಬಂಧಂ ||
ರಾಜಾಸ್ಯಾವೇಕ್ಷಣೋನ್ನಿದ್ರಕುಮುದಮುಕುಲಾರಂಭಿರಂಭೋರುಕುಂಭೋ
ರೋಜಶ್ರೀಖಂಡಮಿಶ್ರಶ್ರಮಜಳಕಣಿಕಾಹಾರಚೋರಂ ಸಮೀರಂ || ೧೯೧

ಕಂ|| ಸುಳಿದುದು ಬೆಳಗಪ್ಪುದನೊ |
ಲ್ದಿಳೆಯರಸಂಗೈದಿ ಪೇಳ್ವವೇಳಾಚರಸಂ ||
ತಳಿಕುಳ ಮರಾಳ ಕಳವಂ |
ಜುಳರವ ವಿಜಾಪಸ್ಸೈಕ ರವನಾಪವನಂ || ೧೯೨

ವಚನ|| ಅನಂತರಂ—

ವೃ|| ಪದಪಿಂದಿಂತಪ್ಪ ನಾನಾವಿಧ ರತಿರಸ ಸಂಮಿಶ್ರ ವೇಶ್ಯಾವಿಳಾಸಾ |
ಸ್ಪದಚಂಚಚ್ಚಂದ್ರಿಕಾ ಸಂಪದಮೆ ಸಫಳಮಪ್ಪಂತೆ ಪೋಲ್ಮಾಡಿ ಬಂದ ||
ಗ್ಗದ ಮಿತ್ರಶ್ರೇಣಿಯಂ ಮನ್ನಿಸಿ ಕಳಿಪಿ ನಿಜಾಂತಃಪುರಕ್ಕೈದಿದಂ ಸಂ|
ಮದಕೃದ್ಗಿರೀಶ ಪೂಜಾಹಿತಮತಿ ಶಿವಸಿದ್ಧಾಂತ ದುಗ್ಧಾಬ್ಧಿಚಂದ್ರಂ||೧೯೩

ಭೃಂಗವೇಣಿ ಶುಕವಾಣಿ ನಿರ್ಮಿತಾ |
ಸಂಗನೇತ್ರೆ ಸುಚರಿತ್ರೆ ನಿರ್ಜರೋ ||
ತ್ತುಂಗ ಸೇವ್ಯೆ ಮುನಿಭಾವ್ಯೆ ಶಂಕರಾ |
ರ್ಧಾಂಗಸಂಗೆ ಜಯ ಸರ್ವಮಂಗಳೇ || ೧೯೪

ಗದ್ಯ|| ಇದು ವಿನಮದಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿ
ವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚ
ಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡ
ಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊ
ಳ್ರಾಜಶೇಖರ ನರೇಂದ್ರ ಚಂದ್ರಿಕಾ ವಿಹರಣ ವರ್ಣನ
ಮೇಕಾದಶಾಶ್ವಾಸಂ ಸಂಪೂರ್ಣಂ

# ದ್ವಾದಶಾಶ್ವಾಸಂ

(ರಾಜಶೇಖರ ಸಭಾವರ್ಣನಂ)

ಕಂ|| ಶ್ರೀಕಾಳೀ ನವಯೌವನ |
ಮಾಕಂದಶುಕಂ ಶುಕಾದಿಮುನಿಜನಹೃದಯಾ ||
ಬ್ಜಾಕರಮರಾಳನಮಳಗು |
ಣಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವಚನ|| ಮತ್ತಮಾಗಳ್ ಬ್ರಾಹ್ಮೀಮುಹೂರ್ತಮೆಂಬ ಪೂಜಾಮುಹೂರ್ತದಲ್ಲಿ —

ವೃ|| ಹಿಮಸಂಮಿಶ್ರಾಂಬುವಿಂ ಮಜ್ಜನಮನೊಲವಿನಿಂ ಮಾಡಿ ದೇವಾಂಗಮಂ ತಾ
ಳ್ದಮಳಾಂಗಂ ಭೂತಿರುದ್ರಾಕ್ಷಮನಮರೆ ನಿಜಾಂಗಂಗಳೊಳ್ಧಾರಣಂಗೆ ||
ಯ್ದು ಮಹಾಮಂತ್ರಾಂತರಂಗಂ ಸಮುಚಿತವಿಧಿಯಿಂ ಪೂಜಿಸುತ್ತಿರ್ದನಾನಂ |
ದಮನಾದಂ ಪೊರ್ದಿ ಗೌರೀರಮಣನಡಿಗಳಂ ಶೈವವಿದ್ಯಾಸಮುದ್ರಂ || ೨

ವಚನ|| ಅಂತಾ ಮಹೀಕಾಂತನೇಕಾಂತದೊಳುಮಾಕಾಂತನನರ್ಚಿಸುತ್ತುಮಿರೆಯಿರೆ —

ವೃ|| ಒದೆದುದ್ಯದ್ಗೇಹಪಾರಾವತದ ನಿನದಮಂ ತಾಮ್ರಚೂಡವ್ರಜೋನ್ನಾ |
ದದ ಪೆರ್ಚ್ಚರ್ಂ ಪೊಯ್ದುಳಿಧ್ವಾನಮನೆ ತುಳಿದು ಗಾಣಿಕ್ಯಹರ್ಮ್ಯಾಗ್ರಗಾ ||
ಯತ್ಸುದತೀಸಂಗೀತ ತಾರಸ್ವರಮನಲೆದು ದಿಕ್ಪೂರಮಂ ಪರ್ಬ್ಬಿರೋದೋಂ |
ತದೊಳೆತ್ತಂ ಸುತ್ತುತಿರ್ದತ್ತುಭವ ಭವನಸಂಪೂರಿತಂ ಶಂಖನಾದಂ || ೩

ಕಂ|| ನೆರೆದಿರು ಳಿರುಳೆರೆಯನೊಳುರೆ |
ಸುರತಾಂತದ ಮೂರ್ಛೆದಳೆಯೆ ಕೆದರ್ದವಳಳಕೋ ||
ತ್ಕರಮೆನೆ ಮುಗುಳ್ದಂ ಮುಜ್ಜಾರ್ |
ವರಿಸಿದುದೆಲ್ಲೆಡೆಯೊಳ ಸತಿಯರ್ನಲಿಯಲೊಡಂ || ೪

ವೃ|| ಪೊದೆಯುತ್ತುಂ ಮೇಲುದಂ ಮೆಲ್ಲಡಿಯಿಡುತಿಳೆಯೊಳ್ಮೆಲ್ಲನಲ್ಲಲ್ಲಿನಿಂದಿ |
ರ್ದ್ದಿದಿರಂ ಕಣ್ಮಂಚದಂತೀಕ್ಷಿಸುತೆಡಬಲದೊಳ್ಸೊಪ್ಪುಳಾರೈವುತುಂ ಬಿ ||
ಚ್ಚಿದ ನೀವೀ ಬಂಧನಂ ಬಂಧಿಸುತಳಿದಳಕಶ್ರೇಣಿಯಂ ತಿದ್ದುತುಂ ನು |
ಣ್ಗದಪಂ ಪತ್ತಿರ್ದ್ದ ತಾಂಬೂಲರಸಮನೊರಸುತ್ತೈದಿದ ಳ್ಪಾಣ್ಬೆಯೊರ್ವ್ವಳ್ ||

ವಚನ|| ಪೆರತೊಂದು ತಾಣದಲ್ಲಿ—

ಕಂ|| ಅಸವಸದಿಂ ಸುಸಿಲೆಸಗು |
ತ್ತಸತಿ ಮೊದಲ್ಗಾರಿದ ಸಿತವಸನ ಮಿದೆಂದಾ ||
ಪೊಸಮುಬ್ಬ್ಬ ನುಡಲ್ತೆಗೆದತಿ |
ಹಸನ ರಸಂ ಬಡೆವಳೊಸೆದ ಪಾಣ್ಬನ ಮೊಗದೊಳ್ || ೬

ವಚನ|| ಮತ್ತಮೊರ್ವ್ವಳ್—

ವೃ|| ಎಲುಲಿತ ಘರ್ಮವಾರಿಕಣದಿಂ ಕೆಸರೇಳ್ದಿಳಿತರ್ಪ್ಪಗಂಡಮಂ |
ಡಳಕೃತಪತ್ರಭಂಗ ಮೃಗನಾಭಿಜಮಂ ಬಳಿದಿಟ್ಟುರೋಜಮಂ ||
ಡಳದ ನಖಕ್ಷತಕ್ಕಧರದೊಳ್ತಲೆ ದೋರ್ಪ್ಪರದಕ್ಷತ ಕ್ಕರ. |
ಸ್ಥಲದ ರಸಾದ್ರ್ರಕುಂಕುಮ ಮನಂಕಿಸಿ ಜಾಣ್ಮೆಗೆ ಪಾಣ್ಬೆಯೈದಿದಳ್ || ೭

ವಚನ|| ಆಸಿತಗೆ ಯಲ್ಲದೆಯು ಮನ್ಯಪ್ರದೇಶದಲ್ಲಿ—

ವೃ|| ನೋಡಿದನಿಂತು ನೋಡಿರಸದಂಬುಲಮಂ ಸವಿದಿತ್ತು ಚುಂಬನಂ |
ಮಾಡಿದ ನಿಂತುರೋಜಯುಗಳಂ ನಿಜವಕ್ಷದೊಳೊಪ್ಪಲಪ್ಪಿ ಮುಂ ||
ಡಾಡಿದನಿಂತು ತಳ್ತು ತನು ಜೋಂಪಿಸಿ ಜುಂಮಿಡೆ ಸೋಂಕಿ ಸೊರ್ಕ್ಕಿಮೈ |
ಗೂಡಿದ ನಿಂತುಟೆಂದಸತಿ ಇನ್ನವನಂ ನೆನೆಯುತ್ತು ಮೈದಿದಳ್ || ೮

ಕಂ|| ಜಾರೆ ನಿರಿ ಜಾರೆ ಸೋರ್ಮುಡಿ |
ಜಾರೆ ಬೆಮರ್ಜಾರೆ ಮೇಲುದದು ಮುಡಿದಲರ್ ||
ಳ್ಜಾರೆ ಮುದಂ ಜಾರೆ ಮದಂ |
ಜಾರೆ ಪದಂ ಜಾರೆ ಜಾರೆ ಜಾರಿದಳೊರ್ವ್ವಳ್ || ೯

ವಚನ|| ಪೆರತೊಂದುತಾಣದೊಳ್—

ವೃ॥ಮನೆಯಾಣ್ಮಂಗೂಡಿ ಮಂಚಾಗ್ರದೊಳೊರಗಿರೆಸುತಶ್ರಾಳಿಯಂಸಂತವಿಟ್ಟಾ
ಮನದಾಣ್ಮಂಗೂಡಿ ರತ್ಯಂತದೆ ಸುಖಿವಡೆದೈತಪ್ಪುರ್ದುಂ ಪಾಣ್ಬೆ ತತ್ಕಾಂ॥
ತನೊಳತ್ತಲ್ಕೂಡಿ ಸೌಖ್ಯಂಬಡೆವಿದಿರ್ವರೆ ತದ್ಭೂತಿಯೋರೊರ್ವ್ವರೊಳ್ತ |
ಮ್ಮನಿತುಂವೃತ್ತಾಂತಮಂ ಕೇಳ್ದಹಹಯೆನುತೆ ಕೈವೊಯ್ದುನಕ್ಕಾಡುತಿರ್ದ್ದರ್

ವಚನ॥ ಮತ್ತಮೊಂದು ಸಂಕೇತನಿಲಯದಲ್ಲಿ—

ವೃ॥ ಬಿಡುಬಿಡು ಕೋಳಿಕೂಗಿವುದೆಮ್ಮವರೇಳ್ವರೆನುತ್ತೆ ಬಲ್ಪಿನಿಂ |
ಬಿಡಿಸಿಕೊಳುತ್ತೆ ಸಂವರಿಸಿ ನೀವಿಯನೊಳ್ಪುಡೆಯುಟ್ಟು ಬೀದಿಯೊಳ್ ॥
ನಡೆವೆಳೆಜೋಡೆ ಮೂಡಗಡೆಗೆಂಪನಭೀಕ್ಷಿಸಿ ಭೀತಿವಟ್ಟು ಕ |
ಣ್ಗೆಡುತೆ ದವಾಗ್ನಿಗಂಡೆರಲೆಯಂತೆರ್ದೆ* ಪವ್ವನೆ ಪಾರೆ ಪಾರಿದಳ್ ॥ ೧೧

ಕಂ॥ ಜವದಿನುಷಃಕಾಲವೃಷಂ |
ತವೆ ಕದಡಿದುದೆನಿಸಿ ಮಬ್ಬುರ್ವೆಳಗಂ ತಿಳಿದೊ ॥
ಪ್ಪುವ ಬಾಂಗೆರೆಯೊಳ್ಮೀಂಗ |
ಳ್ತವಕದೊಳೆ ಮುಳುಂಗುವಂತಡಂಗಿದುವಾಗಳ್ ॥ ೧೨

ಬೆಳ್ವೆಳಗಿನ ಬಾಳ್ವೆಳೆಯಂ |
ತಳ್ವದೆ ಬಾಂಬೊಲದೊಳರುಣಕರಶಿಖಿಶಿಖೆ ಪಾ ॥
ಳೇಳ್ವಿನಮುಳುರ್ದೆ*ರೆ ಚಿಂತೆಯ |
ನಾಳ್ವಂತೆ ವೊಲೋಷಧೀಶ್ವರಂ ಕಳೆಗೆಟ್ಟಂ ॥ ೧೩

ರಾಜಬಲಂ ಕುಂದಿದುದೆನ |
ಗೀಜಲಜಿನಿ ರಾಜಹಂಸೆಯುತೆ ಮಧುಪರವ ॥
ವ್ಯಾಜದೆ ನಕ್ಕಪಳೆಂದಾ |
ರಾಜಿತ ಕುಮುದಿನಿ ವಿಷಾದದಿಂ ಕೊರಗಿರ್ದ್ದಳ್ ॥ ೧೪

ವಚನ॥ ಅಂತುಮಲ್ಲದೆಯುಂ—

ಕಂ॥ ಮೊದಲೆನ್ನಸಿರಿಯನಿದು ನೋ |
ಡದೆ ಕಣ್ಮುಚ್ಚಿದುದುಗಡ ಸರೋಜಿನಿ ಸಿರಿವೆ ॥
ತ್ತಿದನಿಂದು ನೋಡೆನಾಸೆನು |
ತದು ಕಣ್ಮುಚ್ಚಿದವೊಲಲ್ಲಿ ಮುಗಿದುದು ಕುಮುದಂ ॥ ೧೫

ವಿಧುವಿರಹಿಣಿ ನವಕುಮುದಿನಿ |
ಮಧುಮಿತ್ರ ನಿರೂಪಣಾತಿಭೀಕರವಿಚರ ||
ನ್ಮಧುಕರಮರಾಳದರ್ಶನ |
ವಿಧುರಿತೆ ಸುಗಿದಂತೆ ಮುಗಿದುದಸಿತಾಂಭೋಜಂ || ೧೬

ವೃ|| ಪರಿಪರಿದೊಂದನೊಂದರಸಿ ಕಂಡತಿಕಾತರಮುಣ್ಮೆ ಪೊಣ್ಮೆ ಬಂ |
ದೆರವಿನಿತಿಲ್ಲದಪ್ಪಿ ಗರಿ ನೆಟ್ಟನೆ ತಳ್ತಿರೆ ಕಣ್ಸುಖಾಶ್ರುವಂ ||
ಸುರಿಯೆ ಕಡಂಗಿ ಕಂಜದಳತಳ್ಪದೊಳೊಂದುವ ಚಕ್ರಚಕ್ರದ |
ಬ್ಬರದ ರತಕ್ಕೆ ನಾಣ್ಚುತಲರ್ಗಣ್ಮುಗಿದಂದದೆನ್ನೈದಿಲೊಪ್ಪುಗುಂ || ೧೭

ಕಂ|| ಇರುಳತನುಧನುರ್ಲತೆಗೊ |
ಳ್ದಿರುವಾಗಿ ಬಳಲ್ದು ಪಸಿದಳಿವ್ರಜಕನಿಲಂ ||
ಪರಿಮಳದುಣಿಸಾಗಿಸಲಾ |
ದರಿಸಿ ಕರಂ ಬಿಚ್ಚಿದಂತಿರಲರ್ದುದು ನಳಿನಂ || ೧೮

ವಚನ|| ಅಂತುಮಲ್ಲದೆಯುಂ—

ಕಂ|| ಎನಗಾಗದ ವನರುಹಮಂ |
ಮನೆಮಾಡಿದಳೆಂದು ಕಂಡು ಮುಳಿವಂ ಶಶಿಯೆಂ ||
ದೆನುತಿರುಳೆ ಮುಚ್ಚಿ ಸಿರಿಯಾ |
ತನಭಾವದೆ ಬಿಚ್ಚಿದಂತಿರಲರ್ದುದು ಕಮಳಂ || ೧೯

ಇರುಳಹಿತೇಂದೀವರದ |
ಲ್ಲಿರುತದು ಮುನಿದೊಡೆ ಮಧುವ್ರತಂ ಬರೆ ಮೊದಲಂ ||
ತಿರೆ ಕಂಡುದುಗಡ ಕಮಳಂ |
ಪರೀಕ್ಷಿಸಗ್ಗಣಿಗಳಾಶ್ರಿತರೊಳವಗುಣಮಂ || ೨೦

ಕನಕಕರಂಡಕದಿಂದಂ |
ದಿನಲಕ್ಷ್ಮಿ ಸರಾಗಮಿಂದ್ರನೀಲದ ಸರಮಂ ||
ದಿನಪಂಗೀಯಲ್ತೆಗೆದಪ |
ಳೆನೆ ಮಧುಕರಮಾಲೆ ನಳಿನದಿಂ ನೆಗೆದೆಸೆಗುಂ || ೨೧

ಜಳಕಣಕಲಿತದಳಂ ನೀ |
ರ್ದಳಿದಿಟ್ಟೆಲೆಯಾಗೆ ನಳಿನಿ ಕೆಲದಟ್ಟಿಗಳೆ ||

ಟ್ಟಳೆನಿಸೆ ವಿಕಚಾಬ್ಜಂಗ |
ಳ್ಕೊಳನೆಸೆದುದು ರಾಜಹಂಸನೌತಣದೆಡೆವೋಲ್ || ೨೨

ಪಾಡುವಪರಮೆಗಳಿಂದೊ |
ಲ್ದಾಡುವಮುದ್ದಂಚೆವರಿಗಳಿಂ ನರುಗಂಪಿಂ ||
ತೀಡುವೆಳಗಾಳಿಯಿಂ ಸಿರಿ |
ಗೂಡಿದಗೃಹದಂತಿರಿರ್ದ್ದು*ದಲರ್ದಂಭೋಜಂ || ೨೩

ತೀರದೊಳಿರೆ ವಿದ್ರುಮತತಿ |
ವಾರಿಯೊಳಿರೆ ಪದ್ಮರಾಗ ಮಬ್ಜಾಕರ ಮಾ ||
ನೀರಾಕರಮೆನೆ ಕಣ್ಗೆಂ |
ರಾರಾಜಿಸಿದುದೊ ಸಿತಾಬ್ಜಮುಕ್ತಾಳಿಗಳಿಂ || ೨೪

ಸುರವರಕರಿ ಮುರಿದೊಟ್ಟಿದ |
ಸುರುಚಿರ ನಂದನ ರಸಾಲಪಲ್ಲವತತಿಯಂ ||
ತಿರೆ ಕರಮೆಸೆದುದು ಮೂಡಣ |
ಗಿರಿ ಯೆಡೆಯೊಳ್ಮೂಡಿ ತೋರ್ಪ್ಪಸಂಧ್ಯಾರಾಗಂ || ೨೫

ವಚನ || ಮತ್ತಂ—

ಕಂ|| ಸುರವರನಂದನ ವನಮಂ |
ಸುರವರನಂದನನ ಬಾಣದುರಿ ಪರ್ವ್ವಿದುದೀ ||
ಪರಿಯೆಂದರಿವುವ ತೆರದಿಂ |
ಪರಿರಂಜಿಸುತಿರ್ದ್ದುದುದಯ ಸಂಧ್ಯಾರಾಗಂ || ೨೬

ಹರಿದಿಕ್ಪಣವಧು ಬರೆ ಹಿಮ |
ಕರಖರಕರರೊಂದೆ ತೆರದೊಳನುರಕ್ತತೆಯಿಂ ||
ಪೆರೆವಳ್ಗಡ ವಸುವಿತ್ತೊಡೆ |
ಸರಿ ಮೃದುಕರಿನರ್ಕ್ಕಳಿರ್ವ್ವರುಂ ಗಣಿಕೆಯರೊಳ್ || ೨೭

ಹರಿಗೆ ಮಣಿವ ಸುರನಿಕರದ |
ಕಿರೀಟವೊರಸಿದೊಡೆ ಸುರಿವ ಕನಕದ ರಜಮಂ ||
ಸುರಕರಿ ಕರದಿಂ ಕೆದರ್ದಂ |
ತಿರೆ ಪಸರಿಸುತಿರ್ದ್ದುದುದಿತಖರಕರಕಿರಣಂ || ೨೮

ವೃ || ಬಿರಿಯೆ ಮೃದುಸರೋಜಂ ಬಿಂಕವಂ ಬಿಟ್ಟುರಾಜಂ |
ಜರಿಯೆ ತಿಮಿರಪೂಗಂ ಜಾರೆ ಜಾರಾಸುರಾಗಂ ||
ಸರಿಯೆ ಕುಮುದಬೃಂದಂ ಸಂಮುದಂಗುಂದೆ ಬಂದಂ |
ನೆರೆಯೆ ಪಟುರಥಾಂಗಂ ನಿರ್ಮಳಾಂಗಂ ಪತಂಗಂ || ೨೯

ವಚನ|| ಮತ್ತಮಾಗಳ್—

ಕಂ|| ಪರಿಕಲಿತಾರುಣಕರ ಭಾ |
ಸ್ಕರಬಿಂಬಂ ಕಣ್ಗೆವಂದುದೈಂದ್ರೀವಧು ಸು ||
ಣ್ಗೊರಲೊಳ್ಕಟ್ಟಿದ ಮಾಣಿಕ |
ವರಲೊಂದಿರ್ದ್ದೈರದಾಳಿಯೆನೆ ರಶ್ಮಿಯುತಂ || ೩೦

ವಚನ|| ಮತ್ತಂ—

ಕಂ|| ಪರಿರಕ್ತದಿವಾಕರ ಭಾ |
ಸುರಬಿಂಬಮದಿಂಬು ವಡೆದು ದಖಿಳ ದಿಶಾವಿ ||
ಸ್ಫುರಿತ ಸುಧಾಕರ ಕರಸಾ |
ಗರಮಂ ಕುಡಿದಡರ್ವ ಬಡಬಶಿಖಿ ಪಿಂಡದವೋಲ್ || ೩೧

ಕೆಂಬೆಳಗೆಸೆದುದು ಕೌಸುಂ |
ಭಾಂಬರ ಕೃತತಲ್ಪದಂತೆ ಖರರುಚಿ ಬಿಂಬಂ |
ಕೆಂಬಟ್ಟೆಯ ಪೊಸಕೌಳುಡೆ |
ಯೆಂಬಂತಿರೆ ತಳ್ತು ಮೆರೆದುದೈಂದ್ರೀವಧುವಾ || ೩೨

ವಚನ|| ಅನಂತರಂ—

ಕಂ|| ಕೆಂಬಟ್ಟೆಯ ಗವಸಣಿಗೆಯ |
ನಂಬರರಮೆ ನೋಡಲುಗಿದಮಣಿಗನ್ನಡಿಯೆಂ ||
ದೆಂಬಂತೆ ಸಂಜೆ ತೊಲಗಿ |
ರ್ದ್ದಂಬರಮಣಿಬಿಂಬಮೇಂ ಮನಂಗೊಳಿಸಿದುದೋ || ೩೩

ಇದುಚಂಚದ್ವ್ಯೋಮಲಕ್ಷ್ಮೀಕರಕಲಿತಸುವರ್ಣಾಬ್ಜಮೋ ನೋಡುನೋಡಿಂ |
ತಿದುಪೂರ್ವಾಶಾಂಗನಾಮಂಗಳಮಧುರಿಮಸೀಮಂತಮಾಣಿಕ್ಯಮೋ ಪೇಳ್
ಇದು ಶಕ್ರಾಶಾದ್ರಿಹರ್ಮ್ಯೋಜ್ಜ್ವಳಕಳಶಮೋ ತಾನೆಂಬಿನಂ ಕಣ್ಗೆ ಚೆಲ್ವಾ |
ದುದು ಚಂಚದ್ದೃಕ್ಕದಂಬಂ ತಿಮಿರಕುಧರಶಂಬಂ ದಿನಾಧೀಶಬಿಂಬಂ || ೩೪

ವಚನ|| ಆಗಳ್—

ವೃ|| ವಸನಿಧಿವಾರಿಯೊಳ್ಬೆರಸಿ ತೀವಿದಚಂದ್ರಿಕೆಯೆಂಬ ಪಾಲನೀ |
ಕನಕಸರೋಜರಾಜಿತರಜಃ ಪರಿಪಿಂಜರವರ್ಣಹಂಸನೊ ||
ಯ್ಯನೆ ಬರೆಪೀದ್ದುದಾ ಜಲಮನೊಲ್ಲದೆ ಬೇರ್ಪಡಿಸುತ್ತು ಸೋಡಿಮೆಂ |
ಬಿನಮಿಳೆ ಮುನ್ನಜೊನ್ನಮದು ಪಿಂಗಿರೆ ತಗ್ಗಿತು ವಾರಿವಾರ್ಧಿಯಾ || ೩೫

ಮನದನುರಾಗದಿಂ ನೆರೆದು ನಲ್ಲಳೊಳುಣ್ಮುವ ಘರ್ಮವಾರಿಯೆಂ |
ದೆನೆ ಪನಿ ತೋರೆ ತೊಟ್ಟನಲರ್ದಂಬುಜದೊಳ್ನಲೆಗೊಂಡು ಮೂಡಿ ಬ |
ಪ್ಪಿನನ ಕರಂಗಳಂಗದೊಳೆ ಕುಂಕುಮದಂತಿರೆ ತೋರ್ಪ್ಪಚಕ್ರಮೇಂ |
ನೆನೆಯಿಸಿದತ್ತೊ ಕಾಮಿನಿಯ ಬಲ್ಮೊಲೆ ಕಾಂತನ ಕಯ್ಯೊಳಿರ್ಪ್ಪುದಂ || ೩೬

ಎರಲಿರದೆತ್ತಿ ಸೂಸೆ ಕನಕಾಬ್ಜರಜಂ ನಯದಿಂದೆ ಬರ್ಪ್ಪನೀ |
ಳ್ದಿರೆಗೆರೆಗೊಂಡು ನಿಂದು ಸರಮೆಂಬಕಷೋಪಲದಲ್ಲಿ ವಾಸರೇ ||
ಶ್ವರಕರಮೆಂಬ ಪೊನ್ನೊರೆವೊಲೊಪ್ಪಿರೆ ಸೌರಭಕಲ್ಲಿ ಸಾರ್ದ್ದಷ |
ಟ್ಚರಣಮೆ ಕಾಲಕಾರುಕನಮುಚ್ಚಿದ ಮೇಣದವೋಲ್ವಿರಾಜಿಕುಂ || ೩೭

ಮೃಗಧರ ಬಿಂಬಮೆಂಬ ಪೊಸಬೆಳ್ಮುಗಿಲುರ್ವ್ವರೆಯಲ್ಲಿ ಸೂಸೆ ಸೋ |
ಜಿಗಮೆನೆ ಚಂದ್ರಿಕಾಮೃತದ ಬಲ್ಸರಿಯಂ ಕಮಳಾಕರಾಬ್ಜಶು ||
ಕ್ತಿಗಳದರಚ್ಚಬಿಂದುಗಳನಾಂತೊಳಗಾಗಳೆ ಮುಚ್ಚಿಕೊಂಡೊಡ |
ಲ್ಲೊಗೆದುರುಮೌಕ್ತಿಕಂಗಳೆನೆ ಕಂಗೊಳಿಸಿರ್ದ್ದವುವಂಚೆದತ್ತಿಗಳ್ || ೩೮

ಖರಕರಸಿದ್ಧನೆಳ್ದು ದಿವಿಜೇಂದ್ರದಿಶಾದ್ರಿಗುಹಾನಿವಾಸದಿಂ |
ದುರುತಿಮಿರಾಭಿಭೂತಭುವನೋನ್ನತಲೋಹಕೆ ತನ್ನವಿದ್ಯೆಯಂ ||
ಧರೆಗರಿಪಲ್ಕೆ ಮುಟ್ಟಿಸೆ ಕರೋತ್ಕರಸಿದ್ಧರಸಪ್ರವಾಹಮಂ |
ಪಿರಿದದು ಚಿನ್ನಮಾದುದೆನೆ ಪೊಂಬಿಸಿಲೊಂದಿರೆ ಕಣ್ಗೆ ರಂಜಿಕುಂ || ೩೯

ವಚನ || ಮತ್ತಮದಲ್ಲದೆಯು ಮತಿವಿಶದಶಶಿಮಣಿಮಯ ಶಿವಗೃಹೋಪರಿಮಶಿಖರಾಗ್ರದೊಳ್ತಿತ್ತಿಸಿದ ಮುತ್ತುಗಳೆಂಬಂತೆ ನಿಲುಂಬಿ ನಿಂದಹಿಮಕರಕರ ಪಾತಜನಿತಹಿಮಕಣೋತ್ಕರಮಂ ಪೊಸಬೆಸನದಿಂ ನಸೆಮುಸಗೆ ಸುಸಿಲೆಸಗಿ ಬಳಲ್ದುಬಾಯಾರಿ ಬಳಸಿನಿಂದು ಕರ್ದುಂಕುವ ತರುಣಪಾರಾವತಂಗಳ ರತೆಯಂ ಬರಿಕ್ಕೈವಂತೆ ತೊಳೆದು ಕಳೆದು ಗವಾಕ್ಷವಿವರದೊಳೊಳಪೊಕ್ಕು ಪೊಚ್ಚಪೊಸಪೊಂಗೆಗಡನಮುಚ್ಚಿದಂ ತೊಳವಳಯದ ಭಿತ್ತಿಯಂ ನೆಮ್ಮಿ ಬೆಳಗಿಯುಂ | ದ|
ಕಳೆಗುಂದಿದ ಕಳಾಧರನಂ ಕಂಡು ನಸುನಗುವಂತಲರ್ದಕೆಸಮ್ಮಲ್ಲಿಗೆಯ ಕಿತ್ತಸಳ ಕೇಸರದ ಕುಸುಂಕರೊಳ್ಮುಸುಂಕಿ ಮುಸುಂಬನಿಟ್ಟು ಪಸಿವಡಂಗೆ ಪೊಸಬಂಡನುಂಡು ಪಿಂಡುಗೊಂಡು ಮಂಡಳಿಸಿ ನಿಂದಪೆಣ್ದುಂಬಿಗಳಂ ಪೊಂದುಂಬಿಗಳೆಂಬಂದಮನೊಂದೆ ನಿಮಿಚ್ಚಿ

ಯುಂ | ಕಂದರ್ಪಕಲಹಕ್ಕೆ ಕಟ್ಟಾಳ್ತನಂಬೆತ್ತು ಗಳಿಲನಿದಿರ್ಚ್ಚಿ ನಿಂದು ನಳಿನ ದಳವೆಂಬ ಕಳದೊಳ್ಪ್ರತಿಕಲಹಕ್ಕೆಳಸಿ ಕೈವಾರಿ ಪಳಂಚಿ ಕಡಂಗಿ ಕಾದಿ ಕಡುಗಲಿತನಂ ಮಿಕ್ಕಜಕ್ಕವಕ್ಕಿಗಳ್ಗೆ ಮಚ್ಚಿ ಪಚ್ಚೆವಿಲ್ಲಂ ಪೊದಿಸಿದ ಪೊಂಬಟ್ಟೆಯೆಂಬ ಪಾಂಗನೊಡನಳುರ್ಕೆ ಗೊಂಡೊಡರ್ಚ್ಚಿಯುಂ | ಕಡುಬೆಳೆದು ತಳಿರ್ತ್ತ ತರುಣತಮಾಲ ದೆಳದಳಿರ ನಳುರ್ದ್ದ ಪಿಕನಿಕರಕೆ ಮಾಂದಳಿರೆಂಬ ಸಂದೆಗವಂ ಮಾಡಿ ಕದುರ್ಂಕಿಸಿಯುಂ | ತೋಡಿಲ್ಲದ ಫಲಿತರಸಾಲ ಮೂಲದಾಲವಾಲದೊಳ್ಲೀಲೆಯಿಂ ರತಿಯುವತಿ ಸುರಿದಕುಂದಣದ ಕುಂಭದ ಕುಂಕುಮಾಂಬುವೆಂಬಶಂಕೆಯಂ ಭೋಂಕನೊಡರ್ಚ್ಚುತಲೆದುರುಗಲ ಪೊದರ ಪೊರೆಯೊಳ್ಪ್ರಗರೆದ ಕಡುಗಳ್ತಲೆಯ ನೆಡೆನುಸುಳ್ದು ಪಿಡಿದೊರಸುತ್ತಲ್ಲಿ ಪರೆದು ಪಸರಿಸಿಯುಂ | ಮಿಸುಪಕರವೀರದ ಕಡುಗೊರ್ವ್ವಿದ ಬರಿಮುಗುಳ್ಗಳಂ ಮುಸುಕಿ ಮುತ್ತಿಮುಸುರಲೆಂದು ಮುಂಕೊಂಡು ಝೇಂಕರಿಸುತ್ತೆ ದುರುದುಂಬಿತನದಿಂಬಂದ ಮರಿದುಂಬಿಗೆ ಚಂಪಕಕೋರಕಭ್ರಾಂತಿ ಗೊಟ್ಟು ತೊಟ್ಟನೆ ಮುಗುಳ್ಚಿಯುಂ | ನಿಧುವನ ನಿಕೇತನದ ವಾತಾಯನಂಗಳೊಳ್ನುಸುಳ್ದು ಸುಸಿಲ್ಗಡೆಯೊಳೊರಗಿರ್ದ್ದ ಸೊಕ್ಕುಂಜವ್ವನೆಯರ ಕರ್ಕಶಸ್ತನಮೆಂಬ ಮದನ ಮದಗಜ ಕುಂಭಯುಗಳದ ಪಾರ್ಶ್ವದ್ವಯದೆ ತಳ್ತಿಳಿವ ಮದಕರ್ದಮದಂತೆ ಕಣ್ಗೆವಂದ ಕಕ್ಷಭವ ಘರ್ಮಜಲಲವಲುಲಿತ ಮೃಗಮದ ಕರ್ದಮಮಂ ನಾವರಿಸಿ ಕಾಶ್ಮೀರ ಕರ್ದಮಮೆನಿಸಿ ರಂಜಿಸಿಯುಂ ರಾಜಮಂದಿರದ ಮುಂದೆ ನಿಂದುಗಂಧಸಿಂಧುರಂಗಳಂಗಕ್ಕೆ ಸಂದಸಿಂದೂರಶ್ರೀಯ ನೋಲಗಿಸಿಯುಂ ಬಚ್ಚಬರಿಯಬಯ ಲೊಳ್ಮೊಕ್ಕಳಮೆನೆ ತೆಕ್ಕನೆ ತೀವಿ ಕಡಲುಡಿಗೆ ಗೊಂಡಪ್ರೌಢವಿವೆಣ್ಣಂಬ ರಾಂಬುಜನೇತ್ರನಿತ್ತ ಪೀತಾಂಬರದ ಜಳಂಬಮೆಂಬಬೆಡಂಗನಮರ್ಚ್ಚಿಯುಂ ಪರಿವಪೆರ್ದೊರೆಗಳೊಳ್ಪರೆದು ಪಸರಿಸಿ ನಿಲುಂಬಿ ನೀರಾಟಮನಾಡಿ ಪೋದವಾರನಾರಿಯರ ಪೊಂಜಿಳಿಮೆಯ್ಯೊಳ್ ರಂಜಿಸಿರ್ದ ರಜನೀರಜಂಗಳಿಂ ಕದಡೇಳ್ದು ಪರಿದಪುದೆಂಬ ಪಿರಿಯಸಿರಿಯ ನೊಳಗು ಗೊಳಿಸಿ ಜಂಬೂನದೀಭ್ರಾಂತಿಯಂ ರತ್ನಾಕರಂ ಗೊದವಿಸಿಯುಂ ನಿದ್ರೆ ನೆಲೆಗೆಟ್ಟು ತೊಲಗೆ ನಿಜಾಲಯದಿಂ ಪೊರಮಟ್ಟು ಮತ್ತವಾರಣ ದೊಳ್ನಿಂದು ನಿರೀಕ್ಷಿಪ ಕಮಳದಳಧವಳಲೋಚನೆಯರ ಕಟಾಕ್ಷಛವಿಗಳೊಳೊತ್ತಡರ್ದ್ದ ತದ್ವನ ವಿಧುಮಂಡಳ ಪ್ರಸಾರಿತ ಚಂದ್ರಿಕೆಯೊಳ್ಮಲ್ಲಗಾಳಿಗಮ ನೊಡರ್ಚ್ಚುವಂತೆಕಮನೀಯತೆಯ ನಾಲಿಂಗಿಸಿಯು ಮತಿಸಾಂದ್ರತೆಯನಪ್ಪುಕೈದೆಳನೇಸರಳವಿಗಳಿಡ ಕನಕರುಚಿರುಚಿರತರಕರನಿಕರಂ ಪರಿರಂಜಿಸಿಪರ್ಬ್ಬಿಕಣ್ಗೊಪ್ಪಿತ್ತು ಮಿರ್ದ್ದದಾಪ್ರಸ್ತಾವದೊಳ್

ವೃ|| ವಿಮಳಿನ ಚಂದ್ರಕಾಂತಿತನುತಂತುಗಳಂ ಮಿಗೆ ನುಂಗಿ ಪಿಂಗದಾ |
ಕ್ರಮಿಪ ಪತಂಗದಿಂದಗಿದು ಪೊಕ್ಕ ಸೆಲಂದಿವೊಲೊಪ್ಪೆ ಲಾಂಛನಂ ||
ಕಮಳಜಶಿಲ್ಪಿ ಕಲ್ಪಿತ ಜಗದ್ಗೃಹದಗ್ರದೊಳೊಪ್ಪಿದತ್ತು ಚಂ |
ದ್ರಮನದರೊಂದು ಗೂಡೆಸೆ ನಿರೀಕ್ಷಣೆಗೀಕ್ಷಿಪ ಭೂಜನೌಘದಾ || ೪೦

ವಚನ|| ಅಗಳ್—

ವೃ|| ನವವಿಧನವ್ಯಭಕ್ತಿ ಮಿಗೆ ಶಂಭುಸಮರ್ಚಿಸೆಗೈದು ದಿವ್ಯಶಾಂ |
ಭವ ಪರಮಂತ್ರಮಂ ಜಪಿಸಿ ತಾಳ್ದು ತದಂಘ್ರಿಪಯಃ ಪ್ರಸಾದಮಂ ||
ಸವಿನಯಮಾಂತಳಂಕರಣಸಂಕುಳಮಂ ವರವಂದಿಮಾಗಧ |
ಸ್ತವರವಮುಣ್ಮೆ ಬಂದನೆಸೆವೋಲಗಶಾಲೆಗಿಳಾಧಿನಾಯಕಂ || ೪೧

ವಚನ|| ಅಂತೆೞ್ತಂದು ಮಣಿಗಣಾಗಣಿತ ರುಚಿನಿಚಯನಿಚಿತಸಮುತ್ತುಂಗಮಂಗಳಮೃಗೇಂದ್ರವಿಷ್ಟರೋಪವಿಷ್ಟನಾಗಿ ಸಲೀಲೆಯಿಂ ಮೆಲ್ಲನೆ ಕುಳ್ಳಿರ್ದ್ದ—

ಕಂ|| ಉದಯಾಚಳಾಗ್ರದೊಳ್ಮೂ |
ಡಿದಪೂರ್ಣಸುಧಾಕರಂಗೆ ದೊರೆಯಾದಂ ತಾ ||
ಳ್ದಿದಮಣಿದೊಡವಿನ ಕೆಂಬೆಳ |
ಗೊದವಿರೆ ರಾಜಂ ಸಭಾನಭಸ್ಸ್ಥಳದೆಡೆಯೊಳ್ || ೪೨

ವೃ|| ನೆರೆದೆೞ್ತಂದಿರ್ದದಾಸ್ಥಾನದೊಳಮಮಮಹಾಮಾತ್ಯಸಂದೋಹಮು-
ಶ್ವರವೃಂದಂಸತ್ಕವೀಂದ್ರಪ್ರತತಿವಿಬುಧಸಂತಾನಮುದಾರ್ಯಕಪ್ರೋ || [ವಿರ
ತ್ಕರಮುದ್ಯದ್ವಾವದೂಕಾವಳಿ ಭರತಕಳಾವಿತ್ಕುಳಂ ವೇದವಿದ್ರಾ |
ಜಿ ರಸಜ್ಞಶ್ರೇಣಿ ವಂದಿವ್ರಜಮತನುಕಳಾಕಾಂತಕಾಂತಾಕದಂಬಂ || ೪೩

ಸುಲಲಿತದೋರ್ಲತಾಕುಸುಮಮಂಜರಿಯಂತಿರೆ ಚಾಮರಂಸಮು |
ಜ್ಜ್ವಲಮುಖಚಂದ್ರಚಂದ್ರಿಕೆಯಿದೆಂಬಿನಮುಣ್ಮಿರೆ ಲೋಚನಾಂಶುಮಂ ||
ಜುಲತರಮಂದಗಂಧವಹನಂತಿರೆ ಸುಯ್ಯೆಲರುರ್ವೆ ನಿಂದು ಕೋ |
ಮಳೆಯರೊಡಚ್ಚಿರ್ದಸ್ಸಿರಿಯಮೈಸಿರಿಯಂ ನವಚೈತ್ರರಾಜನಾ || ೪೪

ಮುರಿದೆಳಮೀಸೆ ಸೀಳ್ದನಗೆಗಣ್ಪೊಗರಾಂತಮೊಗಂ ಪೊದಳ್ದಪೇ |
ರುರಮುರುಬಾಹು ಭಾಸುರಕಿರೀಟಮುದಗ್ರಸುವರ್ಣಭೂಷಣಂ ||
ಕರದ ಶಿತಾಸಿ ಕತ್ತುರಿಯಬೊಟ್ಟಿಡಗಾಲತೊಡರ್ವ್ವಿರಾಜಿಸು |
ತ್ತಿರೆ ಪೊಸದೇಸಿವೆತ್ತೆಸೆದುದಲ್ಲಿ ನರೇಂದ್ರಕುಮಾರಸಂಕುಳಂ || ೪೫

ಕಂ|| ಅಹಮಹಮಿಕಾಭಿನತನುತ |
ಮಹೀಶ್ವರಸ್ವರ್ಣಮುಕುಟಘರ್ಷಣನಿಪತ ||
ದ್ಬಹುಕನಕರಜೋಗಣಮು |
ದ್ವಹಿಸಿದುದು ತದಂಘ್ರಿಪದ್ಮರೇಣುಸ್ಥಿತಿಯಂ || ೪೬

ವೃ|| ನಸುನೋಟಂಪೊಸಬೇಟಮಂ ಯುವನೃಪಾಲಸ್ವಾಂತದೊಳ್ಪೊಕ್ಕುಪು
ಟ್ಟಿಸೆ ಮಂದಸ್ಮಿತಚಂದ್ರಸಾಂದ್ರರುಚಿ ತನ್ನೇತ್ರೋತ್ಪಳಕ್ಕಿಂಪನು ||

ವ್ವಿರ್ಸೆ ಜಾಣ್ಬ್ವಾತುಧನುರ್ಗುಣಕ್ವಣಿತಮುಂ ಪುಷ್ಪಾಸ್ತ್ರನಿಂದಾಗಳಾ |
ಗಿಸೆ ಪಣ್ಯಾಜನವಿದ್ದುದೋಲಗದೊಳುರ್ವೀಕಾಮಿನೀಕಾಂತನಾ || ೪೭

ತೋಳವೊಗಮ್ಮನೋಭವನ ಬಾಳವೊಗನ್ನಯನಾಂಚಳಪ್ರಭಾ |
ಜಾಳಮನಂಗಜಾಳಮುಮಳಸ್ಮಿತಸಾರಮರೀಚಿ ಮಾರರು ||
ಜ್ಮಾಳಿಮರೀಚಿ ಮಂಜುಮಣಿಭೂಷಣತೇಜಮೆ ದರ್ಪಕಕ್ಷಿತೀ |
ಪಾಳಕತೇಜಮೆಂಬಿನ ಮದೇನೆಸೆದಿದ್ದುದೊತದ್ವಧೂಜನಂ || ೪೮

ವಚನ|| ಮತ್ತಂ—

ವೃ|| ತೊಳಗುವತೊಂಡೆವಾಯ್ದೆರೆಯ ನೀಳ್ದಲರ್ಗಂಗಳ ತೆಳ್ಗದಂಪಿನಿ |
ಟ್ಟಳಮೆಡೆಗೊಂಡಪೆರ್ಮೊಲೆಯ ಪೊಂಬಿಳಿಮೆಯ್ಯ ಪೊಗರ್ಪ್ಪುದಳ್ದತೋ ||
ಳ್ಗಳ ಕಡುಬಿಣ್ಪನಾಳ್ದಪೊರವಾಗ್ಗಳ ತೆಳ್ವಸಿರಜ್ಜ ಜೌವನಂ |
ದಳೆದಬೆಡಂಗುವೆಣ್ಗಳೊಸೆದೊಪ್ಪಿದರೋಲಗದೊಳ್ನರೇಂದ್ರನಾ || ೪೯

ಓರೆದುರುಂಬು ತುಂಬುವೆರೆಯಂದದಮುದ್ದವೊಗಂ ಪೊದಳ್ದಕ ||
ಲ್ಹಾರದಚೊಲ್ಲೆಯಂ ತೊಳಪಮೂಕುತಿ ಕತ್ತುರಿಬೊಟ್ಟು ಮುತ್ತಿನೊ ||
ಳ್ಳಾರಮುರೋಜಮಂಡಳದಮಾಣಿಕದೈಸರಮಣ್ಪುಗೈದಕಾ |
ಶ್ಮೀರವಲಂಪನೀಯೆ ಮೆರೆದಿದ್ದುದು ಮುಗ್ಧವಧೂಕದಂಬಕಂ || ೫೦

ಮಲ್ಲಿಗೆ ಮಾಮರಂ ಮಧು ಮಧು ವ್ರತ ಮೌರ್ವಿ ಮನೋಜ್ಞಮಾದರ |
ಲ್ವಿಲ್ಲಲರಂಬು ತಿಂಬೆಲರರಲ್ದ ನವಾಂಬುಜಮಂಜೆ ಕೊಂಚೆ ಕಂ ||
ಕೆಲ್ಲಿ ಶುಕಂ ಪಿಕಂ ಶಶಿಯೆನಿಪ್ಪಿವರಂಗದ ಪಂಗದೇಕೆನು |
ತ್ತಲ್ಲಿ ಜಗಜ್ಜಯಾರ್ಥಮ ವರಂಗೆಮನಂಗೆಜ ನೋಲ್ದು ಸೇವಿಪಂ || ೫೧

ಹಾರಮಯೂಖನಿರ್ಝರಪಯೋಧರ ಕೇಳಿನಗೇಂದ್ರಯೌವನೋ |
ದಾರ ವನಸ್ಥನಾಭಿಸರದೊಳ್ರತಿಗಂಗಜನೊತ್ತಲೆಂದು ಕ |
ಯ್ಯಾರೆ ಕಡಂಗಿ ಸಾರ್ಚಿದುರುನೀಲಮಯೋದಕ ಯಂತ್ರದಂಡದಂ |
ತಾರಮಣೀಜನ ವ್ರಜದ ಬಾಸೆಯದೇಂ ಕಡುಚೆಲ್ವನಾಳ್ದುದೋ || ೫೨

ಪಾಡದರಾಗ ಮೋದದಿನಿಗಬ್ಬ ಮೊಡರ್ಚಿದ ಸಿಂಗರಂ ಬೆಳ |
ರ್ಮಾಡದಗಲ್ದರಾನನ ಮಳುಂಬಮನಾನದನಲ್ಮೆ ಜಾಣ್ಮೆಯಿಂ ||
ದಾಡದಮಾತು ಮಚ್ಚದಲಸತ್ಕಳೆ ಮನ್ನಿಸದೊಳ್ಪ ನೋಳ್ಪರೊ |
ಳ್ಕೂಡದಬೇಟ ಮಾಕೆಯರೊಳಿಲ್ಲೆನೆ ಕೂರ್ಪರದೇಂ ಕೃತಾರ್ಥರೋ|| ೫೩

ಕಂ|| ಅತನುತ್ವಂ ಜಘನದೊಳು |
ನ್ನತಕುಚದೊಳನಲ್ಪದರ್ಪಕತ್ವಂ ಮಧುಮಿ ||
ತ್ರತೆ ವಚನದೊಳಿರೆ ಕಾಂತಾ |
ತತಿ ಪಡೆಯದೆ ಕಾಮಿನೀಸಮಾಖ್ಯೆಯನಿಳೆಯೊಳ್ || ೫೪

ವಚನ|| ಎನಿಸಿ ರಂಜಿಸಿ—

ವೃ||ಎಮೆದುರುಗಲ್ಕವಲ್ಮುಕುಡಿಗೊಂಡವೊಲಾಗಿಕೆ ಸೋಗೆಸೋಗೆಯುಂ |
ತ್ರೆಮರ್ವ*ವೊಲೊಪ್ಪೆ ಸೋಮ್ಮುಡಿ ಸಮಸ್ತನಮಸ್ತನಗೇಂದ್ರದಂತೆ ಚೆ ||
ಲ್ವಮರೆ ನಖಾಂಕ ಚಂದ್ರಕಳೆಯಿಂ ಕಳೆಯಂ ತಳೆದಾನನಾಬ್ಜಮ |
ಬ್ಜಮನಿಳಿಕೈಯೆ ಕಂಗೆಸೆದುದಗ್ಗದಪೂರ್ವವಿಳಾಸಿನೀಜನಂ || ೫೫

ಅಳಿಕುಳಮಂ ಪ್ರಸೂನವಿಳಸತ್ಕಬರೀಧರಮುನ್ಮರಾಳಮಂ |
ಡಳಿಯನುದಾತ್ತಮಂದಗತಿ ಗಂಧಸಮೀರಣನಂ ಸಗಂಧಮಂ |
ದಿಳಿವೆಳೆಸುಯ್ಸಮಂತು ಸೆರೆಗೆಯ್ಯದೆ ತಾಂ ಸೆರೆಗೈದುದೇ ನಿಜೋ |
ಜ್ಜ್ವಳರುಚಿರೂಪವೊಂದೆ ಯುವನೇತ್ರಮನಾಯುವತೀಪ್ರತಾನದಾ || ೫೬

ವಚನ||ಮತ್ತಮಿಂತು ನಿರತಿಶಯಸೌಂದರ್ಯಮಾಧುರ್ಯಲಾವಣ್ಯನೈಪುಣ್ಯ ಸಾರಸರ್ವಸ್ವಮಂಗಂಬಡೆದೇಳ್ತಂದಂತಿರ್ಪೆ ತಂದುನಿಂದನಿತಂಬಿನೀಜನದ ಮಿರುಪಪೆರೆನೊಸಲೊಳ್ಸಿಲ್ಗಡೆಯೊಳ್ಪ ಸರಿಸಿ ಪರೆದಸುರಿಗುರುಳ್ಗಳಂತಳೆದಿನಿಯ ನನುಗೊಳಿಸಿ ನೇರ್ಪಡಿಸಿ ಕೂರುಗುರಿಂತಿರ್ದ್ದ ಕೊರ್ಮೆಯಿಂ ದಿಟ್ಟ ಕತ್ತುರಿಯ ಬಟ್ಟಬೊಟ್ಟು ರಮಣಕರಗ್ರಹಣ ಪೀಡನದಿಂ ಜಡೆವಾವುಗುಳ್ದ ಗರಳ ರಸಕಲಿಕೆಯೆನೆ ಕಂಗೂಳಿಸೆಯುಂ, ಸರಸತರ ಸುರತಸಮಯದೊಳಮರ್ಪಿ ಮನೋರಮಣಂ ಮೊನೆವಲ್ಲ ಕೊನೆಯಿಂಕರ್ದುಂಕಲೊಡನೊಸರ್ದಧರದಳದಮೃತರಸಂ ಪಸರಿಸಿರ್ದ್ದುದೆನಿಸಿ ದಶನವಸನ ಕಿಸಲಯದೊಳ್ದ ಸನರಸಂ ಮಿಸುಗೆಯುಂ ಸಮದಮದನ ವಿಜಯಾಸ್ಪದ ಮಾದ ವದನಕಮಳದೊಳ್ಸಿರಿನೆಲೆಗೊಂಡಳೆಂಬನಣ್ಪಂ ಬಂದುಕೇಳಿಯಿಂ ಕೆಳೆಗೊಳಲೆಳಸಿ ಕೆಲಂಬಿಡಿದು ನಿಂದಚಂದ್ರಬಿಂಬ ಮೆಂಬ ಬಗೆಗಡಪ್ಪಾಗಿ ಧಳಧಳಿಸಿ ಪೊಳೆವಮೌಕ್ತಿಕ ಮಣಿಖಚಿತಕರ್ಣಪತ್ರಂ ನೇತ್ರಶೋಭಾವಹ ಮಾಗೆಯುಂ ದರ್ಪಣದೊಳಾಗಸದ ನೆಳಲ್ಪೊಳೆವಂತೆ ಕಪೋಳದರ್ಪಣದೊಳ್ನೋಳ್ಪ ಮೆಯ್ಯಿಲ್ಲದ ಮದನನ ಪಡಿನೆಳಲ್ತೋರ್ಪುದೆನೆ ಮೃಗಮದರಸರಚಿತ ಮಕರಿಕಾಪತ್ರ ಮತಿವಿಚಿತ್ರ ಮನೊದವೆಯುಂ ದಾಂಗುಡಿ ವಿಡುವ ಪಾಂಗೆರುಚಿಲತೆ ಮುಗುಳಂಪಡೆದಂತೆ ಕೊನೆಗೊಡಂಕೆಯೊಳ್ಪೊಳೆವ ಬಾವುಲಿಯ ಬಟ್ಟಮುತ್ತು ಬಗೆಗೊಳಿಸೆಯುಂ ನಿಡುಜಡೆಯೆಂಬ ಕಾಳಾಹಿಗಳ್ಕಿ ನೆಲೆವೊಲೆವೆಟ್ಟನೆಡೆವೊಕ್ಕಡಂಗಿದ ನಖಕ್ಷತೇಂದು ಕಳೆಯನಾರಯ್ಯಲ್ಬಂದು ಪೆಳದ್ದ ತಳರದೆ ಕಾದು ಬಳಸಿ ನಿಂದನಕ್ಷತ್ರಮಾಲೆಯೆಂಬಂತೆ ನಕ್ಷತ್ರಮಾಲೆ ಮನೋಜ್ಞತೆಯನಾಲಿಂಗಿಸೆಯುಂ ಮದನಮದಗಜದ ಮದರಸಂ ಪತ್ತಿದ ಶುಂಡಾದಂಡಾಗ್ರಮನದರ ಕೆಂಪಿಂಗೆಳಸಿ ಬಳಸಿದಳಿಮಾಲೆಯ ಲೀಲೆಯಂ ತಳೆದು ನಳಿತೋಳ ತುದಿಗೊಂಡಮುದ್ದ್ದ ನಿಂದಹರಿನೀಲ

ಮಣಿವಲಯಂ ತೊಳಗೆಯುಂ ವೃತ್ತಂಬೆತ್ತ ಕೊರ್ವಿ ಬಳೆದ ನಿತಂಬ ಬಿಂಬಮೆಂಬ ಶಂಬರಾರಿಕುಂಭಿ ಕುಂಭಕ್ಕೆ ಬಸಂತನೊಸಗೆ ಮಿಗೆ ಸುತ್ತಿದ ಕನಕಚಂಪಕ ದಾಮದಂತೆ ಕನಕಕಾಂಚೀದಾಮ ಮಭಿರಾಮತೆಯ ನೊಳಕೈದು ತೆರಂಬೊಳೆಯೆಯುಂ ಮಿಸುಪ ಮಿಸುನಿವೆಸದ ಪೊಸತೊಡವುಗಳ ಪೊಂಬೆಳಗೆಂಬ ಬಿಸುವಿಸಿಲ್ಮುಸುಂಕೆನುಣ್ಗೊಡೆಗಳೆಂಬ ಪೊಂಬಾಳೆಗಂಬಂಗಳ್ಕಂಪಿದಪುವೆಂದು ಕಂದರ್ಪಂ ಬೆಳ್ದಿಂಗಳಿಂಬಾಸಣಿಸಿದಂತೆ ನಿರಿವಿಡಿದುಟ್ಟಧವಳಾಂಬರ ಮಿಂಚುವಡೆಯೆಯುಂ ತರುಣರವಿ ಕಿರಣದಿಂ ಪೊಂಬಣ್ಣಮೇರಿ ಸುಸಿಲಬಿಸರುಹದ ನಾಳಮಂ ಬಳಸಿ ನಿಂದುಜಿನುಂಗುವೆಳದುಂಬಿಗಳ ಮಾಲೆಯಂಪೋಲ್ತು ಪದಾಗ್ರದೊಳಂದಂ ಬಡೆದು ಸಲ್ಲೀಲೆಯಿಂ ಮೆಲ್ಲುಲಿಗುಡುವ ಮಿಸುನಿಯಂದುಗೆ ರಂಜಿಸೆಯುಂ ಮಿಂತತಿಶಯ ತದೀಯಕಮನೀಯ ಶೃಂಗಾರಸಾರಸಹಜಸೌಂದರ್ಯಸೌಕುಮಾರ್ಯಮಾಧುರ್ಯನಿಧಿವಿದಿತಕೋಶಾಗಾರದಂತೆ ರಾಜೇಂದ್ರನೊಡ್ಡೋಲಗ ಮಾಲೋಕದಾಲೋಕನಕ್ಕೆ ಕೌತುಕಾವಹಮೆನಿಸಿಪರಿರಂಜಿಸಿದ್ದುದಂತು ಮಲ್ಲದೆಯುಂ—

ವೃ|| ಮಣಿಗಣದಂತೆ ಮೌಳಿಮಣಿಸಂಕುಳಮೊಪ್ಪಿರೆ ಪೊಕ್ಕಗವ್ರಜ |
ಕ್ಕೆಣೆವರೆ ಭೂಭುಜವ್ರಜಮೆ ನೀರಮುದಾಗಿರೆ ಹಾರರೋಚಿ ಸಂ ||
ದಣೆಸಿರೆ ಚಾರುಚಾಮರಮರಾಳಕುಳಂ ಘನವಾದ್ಯಮಬ್ಧಿಘೋ |
ಷಣಮೆನೆ ರಾಜರಾಜಪರಿವರ್ಧಿತಮಾಸಭೆ ವಾರ್ಧಿಯಂತೆವೋಲ್ || ೫೭

ವಿತತಸದಾನವಾರಿವಿಭವಂ ಪ್ರಮದಾಳಿಮನೋಜ್ಞವರ್ಣಸಂ |
ಗತಹರಿಧಾಮಮುಜ್ಜ್ವಳಕರಾಂಚಿತಪುಷ್ಕರಕಾಂತಮುದ್ರಸಾ ||
ಶ್ರಿತಘನವಿಗ್ರಹಾಂಚಿತಮುದಾತ್ತಬಲಸ್ಥಿತಿ ಪೋಲ್ದುದಿಂದಿರಾ |
ಪತಿಪುರಮಂ ಮಹೇಂದ್ರಪುರಮಂ ಗಜಮಂ ಸಭೆತನ್ಮಹೀಶನಾ || ೫೮

ವಚನ|| ಅಂತೊಪ್ಪುವ ವಿತತಮಹಾಸ್ಥಾನದಲ್ಲಿ—

ಕಂ|| ಮದನಧರಾಧೀಶನ ಪ |
ಕ್ಕದೊಳೊಪ್ಪುವ ಚೈತ್ರನಂತೆ ಶೃಂಗಾರರಸಾ ||
ಸ್ಪದಯುವರಾಜನ ಕೆಲದೊ |
ಳ್ಪದೆದೊಪ್ಪಿದನತುಳಗುಣಯುತಂ ಮಿತವಚನಂ || ೫೯

ವಚನ|| ಆಪ್ರಸ್ತಾವದೊಳ್—

ಕಂ|| ತುಂಗಮೃದಂಗದುಪಾಂಗದ |
ಚೆಂಗಿನ ದಂಡಿಗೆಯ ತಾಳದಾವುಜದ ಲಸ ||
ತ್ಸಂಗೀತದ ವಾಸದ ನಿನ |
ದಂಗಳ್ಬೆರೆದಳುರ್ದುಸವಿಯುನೇಂ ಸೂಸಿದುವೋ || ೬೦

ಅಲರ್ವಕ್ಕಿಗಳುಲಿಯಂ ರತಿ |
ಕಲಹದ ಕಾದಲೆಯ ದೈನ್ಯರಸರವಮಂ ಮಂ ||
ಜುಳಕಳಮರಾಳರಾವಮು |
ನಲೆದುದು ಸಂಗೀತನಿನದಮದು ಮಧುರತೆಯಿಂ || ೬೧

ವಚನ|| ಆಗಳೊರ್ವಳಭಿನವ ರಂಭೆಯೆಂಬ ಚತುರನರ್ತಕಿ—

ವೃ|| ತೊಳಪೆಳೆಮುತ್ತುತೆತ್ತಿಸಿದ ಒಲ್ಮೊಲೆಕಟ್ಟು ನಿತಂಬಬಿಂಬಮಂ |
ಜುಳಮಣಿಕಾಂಚಿ ಪೊನ್ನ ಪೊಸಕಾಸೆ ಸುವರ್ಣದಗುಜ್ಜುಗೆಜ್ಜೆ ಪ ||
ಜ್ಜಳಿಸುವರನ್ನವಜ್ಜಮಳಕಾಗ್ರದ ಕಸ್ತುರಿಬೊಟ್ಟು ಕಾಂತಿಮಂ |
ಡಳಿಸುವವಜ್ರದೋಲೆ ತನಗೊಪ್ಪಿರೆ ಬಂದಳದೊಂದುಲೀಲೆಯಿಂ || ೬೨

ವಚನ|| ಅಂತೈಂತದು ತತ್ಸಭಾಜಳಧಿ ಮಧ್ಯದೊಳೊಗೆದ ಕನಕಪಂಕಜಪರಾಗಪರಿಮಿಳಿತ ಮಾದನುಣ್ಣಿರೆಯೆನೆ ಮಿಸುಪಪೊಂದೆರೆಯ ಮರೆಯೊಳ್ಸರಿಯ ನೊಳಕೈದಂದಂಬಡೆದು ನಿಂದಿ ರ್ಪುದು ಮನಂತರಮುರಜನಿದಿರ್ಗೆವಂದು ಸೂತ್ರಧಾರಕಂ ಮೆಯ್ಯಿಕ್ಕಿ ಕಯ್ಯಂ ಮುಗಿದು—

ಕಂ|| ಭರತಾದಿ ವಿವಿಧ ವಿದ್ಯಾ |
ಪರಿಣತ ಜನವನವಸಂತ ವಿತರಣಜಿತನಿ ||
ರ್ಜರಭೂಜ ರಾಜಶೇಖರ |
ಧರಣೀಶ ನಿರೀಕ್ಷಿಸೆಂಬ ಸಮನಂತರದೊಳ್ || ೬೩

ತೆರೆ ತೊಲಗೆ ಮೆಯ್ವೆಳಗು ಮಾ |
ರ್ದ್ದರೆಯಂ ಸರಿದಂತೆ ಪೊಳೆಯೆ ಕೆದರ್ದಳೊಪ್ಪಿದೊ ||
ಪ್ಪಿರೆ ಮಿಂಚಿ ಮಿಂಚು ಕರಕೋ |
ತ್ಕರಮಂ ಕೆದರ್ದಂ*ತೆ ಕಾಂತೆ ಕುಸುಮಾಂಜಲಿಯಂ || ೬೪

ವೃ|| ತೊಳಗುವತೋಳ ಡಾಳಮಿರೆ ಮೈಸಿರಿಗೈಸಿರಿಯಾಗಿ ಸೊಂಪು ಸು |
ಣ್ಪಳವಡೆ ದೇಸಿವಾಸಿ ಮಿಗೆ ಕೊಂಕದ ಬಿಂಕದ ಜಾಣ್ಮೆ ಪೊಣ್ಮೆ ಸಂ ||
ಗಳಿಸಿರೆ ತಾಳಮೇಳದರವಂ ಜವದಿಂ ಜತಿದಪ್ಪದೊಪ್ಪಮಂ |
ಗಳಿಲನೆ ತೋರಿ ಮೀರಿ ಮೆರೆದಳ್ನವನರ್ತಕಿ ನೃತ್ಯಲೀಲೆಯಂ || ೬೫

ಕಂ|| ನೊಸಲೆಂಬ ಪೆರೆಯುನಾಲಿಂ |
ಗಿಸಿ ರಂಜಿಪತಾರೆ ಪುಬ್ಬುವಳ್ಳಿಯ ಮುಗುಳೆಂ ||
ಬೆಸಕಮನಮರ್ಚ್ಚಿ ಮೆರೆದುದು |
ಪೊಸ ಮುತ್ತಿನ ಬೊಟ್ಟು ನಾಟ್ಯವಿದ್ಯಾಧರಿಯಾ || ೬೬

ಕಂ|| ಜಳಕಣಮುಳುರ್ದಂಬುಜಕು |
ಟ್ಮಳಮುಡುತತಿ ಬಳಸಿದಮರಗಿರಿಯೆಂಬಿರವಂ ||
ತಳೆದೆಳೆಮುತ್ತಿನವೊಲೆಕ |
ಟ್ಟಳವಟ್ಟಿರೆ ಬಟ್ಟಮೊಲೆಯದೆಸೆದುದು ನಟಿಯಾ || ೬೭

ಆವಳ ಜಘನಾದ್ರಿತಟದೊಳ್ |
ಯುವದೃಙ್ಮೃಗಜಾಲಕತನುಜಾಲಕನೊಪ್ಪೆಮೊ ||
ಪ್ಪುವಘಂಟಾಜಾಲಮನಿ |
ಟ್ಟವೊಲೆಸೆದುದು ಕಾಂಚಿ ಘಂಟಿಕಾರವಮಿಳಿತಂ || ೬೮

ತಳಿರ್ವಟ್ಟೆಯ ಪೊಸಚಲ್ಲಣ |
ಮಳವಟ್ಟನಿತಂಬಬಿಂಬಮರುಣೋಪಳಮಂ ||
ಜುಳಗಿರಿಗೆ ಸರಿಗೆವರುತುಂ |
ತಳೆದುದು ಸಿಂದೂರಲಿಪ್ತಕರಿಶಿರದಿರವಂ || ೬೯

ಪೊಸಮಿಸುನಿವೆಸಡ ತೊಡೆಗು |
ಪ್ಪಸವೆಸೆದುದು ಪೊಣರಲೆಂದು ಪೊಂಬಾಳೆಯೊಳಂ ||
ದಸಿಯಳ ನುಣ್ದೊಡೆ ತಾಳ್ದವೊ |
ಲಸದ್ವೃಶರುಚಿಕನಕಕವಚಮಂ ಕಡುಪಿಂದಂ || ೭೦

ವೃ|| ರತಿದೇವೀಕುಚಕುಂಭಕುಂಕುಮಕರಂ ಕಾಮಂ ಕರಂ ನೀವೆ ತ |
ದ್ಗತ ರಾಗಂಬೊರೆದಲ್ಲಿ ತುಂಬಿವೆದೆ ಪೊಂಬಣ್ಣಕ್ಕೆ ಪಕ್ಕಾಗುತ್ತೈ ||
ದಿ ತದೀಯಾಂಘ್ರಿಸರೋಜಮಂ ಬಳಸಿ ನಿಂದತ್ತೆಂಬವೋಲ್ಕಣ್ಗೆ ರಂ |
ಜಿತಮಾಗಿರ್ದ್ದುದು ಕಾನಕಂ ಕಳನಿನಾದಂ ಕಿಂಕಿಣೀಸಂಕುಳಂ || ೭೧

ಕ್ಷಣರುಕ್ಕಾಂಚಿರವಂ ಝಣಂಝಣರಣತ್ಸ್ವರ್ಣಸ್ಫುರತ್ಕಿಂಕಿಣೀ |
ರಣಿತಂ ಕೂಡಿ ಬೆಡಂಗುವೀರೆ ಮೃದುಪಾದನ್ಯಾಸಮಿಂಬಾಗೆ ಕಂ ||
ಕಣರಾವಂ ಸೊಗಸಾಗೆ ಪಾಣಿಚಳನಂ ಚೆಲ್ವಾಗೆ ನೇತ್ರಾಂತವೀ |
ಕ್ಷಣದಂದಂ ಪೊಸತಾಗೆ ನೀರೆ ಮೆರೆದಳ್ಳೀಲಾಲಸಲ್ಲಾಸ್ಯಮಂ || ೭೨

ಕಂ|| ಏತತಾಂಗಿಕ ಮಾಹಾರ್ಯ್ಯಕ |
ಮತಿಶಯಸಾತ್ವಿಕಮುಮಮರ್ದವಾಚಿಕಮೆನಿಪೀ ||
ಚತುರಭಿನಯಮಂ ಚತುರ |
ಸ್ಥಿತಿಯಿಂ ನೆರೆತೋರಿ ಬೀರಿದಳ್ನರ್ತನಮಂ || ೭೩

ದಳಿತತರುಣಾಂಬುರುಹಮುಃ |
ಚ್ಚಳಿತತರಂಗಪ್ರಪಾತದಿಂ ಚಲಿಯಿಪಪಾಂ |
ಗಳವಡೆ ಲಾವಣ್ಯರಸಾ |
ವಿಳಮಾಂದೋಳಿತದಿ ನೆಸೆದುದಾಸ್ಯಂ ನಟಿಯಾ || ೭೪

ಮುಗುಳ್ವಲರ್ವ ನಗುವ ಚಲ್ಲಮ |
ನುಗುವ ಮರಲ್ದೊಗೆವ ಬಳಸುವುಸುವಲಂಪಂ ||
ತೆಗೆವ ಪೊಳೆವಗಿವ ಮಿಗೆ ಬೆಂ |
ಡೊಗೆವಲಸದ್ದೃಷ್ಟಿ ಮೆರೆದುದಾನರ್ತಕಿಯಾ || ೭೫

ತಿಳಿವೆಳ್ದಿಂಗಳ ಬೆಳಗಂ |
ತಳೆದೆಳಮಿಂಚೆಳಸಿ ನಳಿನದಳದೊಳ್ಪೊಳೆದು ||
ಚ್ಚಳಿಸಿದಪುದೆಂಬ ಬಿಂಕಮ |
ನೊಳಕೊಂಡಲರ್ಗಣ್ಣ ಬೆಳಗದೇಂ ಪಸರಿಸಿತೋ || ೭೬

ಸಮನೆನಿಸಿ ನಿಮಿರ್ವ ಕುಂಚಿತ |
ಮಮರ್ವ ಪಳಂಚುವ ಸಮಂಚಿತ ಭ್ರೂಲತೆ ತ ||
ಳ್ತಿಮೆದುರುಗಲ ನೆಳಲೊಳ್ಮು ಖ |
ಕಮಳಮಯೂಖಾಂಬುವೀಚಿ ಚಲಿಪವೊಲೆಸೆಗುಂ || ೭೭

ಚಳದಮಳವಜ್ರಮಣಿಕುಂ |
ಡಳಮಂಡಳಕಾಂತಿ ಕಾಂತಗಂಡಸ್ಥಳಮಂ ||
ಜುಳಮಣಿಮುಕುರದ್ಯುತಿಯೊ |
ಳ್ಪಳಂಚಿ ಥಳಥಳಿಸಿ ಪೊಳೆದು ನರ್ತಿಸಿತಾಗಳ್ || ೭೮

ಇದುಚಿತ್ರಂ ಚಂಪಕಮುಕು |
ಲದೊಳೊಗೆದೊಲೆದಪುದು ಕುಜಮಿದೆನೆ ತನ್ನಾಸಾ ||
ಗ್ರದ ಮುತ್ತಿನಮಣಿರದನ |
ಚ್ಛದದೀಧಿತಿ ಪುದಿಯೆ ಕಂಪನಾಳ್ದೊಲೆದೆಸೆಗುಂ || ೭೯

ಅಮರ್ದಿ*ನೊಳಳ್ದಿದ ಬಿಂಬಮ |
ನಮೃತಾಬ್ಧಿಯೊಳೊಗೆದ ಪವಳಮಂ ಪಳಿದೆಸೆದ ||
ತ್ತ ಮಳತರರದನರುಚಿಸಂ |
ಕ್ರಮಧವಳಿಮಮಧರವಿದ್ರುಮಂ ನರ್ತಕಿಯಾ || ೮೦

ಸ್ಮರನರುಣತರುಣಪಲ್ಲವ |
ಶರಮನಸಂಖ್ಯಾತಮಕ್ಕೆನುತ್ರಿಸೆ ಪಾಯ್ದು ||
ಪ್ಪರಿಸಿ ಬಹುಮುಖದಿ ಪರಿದೊ |
ತ್ತರಿಸುವ ಪರಿಯೆನಿಸಿತವಳಕರತಳಚಳನಂ || ೮೧

ಎನಗೆ ಪಗೆಯಾದ ಚಂದ್ರನ |
ನನಿಶಂ ಕೆಳೆಗೊಂಡುದೆಂದು ಕರ್ಣೋತ್ಪಲಮಂ ||
ಮುನಿದಲೆವ ವನರುಹಮನಂ |
ದನುಕರಿಸಿದುದರರೆ ಕರಿಕರಂ ನರ್ತಕಿಯಾ || ೮೨

ತರುಣಾಸಿತಾಹಿ ಸಂಗೀ |
ತರವಂಗೇಳ್ದೆಳಸಿ ನಾಭಿವಲ್ಮೀಕದಿನೆ ||
ಳ್ದಿರದೊಲೆದೊಲ್ದಾಡುವುದೆನೆ |
ಕರಮೆಸೆದುದು ಜಾಸೆ ವಿಚಳಿತಂ ನಚ್ಚಣಿಯಾ || ೮೩

ಅವಳವಯವನವಲಾವ |
ಣ್ಯವನೇಜಾಕರದೊಳಳ್ದಮದನದ್ವಿಪದೊ ||
ಪ್ಪುವಚಳಕುಂಭಸ್ಥಳಮೆಂ |
ಬವೊಲೆಸೆದುದು ಲಾಸ್ಯಕಂಪಿತಂ ಘನಜಘನಂ || ೮೪

ತೊಡೆ ರಂಭಾಮದಮಂ ಮಿಗೆ |
ತೊಡೆದುದು ನುಣ್ಪೆಂದಮೆಂಬಪುರುಡಿಂದಡಿ ತಾ ||
ನಡಿಮಾಡಿದುದುರುರಂಭಾ |
ವಿಡಂಬಮಂ ವಿತತನೃತ್ಯದೊಳ್ನರ್ತಕಿಯಾ || ೮೫

ಮಂದರಗಿರಿ ತಿರ್ರನೆ ತಿರು |
ಪಂದೊಡನೊಗೆದಂಬುಧಿಯೊಳೆ ತಿರುಗುವ ಸಿರಿಯೊಂ ||
ದಂದವ ನಭಿನಯಿಸುವಳಿವ |
ಳೆಂದೆನೆ ಕಾಣಿಸಿದಳದ್ಭುತಭ್ರಮರಿಗಳಿಂ || ೮೬

ಒಸೆದಪ್ಪರಸಮನಿದು ನವ |
ರಸಮೆನಿಸಿಪೊದಳ್ದಪತ್ತುಮಂಡಳಮಂ ರಂ ||
ಜಿಸಿ ಪಂಚಮೆನಿಸಿ ಲಾಸ್ಯಮ |
ನೆಸಗಿದಳಾನಟಿ ವಿಚಿತ್ರಮೆನೆ ತತ್ಸಭೆಯೊಳ್ || ೮೭

ಮಂಡಳವಂ ಮೆರೆದಳ್ಮುಖ |
ಮಂಡಳಮಮೃತಾಂಶುಮಂಡಳಕ್ಕೆಣೆವರೆ ಭೂ ||
ಮಂಡಳದಿಂ ನೆಗೆದು ನಭೋ |
ಮಂಡಳದೊಳ್ನಿಂದು ನೀರೆ ಮೇಣ್ಬಹುವಿಧಮಂ || ೮೮

ಚಾರಿಗಳಂ ಕೊಳುತುಂ ಸಂ |
ಚಾರಿಗಳಂ ತಳೆದು ರಸಿಕಜನದಕ್ಷ್ಣಿಗಳಂ ||
ಚಾರಿವರಿದಾಡಿಸಿದಳೆ |
ಚ್ಚಾರಿ ತದಂಗಮನನಂಗನಿರೆ ಪಿಂಗಡೆಯೊಳ್ || ೮೯

ಕರತಳದೊಳಭಿನಯಮನವ |
ರ್ದಿರ್ಪೆರೆ ಚರಣದೊಳತುಳ ತಾಳಮಂನೇತ್ರದೆ ಭಾ ||
ಸುರರಸಮನಸಮಗಾನಮ |
ನರರೆ ಶರೀರದೊಳೆ ಪಿಡಿದವಳ್ನರ್ತಿಸಿದಳ್ || ೯೦

ವೃ|| ಘನಜಘನಂಗಳುನ್ನತಿ ಕುಚಂಗಳ ತುಂಗತೆ ಚೆಲ್ವನಾಳ್ದಕ |
ಣ್ಗೊನೆಯವಿಳಾಸಮಾಸ್ಯದ ವಿಕಾಸತೆ ಪಾದದಸಂಭ್ರಮಂ ಪಳ ||
ಚ್ಚನೆ ಪೊಳೆವಂಗೆದಂದಮರುಣಾಧರದಿಂಪು ಕಪೋಲಕಾಂತಿಯೆಂ |
ಬಿನಿತನಲರ್ಚೆ ಬಿಚ್ಚಳಿಸಿ ನಚ್ಚಣಿ ಪೆರ್ಚಿಸಿದಳ್ಮನೋಜನಂ || ೯೧

ಕಂ|| ತೀವಿದಲಾವಣ್ಯಾಮೃತ |
ಸೇವನೆಗೀವಂತೆ ಸಮಯಮಂ ಯುವಜನನೇ ||
ತ್ರಾವಳಿಗಮರ್ದಂಗದಿನಂ |
ದಾವಧು ಸಮಪಾದಚಾರಿಯಂ ತಳೆದೆಸೆದಳ್ || ೯೨

ಅರುಣಚರಣಾಂಶು ಬಂದುಗೆ |
ಯರಲಂ ಬಲಿಗೆದರೆ ಕಾಲ್ಗಳೊಳ್ಮೊದರ್ದನರೇ ||
ಶ್ವರರ ಬಗೆವಲೆದೊಡಂಕಂ |
ಪರಿಹರಿಪವೊಲಾಂತಳಬಲೆ ಹರಿಣಪ್ಲುತಮಂ || ೯೩

ಶೃಂಗಾರಸಾರರಸಮನ |
ಪಾಂಗದ್ಯುತಿ ಬೀರೆ ಮಿಾರೆ ಲಾವಣ್ಯರಸಂ |
ತುಂಗಕುಚೆ ಚಾಪಗತಿಯಂ |
ಸಂಗಳಿಸುತನಂಗಚಾಪಲತೆಯೆನೆ ಮೆರೆದಳ್ || ೯೪

ವಚನ|| ಮತ್ತಂ—

ವೃ॥ ಕಂತುಕರಾಗ್ರಕಂತುಕದವೋಲ್ನೆಗೆಯುತ್ತೆ ಮನೋಜಚಕ್ರಿಚ |
ಕ್ರಂ ತಿರುಪಂತೆ ತಿರ್ರನೆ ಕರಂ ತಿರುಗುತ್ತೆ ರತೀಶಶಸ್ತ್ರಿಕ ||
ಸ್ತ್ರಂ ತಳದಿಂ ಕುರುಳ್ಚಿ ಚಲಿಪಂತಲುಗುತ್ತೆ ಸುಮೇಷುಸೂತ್ರಧಾ |
ರಂ ತಳೆದಾಡಿಪೊಂದು ಪೊಸಸೂತ್ರದ ಪುತ್ರಿಕೆಯಂತಿರಾಡಿದಳ್ || ೯೫

ಕಂ|| ಜತಿವೆತ್ತೊಪ್ಪುವ ಮೃದುಪದ |
ಗತಿಯುಂ ರಸವೊಸರ್ವ*ಭಾವಮುಂ ವೃತ್ತಿವಿಳಾ ||
ಸತೆಯುಂ ತಳ್ತಿರೆ ವಿಳಸ |
ತ್ಕೃತಿಯಂ ಪೋಲ್ತಬಳೆ ರಸಿಕರಂ ಮಚ್ಚಿ‌ರ್ಸಿದಳ್ || ೯೬

ಅಚ್ಚರಿಯರೊಳುರಗಿಣಿಯರೊ |
ಳಚ್ಚಿ ಮುಗುಳ್ಚುವವಿಳಾಸಮುಂ ವಿಭ್ರಮಮುಂ ||
ನಚ್ಚಿರದೆನೆ ನರನಾರಿಯ |
ನಚ್ಚಣಿಕೆಣೆವರ್ಪ್ಪನಚ್ಚಣಂ ಪೆರತುಂಟೇ || ೯೭

ಆ ರಮಣಿ ನೋಳ್ಪ ವಿಬುಧರ |
ಸಾರತರಾಪಾಂಗಧವಳರುಚಿ ಕವಿಯೆ ಲಸ ||
ದ್ವಾರತಿ ಲೀಲಾಲಾಸ್ಯಮ |
ನೋರಂತಿರೆ ತಾನೆ ತೋರ್ಪ್ಪಳೆನೆ ಕರಮೆಸೆದಳ್ || ೯೮

ಅವಳ ನವನರ್ತನಮನಂ |
ದವನೀಧವಸೆಯ್ದೆ ಮಚ್ಚಿ‌ರ್ಪೊಗಳ್ದು*ತ್ಸವದಿಂ ||
ದಿವಿಜಕುಜದೇಳ್ಗೆ ಕೀಳ್ಪಡೆ |
ಸುವಸ್ತ್ರಮಣಿಭೂಷಣಂಗಳಂ ಪದೆದಿತ್ತಂ || ೯೯

ವಚನ|| ಆಪ್ರಸ್ತಾವದೊಳ್—

ವೃ|| ನಿಡುದೊಳ್ನೀಳ್ದತರಂಗಮಾನನ ಮರಲ್ದಂಭೋರುಹಂ ತಳ್ತಚೆಂ |
ಗುಡಿ ದೀರ್ಘಾರುಣಪಾಣಿಶಾಖೆ ದಶನಂ ಸುಣ್ಮುತ್ತು ಮಿಂಗಳ್ಬೆಡಂ ||
ಗಿಡಿದೆತ್ತಂ ಪೊಳೆವಕ್ಷಿಗಳ್ಪಲಿಲ ಮಂಗದ್ಯೋತಮಿಂತಾಗೆ ಪಾ |
ಲ್ಗಡಲೆಂಬಂತಿರೆ ಸಿಂಧುರಾಜನೊಸದೇಳ್ತಂದಂ ಗಭೀರಾನ್ವಿತಂ || ೧೦೦

ವಚನ|| ಅಂತೇಳ್ತಂದಾ ರಾಜಶೇಖರಂಗೆ ನಖರುಚಿಕುಸುಮಂ ಬೆರಸು ರತ್ನಾಂಜಲಿಯಂ ಕೆದರ್ದು ಪೊಡಮಟ್ಟು ಮದನಂಗೆ ಮಲ್ಲಿಗೆಮುಗುಳಮಾಲೆಯ ನೀವ ವಸಂತನಂತೆ ತಾಂ ತಂದಾಣಿಮುತ್ತಿನ ಕಂಠಮಾಲೆಯಂ ಕಾಣ್ಕೆಗೈದು ಮತ ಮಿರದೆ—

ವೃ|| ಸಮದಂತಂ ಚಾರುವಕ್ತ್ರಂ ಕಿರುಗಿವಿಘನಘಂಟಾಖುರಂನೀಲರತ್ನೋ
ಪಮನೇತ್ರಂ ಶ್ವೇತವರ್ಣಂ ವಿತತಲಸದುರಂ ದೀರ್ಘವಾಲಂ ಪೃಥುಸ್ಕಂ ||
ಧಮುದಗ್ರಗ್ರೀವಮುದ್ಯಜ್ಜಘನಮುರುಲಲಾಟಂ ವಿಮಾಂಸಾಂಘ್ರಿ ಗಂಭೀ |
ರಮಹಾನಾದಂ ಸುನಾಸಾಪುಟಮುಮರ್ದತುರಂಗಂಗಳಂ ಕಾಣ್ಕೆಗೈದಂ ||

ಅದು ಧಾರಾಧರಮಬ್ದದಂತೆಪೊಳೆಯಂತಾವರ್ತಯುಕ್ತಂ ಕುರಂ |
ಗದವೋಲ್ಪೂರ್ಣಗತಿಪ್ರಯುಕ್ತಮಳಿಯಂತಾವೋದಚಿತ್ತಂ ಕಳಂ ||
ಬದವೋಲ್ಹ್ಲಾಪಲಸದ್ಗುಣಾಂಚಿತಮುದಂಚಚ್ಚಂದ್ರಬಿಂಬಂಬೊಲ |
ಭ್ಯುದಯಶ್ರೀಕರಲಕ್ಷಣಾಂಕಮೆನಸಿತಾ ರಾಜವಾಜಿದ್ವಯಂ || ೧೦೨

ವಚನ|| ಅಂತುಮಲ್ಲದೆಯುಂ—

ವೃ|| ಗತಿವೇಗಂ ಪುಲ್ಲೆಯಾಪುಲ್ಲೆಯಿನತಿಚಪಲಂವಾರುತಂಪುಲ್ಲೆಯಿಂಮಾ |
ರುತನಿಂದಂ ಬಾಣಮೆಂತು ತ್ವರಿತಗಮನಸಂಯುಕ್ತಮಾಪುಲ್ಲೆಯಿಂ ಮಾ ||
ರುತನಿಂದಂ ಬಾಣದಿಂ ದೃಷ್ಟಿಯೆ ರಯಗತಿ ನೋಳ್ಪಾಗಳಾಪುಲ್ಲೆಯಿಂ ಮಾ
ರುತನಿಂದಂ ಬಾಣದಿಂ ದೃಷ್ಟಿಯಿನತಿಜವಗಂ ರಾಜಿಪಾ ವಾಜಿಯುಗ್ಮಂ ||

ವಚನ|| ಅಂತೆಸೆವಪೂರ್ವಗಂಧರ್ವಯುಗಮಂ ಕಾಣ್ಕೆವಿಡಿದನಂತರಮರಸನಪಾಂಗಪ್ರಸನ್ನತೆಯಂ ಪಡೆದು ಮೆಯ್ಯುಡುಗೆ ಪೊಡವಟ್ಟು ಸಿಂಧುರಾಜಂ ಸಿಂಧುರಾರೂಢನಾಗಿ ಸಿಂಧುರಾಜ್ಯಕ್ಕೆ ತೆರಳ್ದ*ನಾಗಳಾಜಾತ್ಯಶ್ವಂಗಳನಶ್ವಪರೀಕ್ಷಕರಿಂ ಪರೀಕ್ಷಿಸಿ ತದಕ್ಷೀಣಲಕ್ಷಣಾಕೃತಿಗಳಂ ಲಕ್ಷಿಸಿ ಮಂತ್ರಲಕ್ಷನಭೀಕ್ಷಿಸಿ—

ಕಂ|| ಆವಾಜಿಗಳಂಗಾಕೃತಿ |
ಭಾವಮುಸಸ್ಸ್ಥಿತಿಸುಲಕ್ಷಣಸ್ವರಗತಿಜಾ ||
ತ್ಯಾವಳಿಯೆಂಬಿವನರಸಂ |
ಭಾವಿಸಿ ಪೊಸತೆಂದು ಪೊಗಳ್ದ* ಮಗುಳ್ದಿ೦* ತೆಂದಂ ||೧೦೪

ದೇವಮಣಿಗೂಡಿ ಜಳಧಿಯೊ |
ಳಾವಿಬುಧವರಾಶ್ವವೊಗೆದಗಲ್ದಿರ್ದುದಂ ||
ದೇವಮಣಿಗೂಡಿರಾಜಿಸು |
ವೀವಿಪುಳತರಾಶ್ವಯುಗೆಕದೇಂ ಪಾಸಟಿಯೇ || ೧೦೫

ವಚನ|| ಎಂದನರೇಂದ್ರನ ಜಾಣ್ಣಾತಿಂಗೆ ಪೊಗಳ್ದು ಮಿತವಚನನಿಂತೆಂದಂ—

ವೃ|| ಹರಿಯಿಂತಪ್ಪಶ್ವಮುಂಟಾಗಿರೆ ಭರದಿನವಂ ಪದ್ದನೇರಿರ್ಪನೇ ಶಂ |
ಬರದರ್ಪಧ್ವಂಸಿ ತಾನುಂ ಗಿಳಿಯನಡರ್ವನೇ ಮೇಘಮಂ ಸಾರ್ವನೇ ಭೂ

ಧರಪಕ್ಷಚ್ಛೇದಿ ಬೆಳ್ಳಂಚಯೊಳೆ ತಳರ್ವನೇ ಬೊಮ್ಮನೀಶಾತ್ಮಜಂ ಕೇ |
ಕಿರಥಂ ತಾನಪ್ಪನೇ ಕಾಳ್ಕಿಗದೆ ಗಮಿಪನೇ ಸಂತತಂ ಗಂಧವಾಹಂ || ೧೦೭

ವಚನ|| ಎಂದಮಾತಿಗೆ ಸೂಕ್ತಿಸುಧಾರಸರಾಜಹಂಸಂ ಮೆಚ್ಚುತ್ತಿರ್ಪನ್ನೆಗಂ ಯಾಮದ್ವಯಭೇರೀಪ್ರಣಾದಂ ನೆಗಳಲೊಡನರಸನಭವಪದಪೂಜೋತ್ಸುಕತೆಯಂ ಮನದೆಗೊಂಡೋಲಗಮಂ ಪರೆಯಲ್ವೇಳ್ವುದುಮಾಗಳ್ಗಳಿಲನೆಳ್ದು ತಲೆವಾಗಿ ತತ್ಕಟಾಕ್ಷರುಚಿಸುಧಾರಸಮಂ ಪಾರ್ದ್ದು ಸಾರ್ದ್ದು ನಿಂದರಾಜಹಂಸವೃಂದದಿಂ, ಜಯರವಮುಖರಮುಖವಂದಿಸಂದೋಹದಳವಿಗಳಿದಕಳಕಳಮನೊಳಕೊಂಡು ಮೊಳಗುವಪಟುಪಟಹಶಂಖತಾಳಕಹಳಾಬಹಳನಾದದೇಳ್ಗೆಯಿಂ ಬಿರುದನುಗ್ಗಡಿಸಿ ಕರವೆತ್ತಿ ಪೊಗಳ್ವಮಾಗಧಪ್ರತಾನದಿಂ ನಿಜರಾಜಸಮಭಿಪ್ರೇಷಿತವಿಪುಳತರಕಾರ್ಯವಿಜ್ಞಾಪನಂಗೆಯ್ಯಲ್ಸಮಯಂಬಡೆಯದೆ ಸಿಡಿಮಿಡಿಗೊಂಡೊಳಗೊಳಗೆ ಗುಜುಗುಜುಂಗೊಂಡು ನಿಲುಂಬಿ ನಿಂದ ನಿಯೋಗಿ ನಿವಹದಿಂ ನೆಗಪಿದ ಪೊನ್ನೊರೆಯ ಸುರಗಿಮೆರಸು ಕರಾಬ್ಜಮಂ ಮುಗಿದು ಕರುಣಂಬಡೆದು ನಿಜದೇಶಕ್ಕೆ ಬೀಳ್ಕೊಳಲೆಳಸಿ ನಿಂದಂಗವಂಗಕಳಿಂಗತ್ರಿಲಿಂಗಾದಿ ದೇಶಾಧೀಶ್ವರರಿಂ ದೊಟ್ಟಜೆಯಿಂ ಮುಂಬರಿದಿಟ್ಟಣಿಸಿ ಪೋಪಾಗಳೆಡೆಯೊಳ್ಪೊಡೆವ ಚಂಡದೌವಾರಿಕರ ದಂಡಪಾತದಿಂ ದಿಂಡುಗೆಡೆದೊಯ್ಯನೆ ತಳರ್ವ*ಸಾಮಂತಭೂಮೀಶ್ವರರಿಂ ದೊತ್ತರಿಸಿ ನಡೆವಾಗಳ್ಭುಜಂಗಳ್ಪಳಂಚಿ ಕಿಸುಗಣ್ಚಿ ನೋಳ್ಪಮಾಮಸಕದ ವೀರಭಟವರ್ಗದಿಂದ ರಸನಿತ್ತ ಧನ ಕನಕ ವಸನ ಮಣಿಭೂಷಣಂಗಳ ಬಲ್ಪೊರೆಯಂ ಕೊರಲ್ಕುಸಿವಿನಂ ತಲೆಯೊಳ್ಪೊತ್ತು ಪೊರಲಾರದೆ ದಡದಡಿಸುತ್ತು ಮೆಡವೆಗಳ್ಗಂ ಬಲವೆಗಳ್ಗಂ ಪರ್ಚ್ಚಿಸಲ್ಲಟಿಸಿ ತಳೆದು ಮೆಲ್ಲಮೆಲ್ಲನಡಿಯಿಡುವರ್ಥಿಜನದಿನಭಿನವ ನರ್ತನರಸಾನುಭವ ಸಮಾಸ್ವಾದಸಂಜನಿತ ಸುಖಮಂ ನೆನೆ ನೆನೆದು ಹಾರೈಸಿ ಮಗುಳ್ದು ಮಗುಳ್ದೀರೊರ್ವರೊಳ್ಪೊಗಳ್ದು ತಳರ್ವರಸಿಕಜನವಿಸರದಿಂ ಮತ್ತಂ ಪೆರೆನೊಸಲೊಳಿಳಿತರ್ಪಬೆಮರಂ ಬೆರಲಿಂ ಬಳಿದೀಡಾಡಿ ಕೆದರ್ದಳಿಕ ದಳಕಮನುಗುರ್ಗೊನೆಯಿಂ ತಿರ್ದ್ದಿ ಸಡಿಲ್ದ ಕಾಂಚಿಯಂ ಸೈತುಮಾಡಿ ಕರ್ಣಪಾಲಿಕೆಯಿಂ ಕರಗಿ ಕೆನೆಗೊಂಡಿಳಿತರ್ಪ ಜವಾದಿಯ ಕೋಳ್ಗೆಸರಂ ಮಿಸುನಿಗಾಸೆಯ ಮುಂಜೆರಂಗಿನೊಳೊರಸಿ ತೊಡೆದೆಡೆಗೆಯ್ಯಂ ತನ್ನ ನಚ್ಚಿನ ಮುದ್ದಳಿಗನ ಪೆಗಲೊಳಿಳಿಪಿ ಬಿನದಿಸುತ್ತುಂ ಬಿಂಬಾಧರದ ಕೆಂಬೊಳಪು ಕೆಂಬಟ್ಟೆಯ ಪಸಾಯಮನೀಯೆ ತಾಳಮೇಳದ ಕೆಳೆಯರ ಮೇಳಾಪದೊಳ್ಸಳುತ್ತರಂಗುಡುತ್ತುಂ ಪದಾಗ್ರದೊಳ್ಪಜ್ಜಳಿಪ ಕಿರುಗೆಜ್ಜೆಗಳ ಝಣಝಣತ್ಕಾರಂ ಯುವಜನದ ಕಿವಿಯಂ ಜಕ್ಕುಲಿಸಿ ಪಳಂಚಿ ಪಜ್ಜೆಯಿಡುವ ಬಿಜ್ಜೋದರಿಯರಂ ಪಳಿವಚ್ಚರಿಯ ನಚ್ಚಣಿಯರಿಂ ತುಱುಗಿ ನಡೆವಾಗಳುಸಿರೆ ಯೊಡೆದಪುದೆಂಬಭೀತಿಯಿಂ ಪೆಗಲಿಂ ತೆಗೆದು ವೀಣೆಯಂ ಧೃಢಮುಷ್ಟಿಯಿಂ ನೆಗಪಿ ಪಿಡಿದಡಿಗೊಳ್ವ ಬಯಕಾರರ ತೆರಳ್ಕೆಯಿಂ ಹರಿಮಣಿಕುಟ್ಟಿಮಸ್ಥಳದ ತಿಳಿಗದಿರಂ ಜಳಂಗೆತ್ತು ವಾಮಕರದಿಂ ಚೀನಾಂಬರದ ನಿರಿಯ ಮುಂಜೆರಗಂ ನಸುನೆಗಪಿ ಕಣ್ದೊಳಲಿ ಕಾಲಿಕ್ಕುವ ಮುಗ್ಧೆಯರ ಮುಗ್ಧತೆಗೆ ನಸುನಗುತ ನಡೆವ ನಾಗರಿಕ ರೊತ್ತೊತ್ತೆಯಿಂ ಬಳಲ್ಮುಡಿಯೊಳ್ತುರುಂಬಿದರಲ ನರುಗಂಪಿಂಗೆರಗಿದೆಳದುಂಬಿಗಳ ಬಂಬಲ ಗರಿಯಗಾಳಿಯು

ಕೋಳಿಂದೇಳ್ದು ಧೂಳಿಮುಸುಗುವ ಪುಡಿಗಳ್ತುರಿಯು ಬಿತ್ತರಿದ ರಜಮೆಂಬ ಮಬ್ಬಿರ್ನೊಳುಬ್ಬಿರ್ ಕಾಳಿಗಂಗೆಯ್ಯುಳಿಳಸಿ ನೆಗೆವ ತಂಗದಿರಂತೆ ತುಂಗತರ ನೀರಂಧ್ರಕುಚಯುಗಳಘರ್ಷಣಪರಿಪತತ್ಪಟೀರಪರಾಗಪಟಲಂ ನೆಗೆತರೆಯುಂ ಕರಾರವಿಂದದೊಳ್ತಿರುಂಪುವರವಿಂದದರಲ ಸರಸಪರಿಮಳವುನಿಮ್ಮರ್ಡಿಪ ಸುಯ್ಯೆಲರ ಸುರಭಿಗೆಳಸಿ ಮೆಯ್ಯುವ್ವಿರ್ ನೆಗೆವಳಿಕುಳದಂತೆ ಚೂರ್ಣಾಳಕಂ ಕೆದರೆಯುಂ ಜಡೆವಾವಿಂಗಗಿಡು ಬಿಮರ್ತ್ತನೊಸಲ್ವೆರೆಯುವ್ಯತರಸಬಂದು ಜಗುಳ್ದಿಳಿದು ನೇಲ್ದಪುದೆಂಬಂತಿಂಬುವಡೆದಲುಗುವ ನಾಸಾಗ್ರಮೌಕ್ತಿಕದ ಪೊಳಪ ನೊಪ್ಪವಿಡುವ ಮಂದಸ್ಮಿತ ಕಾಂತಿಪೀಯೂಷರಸವಿಸರಂ ತೆರೆಮುಸಗೆ ಸಿಡಿಲ್ದು ನಿಂದತೋರ ಪನಿಮಾಲೆಯೆನೆ ಮನಂಗೊಂಡಕಟ್ಟಿಸಕದ ಬಟ್ಟಮುತ್ತಿನ ಕಂಠಮಾಲಿಯು ನೆಲೆಮೊಲಿಗಳ್ಕದಕ್ಕದಿಸೆಯುಂ ದುಸ್ಸ್ಪರ್ಶಮಪ್ಪ ಮಾತಂಗಕುಂಭಮಂ ಪಡಿಗೈವ ಕವಿಜನದ ದುರುಕ್ತಿಯಂ ಶುಕ್ತಿಜಘನಸೂತ್ರಿಕಾ ಕಲಿತ ಕಲಕಿಂಕಿಣೀರಣಿತವಿಷದಿಂ ನಗುವಂತೆಸೆವ ಘನತರನಿತಂಬಬಿಂಬಂ ನಿಜವಿಲೋಕನ ಕುತೂಹಲಯುವಜನಮನೋರಾಜ್ಯಕ್ಷೋಭಮಂ ಸೂಚಿಪ ಕುಲಶೈಲದಂತಡಿಗಡಿ ಗದಿರುತ್ತಿರೆಯುಂ ನಿಬಿಡಕುಚಮಂಡಳಮಂಡಳೇಶ್ವರರ ಪರಸ್ಪರಸ್ಪರ್ಧೆಯಿ ನಳದುರ್ಗಮಧ್ಯದೇಶಂಕಂಪಿಪಂತೆಬಡನಡುಬಳುಂಕೆಯುಂ ಮಿಡಿಮರೆಗೆಮೊಳಲ್ವ ನಿಡುಜಡೆವ ಸುಧೆಯಂ ಸೂಸುವ ಮುಗುಳ್ನಗೆಯು ಸವಿಯುಂ ಸೈಗರೆವಮೆಲ್ನುಡಿಯುಮಡುಗಟ್ಟಿದ ಮುಖರಸದ ಕಡೆಗೋಡಿಮರಿವ ಕಟಾಕ್ಷರುಚಿಯುಪೊಗರುಗುವನುಣ್ಗದಂಪಿನ ಬಿಂಕಂಬಿತ್ತು ಕೊಂಕಿದ ಕುಡುಪುವ್ವಿನ ಥಳಥಳಿಸಿ ಪೊಳೆವ ಸುಲಿಪಲ್ಗಳ ಕೆಂಬೆಳಗನುಗುಳ್ವಬಿಂಬಾಧರದ ಕಕ್ಷಪುಟ ಮನೊತ್ತರಿಸಿ ಬಳೆದಿಟ್ಟೆಡೆಗೊಂಬ ಬಟ್ಟಬಲ್ಮೊಲೆಯು ಕಾವನಕೊರಲ ಕನಕಚಂಪಕದ ಕುಸುಮದ ತೋಳ್ಮಾಲೆಯಂ ಪಳಿವನಳಿತೋಳ್ಗಳ ತಳಿರನಿಳಿಕೈವ ಕೈದಳಿರ ಹರಿಮಧ್ಯಮಂ ಪಳಿವಸೆಳೆನಡುವಿನ ಮದನನ್ತ್ರಿಮಾಡುವೆಟ್ಟಮಂ ಮನ್ನಣೆಗೆಡಿಸಿ ಕೊರ್ವ್ವಿದ ವೃತ್ತೋತ್ತುಂಗಜಘನಸ್ಥಳದ ಪೊಂಬಾಳೆಗಂಬಮಂ ರೋಡಾಡುವನುಣ್ದೊಡೆಯ ಪೂಗಣೆಯುನಡೊಣೆಯುನಣಕಿಪಕಣೆಕಾಲ್ಗಳ್ಕೆಂದಾವರೆಯನಂದಂಗೆಡಿಪ ಪದತಳದ ಚೆಲ್ವು ನಡೆನೋಳ್ಪರಾಜಸುತರಂ ನಡೆಗೆಡಿಸಿಯುಂ ಸೊರ್ಕ್ಕಜೌವನದ ಸೊಬಗಿನ ಸೌಂದರ್ಯಮಾಧುರ್ಯ ಸೌಕುಮಾರ್ಯಂಗಳೊಬ್ಬುಳಿಸಿದಂತೆಸೆದೋರಣಂಬೆತ್ತು ಸಾಲ್ವಿಡಿದು ಪರಿಸರದೊಳ್ಸಂಸಮಾಗಿ ನಡೆವಗಣ್ಯಾಪಣ್ಯಾಂಗನಾ ಪ್ರತಾನದಿಂ ರಾಜವೀಧಿ ರಂಜಿಸೆಯುಂ ಮಿಂತುವಿಜೃಂಭಿಸಿತನ್ತ್ರಹಾಸ್ಥಾನಮಾಗಳ್ಪರೆಯ ಲೊಡನೆ—

ವೃ|| ಪದಪಿಂದೇಳ್ತಂದು ಶುದ್ಧಾಂತದೊಳೆ ನೆಲಸಿ ಶುದ್ಧಾಂತಶಂಗಂವಿಳಾಸಾ
ಸ್ಪದಪೂಜಾಗಾರದೊಳ್ಪೂಜಿಸಿದನಮುಮ ಸದ್ಭಕ್ತಿಯಿಂ ಭರ್ಗನಂ ಭಾ ||
ವದೊಳೆತ್ತಂ ತೀವೆ ತನ್ಮೂರ್ತಿಯ ಕಳೆ ಕಳೆವೆತ್ತಾತ್ಮ ನೈವೇದ್ಯಮಂ ಮಾ |
ಡಿದ ನಾಲಿಂಗಕ್ಕೆ ತಾನೇಂ ಸುಕೃತಿಯೊ ಶಿವಸಿದ್ಧಾಂತದುಗ್ಧಾಬ್ಧಿಚಂದ್ರಂ ||

ತರುಣಾರುಣಭಾಸುರಕಾಂತಿಯುತೇ | [೧೦೭
ಚರಣಾರುಣ ಪದ್ಮನತಾರ್ಯಶತೇ ||

ಶರಣಾವರಣಾನ್ವಿತೆ ದೇವನುತೇ |
ಕರುಣಾಭರಣೇ ಜಯಶೈಲಸುತೇ || ೧೦೮

ದ್ಯ|| ಇದು ವಿನಮದಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊಳ್ರಾಜಶೇಖರ ಸಭಾವರ್ಣನಂ ದ್ವಾದಶಾಶ್ವಾಸಂ

ಸಂಪೂರ್ಣಂ



## ತ್ರಯೋದಶಾಶ್ವಾಸಂ

(ರಾಜಶೇಖರ ವೀಧೀವಿಹಾರೋತ್ಸವ, ಶಂಕರಕುಮಾರಮೃತಿ, ತಿರುಕೊಳವಿ ನಾಚಿಪ್ರಲಾಪಾದಿ ವರ್ಣನಂ)

---

ಕಂ|| ಶ್ರೀಕಲ್ಯಾಣೀವದನಸು |
ಧಾಕರವರ್ಧಿತಸುಖಾಮೃತಾಂಬುಧಿಯಭವಂ ||
ಲೋಕತ್ರಯಾಧಿಪತಿ ಕರು |
ಣಾಕರನೆಮಗೀಗೆ ಸೌಖ್ಯಮಂ ಶಿವಲಿಂಗಂ || ೧

ವಚನ|| ಅನಂತರಮಾ ಮಹಾನುಭಾವಂ ಮಿತವಚನಸಮೇತಂ ಶಿವಪ್ರಸಾದಸುಧಾಸ್ವಾದನಂಗೈದು ಸಕರ್ಪೂರ ತಾಂಬೂಲಮುಖಾಂತರ್ವಳಯ ವಿಳಸಿತನಲ್ಲಿಂ ದೇಳ್ತಂದು ಮುತ್ತಿನ ಕರುಮಾಡದಮುಂದಣ ಮೊಗಸಾಲೆಯ ವಜ್ರಖಚಿತಬಜ್ಜರದ ವೇದಿಕಾಗ್ರದ ಮಣಿಮಯಮೃಗೇಂದ್ರಪೀಠದೊಳ್ಸಲ್ಲೀಲೆಯಿಂ ಕುಳ್ಳಿರ್ದು ಕಟ್ಟಿದಿರೊಳ್ಕಟ್ಟಿರ್ದ ವಾಜಿಗಳಂ ನೋಡಿ—

ಕಂ|| ಈನವ್ಯವಾಜಿಗಳನಿಂ |
ದಾನುಂ ನೀನುಂ ವಿಳಾಸದಿಂದೇರಿ ಮಹಾ ||
ಸೇನೆಯೊಡಗೂಡಿ ವಿಹರಿಪ |
ಮೀನಗರದ ರಾಜವೀಧಿಯೊಳ್ಸಂಭ್ರಮದಿಂ || ೨

ವಚನ|| ಎಂದ ತಿಪ್ಪಿತಿಯಿಂ ನುಡಿಯೆ ಚತುರಮತಿ ಮಿತವಚನನುಚಿತವಚನದ್ಲ ನನುಚಿತವಿಂದೆಂದು ತನ್ನೊಳ್ಭಾವಿಸಿ ಕಾರ್ಯಮಂ ಬಗೆದಿಂತೆಂದಂ—

ಕಂ|| ಸರಸಗುಣಹಾರ ವಿನಯಾ |
ಭರಣ ವಿವೇಕೈಕನಿಧಿ ಕಳಾನಿಳಯ ದಯಾ ||
ಕರ ಸತ್ಯಶಾಲಿ ಸುಯಶೋ |
ಭರಿತಾ ಶಾವಳಯ ಶೈವಶರಧಿಶಶಾಂಕಾ || ೩

ವೃ|| ಬೆಸಸಿದಕಜ್ಜಮಂ ನೆಗಳದುತ್ತರಮಿತ್ತಪನೆಂದು ನಿನ್ನವಾ |
ನಸದೊಳಧೀಶ ನೀಂ ಬಗೆಯದಿರ್ಶಿವಭಕ್ತಜನವ್ರಜಂ ವಿಜೃಂ ||
ಭಿಸಿ ನೆಲಸಿರ್ದ ಪಟ್ಟಣಮಿದಿಂತಿದರೊಳ್ಬಲಗೂಡಿ ಗಾಡಿ ರಂ |
ಜಿಸೆ ಪೊಸವಾಜಿಯೇರಿ ವಿಹರಿಪ್ಪುದು ಬಲ್ಲತನಕ್ಕೆ ತಕ್ಕುದೇ || ೪

ವಚನ|| ಅಂತುಮಲ್ಲದೆಯುಂ—

ಕಂ|| ಮೊದಲೊಳಭಿನವತುರಂಗಮು |
ನೊದವಿದಸಹಣಿಗಳಿನ್ನೈದೆ ತಿರ್ದ್ದಿಸಿ ಬಸಮಾ ||
ದುದನರಿದೇರುವುದರಸ |
ಗ್ಗಿದುವಿಹಿತಂ ವಿಶ್ವವಿಬುಧಜನಮಂದಾರಾ || ೫

ಏನಾನುಮೆಮ್ಮದೆಸೆಯಿಂ |
ದೀನಗರದ ಭಕ್ತಜನಕೆಡಬ್ಬರ್ಂದೊಡೆ ಮ ||
ದ್ಭೂನಾಥಂ ಚೋಳನೃಪಂ |
ತಾಸೇಂ ಸೈರಿಪನೆ ಶಾರದಾಮಣಿಮುಕುರಾ || ೬

ವೃ|| ಸಾಂದ್ರಬಳಾನ್ವಿತಂ ರಥಮನೇರಿ ವಿಳಾಸದೆ ಬರ್ಪ್ಪವೊಳ್ತು ಧ |
ರ್ಮೇಂದ್ರತನೂಭವಂ ಮಡಿಯೆ ತದ್ರಥಚಕ್ರಕೆ ಸಿಲ್ಕಿ ವತ್ಸಮೊಂ ||
ದಿಂದ್ರಸಮಾನನಾನೃಪತಿ ತತ್ಸುತನಂ ಪಿಡಿದಂತೆ ಕೊಂದನಾ |
ಚಂದ್ರಧರಾರ್ಚಕಸ್ಸ್ರುತಸಹೋದರರೆಂಬರೆ ಸಾಪರಾಧರಂ || ೭

ಎನಗತ್ಯಂತಪ್ರತಾಪಂಗಶುಳಗಜಹಯಾರೋಹಣಾರೂಢಸುಪ್ರೌ |
ಢಿನಿಯುಕ್ತಂಗೀಹಯಾರೋಹಣದೊಳಿವನಿದೇಂ ಭೀತಿಯಂ ಪೇಳ್ವನೆಂಬೀ ||
ಮನವಂ ನೀಂ ಮಾಡದಿರ್ವ್ಯಗ್ರತೆಯ ನುಳಿದು ಸಂದಿಗ್ಧಕಾರ್ಯಂಗಳಂಮೆ |
ಲ್ಲನೆ ಮಾಳ್ಪೊಂದಂಗಮೆನ್ನೀಬಗೆಗಭಿಮತಮಾಗಿರ್ಪ್ಪುದೈ ರಾಜಪುತ್ರಾ || ೮

ಕಂ|| ಕೇಳದತಿಹಿತರ ವಚನಮು |
ನಾಳೋಚಿಸದಗ್ರಕಾರ್ಯಮಂ ವ್ಯಗ್ರತೆಯಂ ||
ತಾಳಿ ಕಡುಗಜ್ಜಮೆಸವುದ |
ನೇಳಿಪುದುರ್ವೀಜನಂ ಜಗನ್ನುತಚರಿತಾ || ೯

ಸಿರಿಯೊಳ್ಪರಹಿತಮನಮು |
ತ್ಸರಮತಿಯಂ ವಿದ್ಯೆಯೊಳ್ವಿಭುತ್ವದೊಳೆ ನಯಮಾ ||
ಚರಣಮನತಿಶೌರ್ಯದೊಳೊ |
ಪ್ಪಿರೆ ವಿನಯಮನಾಳ್ದ ಬಾಳ್ದವಂಗೆಣೆಯುಂಟೇ || ೧೦

ಭಾವಿಯೆನಿಸಿದ್ದುರ್ದದು ಪರಿ |
ಭಾವಿಸಿ ಕಳಿಯಲ್ಕೆ ಸಾಧ್ಯಮಾಗದು ಜಗದೊಳ್ ||
ದೇವಂಗಾದೊಡಮೆಂದೆಲೆದೇವ |
ಬುಧಂ ನೆಗಳಲಕ್ಕುಮೇ ಪೊಲ್ಲದುದಂ || ೧೧

ತುದಿಗೈದದುದಂ ಫಲಮಿ |
ಲ್ಲದುದಂ ಪಳಿಗೀಡುಮಾಳ್ಪುದಂ ಪರಸಂತಾ ||
ಪದಮಂ ಪರಗತಿವಿಲಯಾ |
ಸ್ಪದಮಂ ಕಾರ್ಯಮನುದಾರಮತಿ ನೆಗಳ್ದಪನೇ || ೧೨

ಕರಣೀಯ ಮಿಷ್ಟಕರಣಮ |
ಕರಣೀಯಮನಿಷ್ಟಕರಣಮೆಂಬೀನಯಮಾ ||
ದರಣೀಯಮಲ್ಲದುದುಪರಿ |
ಹರಣೀಯಂ ಭೂಮಿಪಂಗಿಳಾಧಿಪತಿಳಕಾ || ೧೩

ಬಿಡದೆಸಪಕಜ್ಜಮಾವುದ |
ನಡಿಗಡಿಗಾಪ್ತರ್ಕಳೊಳ್ವಿಚಾರಿಸಿ ಮಾಳ್ಪಂ ||
ಗೆಡರುಂಟೆ ಕಾರ್ಯಸಿದ್ಧಿಗೆ |
ತೊಡಂಕು ತೋರ್ಪುದೆ ವಿದಗ್ಧಜನವನ ಚೈತ್ರಾ || ೧೪

ನೆರಪಲ್ಸಿರಿಯಂ ದುರಿತಮ |
ನುರಿಪಲ್ದಶದಿಶೆಯೊಳಿಂದುಕರರುಚಿಯುಶಮಂ ||
ಪರೆಪಲ್ಪರನೃಪರುಮನೊ |
ತ್ತರಿಪಲ್ಸಾಲ್ವುದು ನಯಜ್ಞಹಿತಮಿತವಚನಂ || ೧೫

ಭ್ರಮರಹಿತಾಮೋದಪ್ರದ |
ಸುಮನೋಗಣಹೃದ್ಯಮವಿಕಲಸ್ಪಸ್ಥಮುದ ||
ಗ್ರಮನೋಜ್ಞಫಲದಮಖಿಲಾ |
ಗಮವಿನುತಂ ನೀತಿಸುರಮಹೀರುಹಮರಸಾ || ೧೬

ಕಂ|| ತನುಭೃದ್ಗಣದೊಳ್ತೊಲ್ಪಿರೆ |
ತನುಧನಲೋಭಂಗಳೆಂತುಮೇಂ ತೋರ್ಕುರ್ಮೆ ಪೇಳ್ ||
ನಿನಗೆ ಭುವನಾಕ್ಷಿಗಡಸುವ |
ಘನತಿಮಿರಂ ಭುವನದಕ್ಷಿಯಂ ಮುಸುಕುಗುಮೇ || ೧೭

ಅದುಕಾರಣದಿಂ ನಿಜಧೈರ್ಯ |
ದೆ ಗಣಿಸದೆ ಮುಂದೆ ಬಪ್ಪುರ್ದಂ ಬುಧರಲ್ತೆಂ ||
ಬುದ ನೆಸಗದೆ ಬೆಳ್ಜಸವಾ |
ಳ್ದುದು ಕಜ್ಜಂ ಸಜ್ಜನಾಬ್ಜವನ ದಿನ ನಾಥಾ || ೧೮

ವ|| ಎಂದವಂ ನುಡಿಯೆ ಮೊಗದೊಳ್ಮಂದಸ್ಮಿತಂ ಮೊಳೆಯೆ ನರೇಂದ್ರತನಯನಿಂತೆಂದಂ—

ವೃ|| ತೀರದ ನೀರದಂ ನೆಗೆದು ಗರ್ಜಿಪುದೆಂದು ಪಯೋಧಿಕೇಳಿಯಂ |
ಸಾರಮರಾಳನೇನುಳಿದುದೇ ನವಚಂಪಕಗಂಧಭೀತಿಯಿಂ ||
ಸಾರದೆ ಮಾಣ್ದುದೇವನವಿಹಾರಮನಾರಡಿ ಮುಳ್ಗಳಂಘ್ರಿಯಂ |
ಬಾರಿಪುದೆಂದು ಬಿಟ್ಟುದೆ ಮದದ್ವಿರದಂ ಗಹನ ಪ್ರಚಾರಮಂ || ೧೯

ವಚನ|| ಅದುಕಾರಣದಿಂ—

ಕಂ|| ಮುಂದೇಂ ಬಪ್ಪುರ್ದೊ ಹಾನಿಯ |
ದೆಂದಳ್ಕಿ ವಿನೋದಕೇಳಿಯಂ ತೊರೆವಾತಂ ||
ಪಂದೆಯಿವನೆಂಬನಿಂದೆಯ |
ನೊಂದುವನಿದು ರಾಜಧರ್ಮಮೇ ಬಗೆವಾಗಳ್ || ೨೦

ವಚನ|| ಎಂದು ತಾನೆಂದುದ ನಪ್ಪುಗೆಯ್ಯದೆ ನುಡಿದ ನರೇಂದ್ರನಂದನಂಗೆ ಪತಿಮೋಹನಂದನ ನಿಂತೆಂದಂ—

ವೃ|| ಧರ್ಮಜ ನಂಬರಧ್ವನಿಯ ನಾಲಿಸಿ ತಾನುಳಿದಂಬುಪಾನಮಂ |
ನಿರ್ಮಳಬುದ್ಧಿ ತನ್ನನುಜರಾಯುಮನಾಗಳೆ ಸತ್ಪ್ರಸಂಗದಿಂ ||
ಕೂರ್ಮೆಯೊಳಲ್ಲಿ ಮೇಣ್ಪಡೆದನಾಪ್ತ ನಯೋಕ್ತಿಯನೊರ್ಮೆಕೇಳ್ದೊಡೇಂ
ಪೆರ್ಮೆಗೆ ಹಾನಿ ಬರ್ಪುದೆ ವಿಚಾರಿಪುದಾತ್ಮ ಹಿತಾಹಿತಂಗಳಂ || ೨೧

ಕಂ|| ವಿತತಾಭಿಮಾನ ನೀತಿ |
ಕ್ಷಿತಿಗಂ ಶಿವಭಕ್ತಿಧರ್ಮ ನಿರ್ಮಳಕೀರ್ತಿ ||
ಚ್ಯುತಿಗಧನ ಸಪ್ಪೊಡಂ ಭೂ |
ಪತಿಯಳ್ಕಲ್ವೇಳ್ಕು ಮಮಳಗುಣ ಗಣನಿಳಯಾ || ೨೨

ವಿದಿತ ನಿಜರೂಪಮಂ ಮುಕು |
ರದೊಳೀಕ್ಷಿಪವೋಲ್ತ್ವದೀಯ ನಯಕೌಶಲಸಂ ||
ಪದಮ ನಿದನೆನ್ನೊಳೀಕ್ಷಿಪು |
ದಿದು ಯುಕ್ತಂ ನಿನಗೆ ನೀತಿವಿದ್ಯಾಭರಣಾ || ೨೩

ವ|| ಎಂದತಿಹಿತಕರ ಪ್ರಸನ್ನತರ ಸದರ್ಥಸಮರ್ಥನಪ್ರಸಂಗಮ ನವಂ ನುಡಿಯಲೊಡನೆ—

ವೃ|| ಪುರಹರನಿಟ್ಟವುಲ್ಲ ಮುರಿಯಂ ಮುರವೈರಿ ವಿರಿಂಚಿ ಮುಖ್ಯನಿ |
ರ್ಜರ ರದನೆತ್ತಲಾರದೆ ವಲಂ ಧೃತಿಗುಂದಿದ ರೆಂದೊಡಾ ವನಾ ||
ಪರಮ ಮಹೇಶಶಾಸನ ಮ ನುರ್ವರೆಯೊಳ್ಮಿಗೆ ಮೀರ್ವನಣ್ಣ ಸೈ |
ತಿರೆ ಪೆರಪಿಂಗಿ ಪೋದವುದೆ ಬರ್ಪ್ಪ ಶುಭಾಶುಭ ಮಾರ್ಗಮಾದೊಡಂ || ೨೪

ವಚನ|| ಅದಲ್ಲದೆಯುಂ—

ವೃ|| ಪೊಸತುದ್ವೇಗಾಶ್ವಮೆಂದೇರದೊಡೆ ಸಮನಿಕುಂ ವಾಹಕತ್ವಕ್ಕೆಭಂಗಂ|
ನಿಸದಂ ವೈಹಾಳಿಯೊಳ್ಶಂಕರಶರಣಜನಂ ನೋಯೆ ಕಾಯ್ದಪ್ಪನೆಮ್ಮೀ ||
ವಸುಧೇಶಂ ಮಾಣದೆಂದಳ್ಕುವುದನುಚಿತಮೀಶಾಜ್ಞೆಯಂ ಬಲ್ಲನಾಮ್ಮಾರ್ಗಂ |
ದೆಸಮಂತಂತಾಗೆತೋರ್ಪ್ಪಂವಿಪುಲಮಹಿಮೆಯಂಮುಕ್ತಿಯಂಸೂರೆಗೊಂಬೆಂ||

ಬಗೆಗೊಗೆದಳ್ತಿಯಂ ಸಲಿಸವೇಳ್ವುದು ಬೇಡೆನವೇಡ ತಂದೆ ನೆ |
ಟ್ಟಗೆ ಮುಳಿದಪ್ಪನೆಂದೆಣಿಸದಿನ್ನಿರ್ದನಗಾದಪರಾಧಮೆನ್ನದೆಂ ||
ದಗಣಿತಸಂಭ್ರಮಂ ಮಿಗೆ ತುರಂಗಮಯುಗ್ಮಮನೇರಿ ನೋಳ್ಪರೊ |
ಳ್ನಿಗಳೆ ಮಹೋತ್ಸವಂ ವಿಹರಿಪಂ ಪುರದೊಳ್ಪರಮಾನುರಾಗದಿಂ || ೨೬

ವಚನ|| ಎಂದರಾಜೇಂದ್ರನುಕ್ತಿ ಯನೆಂತಾನುಂ ಮನದೆಗೊಂಡು ನಿಜಮಹತ್ವದರ್ಶನಾರ್ಥಮಿದು ಶಿವಕೃತಮಕ್ಕುಮೆಂದು ನಿರ್ಧರಂಗೈದು—

ವೃ|| ಇನಿತೊಂದಾಗ್ರಹಮಂ ಮದೀಯನಯವಾಕ್ಯೋಲ್ಲಂಘನಂಗೈದುಮಾ |
ಳ್ಪನಿವಂ ನೀತಿವಿದಂ ಸಮಾಶ್ವಗತಿಯಿಂದೇನಾನುಮೊಂದಕ್ಕು ಮ ||
ಲ್ತೆ ನವೀನಂ ಕಡುಗಜ್ಜಮೆಂದೆಣಿಸಿಯುಂ ತಾನಪ್ಪುಕೈದಿರ್ದ್ದನಾ |
ತನ ಮಾತಂ ಪುದುವಾಳ್ಪನಂಗಡ ಸಖಗ್ರ್ಗಂತಾದೊಡಂ ಮಿತ್ರರೊಳ್ || ೨೭

ವಚನ|| ಅಂತಿರ್ಪ್ಪನ್ನೆಗಂ—

ವೃ|| ತನುವೆರಡೊಂದುಗೂಡಿ ನಿಜಪಕ್ಷದೊಳಪ್ಪಿ ಮನೋನುರಾಗದಿಂ |
ಮನಸಿಜಸೌಖ್ಯಮಂ ಸವಿದು ಸಾರಸತಳ್ಪದೊಳಿರ್ಪ್ಪವೇಳೆಯೊಳ್ ||
ವನರುಹಮಿತ್ರನಸ್ತಗಿರಿಮಸ್ತಕದಲ್ಲಿರೆ ನೋಡಿ ಬಾಡಿ ಬೆ |
ಚ್ಚನೆ ಬಿಸುಸುಯ್ದು ಬೇವಸನೆ ಬಿಚ್ಚಿದುವಕ್ಕಟಜಕ್ಕವಕ್ಕಿಗಳ್ || ೨೮

ಕಂ॥ ಇಟ್ಟಣಿಸುತೆಲರ್ದ*ನೈದಿಲ |
ನಿಟ್ಟೆಸಳ್ಗಳ್ತಾಗೆ ತಾಳ್ದು ಸಂಕೋಚತೆಯಂ ||
ನೆಟ್ಟನೆ ನಿಂದವೊಲೆಸೆಗುಂ |
ದಿಟ್ಟಿಗೆ ಕೊಳದೊಳಗೆ ಮುಗಿವ ಕಮಳಕದಂಬಂ || ೨೯

ತಲೆವಾಗಿದ ಸರಸಿಜದಿಂ |
ದಲರ್ಪಂಡೊಕ್ಕುದು ನಿಜೇಶ ನಗಲುತ್ತಿರೆ ತ ||
ನ್ನಳಿಸಿ ಮನಸಸ್ತಾಪದೆ ತಂ |
ಬುಲವಂ ಕೆಲಕುಗುಳ್ವ*ಳೆಂಬುದಂ ಪ್ರಕಟಿಸವೊಲ್ || ೩೦

ಅಪರಗಿರಿಕರಿಯ ಕುಂಭದ |
ಲಪನದ ಸಿಂದುರದೊಳರುಣ ಮಣಿಮುಕುರದೊಳೇ ||
ನುಪಮಗೆ ಬಂದುದೊ ಸಂಧ್ಯಾ |
ವಿಪುಳಾರುಣ ರುಚಿಯು ಮಹಿಮಕರ ಮಂಡಲಮುಂ || ೩೧

ವೃ॥ ಕೊಳದೊಳ್ನಿಂದು ತರತ್ತರಂಗ ಜಳಮಂ ಮಿಂದಲ್ಲಿ ನಗ್ನಾಂಗಿ ಪೊ |
ಕ್ಕಳಿನಾದಚ್ಛಲದಿಂ ಕುಮಂತ್ರಜಪಮಂ ತದ್ವೇಷದಿಂ ಮಾಡೆ ಕೋ ||
ಮಳೆ ಶೂನ್ಯಾಧ್ವಮನೈದೆ ದಾಂಟೆ ನಿಜಪಾದಂ ಪೋಗೆ ಮೈಗಂದಿ ಬೀ |
ಳ್ದಳಿದಂ ದ್ರಾವಿತಚಂದ್ರ ಸಾಂದ್ರ ತರರುಗ್ಭಾಸ್ವತ್ಕರಂ ಭಾಸ್ಕರಂ || ೩೨

ಕಂ॥ ಮೃಡನ ಕಿರುಜಡೆಯ ಕೆಂಗದಿ |
ರಡರ್ದೆಳೆವೆರೆ ಬಳೆದು ನಿಜಕಳಾವಿಭವಮನೀ ||
ಪೊಡವಿಗರಿಪಲ್ಕೆ ಬಂದವೊ |
ಲುಡುಪತಿಬಿಂಬಂ ಸರಾಗಮುದಯಿಸಿತಾಗಳ್ || ೩೩

ವೃ॥ ಎನಗಾತ್ಮೇಶ್ವರನೀದಿನೇಶ್ವರನಗಲ್ದೋದೇವೋ ತಾಂ ಪೋಗಿ ಕೆಂ |
ಮನೆ ರಾಗಾನ್ವಿತನಪ್ಪಿದಂ ವರುಣದಿಗ್ಯೋಷಾಂಗಮಂ ನೋಡಲಾ ||
ರೆನಿದಂ ಕಣ್ಗಳಿಸೆಂದು ಪಿಂದಿರುಗಿ ನಿಂದಿಂದ್ರಾಶೆಯೆಂದೆಂಬಕಾ |
ಮಿನಿಯುದ್ವೇಣಿಯಸೂರ್ಯಕಾಂತಿಯೆನಿಸಿತ್ತಿಂದಶ್ರ್ಯದ್ರಿಯೊಳ್ಚಂದ್ರಮಂ|| ೩೪

ಅಂಬುಜಮುಂ ವಿಯೋಗಿವದನಾಂಬುಜಮುಂ ಕಳೆಗುಂದೆ ಕೂಡೆ ದು |
ಗ್ಧಾಂಬುಧಿಯುಂ ಜನೋತ್ಸವ ಸುಧಾಂಬುಧಿಯುಂ ನಲವೆಚ್ಚೆ ಕಾಂತಕಾಂ||
ತಾಂಬಕಕೈರವಂ ಧವಳಕೈರವಮುಂ ನಗೆಯೊಂದೆ ಬಂದುದಾ |
ಲಂಬಿತರಾತ್ರಿ ರಮ್ಯರಮಣೀಮಣಿಕುಂಡಳಮಿಂದುಮಂಡಲಂ || ೩೫

ಕಂ|| ಸಕಳಂಕಕಳಂಕಲಸ |
ನ್ಮಕರಾಂಕನಸೊಳಗೆ ತಾಳ್ದನೆಂದಂಧಕವು ||
ರ್ದಕನ ನೊಸಲಗ್ನಿ ಹಿಮಕರ |
ನ ಕರಂ ಮುತ್ತಿದವೊಲೆಸೆದುದುದಯುದರಾಗಂ || ೩೬

ಮದನನ ಘನಪ್ರತಾಪವು |
ನುದಿತಯಶಶ್ರೀಯುನರಿಪುವಂತೆಸೆದುದು ಮು ||
ನ್ನೊದವಿದಕೆಂಪುಂ ಕಡೆಯೊ |
ಳ್ಪುದಿದೆಳವೆಳಗುಂ ವಿಳಾಸದಿಂ ಶಶಧರನಾ || ೩೭

ನಿಜಪಾದದಿಂದೆ ತುಳಿದಂ |
ತ್ರಿಜಗದ್ಬಾಧಕನನಂಧಕಾರಾಂಧಕನಂ ||
ರಜನೀಶ್ವರೇಶ್ವರಂ ಶು |
ಕ್ಲಿಜಗೌರಂ ಕುವಲಯಾಧಿಪಂ ಹರಿಣಧರಂ|| ೩೮

ಶಂಬರಹರನಂಬುಜರಿಪು |
ಬಿಂಬಮೆನಿಪ್ಪೊಂದುಸಾಣೆಯೊಳ್ಮಸೆಯಲ್ಕ ||
ನ್ನಂಬಂ ಪತ್ತಿತ್ತದರ ಕಿ |
ಲುಂಬಿನೆ ತನ್ಮಧ್ಯದಂಕವೇಂ ಸೊಗಯಿಸಿತೋ || ೩೯

ದ್ವಿಜರಾಜಂ ನಿಜಕರದಿಂ |
ರಜನಿಯ ತಲೆಯಲ್ಲಿ ತಳೆದಶತದೀಧಿತಿಶು ||
ಕ್ತಿಜದಕ್ಷತೆಯೆನೆ ಚೆಲ್ವಂ |
ಭಜಿಸಿದುದಾ ಸುಭಗಭಗಣವಾನಭದೆಡೆಯೊಳ್ || ೪೦

ವೃ|| ಪರವಧುವೆಂದು ನೋಡದಿನನಿಲ್ಲದಿರುಳ್ಪರಿತಂದು ಪದ್ಮಿನೀ |
ತರುಣಿಯ ಕೋರಕಸ್ತನಮನಂಟಿ ಕರಾಗ್ರದೊಳಿಂದುವಲ್ಲಿ ಕಂ ||
ಡರಜನಿಗಳ್ಕಿ ರಾಗಮುಳಿದಾಸ್ಯಕೆ ಬೆಳ್ಪಿರದೇರೆ ಲಂಚವಿ |
ತ್ತುರುಶರಮೌಕ್ತಿಕಂಗಳೆನೆ ಕಂಗೊಳಿಸಿರ್ದ್ದುವಲ್ತೆ ತಾರೆಗಳ್ || ೪೧

ವಚನ|| ಅಂತರಂ—

ವೃ|| ಅಮರೇಭೇಂದ್ರಪ್ರಕಾಶಂ ಶಿಖಿಪುರವರಸೌಧಾಗ್ರಮುಕ್ತಾಘತೇಜಂ
ಯಮಹಾಸಜ್ಯೋತಿ ರಾತ್ರಿಂಚರಪತಿಸಿತದಂಷ್ಟ್ರಾಂಕುರಂ ಪಾಶಿಹಾರೋ ||
ರುಮಯೂಖಂ ವಾಯುಸತ್ಕೇತುರುಚಿ ಹರಸುಹೃನ್ಮೌಳಿಹೀರಾಂಶುವೀಶಾ |
ನಮಹಾದೇಹದ್ಯುತಿಶ್ರೀ ಬಳೆದುಬಳಸಿದಂತಾಯ್ತು ಬೆಳ್ದಿಂಗಳೆತ್ತಂ || ೪೨

ವಚನ|| ಅಂತುಮಲ್ಲದೆಯುಂ—

ವೃ|| ಶರನಿಧಿಯಲ್ಲಿ ವೃಕ್ಷತತಿಯಲ್ಲಿ ಮರುತ್ಪಥದಲ್ಲಿ ಪಂಕಜಾ |
ಕರದೆಡೆಯಲ್ಲಿ ತಳ್ತ ತಿಳಿಜೊನ್ನಮನಂಜೆಗಳುನ್ಮದಾಳಿಗಳ್ ||
ಸುರಮುನಿಗಳ್ಗ ಜಂಗಳೊಸೆದೀಂಟಲು ಮಾರ್ದ್ದರಗಲ್ಮೆಳಂಗಲಾ |
ತುಱಿಸಿ ಕರಾಗ್ರದಿಂದುಡಿಯಲಾಟಿಪುವೆಂದೊಡದೆಂತು ಬಣ್ಣಿಪೆಂ || ೪೩

ಇದುದಲ್ಚಂದ್ರಮನಲ್ತು ನರ್ತಿಪಮುನೀದ್ರಂ ನಾರದಂ ನೋಳ್ಪೊಡಿಂ |
ತಿದು ತಾಂ ಲಾಂಛನಮಲ್ತು ತತ್ಕರವಿರಾಜದ್ವೀಣೆ ತಾರಾಳಿಯ ||
ಲ್ತಿದು ತತ್ಸ್ಫಟಿಕಾಕ್ಷಮಾಲೆ ನಿಬಿಡೋದ್ಯಚ್ಚಂದ್ರಿಕಾಶೋಭೆಯ
ಲ್ತಿದು ತತ್ಕಂಠವಿಲಂಬಿದೇವಕುಜಪುಷ್ಪಸ್ರಗ್ರಜೋವಿಭ್ರಮಂ || ೪೪

ವಚನ|| ಇಂತೊಗೆತಂದ ಚಂದ್ರ ಚಂದ್ರಿಕೆಯಿಂ ಸಮನ್ವಿತಮಾದ್ಯಾಮಿನೀಪ್ರಥಮಯಾಮದೊಳ್ ಭುವಿಪಲಲಾಮಂ ಸೋಮಧರನಂ ಪ್ರೇಮದಿಂದರ್ಚಿಸಿ ತತ್ಪ್ರಸಾದ ಸುಧಾಸ್ವಾದನಾನಂತರಂ ಸಕರ್ಪೂರತಾಂಬೂಲಪ್ರದಾನಪುರಸ್ಸರಂ ಪ್ರಧಾನತನೂಜನಂ ತದ್ಗೃಹಕ್ಕೆ ಬೀಳ್ಕೊಟ್ಟು ಸರ್ವಮಂಗಳಾಸಮನ್ವಿತ ನವಮಣಿಕನಕಪರ್ಯಂಕಮೃದುಳತಳ್ಪಸ್ಥಳದೊಳ್ ತದ್ರತಾಂತಸಂಜಾತಪರವಶಪ್ರಭೂತಪರಮಸುಖನಿದ್ರಾನುಭವದೊಳಿರ್ಪನ್ನೆಗಂ—

ವೃ|| ಇದೆ ಪದ್ಮಾಮೋದಮಂ ತಾಳ್ದೊಲೆದು ಸುಳಿವ ಮಂದಾನಿಲಂ ಕಾಂತಿಗುಂದು
ತ್ತಿದೆ ನಕ್ಷತ್ರಾಳಿ ಶಂಖಧ್ವನಿಯಿದೆ ಶಿವಗೇಹಂಗಳೊಳ್ಕೆಂಪು ಮೂಡು ||
ತ್ತಿದೆ ಪೂರ್ವಾದ್ರೀಂದ್ರದೊಳ್ಚಂದ್ರಿಕೆ ಕಳೆಗಳೆದೀಗಳ್ಪಡಂಮೆಟ್ಟಿ ಪೋಗು |
ತ್ತಿದೆ ತಳ್ಳೇಕೀಗಳೊಲ್ದುಪ್ಪವಡಿಸು ಜಗತೀಮಾನಿನೀಜೀವಿತೇಶಾ || ೪೫

ವಚನ|| ಎಂದುಪ್ಪವಡಮಂ ಪಾಡುವ ರಾಗಾಧರೆಯರ ರಾಗರಸಪೂರಂ ಮೇರೆದಪ್ಪಿ ಮೇಲ್ವರಿಯೆ ಮಲ್ಲನೇಳ್ವಂತೆ ಹರಸ್ಮರಣಪೂರ್ವಕಂ ಕನತ್ಕನಕಪರ್ಯಂಕಮೃದುಳಶಯ್ಯಾತಳದಿನರಸಿವೆರಸೇಳ್ದು ತತ್ಪ್ರದರ್ಶಿತಾದರ್ಶದೊಳ್ನಿಜಮುಖಾವಲೋಕನಂಗೈದನಂತರಂ ಮರಂದದೊಳ್ಮುಳುಂಗುವ ಮಧುಕರನಂತೆ ಪರಿಮಳೋದಕದಿಂ ಜಳಕಂ ಬೊಕ್ಕು ಶಾರದಾಭ್ರಂ ತಳ್ತಶಶಾಂಕನೆನಿಸಿ ಬೆಳ್ವಟ್ಟೆಯಂ ಪೊದೆದುಟ್ಟು ಶಶಿಕಳೆಯಂ ತುಳಿವ ಕೆಂದಾವರೆಯೆನಿಸಿ ಪದತಳದಿಂ ಪಳಿಕುಮಾವುಗೆಯಂ ಮೆಟ್ಟಿ ಪಾಲ್ಗಡಲ ಪೆರ್ದ್ದೆರೆಯೊಳ್ಪುಗುವ ಮರಾಳನಂತೆ ಶಶಿಕಾಂತರಚಿತಮಾದ ಪೂಜಾಗಾರಮಂ ಪೊಕ್ಕು ನಿಂದು ನಿರೀಕ್ಷಿಪಾಗಳ್ಕಣ್ಗೆ ಕೌತುಕಮನಮರ್ಚ್ಚಿ ಥಳಥಳಿಸಿ ಪೊಳೆದು ಬಳಸಿ ಬಳೆದು ಬಳ್ಳಿವೆಳಗಂ ಕರೆವೆಳಮುತ್ತಿನ ಮೇಲ್ಕಟ್ಟಿನ ಕೆಳಗಳವಡಿಸಿದ ಮಿಸುನಿವೆಸದೆಸಕದ ಪೊಂದಾವರೆಯ ಸಾಲ್ಗಳ ಪರಿಸರದೊಳೆಳಲಿವಿಟ್ಟ ಮಣಿಮಂಜರಿಯಚ್ಚಕುಚ್ಚಗಳ ಬಳಸಿ ತೊನೆವ ಪಸುರ್ವರಲ ಲಂಬಣಮಾಲಿಯ ಕೆಲಗೆಲದೊಳ್ಕಟ್ಟಿ ಬಿಟ್ಟ ಕುಸುಮಮಾಲಿಕೆಯ ಪಜ್ಜಲಿಪ ಬಜ್ಜರದ ಕುಟ್ಟಿಮಸ್ಥಳದ ಕರ್ಪೂರರಜದ ವೇದಿಕೆಯರಲ ಪರಾಗದ ಚೆಳಿಯದ

ಮೃಗಮದದ ಸಾರಣೆಯೊಳ್ಕೈಗೈದ ಮುತ್ತಿನರಂಗವಲ್ಲಿಯ ಚೌಕದೊಳ್ಪಾಸಣಿಸಿ ಮಡಗಿದ
ಸರಸಸುರಭಿಸಲಿಲಸಂಭೃತಸ್ವರ್ಣಕುಂಭಂಗಳ ಪೊಂಬರಿಯಾಣದೊಳಿಳಿಪಿದ ಮಿಸುನಿವಟ್ಟಲ್ಗಳ
ಸರಂಬಿಡಿದೊಪ್ಪುವ ಪೊನ್ನಗಿಂಡಿಲ್ಗಳ ಘುಸೃಣರಸಂ ಮಿಸುಪಶುಕ್ತಿಗಳ ಚಂದನರಸಂದೀವಿದ
ಶಂಖಪಾತ್ರಂಗಳ ಥಳಥಳಿಪ ಮಣಿದೀಪಂಗಳ ಪೊರಗೆಚೆಲ್ಲಿದ ಕಸ್ತೂರಿಯರಜಕ್ಕೆ ಪರಿಮ
ಗೊಂಬಮುದಾಳಿಮಾಳಿಕೆ ಒಳಗೆ ಪುಗದಂತೆ ನೇಮಿಸಿದ ಚಂಪಕ ಮುಕುಲದಾಮದ ಬಾಗಿ
ಲ್ವಾಡದ ಬಗೆಗೊಳಿಪ ಧೂಪಾಮೋದದೊಳ್ಪೊರೆದ ದವನದ ಸೀಗುರಿಯಂ ಪೊಂಬಾಳೆಯ
ಚಾಮರಮಂ ಪುಂಡರೀಕಾತಪತ್ರಮಂ ತಳಿರ ತಾಲವೃಂತಮನರಲಕರಂಡಕಂಗಳಂ ಕೆಲಕೆಲ
ದೊಳ್ಪಿಡಿದು ನಿಂದ ಯಂತ್ರಪುತ್ರಿಕೆಗಳ ಸಡಗರಿಪ ವಿನಿಯೋಗದ ಮಡದಿಯರ ಪಿರಿಯ ಸಿರಿ
ಕಮನೀಯಮಾಗೆ ಮನದೊಳುತ್ಸವಿಸಿನಡೆತಂದರ್ಚನೋಚಿತಾಸನದೊಳುತ್ತರಾಭಿಮುಖಂ ಪ್ರ
ಸನ್ನ ಮುಖಂ ಪದ್ಮಾಸನಮನವಷ್ಟಂಭಿಸಿ ರುಜುಭಾವದಿಂ ಕುಳ್ಳಿರ್ದು—

ಸ್ರ|| ಘನಸದ್ಯೋಜಾತಮುಖ್ಯಪ್ರಭವ ಮಹಿಮಖೋತ್ಪನ್ನ ಸಂಪನ್ನಿವೃತ್ತ್ಯಾ
ದಿನಿಯುಕ್ತೋತ್ಪತ್ತಿ ಭಾಸ್ವದ್ಗುಣಯುತಕಪಿಲಾದ್ಯಪ್ರಭೂತಾವನೀಪಾ |
ವನರೂಪಶ್ರೀವಿಭೂತಿ ಪ್ರಭೃತಿಯುಸುರೆ ಪತ್ಪೂರ್ವಕಂ ಲೇಪನಂಗೈ |
ದು ನಿತಾಂತಂ ತತ್ತ್ರಿಪುಂಡ್ರಂ ತೋಳ್ಗೆ ತಳೆದು ವಿಧ್ಯುಕ್ತಮಂತ್ರಂಗಳಿಂದಂ ||
ಶಿವನೇತ್ರಾಂಭೋಜಮಂ ಪೂಜಿಸಿ ಸದಮಳರುದ್ರಾಕ್ಷಮಂ ಭಕ್ತಿಯಿಂದು |
ಕ್ತ ವಿಧಾನಂ ದಪ್ಪದಾತಾಣದೊಳೆ ಗಣನೆಯಂ ಮೀರದೋರಂತೆ ತಾಳ್ದು ||
ಪ್ಪುವ ಹೃತ್ಪಂಕೇಜದೊಳ್ಧ್ಯಾನಿಸಿದ ನಿನಘನದ್ಯೋತಿಯಂ ಸಾಂಬನಂ ಶಂ |
ಭುವನಿಂದ್ವರ್ಧಾಂಕ ಕೋಟೀರನ ನಸಘನ ನಾನಂದದಿಂ ತನ್ನೃಪಾಲಂ || ೪೭

ವಚನ|| ಅಂತುಜಾನಿಸಿ ಜಲಕ್ಕನೆ ತೊಳಪಮೂರ್ತಿಯನೊಳಗೆ ಕಂಡು ಕರಣಂಗಳ್ಕಳೆ
ಯೇರೆ ಮಾನವೇಶ್ವರಂ ಮಾನಸಪೂಜೆಯಂ ರಚಿಸಿ ಬಾಹ್ಯಪೂಜೆಗೆ ಮನಂದಂದು ನಿಜೇಷ್ಟ
ಲಿಂಗಮಂ ಕರಾಬ್ಜಪೀಠದೊಳ್ನೆಲೆಗೊಳಿಸಿ ನಿರ್ನಿಮೇಷಾಕ್ಷಿಯಿಂ ನಿರೀಕ್ಷಿಸಿ—

ಕಂ|| ಹೃದಯದೊಳೆ ಜಾನಿಸಿದ ಪರಿ |
ಜದು ನಿಜಲಿಂಗದೊಳಭಿನ್ನ ಮೆನಿಸಿರೆ ಕಂಡೇಂ ||
ಮುದವಾಂತನೊ ನರಪತಿ ಬಗೆ |
ಗೊದವಿದುದದು ತೋರೆ ಪೊರಗೆ ಸುಖಿಸದರೊಳರೇ || ೪೮

ಇದುಮುನಿಗಳ ಮನದೊಳಬೆಳ |
ಗಿದು ವಿಧಿವಿಷ್ಣುಗಳ ವಾದಮಂ ಮಾಣಿಸಿದ ||
ಗ್ಗದಪರಬೊಮ್ಮಂತಾನಿಂ |
ತಿದು ಮೋಕ್ಷಾಮಳಫಳಪ್ರದಂ ಸುರಭೂಜಂ || ೪೯

ವಚನ|| ಎಂದು ಕಣ್ದಣಿವಿನಂ ನೋಡಿ ಮನಂದಣಿವಿನಂ ನೆನೆದು ಭಾವಂದಣಿವಿನಂ ಭಾವಿಸಿ ಮತ್ತ ಮತ್ತ ಮಾಣದೆ—

ಕಂ|| ಸುರಿವಮುದಶ್ರುವೆ ಜಳೆಯಂ |
ಶರೀರದೊಳ್ಮೊಳೆವಪುಳಕಮೇ ಗುಡಿ ಲಾಸ್ಯಂ ||
ಕರಕಂಪಂ ಗದ್ಗದರುತಿ |
ವರವಾದ್ಯಮದಾಗೆ ಶಿವನ ನನನಿದಿಗೊರ್ಗಂಡಂ || ೫೦

ವಚನ|| ಅಂತಿದಿರ್ಗೊಂಡು

ಕಂ|| ಶ್ರುತಿಸತಿಯ ಶಿರೋಮಣಿ ಯತಿ |
ಪತಿಗಳ ಹೃದಯಾಬ್ಜದಿವ್ಯದಿನಮಣಿ ಸತತಂ ||
ತತಿಚಿಂತಾಮಣಿ ಭುವನ |
ಸ್ತುತಲಿಂಗಂ ತಾನಿದೆಂದು ಪೊಗಳ್ದಂಭೂಪಂ || ೫೧

ವಚನ ||ನಿರ್ವ್ಯಾಜಭಕ್ತಿಯಿನಂತು ಪೊಗಳ್ದನಂತರಂ—

ಲಲಿತರಗಳೆ|| ಸುಧೆದಧಿಘೃತಂಮಧುಸದ್ಯೈಕ್ಷವರಸಂಗಳಿಂ| ಮಧುರತರ ಭಸಿತಮಿಶ್ರಿತಸಿತಜಳಂಗಳಿಂ| ಹಿಮವಿಮಳಮಳಯಜಸುಗಂಧಾನುಲೇಪದಿಂ| ಕಮಳರಿಪುಧವಳಕಳಮಾಕ್ಷತಕಳಾಪದಿಂ| ಪರಿಮಳಮಿಳಿತದಳಿತನಳಿನಕುಮುದಂಗಳಿಂ| ಸರಸಚಂಪಕವಕುಳತಿಳಕಕುಸುಮಂಗಳಿಂ | ದಮನಮರುವಕಬಿಲ್ವಪಲ್ಲವಸ್ತೋಮದಿಂ | ಕಮನಘೃತಸಹಿತಗುಗ್ಗುಳಧೂಪಧೂಮದಿಂ| ಪ್ರಚುರಶುಚಿರುಚಿರರುಚಿಮಣಿದೀಪಮಾಲೆಯಿಂ | ರಚಿತರುಚಿನಿಚಿತಶುಚಿಸಾಜ್ಯಭೋಜ್ಯಾಳಿಯಿಂ | ನವನಾರಿಕೇಳಕದಳೀಫಳಪ್ರಸರದಿಂ | ವಿವಿಧತರಸುರಭಿರಸವೀಟಿಕಾವಿಸರದಿಂ | ಮದನಮದಮರ್ದಿಯಂ ಸದಮಳಕಪರ್ದಿಯಂ | ಕರಿದನುಜಭಂಗನಂ ಕರುಣಾಂತರಂಗನಂ | ಶ್ರುತಿನುತಚರಿತ್ರನಂ ವಿತತಶುಭಗಾತ್ರನಂ | ಗಿರಿಸುತಾಕಾಂತನಂ ಪರಿಹೃತಕೃತಾಂತನಂ | ಸಾರಮಹಿಮಾಕರಂ ವೈರಿಜನಭೀಕರಂ | ಭ್ರಾಜಿತದಿನಾಧಿಪಂ ರಾಜಿತಜನಾಧಿಪಂ | ರಾಜಸುತೆನಲ್ಮೆಯಿಂ ಪೂಜಿಸಿದನೊಲ್ಮೆಯಿಂ ||

ವಚನ|| ಅನಂತರಂ ನುತಿಸಲೆಂದು ಮನಂದಂದು—

ವೃ|| ಜಯಜಯ ದೇವದೇವ ಪುರಶಾಸನ ಶಾಸನಶಾಸನೈಕಚಿ |
ನ್ಮಯ ಮಯನುತ್ಯ ಸಂಪದಸಮಾನ ಸಮಾನ ಸಮಾನತಾಂಘ್ರಿ ಸ ||
ನ್ಮಯ ನಯನತ್ರಯಾಂಚಿತ ವಪುಷ್ಕರ ಪುಷ್ಕರಪುಷ್ಕರಾಂಕ ನಿ |
ರ್ಜಯ ಲಯಕಾಲ ಸಾಯುಧಕರಾಲ ಕರಾಲ ಕರಾಲ ಸದ್ಭುಜಾ || ೫೨

ಪುರಹರ ದಿವ್ಯಭವ್ಯ ಜನಪೂಜಿತ ರಾಜಿತವಾದ ವೇದಭಾ |
ಸುರತುರಗಾಂಗ ಸಂಗತ ವಿಚಿತ್ರಚರಿತ್ರ ಪವಿತ್ರಗಾತ್ರ ನಿ ||

ರ್ಜರಪರಭಂಗ ತುಂಗಮಹಿಮಾಕರ ಭೀಕರ ಮಿತ್ರಪುತ್ರಸಂ |
ಹರ ಸುರನುತ್ಯ ನಿತ್ಯ ಜಯ ಕಿಂಕರ ಶಂಕರ ಚಂದ್ರಶೇಖರಾ || ೫೩

ವೃತ್ತ|| ಅಂಬರ ಶಿರೋರುಹ ದಿಗಂಬರ ರಮಾವರಕಳಂಬ ರವಿಜಾತಹರ ತುಂಬುರಸುಗೀತಾ
ಡಂಬರ ಗಣವ್ರಜ ಕುಟುಂಬ ಜಲಜಾತಸಖಬಿಂಬಗ ಸುಧಾಮಯ ಕದಂಬ ಕರಜಾಲಾ ||
ಲಂಬನ ನಿಜಾಂಗ ಧೃತಕಂಬಲ ಧನಂಜಯವದಂಬಕ ಮಹಾಘನನಿತಂಬ ಗಿರಿಜಾತಾ |
ಚುಂಬನರಸಜ್ಞ ಜಯ ಶಂಬರಹರಾಹಿತ ಶತಾಂಬಕ ಸುತಸ್ತುತ ಚಿದಂಬರ ದಿನೇಶಾ ೫೪||

ಗದ್ಯ|| ಸಕಲಗಣಸಂದೋಹ ನಂದಿತ ನಂದೀಶ್ವರ ಮುಕುಂದಹಸ್ತಾಹತ ವಿತತಮೃದುಮೃದಂಗ ಮಂಗಳರವ ಶೃಂಗಾರರಸತರಂಗಿತ ಸುರಾಂಗನಾ ಸಂಗೀತಸಂಗತ ರಂಗಸ್ಥಳ ಕೃತವಿತತಪಟುನಟನ ವಿಘಟಿತ ಜಟಾಪಟಲ ಗಳಿತಗಂಗಾತರಂಗ ಶೀಕರನಿಕರ ಸಿಮಿಸಿಮಿತ ನಿಟಿಲ ತಟ ಪಟು ನಯನ ಶಿಖಿಶಿಖೋದ್ದಾಮ ಧೂಮರೇಖಾರಚಿತ ವಿಧುಂತುದ ಭ್ರಾಂತಿ ಪರಿಸ್ವಿನ್ನ ಶಶಿಕಲಗಳದಮೃತರಸ ವಿಸರ ಕಣಗಣಭಾಸುರವದನ ವಿಧುಮಂಡಲ ಮಂಡಿತರದನರುಚಿನಿಜಯಸಾಂದ್ರ ಚಂದ್ರಿಕಾ ದರದಳಿತ ಕರ್ಣಪೂರ ಕಲ್ಹಾರ ಕುಸುಮ ಸಮುದಂಚಚ್ಚಂಚರೀಕ ಮೃದುಳರವ ಮಿಳಿತ ಕರ್ಣಧೃತ ಕಂಬಳಾಶ್ವತ ಸರಸಸಂಗೀತಾಕರ್ಣನ ಕೌತುಕಾಂತರಂಗ ಕರಕುರಂಗ ತುಂಗ ಶೃಂಗಾಗ್ರಘರ್ಷಣ ಚಕಿತ ನಿಜಕರ ಕಟಕೋತ್ಫಣಿತ ಫಣಿಫಣಾಮಣಿ ಘೃಣಿಗಣಾರುಣಿತ ನಿಜಭುಜಾಲಂಬಿತ ಗಜದನುಜಾಜಿನಾಂಬರ ವಿಕಟತಾಂಡವಾಡಂಬರ ದೇವ ಜಯಜಯ.

ವಚನ|| ಇಂತು ಸಾಹಿತ್ಯಸರ್ವಜ್ಞನಂ ಸರ್ವಜ್ಞನಂ ನುತಿಯಿಸಿ ಯಂತ್ರವಾಹಕಂಗೆ ಮಂತ್ರಪುಷ್ಪಪುಷ್ಪಮನಿತ್ತು ನಿರ್ವ್ಯಾಜಭಕ್ತಿಯಿಂ ಪ್ರದಕ್ಷಿಣಂಗೆಯ್ದು ಪೊಡಮಟ್ಟು ಸಂದಣಿಪ ಸಾತ್ವಿಕಂಗಳಿಂ ಕಂಗೊಳಿಸಿ ಪುರುಷಪುಂಗವಂ ಪುಂಗವಧ್ವಜಂಗಾತ್ಮಾರ್ಪಣಂ ಗೆಯ್ದು ನಿಸಾತುಂ ಪೊಳ್ತನಿಮಿಷಾಕ್ಷಿಯಿಂ ನಿರೀಕ್ಷಿಸಿ—

ಕಂ|| ಪಳಿಕುಗೊಡೆದೊಳಗೆ ಪೊರಗು |
ಜ್ಜ್ವಳಿ ಪಂತಜ್ಯೋತಿಯಂತಿ ರೊಳಗಂ ಪೊರಗಂ ||
ಬೆಳಪ ಮನೋಮಧ್ಯ ಸಮಾ |
ಜ್ಜ್ವಳ ಲಿಂಗಮನರಸ ನಳ್ಕರಿಂ ಜಾನಿಸಿದಂ || ೫೫

ಅಣಿಯರ ಮಭವನ ಸುಗುಣಮ |
ನೆಣಿಪಂತಿರೆ ನಚ್ಚಿ ಮಚ್ಚಿ ತನ್ಮಹಿಮೆಗಳಂ ||
ಗುಣಿಪಂತಿರೆ ಜನಪಾಲಾ |
ಗ್ರಣಿ ಪಂಚಾಕ್ಷರಮ ನಮಮ ಜಪಿಸಿದನಾಗಳ್ || ೫೬

ವ|| ಇಂತು ಪೂಜಾಜಪಾದಿಗಳಂ ಸಾಂಗಮೆನೆ ರಚಿಸಿ ಮತ್ತಮಿರದೆ—ಚಾಮರವೃತ್ತಂ||

ವೃ|| ಷಡಕ್ಷರಾತ್ಮಕಂ ಷಡೂರ್ಮಿವರ್ಜಿತಂ ಷಡಂಗಗಂ |
ಷಡಕ್ಷರಪ್ರಭಾವ ಸದ್ಗುಣಂ ಷಡಧ್ವವಲ್ಲಭಂ ||
ಷಡಕ್ಷರಾಗಸಾಕ್ಷಿಣಂ ಷಡಬ್ಜ ಕರ್ಣಿಕಾಸನಂ |
ಷಡಕ್ಷರಪ್ರಭುಂ ಶಿವಂ ಭವಂತಮನ್ವಹಂ ಭಜೇ || ೫೭

ನಿತ್ಯಾನಂದಂ ನಿಯತವರದಂ ನಿಷ್ಕಳಂ ನೀಲಕಂಠಂ |
ಸತ್ಯಾರಾಮಂ ಸರಸಹೃದಯಂ ಸದ್ಘನಜ್ಯೋತಿರಂಗಂ ||
ಶ್ರುತ್ಯಾರೂಢಂ ಶುಭಗುಣಯುತಂ ಶುದ್ಧ ಸಿದ್ಧಾಂತಸಾರಂ |
ಭೃತ್ಯಾಧಾರಂ ಭುವನಶರಣಂ ತ್ವಾಂ ಶರಣ್ಯಂ ಪ್ರಪದ್ಯೇ ||೫೮

ಶ್ಲೋ|| ಮನೋಜಯಮಹಾಯೋಗೋ |
ರಾಜಾಂಕೋ ಮದಸುಪ್ರಿಯಃ ||
ಮನೋಜಯ ಮಹಾಯೋಗೋ |
ರಾಜಾಂಕೋ ಮದಸುಪ್ರಿಯಃ || ೫೯

ವಚನ|| ಎಂದು ಪೊಗಳ್ದು ಶರಣ್ಬೊಕ್ಕು ತತ್ಪಾದಾಂಬು ಪ್ರಸಾದಸೇವನಂ ಗೈದು ಸಕಲಮಾಹೇಶ್ವರರಂ ಧನಕನಕ ಸುವಸನ ಮಣಿಭೂಷಣಾದಿಗಳಿಂ ತುಷ್ಟಿವಡಿಸಿ ಪೂಜಿಸಿ ತತ್ಪ್ರಸನ್ನತೆಯಂ ಪಡೆದನಂತರಂ ನೈಪಥ್ಯನಿಕೇತನಕ್ಕೆ ನಡೆತಂದಿಕ್ಕಿದ ಕನಕಪರ್ಯಂಕ ಧವಳತಳ್ಪಮನಳಂಕರಿಸಿ ಸುಗುಣಾಲಂಕಾರನಲಂಕಾರಮಂ ತಳೆಯಲುಜ್ಜುಗಿಸಿರ್ಪಿನ ಮೊರ್ವ್ವನಲಂಕರಣ ಚತುರಂಬಂದು ಮುಖಕಮಳಕ್ಕೆಳೆ ವೆಣ್ಗಳ ದಿಟ್ಟಿ ತಾಗದಂತೆ ರಕ್ಕೆ ಗಿಡುವವೋಲ್ವಜ್ರಮಯಮಕುಟಮನಮರ್ಚ್ಚಿಯುಂ ಮೊಗ ಸಿರಿಯ ನಾಲಿಂಗಿಸಿ ದೆಳೆವೆರೆಯೆನಿಸಿ ಸಿತಭಸಿತ ತಿಳಕಮಂ ಪಣೆಯೊಳಳವಡಿಸಿಯುಂ ಕಟಾಕ್ಷರುಚಿಲತೆಗೆ ಮುಗುಳಮಂಜರಿಯಂ ಪಡೆದಂತೆ ಮೌಕ್ತಿಕ ಚತುಷ್ಕಮಂಡಿತ ಕರ್ಣಾಭರಣಮಂ ಧರಿಸಿಯುಂ ಹೃದಯಮಧ್ಯದೊಳಿರ್ಪ್ಪ ಮದನಹರನಂ ಮಲ್ಲಿಗೆಯ ಮಾಲೆಯಿಂ ದರ್ಚ್ಚಿಪಂತೆ ಪೇರುರದೊಳ್ಮುತ್ತಿನಹಾರಮಂ ಕೆಳೆಗೊಳಿಸಿಯುಂ ಮಂದಾಕಿನಿಯ ಡಿಂಡೀರಪಿಂಡಂಗಳ್ಪಳಸಿದ್ದೈರಾವತ ಕರಿಕರಾಗ್ರದ ಸಿರಿಯಂ ಕೈಗೊಳಿಸಿ ಮುಂಗೈಯೊಳ್ಮುತ್ತಿನ ಕಂಕಣಮನಿಕ್ಕಿಯುಂ ಫುಲ್ಲಶರನ ಪಲ್ಲವಶರಕ್ಕೆ ಕೆಂಗರಿಗಟ್ಟಿದಂತೆ ಕೆಂಬೆಳಗಂಕರೆವ ಕೆಂಬೆರಲುಂಗುರಮ ನಂಗುಲಿಯೊಳ್ತೊಡರ್ಚಿಯುಂ ತನುರುಚಿಯಂ ಪಡೆಯಲೆಳಸಿ ತರಣಿಕಿರಣಮಪ್ಪಿದಂದಮಂ ನಿರವಿಸಿ ಕನಕ ಕವಚಮಂ ತುಡಿಯಿಸಿಯುಂ ನಳಿನನಾಳಮಂ ಬಳಸಿ ತಳ್ತಳಿ ಮಾಲೆಯ ಲೀಲೆಯನೊಳಕೈಸಿ ನೀಲರತ್ನದ ಕಡೆಯಮಂ ಪದಾಗ್ರದೊಳಂದಂಗೊಳಿಸಿಯುಮತಿ ಸಂತಸದಿ ನಿಂತು ಕಂತುವಂ ಸಸದನಂಗೊಳಿಪ ವಸಂತನಂತವಂ ಪಸದನಂಗೊಳಿಸಲೊಡನೆ—

ವೃ|| ತೊಳಗಿದನಿಂದ್ರನಂದನನ ವೈಸಿರಿಯಂ ಜರೆದಾಮೃಗಾಂಕನು |
ಜ್ಜ್ವಳಮ ನಿಳಿಂಕೆಗೆಯ್ದು ನಳಕೂಬರನಗ್ಗದ ಗಂಡಗಾಡಿಯಂ ||
ಪಳಿದು ಮನೋಜ ನೋಜೆಯ ವಿಳಾಸಮನೇಳಿಸಿ ಕಾಯಕಾಂತಿಮಂ |
ಜುಳವದನಾಂಶು ವಿಭ್ರಮ ವಿಳಾಸ ವಿರಾಜಿತ ರಾಜಶೇಖರಂ || ೬೦

ವಚನ|| ಆಗಳ್ಮಿತವಚನ ಕುಮಾರನಂತೆ ತಾನು ಮನೂನಾಳಂಕಾರಾಲಂಕೃತನಾಗಿ—

ವೃ|| ನುಣ್ಗದಪಂ ಪಳಂಚಲೆಯೆ ಕುಂಡಳಮಂಡಳಮಾನನಾಂಬುಜಂ |
ಕಣ್ಗದಿರಂಗೆ ಸೋಲಮನಮುಚ್ಚಿರ್ೆ ವಿಭೂಷಣಕಾಂತಿ ಭಾಸುರಂ ||
ನಾಣ್ಗೆಡಿಪಂತೆ ಪರ್ಬಿರೆ ಕನತ್ಕವಚಾಂಶು ಸಮೇತವೊಪ್ಪಮಂ |
ಕಣ್ಗೆರದೀಯೆ ರತ್ನಮಕುಟದ್ಯುತಿ ಬಂದನಮಾತ್ಯನಂದನಂ || ೬೧

ವಚನ || ಅನಂತರ ಮಮಂಚಿರಸಲ್ಲಿಂ ಸಲ್ಲೀಲೆಯಿಂದೆಳ್ತಂದು ಭದ್ರಮಂಟಪದ ಮುಂದಣಮುತ್ತಿನ ಮೊಗಸಾಲೆಯೊಳ್ಕುಳಿತು ಭಟಪಟಲ ಪರಿವೃತ ನೋಲಗಂ ಗೊಟ್ಟು ಮಿತವಚವದನಮಂ ನಿರೀಕ್ಷಿಸಿ ರಾಜಾಲಯದೊಳೋಜೆಮಿಗೆ ರಾಜಿಪ ರಾಜವಾಜಿಗಳಂ ಬರಿಸೆಂಬುದುಮವಂ ಬೆಸಸಲೊಡನೆ ಕಡುವೇಗದಿಂ ಕೈಗೈದು ಪಲ್ಲಣಿಸಿ ಪಟ್ಟಸಹಣಿಗ ಳಿರ್ಕೆ ಲದೊಳ್ಪಿಡಿದು ತಡೆಯದೆ ತಪ್ಪಾರ್ಗಳ್—

ವೃ|| ಮಿಸುನಿಯಪಕ್ಕರಕ್ಕೆ ಪೊಸಮಾಣಿಕವಲ್ಲಣ ಮಚ್ಚಮುತ್ತಿನ |
ಲೈಸೆವ ಮುಖಪ್ರಸಾಧನ ಮುರಸ್ಸ್ಥಕಿಂಕಿಣಿಕಾಳಿ ಪಕ್ಕದೊಳ್ ||
ಮಿಸುಗುವಜಲ್ಲಿ ಬೆಳ್ಗರಿ ಕೊಡಂಕೆಯ ಚಾಮರ ಮೊಪ್ಪೆ ಬಂದುವಂ |
ದಸದೃಶವಾಜಿಗಳ್ಸುಗುಣ ರಾಜಿಗಳುತ್ತಮಸತ್ವಭಾಜಿಗಳ್ || ೬೨

ಕಂ|| ನೊಸಲೊಳ್ಮಿಸುಗುವ ಮಿಸುನಿಯ |
ಪೊಸಕನ್ನಡಿ ಕಣ್ಗೆವಂದುದಿನಬಿಂಬಂ ಬಂ ||
ದೆಸೆವಂತೆ ನಿಜಸಮನ್ವಯ |
ವಸುಧೇಶ್ವರ ವಿಹರಣೇಕ್ಷಣಾಪೇಕ್ಷತೆಯಿಂ || ೬೩

ವಚನ|| ಅಂತು ಮಲ್ಲದೆಯುಂ—

ಕಂ|| ಜವದಿಂ ಗವಿಪುದನೆನ್ನೊ |
ಲ್ತವೆ ಕಲ್ತಂ ಪವನ ನವನ ನಹಿ ನುಂಗುಗುಮೆಂ ||
ದವಧರಿಸಿ ಕಚ್ಚಿರ್ದಂತಿರೆ |
ನವಾಶ್ವಮಾಸ್ಯದ ಖಲೀನದಿಂ ಕಣ್ಗೊಳಿಕುಂ || ೬೪

ವಚನ|| ಅಂತೆಸೆದು ಬಂದಾಸಗರ್ವ ಗಂಧರ್ವಂಗಳಂ ಸಸಂಭ್ರಮಂ ನಿರೀಕ್ಷಿಸಿ ಸಂತ ಸಂಬಟ್ಟು ವಿಹರಣಪ್ರಸ್ಥಾನಭೇರಿಯಂ ಪೊಯ್ಸೆಂದು ದಂಡನಾಥಂಗೆ ಧರಾಧಿಪ ಬೆಸಸೆಂ

ತನ್ನಿರೂಪದಿಂ ಮೇಘನಾದಂ ಬಂದು ಭೇರಿಯಂ ಧೂರಿಸ್ವನಂ ನೆಗಳೆ ಕನಕಕೋಣವು ನಡಸಿ ಪಿಡಿದು ಪೊಡೆಯಲೊಡನೆ—

ವೃ|| ಬಿಡುಗಣ್ಣಾರ್ಕ್ಕಡುಬೆಚ್ಚ್ಚೆ ಬಳ್ಕೆ ದಿಗಿಭಂಗಳ್ಪೋಗಿಪಂ ಬಾಗಿ ಕುಂ |
ಬಿಡೆ ಭಾಸ್ವದ್ರಥದಶ್ವಮುಳ್ಕಿ ಕದಡೇಳ್ದಂಭೋಧಿಯುಂ ತುಳ್ಕಿ ಕ ||
ಣ್ಗಿಡೆ ವಿದ್ವಿಟ್ತತಿಯುಬ್ಬಿರ್ ಪಬ್ಬಿರ್ ವಿಪುಳ ಬ್ರಹ್ಮಾಂಡಮಂ ತುಂಬಿ ತ |
ಳ್ತಿಡೆಗೊಂಡತ್ತು ಧಳಂಧಳಂ ಧಳನದ ದ್ಗಂಭೀರಭೇರೀರವಂ || ೬೫

ವಚನ|| ಆಗಳಾ ವಿಹರಣ ವಿಳಾಸ ವಿಪುಳಭೇರೀರವಂಗೇಳ್ದು ಮೇಘನಾದಮಂಕೇಳ್ದ ಮಯೂರಂಗಳಂತೆ ಕಡುಸಡಗರಂ ಮಿಕ್ಕು ಪೊಕ್ಕು ಗಂಧಸಿಂಧುರಂಗಳಂ ಬಂಧುರಮೆನೆ ಪಿಂಗದೆ ಸಿಂಗರಿಸಿ ಗಜಾರೋಹಕಪ್ರಸದನಂ ಬಡೆದೇರಿ ಮೀರಿ ನೆರಪಿದಾಗಳ್—

ವೃ|| ಇಳಿದಿಳೆಯಂ ಪದಂಗೊಳಿಸೆ ದಾನಜಳಂ ಜಳದಂಗಳಂತೆ ಮಂ |
ಜುಳಪೃಥುಕೂಟದಂತೆಸೆಯೆ ಕುಂಭತಟಂ ಕುಳಭೂಧರಂಗಳಂ ||
ತಳವಡೆ ದಂತಕಾಂತಿ ಸೊದೆಯಂತಿರೆ ಭದ್ರಮಾಗ್ರಹಂಗಳಂ |
ತಳರ್ದಖಿಳಾವನೀತಳಮನೇಂ ನೆರದಿದ್ದುರ್ವೊ ಮತ್ತಹಸ್ತಿಗಳ್ || ೬೬

ಪೃಥುಕುಂಭಂ ದೀರ್ಘಹಸ್ತಂ ವಿಪುಳಕರರದಂ ಪೀನಬದ್ಧೋದರಂ ಸಂ|
ಗ್ರಥಿತೋದ್ಯಚ್ಚಾಮರಪ್ರಸ್ಫುರಿತಚಳಿತಕರ್ಣಂ ಭ್ರಮದ್ಭೃಂಗಸಂಘ ||
ಪ್ರಥಿತಪ್ರೋದ್ದಾನ ಧಾರಾಘಟಿತಕಟತಟಂ ಮೇಚಕೋಚ್ಚಂಡಚಂಡ |
ತ್ಪೃಥಿವೀಭೃತ್ಸಾಮ್ಯಕಾಯಂ ಘನನಿನದಮದೇಂ ಬಂದುದೋ ದಂತಿಜಾಲಂ

ವಚನ|| ಅಂತುನೆರೆದೇಳ್ತಂದ ದಂತಿಸಂತತಿಯಲ್ಲದೆಯುಂ—

ವೃ|| ಘನಘಂಟಾಖುರಮುನ್ನತಂ ಪೃಥುತರಸ್ಕಂಧಂ ಬೃಹದ್ದೀರ್ಘದೇ |
ಹನಿಯುಕ್ತಂಸಮದಂತಮುಜ್ಜ್ವಳಮುಖಂ ವ್ಯಾಲಂಬಿವಾಲಂ ಲಸ |
ದ್ಧ್ವನಿ ಚೇತೋಗತಿ ಸನ್ಮಣಿ ವ್ರಜಸಮಾಕೀರ್ಣಸ್ಫುರತ್ಸ್ವರ್ಣಮಂ |
ಡನ ಮೇಳ್ತಂದುದ ಭಂಗ ಭಂಗ ವಿಳಸದ್ರಂಗತ್ತುರಂಗ ವ್ರಜಂ || ೬೮

ವಚನ|| ಇಂತೇಳ್ತಂದ ಪಂಚಪಲ್ಲವದ ವಾಜಿಗಳ ರಾಜಿಗಳ ಪಿಂದೆ ಸಂದಣಿಗೊಂಡು—

ವೃ|| ಮಿಳಿದೆ*ರ್ತ್ತಂತೋರೆ ಪೊಂಬಟ್ಟೆಯ ಪಳಯಿಗೆಗಳ್ಮೇಲೆ ಮುಕ್ತಾತಪತ್ರಾ|
ವಳಿ ಚೆಲ್ವಂ ಬೀರೆ ಚಕ್ರೋಚ್ಚಳಿತ ಚಟುಲ ಚೀತ್ಕಾರ ಮಾಶಾಪ್ರದೇಶಾ ||
ವಿಳಮಾಗಲ್ಮೀರೆ ಸೂತವ್ರಜದ ಬಗೆ ತುರಂಗಂಗಳಾದಂತೆ ಮುಂದು |
ಜ್ಜ್ವಳಿಸುತ್ತುಂಪಾರೆ ಕೂಡಿತ್ತಮಮ ಪೃಥುವರೂಥವ್ರಜಂ ಪೆರ್ಮೆಯಿಂದಂ||

ವಚನ|| ಅಂತು ನೆರೆದೇಳ್ತಂದು ನಿಂದವರೂಥ ವಾಜಿಗಳಲ್ಲದೆಯುಂ—

ವೃ॥ ಎಡಗಾಲೊಳೊಂದೊಡರ್ಚ್ಚಳ್ತಿರೆ ಝುಣಝುಣನಿಕ್ವಾಣಮುದ್ಧೂರಿ ರುಕ್ಮಂ ನೇ
ರ್ವಡೆದಿರ್ಪ್ಪಂ ಬೀರ ಗೇಣಂ ತಳೆದು ಮಿಸುಗೆ ಕೆಂದಟ್ಟಿ ಪೊಂಗುಪ್ಪಸಂದೊ॥
ಟ್ಟೊಡನಿಟ್ಟೋರಂತೆ ಮಾಣಿಕ್ಯದ ಕಿವಿದೊಡವಂ ಸೀಸಕಂದಾಳ್ದು ಕಾಲಾ।
ಳ್ಗಡಣಂ ಕೈಕೊಂಡು ನಾನಾಯುಧಮನಮಮ ಬಂದತ್ತದಂ ಪೇಳ್ವೆನೇನಂ॥

ವಚನ॥ ಇಂತನಂತಸಂಭ್ರಮದಿಂ ನೆಲನೆಲ್ಲಮನಳುಕ್ಕೆಗೊಂಡು ಘುಳುಘುಳಿಸಿ ನೆರೆದು ಠಕ್ಕನೆ ತೀವಿದ ಚತುರಂಗಬಲಮಂ ಕಂಡು ಕಡುಸಂತಸಂಮಿಕ್ಕು—

ಕಂ॥ ವಂದಿಗಳುಗ್ಗಡಿಸುತ್ತಿರೆ।
ದುಂದುಭಿ ಮಿಗೆ ಮೊಳಗೆ ಬಹಳಕಹಳಾನಾದಂ॥
ಮುಂದೆಸೆಯೊಳೆಸೆಯೆ ನೃಪನೊಲ।
ವಿಂದಡರ್ದಂ ಪವನಗಮನನಾಮದಹಯಮಂ॥ ೭೧

ವಚನ॥ ಅಂತೇರಿದಾಗಳಮಿತವಚನಕುಮಾರಂ ಹರಿಣಗತಿಯೆಂಬೆರಡನೆಯ ತುರಂಗಮನಾರೋಹಿಸಿ ತನ್ನೊಡನೆ ಸಡಗರಂ ಮಿಕ್ಕು ಸುರತುರಂಗಮನಡರ್ದ ಜಯಂತನೊಡನೆ ಧನದಾಶ್ವಮನಡರ್ದುತಳರ್ವನಳಕೂಬರನಂತೆಸೆದು ಬರೆ ನಿಜಮುಕುಟರುಚಿರರುಚಿ ರವಿಕಿರಣಮಂ ಪಳಂಚಲಿಯೆ ಕೊಡೆದವ್ಯಗ ಮದಕರ್ದಮದ ಕಡುಗಂಪಿಂಗೆ ಪಿಂಗದೆ ಭೃಂಗಾಳಿ ಕವಿತರೆ ಪುಷ್ಕರಪುಂಡರೀಕಮಿಲ್ಲಿಂಬಬಗೆಯನಿಲ್ಲೆನಿಪಂತೆ ಸಲ್ಲಲಿತಮುಕ್ತಾಮಯಾತಪತ್ರಂಗಳ್ಮೇಲೆ ಲೀಲೆಯಿಂ ಬರೆ ಗಗನಲಕ್ಷ್ಮಿಯ ಪಯೋಧರಮಂ ಮುಸುಂಕಿದಚೀನಾಂಬರದ ಸೆರಂಗಿನಂತೆ ತೊಳತೊಳಪ ಪಳಯಿಗೆಯ ಪಟಂಗಳ್ಮಿರುತ್ತಿರೆ ವಿಭವರಮೆಯ ಕಟಾಕ್ಷನೆಂಬಂತೆ ಭಾಮಿನೀಚಾಲಿತ ಜಾರುಚಾಮರಂ ಮುಂಬಿನೊಳಿಂಬುವಡೆಯೆ ಬಳಜಳಧಿಯೊಳ್ನೆಗೆದತರಂಗದಂತೆ ಸೂಸುವಸೀಗುರಿ ದೇಸಿವಡೆಯೆ ಪಿರಿದುಸಂಭ್ರಮದಿಂ ಪುರವೀಧಿಯೊಳ್ಬಪ್ಪಾಗಳ್—

ವೃ॥ ಮಣಿಮಯ ಭೂಷಣಾಂಶು ಮಕುಟದ್ಯುತಿ ಹಾರಮರೀಚಿವಜ್ರಕಂ।
ಕಣರುಚಿ ಮೆಯ್ಯ ನುಣ್ಬೆಳಗು ಕಯ್ಯಸಿತಾಸಿಯ ಕಾಂತಿ ಪೊನ್ನಪೇ॥
ಠಣೆಯಪೊಗರ್ತಳರ್ತಳಿಸೆ ದಿವ್ಯಹಯಂಗಳನೇರಿ ಬಂದುದಂ।
ದೆಣಿಕೆಗಳುಂಬವಾಗಿ ವಿಭವಂ ಮಿಗೆ ರಾಜಕುಮಾರಸಂಕುಳಂ॥ ೭೨

ಕಂ॥ ಆರಾಜಸುತರ ನಡುವೆ ಮ।
ಹಾರಾಜಸುತಂ ಸಿತಾಶ್ವದಗ್ರದೊಳೆಸೆದಂ॥
ಶಾರದನೀರದದಗ್ರದೊ।
ಳಾರಾಜಂ ಭಗಣಪರಿವೃತಂ ರಂಜಿಸವೋಲ್॥ ೭೩

ಗಗನದೊಳೆ ನೋಡಲೆಂದು |
ಜ್ಜುಗಿಸಿದಖಚರಿಯರ ಕಣ್ಗೆ ಬಲಧೂಳಿ ಕರಂ ||
ಪುಗದಂತೆ ಬೀಸಿದವುದೆನೆ |
ಮಿಗೆ ಮಿಳಿರ್ವ*ಪಟಂಗಳಿಂದೆ ಪೆಳಯಿಗೆ ಮೆರೆಗುಂ || ೭೪

ವಚನ|| ಅಂತು ಮಲ್ಲದೆಯುಂ—

ಕಂ|| ಕೆಂಬಳಯಿಗೆ ಲಂಬಿಸೆ ತ |
ತ್ತಂಬುಜಸಖಬಿಂಬಮಕ್ಷಿ ಗಿಂಬಾದುದು ಕೆಂ ||
ಕಂಬಡೆದೆಸೆವಂಬುದದಿಂ |
ಚುಂಬಿತಮಾಯ್ತೆಂಬತೆರದೊಳಂಬರತಳದೊಳ್ || ೭೫

ವೃ|| ವಿತತಾತೋದ್ಯಪ್ರಣಾದಂರಥನಿಕರಲಸಚ್ಚೀತ್ಕೃತಿಧ್ವಾನಮುಜ್ಜೃಲಂ |
ಭಿತ ರಾಜದ್ವಾಜಿ ಹೇಷಾರಸಿತ ವಿಭಘಟಾಬೃಂಹಿತೋದ್ಯದ್ರವಂ ವಿ ||
ಶ್ರುತವಂದಿವ್ರಾತಕೋಲಾಹಲರುತಿ ಸುಭಟಸ್ಫಾರಹುಂಕಾರರಾವಂ |
ಶ್ರಿತಚಂಚತ್ಕೇತುಘಂಟಾರಣಿತಮಖಿಳ ದಿಗ್ದೇಶಮಂ ತೀವಿತಾಗಳ್ || ೭೬

ಬಲಭಾರಕ್ಕೆ ಧರಾತಳಂ ಕುಸಿಯೆ ಸೇನಾಧೂಳಿಯಂ ವಿಕ್ಕುಬಾಂ |
ಬೊಳೆ ಪಂಕಾವಿಳಮಾಗೆ ಭೇರಿಯ ಗಭೀರಧ್ವಾನದಿಂ ದಿಗ್ಗಜಾ ||
ವಳಿ ಕಂಪಂಗೊಳೆ ದೀರ್ಘಕೇತನಪಟಂ ಸಂದೋಹದಿಂದೊಂದಿ ಮಂ |
ಜುಳಸೂರ್ಯಾತಪಮಿಲ್ಲಮಾಗೆ ಪದೆದೇಳ್ಪಂದಂ ನರೇಂದ್ರಾತ್ಮಜಂ || ೭೭

ವಚನ|| ಅಂತೇಳ್ತಪ್ಪಾಗಳ್ಕಲಿಗಳ್ಕರತಳದಿನೊರೆಗಳೆದು ಕುರುಳ್ಚುವ ಕೈದುಗಳ ಬಳ್ಳಿವೆಳಗಿಂ ಗೊಂಚಲ್ಮಿಂಚುಗಳ್ಸಂಚಳಿಸಿದಂತೆಯುಂ ಪಡಿತಳಿಸಿ ನಡೆಗೊಳ್ವ ಸಿಂದೂರಾರುಣಿತಗಂಧಸಿಂಧುರಸಂದೋಹದಿಂ ಸಂಧ್ಯಾರುಣಿತಪಶ್ಚಿಮಾಚಲಂ ಪಲವುರೂಪಾಂತುನಡೆಗೊಳ್ವಂತೆಯುಂ ಪಕ್ಕಜಲ್ಲಿಗಳಿಂ ಪರಿಶೋಭೆವಡೆದು ಪರಿವತುರಂಗಸಂಘದಿಂ ನೊರೆವಾಲಿವೆರಸಿ ತರಂಗೊಂಡು ತರಂಗಸಂಘಾತಂಬಳಜಳಧಿಯೊಳ್ನೆಗೆದಂತೆಯುಂ ಮೇಲೆ ನೆಗೆದೊತ್ತರಿಸಿ ನಡೆವ ಮುತ್ತಿನ ಸತ್ತಿಗೆಗಳಿಂ ಚಂದ್ರಭುವನ ಮವತರಿಸಿದಂತೆಯುಂ ಛೋಂಕನೆ ನೂಂಕಿಬಪ್ಪ ಮಣಿಮಯ ಮಾದತೇಗ್ಗಳಿಂದಿಂದ್ರಚಾಪಂ ಬಿತ್ತನೀರತೇಗ್ಗಳೆಳೆಗಿಳಿದು ತಳರ್ವಂತೆಯುಂ ಕವಿತಪ್ಪಕಠಿನಖೇಟಕಂಗಳಿಂ ಕಮಠಕೋಟಿ ಕಣ್ಗೆ ಗೋಚರಿಸಿದಂತೆಯುಂ ಮಕುಟವರ್ಧನರ ಮಣಿಮಕುಟಂಗಳಿಂ ಮಾರ್ತಾಂಡಮಂಡಳಂಗಳಳುಕ್ಕೆಗೊಂಡುದಿಸಿದಂತೆ ಸಾಲ್ವಿಡಿದು ಸೂಸುವ ಧವಳ ಚಾಮರಂಗಳಿಂದಂಚೆವಿಂಡನೆರ್ಬಿದಂತೆಯುಂ ನೆರೆನೆರೆದು ತರಂಬೆತ್ತು ಭರ್ಮಹರ್ಮ್ಯಂಗಳೊಳ್ಚಾರ್ಮೆಯಿಂ ನೋಳ್ಪಪೊಳಲ್ವೆಂಡಿರ ಕಣ್ಗೆ ಕೌತುಕಾವಹಮಾಗೆ ನರೇಂದ್ರಂ ತುರಂಗಮಂ ಕರತಳಾಸ್ಫಾಲನಂಗೈದು ಮಡಸನ್ನೆಯಂ ಮನದೊಳ್ನೆನೆವಲ್ಲಿ ಮುನ್ನಮೆ—

ವೃ|| ಕಂತುಕದಂತೆ ಪುಷ್ಕರತಳಕ್ಕೊಗೆದೂರ್ಮಿಕೆಯಂತೆ ಪಾಯ್ದು ಮೀ |
ನಂತಿರೆ ಮೀರಿಲಂಘಿಸಿ ಲಸನ್ಮೃಗದಂತಿರೆ ದಾಂಟಿ ಮಿಂಚಿದಂ ||
ಬಂತೆ ನಭೋಂತದೊಳ್ಪೊಳೆದು ಸುಟ್ಟುರೆಯಂತಿರೆ ಸುತ್ತಿಪತ್ತಿ ನಾ |
ಗಾಂತಕನಂತೆ ಪಾರಿದುದು ತುಂಗತುರಂಗಮಿಳಾಧಿನಾಥನಾ || ೭೮

ಕಂ|| ಆವಾಜಿಯ ಹೇಷಾರವ |
ಮಾವಾಸವನಶ್ವಕರ್ಣಮುಂ ಪುಗೆ ಭಯಮುತ್ತಿ ||
ತ್ತೇವೇಳ್ಪೆನಿನ್ನು ಮದನೇ |
ಭಾವಿಸುತುಚ್ಚೈಶ್ಶ್ರವಸ್ತ್ವಮಾಳ್ದದು ತೋರ್ಕುಂ || ೭೯

ವಚನ|| ಅಂತುಮಲ್ಲದೆಯುಂ—

ಕಂ|| ತುರಗಖುರಸಮುತ್ಥಿತ |
ಧರಾರಜಂ ನೆಗೆದು ತೀವೆ ನಿಜಲೋಕದೊಳಾ ||
ಸರಸಿಜಸಂಭವನದರೊ |
ಳ್ಪೊರೆದಂದಿಂದಲ್ತೆ ತಾಂ ರಜೋನ್ವಿತನಾದಂ || ೮೦

ನಗೆರಿಪುಗೆ ಚಿಂತೆ ಸಂತಸ |
ಮೊಗೆದುದು ರವಿ ರಾಗವಳಿದ ನಸುರಾರಿಯ ನಿ ||
ದ್ರೆಗೆ ಮುಳಿದಳ್ರಮೆ ಕವಿ ಮಿಗೆ |
ನಗುತಿರ್ದಂ ಚಿಂತೆಗೆಯ್ದನಮರಾಚಾರ್ಯಂ || ೮೧

ವಚನ|| ಆಗಳ್—

ವೃ|| ಪರಿಯಿಪ ನೆಟ್ಟನಟ್ಟುವಿದಿರೇರಿಪ ಪಾರಿಪ ಕಿಳ್ತುದಾಂಟಿಪಿ |
ರ್ಬರಿಯೊಳೆ ಸುತ್ತಿಪಾಯತಿಕೆಯಿಂ ಮಿಗೆ ನರ್ತಿಪ ದಿಂಡುವಾಯುಲು ||
ಪ್ಪರಿಪ ಬೆಡಂಗಿನಿಂ ನಡಯಿಪಂಗ ಮಲುಂಗಡೆ ಪಂಚಧಾರೆಯೊ |
ಳ್ಪರಿಣತಿ ದೋರ್ಪ ವಾಹಳಿತನಂ ಬಗೆಗೊಂಡುದು ಮಂತ್ರಿಪುತ್ರನಾ || ೮೨

ವಚನ|| ಇಂತತುಳವಿಳಾಸಂಬಡೆದಶ್ವಾರೋಹಣಪರಿಣತಿಯಿಂ ಪರಿಶೋಭೆವಡೆದಾಮಿತ್ರ ವಚನಂಬೆರಸು ರಾಜಶೇಖರರಾಜೇಂದ್ರಂ ರಾಜವೀಥಿಯಂ ದಾಂಟಿಪುರಬಹಿರ್ದೇಶದ ವೈಹಾಳಿಯಬಯಲ್ಗೆ ಸಸಂಭ್ರಮಂಬರೆ ತದಾದೇಶಮಂ ಪಡೆದು—

ವೃ|| ಬಲಮೆರಡಾಗಿ ಪೆರ್ಮೆವಡೆದೊಡ್ಡಿ ವಿಳಾಸದೆ ನಿಂದು ಬೊಬ್ಬೆಗೊ |
ಟ್ಟಲಿದು ವಿನೋದಯುದ್ಧಮನಮರ್ಚಲೊಡರ್ಚೆ ಹಯಂಗಳೊಳ್ಹಯಾ ||
ವಳಿ ಪೊಸತೇರ್ಗಳೊಳ್ಮಸುಪತೇರ್ಗಳಿಭಂಗಳೊಳೊಲ್ದಿಭಂಗಳು |
ಜ್ಜ್ವಲಭಟರಾಜಿಯೊಳ್ಸುಭಟರಾಜಿ ಪಳಂಚಿದುದೇನನೆಂದಪೆಂ || ೮೩

ವಚನ|| ಅಂತುಭಯವಾರ್ಧಿಗಳದಿರ್ಚ್ಚಿ ಪಳಂಚುವಂತೆ ಪಳಂಚಿ ಮಿಸುನಿವೆಸದಪುಟ್ಟಿಗೋಲ್ಗಳಂ ಪಿಡಿದು ಜಡಿದೊಟ್ಟಜೆಯಿಂದಿಟ್ಟಣಿಸಿನಿಂದು—

ವೃ|| ತಿವಿವ ಮರಳ್ದುವಬ್ಬರಿಪ ಗರ್ಜಿಪ ಬೊಬ್ಬಿರಿವಾರ್ವ ಸಾರ್ವ ಮೇ |
ಣ್ಕಿವಿವ ಕಡಂಗುವಿಟ್ಟಣಿಪ ಸುತ್ತುವ ಪೆತ್ತುವ ನಿಲ್ವ ಗೆಲ್ವ ಪೊ ||
ಣ್ಮುವ ಪುಟವೇಳ್ವ ಪಾಯ್ವ ಮಿಗೆಪೊಯ್ವ ತೊಡಂಕುವ ತೋಟಿಗೈವ ಕೂಂ |
ಕುವ ನೆರೆನೂಂಕುವೇಳ್ಗೆಯುಬಲಂ ಬಗೆಗೊಂಡುದು ತತ್ಕುಮಾರರಾ || ೮೪

ವಚನ|| ಮತ್ತಮಾಸೇನಾಚಕ್ರದೊಳಳುರ್ಕೆವೆತ್ತು—

ಕಂ|| ಸುಳಿಸುಳಿದಶ್ವಮನೇರುತೆ |
ಪೊಳಯಿಸಿ ಮಿಗೆ ದಂಡೆಗುಡುತಿದಿರ್ಚ್ಚುತೆ ಪೆರಕಾ ||
ಲ್ಗೊಳಿಸಿ ಪೆಡಂಮೆಟ್ಟುತ್ತ |
ವ್ವಳಿಸುತ್ತೆ ಪಳಂಚಿದತ್ತುರಂಗಿಗಳದರೊಳ್ || ೮೫

ವಚನ|| ಇಂತು ಪಳಂಚುವ ತುರಂಗಿಗಳಂ ಕಂಡು ಸಡಗರಂ ಮಿಕ್ಕು—

ಕಂ|| ಅಣೆದಲೆದು ನೂಂಕಿ ಗರ್ಜಿಸು |
ತಣೆಯುರಮೆಣೆಗೊಂಡಿಭಂಗಳಂ ಭರಿಕೈಗ ||
ಳ್ಪೆಣೆದಿರೆ ಕಾದಿಸಿ ತಾವುಂ ||
ಪೊಣರ್ದ*ರಿಭಾರೋಹಕರ್ವಿಳಾಸದಿನಾಗಳ್ || ೮೬

ವಚನ|| ಇಂತು ಪೊಣರ್ವಿಭಾರೋಹಕರ ಕಡುಪಂ ನೋಡಿ ನೀಡುಂಕಡಂಗಿ—

ಕಂ|| ಇದಿರೊಳ್ಪರಿಸಿ ರಥಮಂ |
ತುದಿಯೊಳ್ಮಿಳಿದಾಡೆ ಕೇತನಂ ಪೂಸರದಿಂ ||
ಪದೆದೆಚ್ಚಾಡಿದರದಟಿಂ |
ದದರ ಪರಾಗಂ ನಿಜಾಂಗದೊಳ್ಪೊರೆವಿನೆಗಂ || ೮೭

ವಚನ|| ಆ ರಥಿಕಾಟೋಪಮನುಭಯ ಪದಾತಿಕಂಡು ಕೈಗಣ್ಮಿನಿಂದು—

ವೃ|| ಅಲರ್ಗಳ ಚೆಂಡು ಕುಂಕುಮದ ನೀರ್ಗಳ ಕುಪ್ಪಿಗೆ ಚಂದನಚ್ಛಟಾ |
ಕಲಿತಸರೋಜಕೋರಕ ಮುದಾತ್ತಮೃಗೋದ್ಭವ ಚೂರ್ಣಪೂರ್ಣಮು ||
ಜ್ಜ್ವಲಿತ ರಸಾಲಪಲ್ಲವದ ಪೊಟ್ಟಳಮೆಂಬಿವರಿಂದಿದಿರ್ಚ್ಚಿತ |
ದ್ಬಲಮೆರಡಿಟ್ಟು ತಳ್ತಡಸಿ ಬೊಬ್ಬಿರಿದಾಡಿದುದೇನನೆಂದಪೆಂ || ೮೮

ವಚನ|| ಇಂತು ವಿನೋದಯುದ್ಧಮಂ ಚತುರತೆಯಿಂ ರಚಿಸಿ ಚಾತುರಂಗಂ ಪುರಾಭಿಮುಖಮಾಗಿ ತಿರುಗಿ ಸರಭಸಂ ಬರೆವರೆ—

ವೃ|| ಕರಿದಾನಾಸಾರದಿಂ ತಳ್ತಿಳೆ ಬಳಭರದಿಂ ತಾಂ ಬೆಮರ್ತಂತೆ ತೋರು|
ತ್ತಿರೆ ವಾಜಿವ್ರಾತ ವಕ್ತ್ರಚ್ಯುತಸಿತವಿಸರತ್ಫೇನಪಿಂಡೌಘಮೊಕ್ಕಂ ||
ತಿರೆ ಭೇರಿಧ್ವಾನದಿಂದಂ ಭಗಣಮಿನನಡಂಗಿರ್ದ್ದವೊಲ್ತೋರೆ ಕೇತೂ |
ತ್ಕರಭೀತಂ ಧೂಳಿಜಾಳಂ ಕವಿಯೆ ಜವದಿನೈತಂದುದಾರಾಜಸೈನ್ಯಂ || ೮೯

ಖರಖುರಘಾತಜಾತಧರಣೀತಳರೇಣುವಜಾಂಡಪಂಕಜಾ |
ತರವಿಜದೆಂಬಿನಂ ನೆಗೆದು ತೀವಿರೆ ವೇಗಕೆ ಸೋಲ್ತುಗೊಂಟಿಸೋ ||
ಳ್ಮರುತನಡಂಗೆ ವೈಗರೆಯೆ ಪುಲ್ಲೆ ವನಾಂತದೊಳಿಂದ್ರನಶ್ವಮು |
ಳ್ಕಿರೆ ಸುರಲೋಕದೊಳ್ಕಿಳಿರ್ದ*ದೇಂ ಪರಿದತ್ತೊ ತುರಂಗಮದ್ವಯಂ || ೯೦

ವಚನ|| ಮತ್ತಂ—

ವೃ|| ಸುಳಿಸುಳಿದೊತ್ತಿ ಪತ್ತಿ ತವೆ ಸುತ್ತಿ ಕಡಂಗಿ ಬೆಡಂಗುವೆತ್ತು ಸಂ |
ಚಳಿಸಿ ನಭಕ್ಕೆ ಮೀರಿ ಮಿಗೆ ಪಾರಿ ಚಮತ್ಕೃತಿವೀರಿ ತೋರಿ ತ ||
ನ್ನಳವನಿಳಾತಕ್ಕೆ ಕಿಳಿರ್ದ*ಪ್ಪರಿಸುತ್ತುರೆ ಮೀಂಟಿ ದಾಂಟಿ ಕಂ |
ಟಳಿಸಿ ಪೊದಳ್ದು ಪಾಯ್ದು ಪರಿಯಿಟ್ಟುದು ವಾಯುರಯಂ ಹಯದ್ವಯಂ ||

ವಚನ|| ಇಂತನಂತಸಂಭ್ರಮಂ ಮಿಗೆ ಜವಗಜಮನತಿಕ್ರಮಿಸಿ ಪರಿವಾರರಾಜವಾಜಿಗಳನೋಜೆ ಮಿಗೆ ರಾಜವೀಧಿಯೊಳಾಕುವಾರರಿರ್ವ್ವರ್ವಿವಿಧತರಗತಿಚತುರತೆಯಿನೇರುತ್ತುಂಬಪ್ಪಾಗಳ್

ವೃ|| ಕನಕಸ್ಫಾಟಿಕರತ್ನಹರ್ಮ್ಯಚಯಮಂ ಬಂದೇರಿ ನಿಂದಲ್ಲಿ ಕಾ |
ಮಿನಿಯರ್ಸರ್ಲ್ವಿಡಿದೀಕ್ಷಿಸುತ್ತಿರೆ ತದಾಸ್ಯಶ್ರೇಣಿಯುಂ ದೀರ್ಘಲೋ ||
ಚನದಿವ್ಯದ್ಯುತಿಯುಂ ಪಳಂಚಲೆದುದುದ್ಯದ್ದರ್ಪಣೇಂದೀವರಾ |
ಳಿನಿಯುಕ್ತೋನ್ನತಚಾರುತೋರಣಮನಾವೀಧೀಪುರೋಭಾಗದೊಳ್ ||೯೧

ವಚನ|| ಆವಿಳಾಸಿನಿಯರಲ್ಲದೆಯುಮಲ್ಲಿ ಕೆಲಂಬರಾನರೇಂದ್ರನನಭೀಕ್ಷಿಸಲೆಂದು—

ವೃ|| ತೊಡವೆಳಗಿಂದ್ರಚಾಪಲತೆಸೋರ್ಮ್ಮುಡಿ ಕಾರ್ಮ್ಮುಗಿಲುರ್ವ್ವಪಾಯ್ವಕ
ಣ್ಣೆಡೆ ಕುಡಿಮಿಂಚು ಮಂಜುಮಣಿನೂಪುರಸಿಂಜಿತಮುಬ್ಬರಾವಮೊ ||
ಗ್ಗೊರ್ಡೆಯುದೆ ಮೇಲೆ ಸೂಸುವಸುಲಾಜೆಗಳೊಳ್ಸರಿಯಾಗೆ ಬಂದು ಕಾ |
ರೊಡತಿಯರಿಲ್ಲಿ ನಿಂದರೆನೆ ಸೌಧನಗಾಗ್ರದೆ ಪೆಣ್ಗಳೊಪ್ಪಿದರ್ || ೯೩

ವಚನ|| ಅಂತು ಮಲ್ಲದೆಯುಂ—

ವೃ|| ಎಳಲತೆ ತೋಳ್ಗಳಿಂದುಟಿಯೆ ಚೆಂದಳಿರೊಳ್ನುಡಿ ಬಾಳೆ ನಾಭಿ ತಂ|
ಗೊಳಮಲಘುಸ್ತನಂ ಕೃತಕಶೈಲಮಪಾಂಗಮರೀಚಿ ಪುಷ್ಪಸಂ ||
ಕುಳಮಳಿಕಂ ಮದಾಳಿಕಳಭಂ ಮೊಗಮಂಬುಜಮಾಗೆ ಬಂದಕೋ |
ಮಳೆಯರಿಳೇಶ ಚಂದ್ರಮನನಾವನಲಕ್ಷ್ಮಿಯರಂತೆ ನೋಡಿದರ್ || ೯೪

ಕ್ಷಿತಿಪತಿ ರಾಜಶೇಖರನಿವಂ ನವಮೌಕ್ತಿಕಭೂಷಣಾಂಶು ಭೂ |
ಷಿತತನು ಮುಂದೆ ಮುಂಬರಿವ ತುಂಗತುರಂಗಮನೇರಿ ಬರ್ಪ್ಪವಂ ||
ಮಿತವಚನಂ ಮೃಗಾಕ್ಷಿ ನಡೆನೋಡಿವನಲ್ತೆ ನವೀನಭೂಷಣ |
ಪ್ರತತಿಯನಾಂತು ನರ್ತಿಪಸಿತಾಶ್ವಮನೇರುತೆ ಪಿಂದೆ ಬರ್ಪ್ಪವಂ || ೯೫

ವಚನ|| ಎಂದಲ್ಲಿ ವಿದಗ್ಧೆಯುಮುರ್ಗ್ಧೆಯುಗ್ಗೆತೋರಿ ನುಡಿಯುತ್ತಿರೆ ಮಂತ್ರಲಕ್ಷ್ಮಂ ಮಿತವಚನಸಮೇತಂ ವಿವಿಧವಿಳಾಸಮಂ ತಳೆದು ಮುಂದಣ್ಗೆ ಬರೆವರೆಹರಪ್ರೇರಣೆಯಿಂ ತಿರುಕೊಳ ವಿನಾಚಿಯೆಂಬ ಶಿವಭಕ್ತೆಯಣುಗಂ ಶಂಕರನೆಂಬ ಪೆಸರ ಪಂಚವರ್ಷದ ಕುಮಾರಂ ನಿಜಜನನಿ ನೀರ್ಗೆ ಪೋದಪೋಳ್ತಿನೊಳಾ ಕಳಕಳಮಂ ಕೇಳ್ದು ನೋಡಬೆಳಸಿ ಸಡಗರಂ ಮಿಗೆ ನಡುವೀಧಿಗೆ ತಡೆಯದೆ ಬಂದು ಸಂದಣಿಪ ಮಂದಿಯೊಳಪೊಕ್ಕು ನಿಂದು ನಿರೀಕ್ಷಿಪಾಗಳ್ಕವಿವ ಪಡೆಯ ತೆಡೆಗಾಲ್ಪೊಡೆಯೆ ಪೊಡವಿಯೊಳ್ಕೆಡೆದು ಕಣ್ಗೆಟ್ಟಳಲ್ದು ತಾಯಂ ಕರೆಕರೆದು ಬಾಯಂ ಬಿಟ್ಟಳಲ್ದು ಕಯ್ಯೂರಿ ಮೆಲ್ಲನೇಳ್ವನಿತರಲ್ಲಿ—

ವೃ|| ಶಿವಶಿವ ಪೇಳ್ವೆನೇನ ನವನೀಪತಿ ತನ್ನ ತುರಂಗಮಂ ಮಹಾ |
ಜವದೊಳೆ ಕಂಡು ದಾಂಟಿಸಿ ಕೆಲಂದೆಗೆಯೆಂಬನಿತಕ್ಕೆ ಮುಂಚಿ ಮು ||
ನ್ನವೆ ಸಚಿವಾಶ್ವಮೈದೆ ಕೊಳಗಿಂ ತಲೆ ಖಂಡಿಸಿ ಪಾರೆ ಮೆಟ್ಟಿತಂ |
ದವಿರಳ ರಕ್ತಧಾರೆ ಪೊರಸೂಸಿರೆ ಬಾಲನ ಕಂಠನಾಳಮಂ || ೯೬

ವಚನ|| ಅಂತು ಪರಿದಾರಕ್ತರಸದೊಳಳ್ದು ಬಿಳ್ದ ಶಿರಃಪುಂಡರೀಕಮಂ ಕಂಡು ಸಚಿವಸುತನುಂ ತಾನುಂ ಮನಂನೊಂದು ಮತಿಯುಡುಗಿ ಮರುಗಿ ಶಿವಶಿವಾ ಶಿವಭಕ್ತ ಶಿಶುವಧಮಾದುದಿದಂ ಶಿವಂ ಬಲ್ಲನೆಂದುಮ್ಮಳಿಸು ತಿನಿಸಾನುಂ ಬೇಗಮಿರ್ದ್ದ—

ಕಂ|| ಇಂನಿದಕೆ ಚಿಂತೆಗೆಯ್ದೊಡೆ |
ಪಂನತಿಕೆಗೆ ಬನ್ನವಲ್ತೆ ಘಡಘಡ ಫಣಿಭೂ ||
ಷಂ ನೆಟ್ಟನೆ ಮಚ್ಚರೆ ತೋ ||
ರ್ಪ್ಪಂ ನಿಜಸಾಹಸಮನಿದಕೆ ತಕ್ಕುಜ್ಜುಗಮಂ || ೯೭

ವಚನ|| ಎಂದು ನಿಶ್ಚೈಸಿ ಮನಸ್ತಾಪಮಂ ಧೃತಿಸಾಂದ್ರಚಂದ್ರಿಕೆಯಿಂ ನಂದೆ ಪೊಯ್ದು ನಡೆತಂದು ರಾಜಾಲಯದ್ವಾರೋಪಾಂತದೊಳ್ವಾಜಿಗಳ ನಿಳಿದು ದಂಡನಾಥಮಂಡಳಿಕಾದಿಯಂ ಯಥಾಕ್ರಮಂ ಬೀಳ್ಕೊಟ್ಟು ನಿಜಗೃಹಂಗಳಂ ಪೊಕ್ಕಿರ್ದ್ದರನ್ನೆವರ ಮಿತ್ತಲ್ನೆರೆದ ಪುರಜನ ಮಾರುಂಡಮಂ ಮುಂಡಮಂ ಕಂಡು—

ಕಂ|| ಅಕಟಕಟ ದಾರಣುಗ ನೀ |
ಸುಕುಮಾರಂ ಮಡಿದನಶ್ವಖುರಹತಿಯಿಂ ಬಾ ||

ಲಕವಧಮಿದ ನರಿದೊಡೆ ತಾ |
ನಕುಟಿಲಮತಿ ಚೋಳನೃಪತಿಯೇಂ ಸೈರಿಪನೇ || ೯೮

ಶರಣಜನವನಜವನ ದಿನ |
ಕರ ನಾಸತ್ಯೇಂದ್ರಚೋಳಧರಣೀಶ್ವರ ನೀ ||
ಶ್ವರಭಕ್ತ ವಧ ವನಿದನಾ |
ದ್ವೊರ್ರಕೊಳಿಸಿದರೆಂದು ಮುಳಿಯದಿರ್ಪನೆ ಬಳಿಯಂ ||೯೯

ಮನುಚೋಳಂ ಮನ್ನಿಸಿದನೆ |
ತನಯನನಪರಾಧಯುಕ್ತನಂ ಪಿತನೆಂದೇಂ ||
ನೆನೆದನೆ ಚಂಡೇಶಂ ತ |
ನ್ನನೆ ಬಗೆದನೆ ಬಗೆಯೊಳಾಪಗಲ್ಕೋಳನೃಪಂ || ೧೦೦

ಅದರಿಂದೇನಪ್ಪುದೊ ಬ |
ಪ್ಪುದನೀಶಂ ಬಲ್ಲನೆಂದು ಮರುಗುತ್ತಿರೆ ತ ||
ಳ್ವದೆ ಘಟಮುನಿಳಿಪಿ ಕಾಣದೆ |
ಸುದತಿ ನಿಜಾತ್ಮಜನ ನರಸಿ ತೊಳಲುತ್ತಿರ್ದಳ್ || ೧೦೧

ವಚನ|| ಅಂತುತೊಳಲ್ದು ಕಾಣದೆ ತಲ್ಲಣಿಸಿ ಕಳವಳಗಾಗಿ—

ವೃ|| ಎಲೆಸುಕುಮಾರ ಶಂಕರಕುಮಾರಕ ಬಾರ ಮದೀಯಲೋಚನೋ |
ತ್ಪಲರಜನೀಶ ನಿನ್ನಮೊಗದಾವರೆಯಂ ಎನಗೆ ತೋರದೆತ್ತ ಪೋ ||
ದೆ ಲಲಿತಮಂದಹಾಸ ಲಲಿತಸ್ಖಲದಕ್ಷರವಾಣಿ ಗೆಜ್ಜೆ ಮೆ |
ಲ್ಲುಲಿಗುಡೆ ಬಂದು ಬಳ್ನಿರಿಯನಪ್ಪದೆ ತಳ್ವಿದೆಯೈ ತನೂಭವಾ || ೧೦೨

ವಚನ|| ಎಂದು ನಿಡುಸರದಿಂ ಕೂಗಿ ಕರೆಕರೆದು ಕಾಣದೆ ಕರಕರಿಸಿ ರಾಜಪುತ್ರನ ವಿಹರ ಣಮಂ ನೋಡಲೆಳಸಿ ರಾಜವೀಥಿಗೆ ಬಂದನೆಂದು ಬಗೆದು ಬಗೆಗೆಟ್ಟು ಬಾಯ್ಬಿಟ್ಟು ಜನನಿ ಜವ ದಿನೇಳ್ತಂದಲ್ಲಿಯುಮರಸಿ ಕಾಣದೆ—

ಕಂ|| ಕರಿಗಳ ಕಾಲ್ಗೊಳಗಾದನೊ |
ವರೂಥಚಕ್ರಕ್ಕೆ ಸಿಲ್ಕಿದನೊ ಹಯಚಂಚ ||
ತ್ಖುರಹತಿಯಿಂದಳಿದನೊ ಶಂ |
ಕರನಕಟಕಟೆಂದು ಬಗೆದು ಬಾಯ್ಬಿಡುತಿರ್ದಳ್ || ೧೦೩

ತನುಭವನೆಲ್ಲಿದನೆಲ್ಲಿದ |
ನಿನಿವಾತಿನ ನೀರಸೆಲ್ಲಿದಂ ಮೆಲ್ಲಗೆಯಿಂ ||

ಪಿನ ಸೊಬಗನೆಲ್ಲಿದಂ ಚೆ |
ಲ್ವಿನ ಕಣಿಯೆಲ್ಲಿದನೊ ಮನ್ಮನೋಂಬುಜಹಂಸಂ || ೧೦೪

ವಚನ|| ಎಂದು ಪಲುಂಬಿ ಪಲವಾಡಿಗೆ ಬಪ್ಪಾಗಳಾಪುರಜನಂ ಕಂಡೀವಡಿದ ಶಿಶುವಿವಳದೆಂದು ತಿಳಿದಳವಳಿದು ಪಳಯಿಸುವಳಂ ಕರೆದು ನೆರೆದಜನದೊಳ ಪುಗಿಸಿ ನರೇಂದ್ರತುರಗಖುರ ಹತಿಯಿಂ ಮಡಿದನೆಂದು ತೊಟ್ಟನೆ ತೋರಲೊಡನಾರುಂಡಮಂ ಮುಂಡಮಂ ಕಂಡಡವಿಗಿಚ್ಚುರ್ಗೊಂಡಪುಲ್ಲೆಯಂತೆ ಹರಣಂ ಹಂಪ್ಯೈಸಿ ಪರ್ದೆರಗಿದುರಗಿಯಂತೆ ಮಿಡುಮಿಡನೆ ಮಿಡುಕಿ ಕಡಿವಡದೆಳವಳ್ಳಿಯಂತೆ ಕೊರಗಿ ಪೊಸೆದಿಟ್ಟ ಪೂಮಾಲೆಯಂತೆ ಕಂದಿ ಕುಂದಿ ಮಂದೈಸಿದಳಲಿಂ ಮುಂದುಗೆಟ್ಟು ಕೆಟ್ಟೆಂಕೆಟ್ಟನೆಂದು ಬಸಿರಂಪೊಸೆದು ದೆಸೆದೆಸೆಗೆ ಬಾಯಂಬಿಟ್ಟುವೊರೆಯಿಟ್ಟು ಮರುಗಿ—

ವೃ|| ಎಳೆಗಿಳಿಯಂಕೊರಲ್ಮುರಿದುವೋದಿದರಾಮರ್ಗರಿಯಂಚೆಯಂ ಭಯಂ
ಗೊಳಿಸುತೆರಂಕೆಯಂಪರಿದು ಪೊಯ್ದವರಾವ್ಯರ್ಗಶಾಬಮಂ ಕರಂ ||
ಮುಳಿದು ಶಿರೋಧಿಯಂ ಕೆಡೆಯಲೆಚ್ಚವರಾಬ್ಬರ್ಸನಾಳಕಾಂಡಕೋ |
ಮಳತರಕಂಠಮಂ ಕಡಿದುರುಳ್ಚಿದರಾಸ್ಸುರ್ಕುಮಾರಶೇಖರಾ || ೧೦೫

ವಚನ|| ಎಂದಾಳಬಂಧಮನೆತ್ತಿತೊಡೆಯೊಳಿಟ್ಟಾರುಂಡಮಂ ಕರಯುಗದೊಳ್ಪಿಡಿದಶ್ರುಮಿಶ್ರಕಟಾಕ್ಷದಿನೀಕ್ಷಿಸಿ ಮೊಗದೊಳ್ಮುಸುಂಕಿದಧೂಳಿಯಂ ಮೇಲುದಿನೊಳೊಯ್ಯನೊರಸಿ ಕೆಲಸರಿದವಾಂಗಾಯ್ಗಳ ನೋಸರಿಸಿದರಳೆಲೆಯುಂ ಸೈತುಮಾಡಿ ಗಲ್ಲಮಂ ಪಿಡಿದು ಮೆಲ್ಲನಲುಗಿಮುದ್ದಿಸಿ ಮುಂಡಾಡಿ ನೋಡಿ ಮೇರೆದಪ್ಪಿದಳಲಂ ಸೈರಿಸಲಾರದೆ—

ಕಂ|| ಹಾಮಗನೆ ಹಾಮನೋಜ್ಞನೆ |
ಹಾಮುದ್ದುಗ ಹಾಮದೇಭಗತಿ ಮಂಜುಳ ಹಾ ||
ಹಾಮಧುರವಾಣಿ ಹಾಮ |
ತ್ತೇಮಾಸ್ಪದ ಹಾಮದೀಶವಂಶಲಲಾಮಾ || ೧೦೬

ಎಲ್ಲಿಯಹಯಮೆಲ್ಲಿಯನೃಪ
ನೆಲ್ಲಿಯಮೈಹಾಳಿ ಯೆಲ್ಲಿಯತಿಕಳಕಳಮಿಂ ||
ತೆಲ್ಲಿಯದರ್ಶನಗಮನಮಿ |
ದೆಲ್ಲಿಯಮೃತಿ ನಿನಗೆ ಬಂದುದೆಲೆ ಸುಕುಮಾರಾ || ೧೦೭

ಮುನ್ನರುಮರಳಿದಳಲಸೆಲೆ |
ನಿನ್ನಂ ನೆರೆನೋಡಿ ಮಗನೆ ಮರೆದಿರ್ದೆಂ ಪೇಳ್ ||
ಇನ್ನಾರಿಂದಂ ಮರೆದಪೆ |
ನೆನ್ನೊಳುಸಿಸ್ಸುರ್ವನ್ಮನಿರದಿರೆಲೆ ತನುಜಾತಾ || ೧೦೮

ಕಂ|| ಗಳಗಳನೆ ಬಳಿದು ಧನಮಂ |
ಗಳಿಸಿ ಚರಾರ್ಚೆಯನೆಸಗಿ ಹರಕೃಪೆವಡೆದು ||
ಜ್ಜ್ವಳಸುಖಮನೀವನೆಂದಿರೆ |
ತಿಳಿವಿಲ್ಲದೆ ಮಗನೆ ತುರಗಹತಿಯಿಂ ಮಡಿದೈ || ೧೦೯

ಕೊರಲಂ ಮೆಟ್ಟುವಪದದೊ |
ಳ್ತುರಗಂ ಕಂಗೆಟ್ಟು ಜನನಿಯೆಂದೆನ್ನಂ ನೀಂ ||
ಕರೆದೆಯೊ ಮರೆದೆಯೊ ದೋಷಾ |
ಕರೆಯೆಂದೇಂ ತೊರೆದೆಯೋ ತನೂಜನೆ ಪೇಳೈ || ೧೧೦

ವಚನ|| ಇಂತಳಿವಳಿದವಳ್ಪಲವಾಡಿ ಪಳಯಿಸುತ್ತಿರ್ಪಾಗಳ್—

ಕಂ|| ಇವಳವನಿಪಂಗೆ ಮೊರಯಿ |
ಕ್ಕುವಳಾನಿರೆ ಕುವರರೆಸಗಿದಪರಾಧಮ ನೆಂ ||
ದವಧರಿಸಿ ಪೋದನೆಂದೆನೆ |
ರವಿ ಪಶ್ಚಿಮಗಿರಿಯ ಶೃಂಗಮಂ ಮರೆಗೊಂಡಂ || ೧೧೧

ವಚನ|| ಆಗಳ್—

ವೃ|| ವರುಣಾಶಾವನಚೂತವಲ್ಲಿ ಗಗನಾಲಂಬಕ್ಕೆ ಪರ್ಬಿರ್ದುದ್ಭಾ |
ಸ್ಕರಚೈತ್ರಂ ಬರೆ ಸಂಜೆಗೆಂಪೆನಿಪ ಭಾಸ್ವತ್ಪಲ್ಲವಂದಾಳ್ದು ಸೈ ||
ತಿರೆ ಪೂರ್ವಾಶೆಯಿನಲ್ಲಿಗೈದುವ ಪಿಕಾನೀಕಂಬೊಲಿಂಬಾಯ್ತು ಸೋ |
ಳ್ತರ ಕಣ್ಗಂಧತಮಂ ತಮಾಲಕತಮುಶ್ರೀಶಾಂಬುದಶ್ಯಾಮಳಂ || ೧೧೨

ವಚನ|| ಅಂತು ತನ್ನಳಲುರಿಯ ಪೆರ್ಚ್ಚೆಗೆ ಕವಿದಂತೆ ಕವಿದಕಡುಗತ್ತಲೆಯೊಳಾತಿರುಕೊಳವಿನಾಚಿ ತನ್ನಣುಗನ ಕಳೇವರಮನೆತ್ತಿ ತಳ್ಕೈಸಿಕೊಂಡಂತಾನುಮಲ್ಲಿಂದೆಳ್ದು ನಿಜಗೃಹಕ್ಕೇಳ್ತಂದು ಮುಂಡಮಂ ರುಂಡಮಂ ಪತ್ತಿಸಿ ನೋಡಿ ಮತ್ತಮಿರದೆ—

ಕಂ|| ಕಡವರಮುಡಂಗಿತೇ ಪೊಸ |
ಕಡಾರಮಿಂದಕಟಮಾಯಮಾದುದೆ ಮೆರೆವಿಂ ||
ಗಡಲಿಂಗಿಪೋದುದೆ ಕಡಿ |
ವಡಿದುದೆ ಕಲ್ಪಾವನೀಜಮಿದು ವಿಧಿವಶದಿಂ || ೧೧೩

ಪಸಿದೆಯೆಲೆಕಂದ ಬತ್ತಿತು |
ಬಸಿರಿದು ಕಳೆಗುಂದಿತಾನನಂ ಕಣ್ಬೊಣರ್ಗಳ್ ||
ಮಸುಳ್ದುವುಣಲ್ಪಡೆಯದೆ ಮಿಗೆ |
ಬಸವಳಿದಿಂತಿರ್ಪುದುಚಿತವೇ ಸುಕುಮಾರಾ || ೧೧೪

ಸರಿವರೆಯದ ಮಕ್ಕಳ್ಗಂ |
ಕರಸೆಲ್ಲಿದನಾಡಲೆಂದು ಬೆಸಗೊಳಲೇನಂ ||
ದಿರದೆ ಮರುಮಾತುಗೊಟ್ಟಪೆ |
ನರಸನ ಹಯದಿಂದೆ ಮಡಿದನೆಂಬೆನೆ ಮಗನೇ || ೧೧೫

ನೀನಾಡಿದೆಡೆಗಳಂ ಸುತ |
ನೀನೊರಗಿದಪಾಸುವಂ ತನೂಭವ ಪದಪಿಂ ||
ನೀನುಂಡತಾಣಮುಮನಿ |
ನ್ನಾನೆಂತೀಕ್ಷಿಸುವೆನೆಂತು ಸೈರಪೆನಕಟಾ || ೧೧೬

ವೃ|| ಗಾಡಿಯೊಳಾಡಿ ಮಕ್ಕಳೊಡನಂಗಣಕ್ಕೈದಿರೆ ತಳ್ತಧೂಳಿಯಂ |
ನಾಡೆ ಸೆರಂಗಿನಿಂದೊರಸಿ ಮೈದೊಳೆದೊಳ್ಪಣೆಸಿಕ್ಕಿ ಮುದ್ದುಗೈ ||
ದೂಡಿ ವಿಳಾಸಮಂ ಮೆರೆದು ಸಿಂಗರಿಸುತ್ತಮದರ್ಪ್ಪಿ ಬೇಡಿತಂ |
ನೀಡಿ ನಿರೀಕ್ಷಿಪೆನ್ನಸುಳಿದೊರ್ವನೆ ಪೋಪುದೆ ನೀಂ ತನೂಭವಾ|| ೧೧೭

ಕಂ|| ಅಳಲದಿರು ತಾಯೆ ದುಃಖಂ |
ಗೊಳದಿನ್ನೀರ್ನೆಂದು ನೋಡಿ ಸಂತೈಸದೆ ಕ ||
ಣ್ಗಳ ಜಳಮಂ ತೊಡೆಯದೆ ಕಡು |
ಮುಳಿದರವೋಲ್ಸುಮ್ಮನಿರ್ಪುದೇ ಸುಕುಮಾರಾ || ೧೧೮

ನೋಡುವಕಣ್ಣೊಡೆದುದು ಮಾ |
ತಾಡಿಪನಾಲಿಗೆ ಮುರುಂಟಿದುದು ನಿನ್ನಂ ಮುಂ ||
ಡಾಡುವಕಯ್ಯುಡಿದುದು ಸಲೆ |
ಪಾಡುವ ಬಾಯ್ಬೆಂದುದಣುಗ ನೀಂ ಮಡಿಯಲೊಡಂ||೧೧೯

ಆರೊಡನುಸಿರ್ವೆಂ ದುಃಖಮ |
ನಾರುಂಟೆನಗಕಟ ಮಗನೆ ಮಗನೆ ಮನೋಜಾ ||
ತಾರಿಯ ಕೃಪೆ ತಪ್ಪಿದಬಳಿ |
ಕಾರಾದೊಡಮೇನೊ ನಿನ್ನನೇಂ ಕಾಣಿಪರೇ || ೧೨೦

ವಚನ|| ಎಂದಾಕ್ರಂದನಂ ಗೈದಳಲ್ದು ಬಳಲ್ದು ಬಸವಳಿದು ಬಲ್ಪುಗುಂದಿ ಬಿಸುಸುಯ್ದು ಬಸಿರಂ ಪೊಸೆದು ದೈನ್ಯಂಬಟ್ಟು ಬಾಯಂಬಿಟ್ಟು ಪೆಸಗೊಂಡು ಕರೆ ಕರೆದೊಳದ್ದುರ್ —

ತ್ರಿಪುಡೆ|| ಮಗನೆ ನೀನಿಂತಳಿಯೆ ಸೈರಿಪೆನೆಂತೊ ಪೇಳ್ವೈ ಶಂಕರಾ |
ಸುಗುಣನಿಧಿ ನೀನೆನ್ನ ಮೊರೆಗಳ ನೊರ್ಮ್ಮೆ ಕೇಳ್ವೈ ಶಂಕರಾ || ೧೨೧

ಪರಸಿ ಪಾಡಿ ಮಹೇಶನಿಂದವೆ ಬೇಡಿ ಮುನ್ನಂ ಶಂಕರಾ |
ತುರಗಖುರಕೆಂದಕಟ ಪೆತ್ತೆನೆ ಕುವರ ನಿನ್ನಂ ಶಂಕರಾ || ೧೨೨

ಎಂತು ಮರೆವೆನೊ ಸವಿಯಸಾಲಿಡುವಮುರ್ದುಪಗೆಯಂ ಶಂಕರಾ |
ಕಾಂತಿ ಶೋಭಿಸೆ ಮುದ್ದುವೀರುವ ಮೊಗದ ಬಗೆಯಂ ಶಂಕರಾ || ೧೨೩

ಝುಣಝುಣಿಸೆ ಕಿರುಗೆಜ್ಜೆ ಕರತಳತಾಳರವಕೆ ಶಂಕರಾ |
ಕುಣಿವನಿನ್ನಯ ಬಿನದವೊಪ್ಪುಗುಮೆನ್ನಮನಕೆ ಶಂಕರಾ || ೧೨೪

ಶರಣಪದಪಂಕಜ ರಜಂಗಳೊಳಾಳದಂತು ಶಂಕರಾ |
ತುರಗಖುರಹತಿ ಜನಿತಧೂಳಿಯೊಳಳಿದೆ ಯಿಂತು ಶಂಕರಾ || ೧೨೫

ಎನ್ನ ನೋವುವಸೆಂದು ನಂಬಿರಲಿಂತು ಮಡಿದೈ ಶಂಕರಾ |
ಮುನ್ನಮೆನ್ನಯ ಹರ್ಷವಲ್ಲಿಯ ಕುಡಿಯ ನುಡಿದೈ ಶಂಕರಾ || ೧೨೬

ನಿನ್ನಳಿವ ನೀಕ್ಷಿಸಿಯುಂ ಮೆನ್ನಸು ಪೋಗದಂದು ಶಂಕರಾ |
ನಿನ್ನೊಳೆನ್ನಯ ಕೂರ್ಮೆ ನಿಜಮೆಂತೆನಿಪುದಿಂದು ಶಂಕರಾ || ೧೨೭

ಹರಣದಳಿವಿಂಗಂಜುವೆನೆ ನಿನ್ನಾಣೆ ಮಗನೇ ಶಂಕರಾ |
ಶಿರವರಿದು ನಿನ್ನಂದವಾಗದೆ ಪಿಂಗಿದಪನೇ ಶಂಕರಾ || ೧೨೮

ವಚನ|| ಎಂದು ನಂದನನ ಗುಣವೃಂದಮಂ ನೆನೆನೆನೆದಾಕ್ರಂದಿಸಿ ಮತ್ತಮಿರದೆ—

ಕಂ|| ಪರಮಕೃಪಾಕರ ನೆಂಬೀ |
ಬಿರುದಂ ಬಿಸುಟಕಟ ಶಂಕರಾ ಶಂಕರನಂ ||
ಹರಸಿ ಸಡುಗಾಡೊಳಂಥೆಯ |
ಕರದಂಡಮ ನೆಳೆದು ಕೊಂಡವೋಲ್ಮಾಡಿದೆಯೈ || ೧೨೯

ವೃ|| ಎಲೆಗಿರಿಜಾತೆ ಮಾತೆ ಕರುಣಾಕರೆ ಶಾಂಕರಿ ದಿವ್ಯರೂಪೆ ನಿ |
ರ್ಮಲೆ ನಿಗಮಾಗಮಸ್ತುತೆ ಮಹೇಶ್ವರಿ ಮಂಗಳಮೂರ್ತಿ ಭಕ್ತವ ||
ತ್ಸಲೆ ರತಿಗಂದಳಲ್ಗಳಿದ ದೇವಿ ರಮಾನತೆ ನೊಂದೆ ನಿಂದು ನಿ |
ನ್ನಲಘುಕೃಪಾಕಟಾಕ್ಷದಿ ನಭೀಕ್ಷಿಸಿ ರಕ್ಷಿಪುದೆನ್ನ ನಂಬಿಕೇ || ೧೩೦

ವಚನ|| ಎಂದು ಪಂಬಲಿಸಿ ಪಳಯಿಸುತ್ತುಮಿರೆ ಯಿರೆ—

ಕಂ|| ಇಂದೆನ್ನ ವಂಶಭವ ರೊಲ |
ವಿಂದಂ ಪನ್ನತಿಕೆದೋರಿ ಬರಿಪಗ್ಗಡ ಬಾ ||
ಳೇಂದುಶಿರೋಮಣಿಯಂ ನೋ |
ಳ್ಪಿಂ ದಿಟವೆಂದೆಯ್ದಿದಂತೆ ಮೂಡಿದನರ್ಕಂ || ೧೩೧

ವೃ|| ಮೂಡಣದಿಕ್ಕು ಕೆಂಪಡರೆ ಮೂಡಿದ ದಿವ್ಯದಿನೇಶ ಬಿಂಬಮುಂ |
ನೋಡಿ ಶಶಾಂಕ ಶಂಕೆ ದಳೆದಂತೆ ವೊಲುತ್ಪಳಮುಂ ಸರೋಜಮುಂ ||
ಕೂಡಿರೆ ಸಂಜೆ ನೀಳ್ದಿಸಳನೊಂದ ನಮುರ್ಜವ ಬಿಚ್ಚುರ್ವಾಟಮುಂ |
ಮಾಡಿದುವಂತೆ ಸಂದೆಗಮೆ ಸತ್ವರಕಾರ್ಯಕೆ ವಿಘ್ನವಲ್ಲವೇ || ೧೩೨

ಕಂ|| ನೀಲಾಚಲನಿಚಯಂ ಸಲೆ |
ಸಾಲಿಟ್ಟೈದಿದುದು ಕದನಕೆಂದಂಥತಮೋ ||
ಜಾಲಮನಾಲೋಕಿಪ ಸುರ |
ಪಾಲನ ಮುಕುಟಂಬೊಲೆಸೆದುದಾ ರವಿಬಿಂಬಂ || ೧೩೩

ವಚನ|| ಅಗಳವಳ್ದಿಜಾಲಯುಮಂ ಪೊರಮಟ್ಟು ರಾಜವೀಧಿಗೇಳ್ತಂದು—

ವೃ|| ನೊಂದು ಪಲುಂಬಿ ಪಂಬಲಿಸಿ ಮೇಣ್ಬಲವಾಡಿ ಬಳಲ್ದು ಬಾಡಿ ಕ |
ಣ್ಣಿಂದಿಳಿವಶ್ರು ಕಾಳ್ಪುರಮುದಾಗಿರೆ ಬಾಯ್ದೆರೆ ಬತ್ತೆ ಮತ್ತೆ ಶೋ ||
ಕಂ ದಳವೇರೆ ಪೌರರಳಲುತ್ತಿರೆ ತಾನಳುತಲ್ಲಿ ತಾಳ್ದು ತ |
ನ್ನಂದನಸಂಗಮಂ ಮೊರೆಯಿಡಲ್ಕಡೆ ಗೊಂಡಳಿಳಾಧಿನಾಥನೊಳ್ || ೧೩೪

ಕಂ|| ದೆಸೆಗಳ್ಮಾರ್ದ್ದನಿಗುಡೆ ಬಿಡ |
ದಸವಸದಿಂ ದೊಳರ್ವ ನಿನದದಿಂ ಕಣ್ಬನಿಯಿಂ ||
ರಸೆ ಕೆಸರೆಳ್ದಿರೆ ಬಂದ |
ಳ್ಬಸವಳಿಯುತ್ತಳಲುತರಸನರಮನೆಯತ್ತಲ್ || ೧೩೫

ವಚನ|| ಅಂತು ಬಂದು ಸತ್ಯೇಂದ್ರ ನಂತಃಪುರ ಬಹಿದ್ವಾರದೇಶದೊಳ್ನಿಂದು ನಿಡುಸ
ರಂ ದೋರಿ ಕೊರಲೆತ್ತಿ ಕರಮಂ ನೆಗಪಿ—

ಕಂ|| ವಿಪುಳತರಭರ್ಮಸಾಂಮ್ರಾ |
ಜ್ಯಪಾಳ ಸತ್ಯಾಬ್ಧಿಚಂದ್ರ ಸತ್ಯೇಂದ್ರಧರಾ ||
ಧಿಪ ಮೊರೆಯೊ ಶಿವ ಸದಾಶಿವ |
ಕೃಪಾರಸಾಮತ್ರ ಪುತ್ರ ನಳಿದಂ ಕಳಿದಂ || ೧೩೬

ವಚನ|| ಎಂದವಿದಿಡುವಾಕ್ರಂದನಸ್ವರಮಂ ಕೇಳ್ದದು ಶಿವಭಕ್ತಗಾದ ನೋವಪ್ಪು
ದೋ ಯೆಂದು ಘನನಿನಾದಮಂ ಕೇಳ್ದ ರಾಜಹಂಸನಂತೆ ರಾಜಹಂಸಂ ಸೆಡೆದು ಸಿಡಿಮಿಡಿ
ಗೊಂಡಂತಃಪುರದಿಂ ಚಿಂತಾಭರದಿನೇಳ್ತಂದು ಸಿಂಹಾಸನಾರೂಢನಾಗಿ ರೋದನಾಲಾಪಮೆತ್ತ
ಣದೆಂಬನಿತರೊಳ್ಬಂದೊರ್ವ್ವ ವೃದ್ಧಕಂಚುಕಿ ಕೈಮುಗಿದಿಂತೆಂದಂ—

ಕಂ|| ಕಂದನ ಪಂದಲೆಯಂ ಪಿಡಿ |
ದಿಂದೀವರ ನಯನೆಯೊರ್ವಳುರೆ ಮೊರೆಯಿಡುತುಂ ||
ಕಂದರ್ಪರಿಪುಗೆ ಬಾಗಿಲೊ |
ಳಂದಂಗೆಟ್ಟಳುತುಮಿರ್ದಳವನಿಪತಿಲಕಾ || ೧೩೭

ವಚನ|| ಎನಲಾನೆ ವಿಚಾರಿಪೆಂ ತಳ್ವದೊಳಪುಗಿಸೆಂಬುದು ಮವಂ ಮಹಾಪ್ರಸಾದಮಂ ದವಳ ನೊಳಪುಗಿಸಿ ಕರೆದು ತಪ್ಪಾಗಳ್—

ವೃ|| ಕರತಳದಲ್ಲಿ ತಾಳ್ದತಲೆ ಸೋಗಿಲೊಳಿಟ್ಟ ಕಬಂಧಮೆತ್ತಲುಂ |
ಪರೆದಳಕಾಳಿ ಧೂಳಿವೃದಿದಂಗ ಮಡಂಗಿದ ಬಲ್ಪು ನೆತ್ತರೊಳ್ ||
ಪೊರೆದಸೆರಂಗು ಪಾಯ್ದುಗುವ ಕಣ್ಬನಿ ಒತ್ತುವ ಬಾಯ್ಪೊದಳ್ದಸು |
ಯ್ಯೊರಗಿದ ವಕ್ತ್ರಮುಚ್ಚಳಿತಹಾರವ ಮೊಪ್ಪಿರೆ ಬಂದಳಾರ್ತದಿಂ || ೧೩೮

ವಚನ|| ಅಂತುಬಂದಾನರೇಂದ್ರನಿದಿರೊಳಾರುಂಡಮುಂ ಮುಂಡಮು ನಿಳಿಪುತಳಲಿಮ್ಮ ಡಿಸೆ ಶೋಕೋದ್ರೇಕ ಗದ್ಗದಕಂಠೆಯಾಗಿ ಗಂಟಲೊಡೆವಿನ ಮೊಳದ್ದು ಮೊರೆಯಿಟ್ಟು ಮ ರುಗಿ ಮಗುಳ್ದು ಮಗುಳ್ದಳುತ್ತುಮಿರೆ ಯಿರೆ—

ಕಂ|| ಅಳದಿರೆಲೆತಾಯೆ ನೀನಾ |
ರಳಿದಣುಗಸಿದಾರವಂ ಕೊರಲ್ಗೊರೆದ ಮಹಾ ||
ಖಳನಾವನಾತನಂ ಪೇ |
ಳ್ಬಳಿಯೊಳ್ಪರೆಕಾಣ್ಬೆನಿದಕೆ ಶಕ್ಕುಜ್ಜುಗಮುಂ || ೧೩೯

ವಚನ|| ಎನಲೆಂತಾನು ಮಳಲಂ ಸಂತೈಸಿಕೊಂಡು ಕೈಮುಗಿದು ನಿಂದು ಕರುಣಾಂತರಂ ಗಂಗೆ ಸತ್ಯೇಂದ್ರಂಗೆ ಗದ್ಗದಾಂಕುರಿತ ಶಿಥಿಲಾಕ್ಷರಂಗಳ್ಪೊರಮಡೆ ಪೇಳಲ್ಮಗುಳ್ದಿಂತೆಂದಳ್

ವೃ|| ಕೇಳವನೀಶವರ್ಯ ಭವದೀಯ ಪುರಸ್ಥಿತನಾಗಿ ಸದ್ಗಣಿ |
ಗಾಳದೊಳೇಳ್ಗೆವೆತ್ತು ಸಿರಿಯಿಂ ಗುಣದಿಂ ಶಿವಭಕ್ತಿಯಿಂ ಕರಂ ||
ಬಾಳುತುಮಿರ್ದನೊರ್ವ ರವಿನಾಮವಣಿಗ್ವರ ನೆನ್ನವಲ್ಲಭಂ |
ಪಾಳಿಯೊಳೀಶಭಕ್ತಚರಣಾಬ್ಜಸಮರ್ಚನೆ ಗೆಯ್ವುತಕ್ಕರಿಂ || ೧೪೦

ಕಂ|| ಪಿರಿದು ಸಿರಿಯೆಸಕದಿಂದಾ |
ನಿರುತವನೊಡಗೂಡಿ ಪಡೆದೆನರುವರುಮಂ ಪು ||
ತ್ರರನಮಳಗಾತ್ರರಂ ಭೂ |
ವರ ಕೇಳ್ಸುಖದಿಂದಮಿರ್ದೆನಿಪ್ಪನ್ನೆವರಂ || ೧೪೧

ವೃ|| ತನಗುಳ್ಳರ್ಥಮನೆಲ್ಲಮಂ ಬಿಡದೆ ಕೊಂಡುತ್ಸಾಹದಿಂದಂ ವಣಿ |
ಗ್ಜನಯುಕ್ತಂ ಕಡಲೊಳ್ಪಡಂಗಡದರ್ಪೋಗುತ್ತಿರ್ದೊಡಾ ನಾವೆ ತ ||
ದ್ಘನವಾರಾಶಿಯೊಳಾಗಳಾಳೆ ಮುಗುಳ್ದಿನ್ನಾಳ್ದಂ ಸಮಂತಾಳ್ದು ಜೀ |
ವನದೊಳ್ಜೀವನಮಂ ವಿಸರ್ಜಿಸಿದನೇನೆಂಬೆಂ ಮಹೀಪಾಲಕಾ || ೧೪೨

ವಚನ|| ಅಂತುಮಾರ್ತಾಂಡನಸ್ತ ಮಯಮಾರ್ತಾಂಡನಂತೆ ನಿಜವಸುಸಮೇತಂ ವನಧಿಮಧ್ಯದೊಳ್ಮುಳುಂಗಿ ಪೋಗಲೊಡನೆ—

ಕಂ|| ಸಮನಿಸಿದುದೆನಗೆ ಚಿಂತಾ |
ತಿಮಿರಂ ಮತಿನೇತ್ರಮಳಿದುದಮಳಿನಶರಹೃ ||
ತ್ಕಮಳಂ ಕೊರಗಿದುದಶುಚ |
ಕ್ರಮಿದುಬ್ಬೆಗಮಾಂತುದಾರ್ತಜನವನಚೈತ್ರಾ || ೧೪೩

ಎನಗಿನಿಸಿಂತಳಿವಂದಿನ |
ದಿನಕ್ಕೆ ಮೂದಿಂಗಳೆಸೆವಗರ್ಭಂ ನೆಲಸಿ ||
ತ್ತನುಗತಮಾದುದು ಕಡುಬಡ |
ತನವೊಡನೆ ಶಿವೈಕ್ಯಸೂಕ್ತಿಕರ್ಣಾಭರಣಾ || ೧೪೪

ಕಡುರುಜೆಯುಡಸಿದತನುವುಂ |
ಬಡತನಮೆಡೆಗೊಂಡಬಾಳ್ಕೆಯುಂ ಖಲಜನದೊಂ ||
ದೊಡನಾಟಮುಮೆರ್ದೆ*ಗಳಲಂ |
ಪಡೆಯದೆ ಮಾಣ್ದಪುದೆ ಶೈವಹಿತಶುಭಚರಿತಾ || ೧೪೫

ಪತಿ ಗತಿಯೆ ಸತಿಗೆ ಗತಿಯೆಂ |
ಬತಿಶಯಮಂ ತಾಳ್ದು ತನುವಹಿತ್ರಸಮೇತಂ ||
ತತದುಃಖಾಂಬುಧಿಯೊಳ್ಸಂ |
ಗತಿವಡೆದಾಳ್ದಂ ಶಿವಾಂಘ್ರಿನಖಮಣಿಮುಕುರಾ || ೧೪೬

ಬಡಬಶಿಖಿಯಲ್ಲಿ ಪಬ್ಬುವ |
ಪೊಡಪ್ಪನೊಳಕೊಂಡು ಮೇಲೆಮೇಲ್ಮೈತಪ್ಪ ||
ನ್ನೊಡಲುರಿಯುನವಧರಿಸು ನಿ |
ನ್ನಡಿಗೆರಗಿದಪೆಂ ಪರೋಪಕೃತಿಗುಣಧಾಮಾ || ೧೪೭

ಅರುದಿಂಗಳೊಳಗೆ ತನುಭವ |
ರರುವಗ್ಗಳಗಳನೆ ರುಜೆಯಿನಳಿದಪ್ಪೇಳಲ್ ||

ಪೆರತೇನೊ ದುಃಖಮಿಂತೆಂ |
ದರಿಪಲ್ಲೆರೆದಪೆನ ಕೀರ್ತಿಧವಳಿತಭುವನಾ || ೧೪೮

ಉರಿದುದು ಬಗೆ ಮಿಗೆ ಬೆಂದುದು |
ಹರಣಂ ತನು ಕಂದಿ ಕುಂದಿದುದು ಕಳವಳವೊ ||
ತ್ತರಿಸಿದುದು ಮೂರ್ಛೆ ಬಿಡದಾ |
ವರಿಸಿದುದೆನಗಾಗಳತುಳಸತ್ಯನಿಧಾನಾ || ೧೪೯

ವಚನ|| ಆಮೂರ್ಛೆಯೊಳಾನಿಪ್ಪಾಗಳುಮಾರಮುಣನಮಿತಕೃಪೆಯಿನೇಳ್ತಂದಂಜದಿರೆಂ
ದಭಯವಿತ್ತು—

ವೃ|| ಕಯ್ದುಳಿರಿಂದೆ ವ್ಯೆದಡವಿ ವಾಮವಿಲೋಚನದಿಂದೆ ನೋಡಿ ಸೈ |
ಪೆಯ್ದ ಪದಾಬ್ಜಮಂ ಪಣೆಯೊಳಿಟ್ಟಳದಿನ್ನಿನಗೊರ್ವಸೂನು ತಾ ||
ನೆಯ್ದ ಗುಣಾಂಕನುದ್ಭವಿಪಸೀಯುಳಲಂ ಪರಿದಿಕ್ಕಿ ಮುಕ್ತಿ ಗೊ |
ಲ್ದೊಯ್ದಪನೆಂದುಪೇಳ್ದ ತಳರ್ದಂ ತರುಣೇಂದುಧರಂ ಧರಾಧಿಪಾ ||೧೫೦

ಕಂ|| ತಿಳಿದುದನಿತರೆೊಳೆ ಮೂರ್ಛಾ |
ಕುಳತೆ ಮನಸ್ತಾಪಮಳಿದುದೊಳಸಾದ್ದದು ವಿ ||
ಹ್ವಳತೆ ಶಿವನೊಲವದೇಸಂ |
ಕಳಿಯದೊ ಮನದಳಲ ನವನಿಪಾಲಕತಿಲಕಾ || ೧೫೧

ನಂಬಿದೆನಂಬಿಕೆಯರಸನೊ |
ಡಂಬಡೆ ಪೇಳ್ದಮಳವಚಮನನಿತರೊಳೊಗೆತಂ ||
ದಂ ಬಾಲಕನಿವನೆನ್ನಳ |
ಲಂ ಬರಿಕ್ಕೈದಂ ವಿಳಾಸದಿಂದಿಳೆಯರಸಾ || ೧೫೨

ಕಂ|| ಹರನೊರೆದ ತೆರದೊಳುರೆ ಶಂ |
ಕರನೆಂದೊಳ್ಪೆಸರನಿಟ್ಟು ಗತಿಯುಂ ಮತಿಯುಂ ||
ಪರಸುಖದ ನೀತನೆಂದಾಂ |
ಪೊರೆದೆಂ ಪೊರೆವಂತೆ ಕಲ್ಪಭೂಜದ ಸಸಿಯಂ || ೧೫೩

ಇನ ನಸ್ತಮಿಸಿದೊಡೊದವಿದ |
ಘನತಿಮಿರಮ ನಿಂದು ಕಳೆವವೋಲ್ಲೆರೆಕಳೆದಂ ||
ಇನ ನಸ್ತಮಿಸಿದೊಡೊದವಿದ |
ಘನದುಃಖಮ ನಿಂದುನಿಭನಿವಂ ಮನುಜೇಂದ್ರಾ || ೧೫೪

ಹರೆಯಂ ಕಿರಿದಾದೊಡಮೇಂ |
ಪಿರಿದೊ ವಿವೇಕಂ ಶಿವಾಂಕಮಾಲೆಯ ಸತ್ಯಾ ||
ದರದಿಂ ಪಾಡುವ ಸಭವನ |
ಶರಣರ್ಗೆರಗುವ ಸವಂದಿರೊಳ್ಸಿನದಿಸುವಂ || ೧೫೫

ಶಿವಕೀರ್ತನಮುಂ ಕೇಳ್ವಂ |
ಶಿವಾಂಘ್ರಿಪೂಜೆಯನೊರಲ್ದನೋಳ್ಪಂ ಮುದದಿಂ ||
ಶಿವನಾಮಮನುಚ್ಚರಿಪಂ |
ಶಿವಂಗೆ ಕೊಟ್ಟಲ್ಲದೇನುಮಂ ಕೊಳಲೊಲ್ಲಂ || ೧೫೬

ವಚನ|| ಇಂತಭಿನವಾಶ್ಚರ್ಯಕರ ಪವಿತ್ರನೆನಿಸಿ ಪುತ್ರಂ ಪಂಚವರ್ಷಂಬರಂ ನೆರೆದೆಸೆದಿರ್ದ್ದ ನಿಪ್ಪರ್ನ್ನೆಗಂ—

ವೃ|| ನಿನ್ನಿನ ಮುಂಬಗಲ್ಪದೆದು ನಿನ್ನಕುಮಾರನ ಮಾತ್ಯಪುತ್ರನುಂ |
ಚೆನ್ನಸೆದಿಪ್ಪಿರ್ನಂ ವಿಹರಿಪಲ್ಲಿ ಪುರಾಂತದೊಳ್ಳೈದಿ ಬರ್ಪ್ಪರ್ಸೇ ||
ನೋೕನ್ನತಿಯಂ ನಿರೀಕ್ಷಿಸಲಿವಂ ಪೊರಮಟ್ಟಿರೆ ತತ್ತುರಂಗಮೇ |
ತನ್ನಿಜಮಸ್ತಕಂ ಪರಿಯೆ ಮೆಟ್ಟಿದುದುತ್ಖುರದಿಂ ಧರಾಧಿಪಾ || ೧೫೭

ಕಂ|| ಇವನಿಂದೆ ಮುಂದೆ ಪಡೆದಪೆ |
ನವಿರಳೆತರಸುಖಮನೆಂದು ನಂಬಿರ್ದ್ದೆಂ ಕೇ ||
ಳ್ಯವರಾಜನಶ್ವಖುರಕೇ |
ಕುವರಂ ಬಲಿಯಪ್ಪನೆಂದು ಬಲ್ಲೆನೆ ನೃಪತೀ || ೧೫೮

ಎಂದಿಂತೆಲ್ಲಮ ನವಳಳ |
ಲಿಂದುಸಿರೆ ನರೇಂದ್ರವರ್ಯನಾಲಿಸಿ ಮನದೊಳ್ ||
ನೊಂದು ಶಿವಶಿವ ಶಿವಂ ಬ |
ಲ್ಲಂ ದಿಟಮಿದನೆಂದು ಮಗುಳ್ಬ*ಶಲೆದೂಗುತ್ತುಂ || ೧೫೯

ಬಡಬಾನಳಮುಂ ಜಲಮುಂ |
ಕಡಲೊಡನಾಂತಂತೆ ಕಾಯ್ಪುಮಂ ಕರುಣಮನಾಂ ||
ತೊಡಸೊಪ್ಪಿದ ನಾತ್ಮಜನೊ |
ಳ್ಕಡುಶೋಕಂಗೈವ ಸುದತಿಯೊಳ್ಪತ್ಯೇಂದ್ರಂ || ೧೬೦

ವಚನ||ಅಂತೊಪ್ಪುತ್ತು ಮಿರ್ದ್ದ ಪತಿಮೋಹಿ ಮಂತ್ರಿಪನಂ ಬರಿಸೆಂದು ವೃದ್ಧಕಂಚುಕಿಗೆ ಬೆಸಸುತ್ತು ಮಿರೆಯಿರೆ—

ವೃ|| ಜನನಿ ಜಗತ್ತ್ರಯಾಶ್ರಿತೆ ಜನಾರ್ದನವಂದ್ಯೆ ವದಾನ್ಯೆ ಮಾನ್ಯೆಮಾ |
ನಿನಿ ಮಹನೀಯೆ ಮಂಗಳೆ ಮಹೇಶ್ವರಿ ಮಾನುತೆ ಮಂದಯಾನೆ ಸ ||
ಜ್ಜನಹಿತೆ ಸದ್ಗುಣಾನ್ವಿತೆ ಸದಂಚಿತೆ ಸತ್ಯನಿದಾನೆ ಸೌಖ್ಯದಾ |
ಯಿನಿ ಸವಿಳಾಸೆ ಲೇಸೆನೆ ಪರಾತ್ಪರೆ ಪಾಲಿಪುದೆನ್ನ ನಂಬಿಕೇ || ೧೬೧

ದ್ಯ|| ಇದು ವಿನಮದಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲಪರಿ
ವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚ
ಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀಷಡ
ಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊ
ಳ್ರಾಜಶೇಖರ ವೀಧೀವಿಹಾರೋತ್ಸವ, ಶಂಕರಕುಮಾರಮೃತಿ,
ತಿರುಕೊಳವಿನಾಚಿಪ್ರಳಾಪಾದಿ ವರ್ಣನಂ
ತ್ರಯೋದಶಾಶ್ವಾಸಂ ಸಂಪೂರ್ಣಂ



## ಚತುರ್ದಶಾಶ್ವಾಸಂ

(ಪರಮೇಶ್ವರಪ್ರಸನ್ನತಾ, ರಾಜಶೇಖರಾದಿಮುಕ್ತಿಪ್ರಾಪ್ತಿ, ಕೈಲಾಸ, ಶಿವಸಭಾವರ್ಣನಂ)

ಕಂ|| ಶ್ರೀಮದಗೇಜಾಭುಜಾಸುಮ |
ನೋಮಂಜುಳಮಾಲಿಕಾವೃತಶ್ರೀಕಂಠಂ ||
ಸೋಮಕಳಾಧರನೆಮ್ಮಂ |
ಪ್ರೇಮಂ ಮಿಗೆ ಪೊರಗೆ ಸಂತತಂ ಶಿವಲಿಂಗಂ || ೧

ವೃ|| ವಿಳಸದ್ರತ್ನಕಿರೀಟಕಾಂತಿ ಬಿಸಿಲಂ ತಳ್ಪೊಯ್ಯೆ ವಕ್ತ್ರೇಂದುಮಂ |
ಡಳಮಂ ಚುಂಬಿಪತಾರೆ ತಾನೆನಿಸಿ ಮುಕ್ತಾಕುಂಡಳಂ ಗಂಡದೊಳ್ ||
ಮಿಳಿದಿರ್ದಾಡುತ್ತಿರೆ ತಾರಹಾರ ಕಿರಣಂ ಬೆಳ್ದಿಂಗಳಂ ಬೀರೆ ಕಂ |
ಗೊಳಿಸುತ್ತುಂ ನಡೆತಂದು ಮಂತ್ರಿ ತಿಳಕಂ ಪೊಕ್ಕಂ ತದಾಸ್ಥಾನಮಂ || ೨

ವಚನ|| ಅಂತು ಪೊಕ್ಕು ನಿಜೇಶ್ವರಾಂಘ್ರಿಗೆರಗಿ ಕೃತಾಂಜಲಿಪುಟನಾಗಿ ನಿಂದಿರ್ದ ನಿಶರೊ ಳಿದಿರೊಳಾಬಾಲಶಿರಮಂ ಪಿಡಿದಳಲ್ತೆ ಹರಭಕ್ತೆಯಪ್ಪ ಸುದತಿಯಂ ಕಂಡಿದೇನೆಂದು ತನ್ನೊಳನುವಿಸಿ—

ಕಂ|| ಇದು ನಿನ್ನಿನಶ್ವದೇರಾ |
ಟದೊಳೆನ್ನ ತನೂಜನಿಂ ನೃಪಾತ್ಮಜನಿಂ ಬಂ ||

ಬುದುಗಡ ತಾನಲ್ಲದೊಡೇಂ |
ಸುದತಿ ಸಭಾಸ್ಥಳಕೆ ವೊರೆಯನಿಡಲ್ಬೈದುವಳೇ || ೩
ಇದಕೆ ಪರಿಹಾರಮಣವಿ |
ಲ್ಲಿದು ಶಿವಕೃತಮುಕ್ಕ ಮಭವನೆಉಲ್ಮೆಗೆ ನೃಪನ ||
ಗ್ಗದಮುಹಿಮೆಗೆ ಕಾರಣವಿಂ |
ತಿದು ತಾನೆಂದರಿದನವನದೇಂ ಶಿತಮತಿಯೋ || ೪

ವಚನ|| ಇಂತಮಾತ್ಯವರೇಣ್ಯಂ ತಿಳಿದಬಗೆಯಂ ಮೊಗಮಂ ನೋಡಿದನಿತರೊಳ್ಪರೇಂ ಗಿತ ಪ್ರಜ್ಞನಾದ ನರೇಂದ್ರಂ ತಿಳಿದವನಭಿಜ್ಞತೆಗೆ ಮನದೊಳ್ಮೆಚ್ಚಿ ತಾನು ಮುಸಿರದೆಯುಂ—

ಕಂ|| ಕರಿಕರಿ ಕೃತಾಪರಾಧಕ |
ಧರಾತಿಭಾರಕ ಕುಮಾರಕರ ನೀಗಳೆನು ||
ತ್ತ ರಸಸುಸಿರ್ವ ನಿತರೊಳ್ಬಂ |
ದರಿಳಾಪತಿಸೂನು ಸಚಿವಸೂನುಗಳಿರ್ವರ್ || ೫

ವಚನ|| ಅಂತೆಂತೆಂದು ಮಣಿಮಕುಟ ಕಿರಣಮರುಣ ಕುಸುಮಮಂ ಪದಪೀಠದೊಳ್ಪ ಲಿಗೆದರ್ದಂತಾಗೆಬಾಗಿ ಪೊಡಮಟ್ಟು ನಿಜಾಪರಾಧಮು ನರಸನರಿದಪನೆಂದು ಶಂಕಿಸುತ್ತಂತಂತೆ ಕಂಪಿಸುತ್ತುಂ ಕೆಲಸಾರ್ದು ನಿಂದಿರ್ದ ನಿಜಕುಮಾರನುಮಂ ಸಚಿವಸುತನುಮಂ ಕೆಂಪಡರ್ದ ಕಡೆಗಣ್ಗಳಿಂದದಸಿನೋಡಿ—

ಕಂ|| ಕುಡಿಮಿಾಸೆ ಕುಣಿಯೆ ಪಣೆಯೊ |
ಳ್ಬಿಡದೊಗೆತರೆ ಘರ್ಮಜಳಕಣಂ ಭ್ರುಕುಟಿಪೊದ ||
ಳ್ದಡೆಗೊಂಡಿರೆ ಕೋಪಾಗ್ನಿಯ |
ಪೊಡಪ್ಪುರೂಪಾಂಕತೆರದೆ ಘುಡಿಘುಡಿಸುತ್ತುಂ || ೬

ವೃ|| ಇನಿತೊಂದೌದ್ಧತ್ಯಮೇಂ ಸಲ್ವುದೆತನುಮದದಿಂ ಯೌವನೋದ್ರೇಕಲ ಜನಿತೋದ್ಯದ್ದರ್ಪದಿಂ ಮುಂದರಿಯದಪಯಶಕ್ಕಳ್ಕದತ್ಯಂತದೋಷ ||[ಕ್ಷ್ಮೀ ಕ್ಕೆ ನಿತಾಂತಂ ಬಳ್ಕದೆನ್ನತ್ತಣೆ ನಿನಿತುಭಯಂ ದೋರದೀ ಧಾತ್ರಿಯೊಳ್ಸ | ಜ್ಜನರಲ್ತಲ್ತೆಂಬ ರಿಂದೆಂಬುದನೆ ಬಗೆಯದೀ ಬಾಲನಂ ಕೊಂದಿರಲ್ತೆ || ೭

ವಚನ|| ಎಂದುಮತ್ತಮಿರದೆ—

ಸ್ರ|| ಶರಣಪದಂಗಳಂ ಪದೆದು ಪೂಜಿಸಿ ಶಂಕರಪೂಜೆಗೆಯ್ದು ಸ |
ಚ್ಚರಿತ ಮನಾಂತು ಶೈವಮತವರ್ತನೆಯುಂ ಬಗೆಗೊಂಡು ತಾಳ್ದುಭಾ ||
ಸುರಗುಣವೃಂದಮಂ ವಿಮಳಕೀರ್ತಿಯನಾರ್ಜಿಸಿ ಬಾಳ್ದುಮೆಮ್ಮನು |
ದ್ಧರಿಸುವನೆಂದು ನಚ್ಚಿರೆ ಕುಮಾರಕ ಲೇಸನಿದಂ ನೆಗಳ್ಚಿದೈ || ೮

ವೃ|| ಅರಿನೃಪರಂ ಪಡಲ್ಪಡಿಪಕೇಳಿಯನೊಲ್ಲದೆ ಶಂಭುಪಾದಪಂ |
ಕರುಹಮನೊಲ್ದು ಪೂಜಿಪವಿಳಾಸಕೆ ಸಲ್ಲದೆ ಶೈವಕಾವ್ಯಮಂ ||
ಸರಸತೆಯಿಂದೆ ಕೇಳ್ವಬಗೆಯೊಳ್ಮಿಗೆನಿಲ್ಲದೆ ಭರ್ಗಭಕ್ತಭಾ |
ಸುರಶಿಶುಮಂ ಕೊರಲ್ಗೊರೆವಲೀಲೆಗೆ ಸಂದುದೆ ಚಿತ್ತಮಾತ್ಮಜಾ || ೯

ಶಿವಭಕ್ತಂಗೊರ್ವ್ಮರ್ಭಿಕ್ಷ್ಮನ್ನಮನೆವಿನಯದಿಂದಿತ್ತವಂ ಕೋಟಿಯಜ್ಞೋ
ದ್ಭವಪುಣ್ಯಾವಾಪ್ತಿಯಂ ತಾಂ ಪಡೆವನೆನೆ ತದಾಗಸ್ಕರಂ ಕೋಟಿಪಾಪೌ ||
ಘವಿಶೇಷಾವಾಪ್ತಿಯಂ ಮೇಣ್ಪಡೆಯನೆ ಸುಕೃತಕ್ಕಾದಬಲ್ಪೇನಘಕ್ಕಿ |
ಲ್ಲವೆ ಪೇಳೀದೋಷಕಿನ್ನಾವುದೊ ಪರಿಹರಣಂ ಧಾತ್ರಿಯೊಳ್ನೋಡೆ ನೀಡುಂ||

ಕಂ|| ಶರಣರ ಮನದನೋವಂ |
ದೊರಕೊಳಿಸಿದಘಕ್ಕೆದೊರೆಯದೆನೆ ಪರಿಹಾರಂ ||
ಶರಣಶಿಶುಶಿರಮನರಿದೀ |
ದುರಿತಂ ನಿಜಶಿರಮನಿತ್ತೊಡಂ ಪೋದಪುದೇ || ೧೧

ಹರಪೂಜೆಯಿಂದೆ ಮಿಗಿಲೀ |
ಶ್ವರಭಕ್ತರ ಪೂಜೆಯೆಂಬುದಾಗಮಮುದರಿಂ ||
ಹರಚರಣದ್ರೋಹದಿನೀ |
ಶ್ವರಶರಣದ್ರೋಹಮುಗ್ಗಳಂ ವಸುಮತಿಯೊಳ್ || ೧೨

ವಚನ|| ಎಂದುಸತ್ಯೇಂದ್ರಚೋಳಾಧಿಪಂ ಯುವರಾಜನುಮಂ ಮಿತವಚನನುಮನಂತೆ ಜಡಿದು ನುಡಿದುಮೀಶಿಶುವನಿರ್ವರೊಳಾವಾತಂ ಕೊಂದನೆಂಬುದಂ ಬೇಗಂ ಬೆಸಸಿಮೆನೆ ಮಿತವಚನಂ ಮುಂದಣ್ಗೆ ವಂದು ಕರಾರವಿಂದಮಂ ಮುಗಿದುನಿಂದು—

ವೃ|| ದೇವ ಮದೀಶ ಬಿನ್ನಪಮನೂನಹಯಂಗಳನೇರಿ ವೀರಿ ಸೇ |
ನಾವಳಿಗೂಡಿ ಗಾಡಿಮಿಗೆ ಬಪ್ಪಿನಮೀಶಿಶು ಸೋಳ್ಪೊಡೈದೆ ಕಂ ||
ಡೀವಿಭು ತನ್ನ ವಾಜಿಯನೆ ದಾಂಟಿಸಿದಂ ತಲೆ ಪಾರೆ ರಕ್ತಧಾ |
ರಾವಿಳಮಿಕ್ಕಿ ಮೆಟ್ಟಿದುದು ಮತ್ತುರಗಂ ಖುರದಿಂ ಶಿರೋಧಿಯಂ || ೧೩

ಕಂ|| ಆದರಿಂದೆ ದೇವ ತಪ್ಪೆ |
ನ್ನದು ಬಳಿಕೀಶಿರಕೆ ಪಳಿಯುನೆನ್ನಯ ಶಿರಮಂ ||
ಪದೆದೀವುದುಚಿತಮೆಂದಾ |
ಡಿದನಾಮಿತವಚನನಚಳಸೂನೃತವಚನಂ || ೧೪

ವಚನ|| ಆಗಳಾಸತ್ಯೇಂದ್ರನಾಮಾತಂ ಬಗೆಗೊಂಡು ನಿಜಮಂತ್ರಿಯಂ ನಿರೀಕ್ಷಿಸುತ್ತುಮೀಶನ ಶಿರಮನರಿದೀಶಿಶುಶಿರಕ್ಕೆ ಪಳಿಗುಡುವುದೆನೆ ಗೆಳಿಲನೆ ಪಳಿಪೊರ್ದದಮಳಚರಿತನಿದಿರ್ಗೆವಂದೆನ್ನ ಶಿರಮಿದಕ್ಕೆ ಪಳಿಯೆಂದುತೋರ್ಪಂತೆಪಣೆವೆರೆಯೊಳ್ಕರಾಂಜಲಿಯನಮರ್ಚಿನಿಂದು—

ಕಂ|| ವರಸತ್ಯವಾಣಿ ಗಂಭೀ |
ರರವಂ ಕೌತುಕಮನಾಗೆ ಸಭೆ ನೃಪನ ಮನಂ ||
ಹರಿಸಮನಮರ್ಚೆ ಸಚಿವಂ |
ಗಿರದಳಲಿರ್ಮಡಿಸೆ ಮಂತ್ರಲಕ್ಷ್ಮಂ ನುಡಿದಂ || ೧೫

ಅವಧರಿಪುದು ಬಿನ್ನಪಮಂ |
ಭುವನೇಶ್ವರ ತಪ್ಪಿದೆನ್ನದೆಂತೆನಲಾಂ ಸೈಂ ||
ಧವ ನಿತ್ಯಸೈಂಧವಮನೇ |
ರುವ ಬಗೆವಿಡಿದಿರ್ದು ಕೇಳ್ದೊಡೀಮಿತವಚನಂ || ೧೬

ವೃ|| ಪೊಸತೀವಾಜಿಯುಗಂ ಪುರಂ ಪ್ರಬಳಶೈವವ್ರಾತದಿಂ ತೀವಿ ರಂ |
ಜಿಸುಗುಂ ಸೈನ್ಯಮಗಣ್ಯಮುನ್ನತಮದಂ ಮದ್ಭೂಧವಂಭಕ್ತಮಾ ||
ನಸಸಂತಾಪಕರಾಸಹಿಷ್ಣುವದರಿಂದೀಕಜ್ಜಮಂ ಕೂರ್ತು ಯೋ |
ಚಿಸಲೇನಕ್ಕುಮೆ ಮಾಣ್ಬುದೆಂದನಿವನೆನ್ನಂ ಮುನ್ನಮುರ್ವೀಶ್ವರಾ || ೧೭

ಕಂ|| ಎನೆ ನಿನಗೆ ಬಂದತಪ್ಪಿಂ |
ದೆನಗೆ ವಿನೋದಕ್ಕೆ ವಿಘ್ನಮಂ ಮಾಡದಿರೇ ||
ಳೆಸುತಾಗ್ರಹಿಸು ತೊಡಂಬಡ |
ಲಸುಗೈದೆಂ ದೇವ ವಿಹರಿಪೊಂದುಜ್ಜುಗಮಂ || ೧೮

ಅದರಿಂದಪರಾಧ ಮಿದೆ |
ನ್ನದುಗಡ ನೀಮರಿಯದುದೆ ಮಹೇಶ್ವರ ಸರ್ವ ||
ಜ್ಞ ದಯಾನಿಧಿ ಪಳಿಗೀವುದು |
ಮದುತ್ತಮಾಂಗಮನುಮಾಧವಂ ಮರ್ಚುವಿನಂ || ೧೯

ಅನಿಮಿತ್ತಮೀಶಭಕ್ತಿಯ |
ತನುಭವನಿಂತಳಿದನೆಂದು ಮರುಗಿದಪುದು ಮ ||
ನ್ಮನಮಿನಿತಲ್ಲದೆ ಮಜ್ಜೀ |
ವನಮುಂ ಕೊರೆವಲ್ಲಿ ಮರುಕಮೇಂ ತೋರುಗುಮೇ || ೨೦

ವಚನ|| ಎಂದು ನುಡಿದಾ ರಾಜಶೇಖರಸುಕುಮಾರನ ಬಗೆಗೆ ಸಭಾಸದವೃದ್ಧಪ್ರಸಿದ್ಧರಾಜನ್ಯಕಂ ಬಗೆಮರ್ಚೆ ಮಣಿಮುಕುಟಮನೊಲೆದು ತೂಗಿ—

ಕಂ ವುಸಿಪೊಂದದ ಪೊಸನುಡಿಯಂ |
ವಸುಮತಿಯೊಳ್ನುಡಿಯಲಕ್ಕುಮಾ ನೃಪಸುತನಂ ||
ತಸುವಳಿಗುವೆಂಬ ಬಗೆಯೊಳ |
ಮುಸಿರುವ ಸನ್ನಿಗಳ ನಾಯಕರ್ಪ್ಪರರೊಳರೇ || ೨೧

ವಚನ|| ಎಂದು ಸ್ತುತಿಸುತ್ತಿರ್ಪ್ಪಿನ ಮಾಸತ್ಯೇಂದ್ರನಾ ಕುವರಂಗಾದ ತಪ್ಪನರಿದವನೆಂದುದ ನಪ್ಪುಕೈದು ಸಚಿವಾಸ್ಯಮಂ ನಿರೀಕ್ಷಿಸಿ—

ಕಂ|| ಸಂದೆಗವೇ ನಿನ್ನಿದಕೆಲೆ |
ಕೊಂದವ ನಿವನಾದವೂದ ನೀತನ ಶಿರಮಂ ||
ತಂದೀವುದು ಪಳಿಗುಚಿತಮಿ |
ದೆಂದಂ ಶಿವಶಿವ ಸಭಾಸದರ್ಮ್ಮರುಗುವಿನಂ || ೨೨

ಎನೆ ಕಳೆಯೇರಿದ ನುರ್ವ್ವಿದ |
ನನುರಾಗಂ ದಾಳ್ದನಭವ ನಡಿದಾವರೆಯಂ ||
ನೆನೆದ ನಮುರ್ಚ್ಛಿದ ನಾಸಿಜ |
ಜನಕನ ಕನದಂಘ್ರಿ ಕಂಜದೊಳ್ಪರೆನೊಸಲಂ || ೨೩

ವಚನ|| ಅಂತೆರಗಿ ಬೆಸನಂ ಪಡೆದೇಳ್ದು ನಿಂದು—

ಕಂ|| ನಿಮ್ಮಯ ಮನಕ್ಕೆ ವಾಡಿದೆ |
ನುಮ್ಮಳವುಂ ಜನಕ ಗಿರಿಶಭಕ್ತಿಯ ಶಿಶುವಂ ||
ದಿಮ್ಮಿದರಲ್ತೆನೆ ಕಡುಪಿಂ |
ದಾಂ ಮಡಿಪಿದೆನೆನ್ನವೋಲ್ಕೃತಘ್ನರುಮೊಳರೇ || ೨೪

ಮರೆವುದಿದನೆಂತುಮೆನ್ನಂ |
ಮರೆಯಲ್ಬಲವಾಗದೆಂದು ಬೀಳ್ಕೊಂಡಳಲಿಂ ||
ಪೊರಮಟ್ಟನಮುಮ ಪದಪಿಂ |
ನೆರೆ ಗಲಿಗಳದೇವ ನಾವ್ಪರ್ಮಿಗೆ ಯುವರಾಜಂ || ೨೫

ಒಡನೇಳ್ದು ತನ್ನಿರೂಪಂ |
ಬಿಡೆದಾಸಚಿವೇಂದ್ರನಾ ನರೇಂದ್ರಾತ್ಮಜನೊಳ್ ||
ನಡೆತಂದಂ ಪೆರತೊಂದಂ |
ಕಡುಕಜ್ಜಮನಲ್ಲಿ ತನ್ನೊಳಾಳೋಚಿಸುತುಂ || ೨೬

ವಚನ|| ಅಂತು ನಡೆತಂದಾಕುಮಾರನ ಸತ್ಯವಚನಕ್ಕಮಾತನ ಧೈರ್ಯೋನ್ನತಿಗಮಾತನುತ್ಕಟಶಿವಭಕ್ತಿಗಂ ಮನದೊಳ್ಮೆಚ್ಚಿ ಪೊಗಳ್ದು ದೇವಾ ನೀಮುವಿಾಕ್ಷಣಂ ಮೃಡಪೂಜೆಗೆಯ್ದು ಬರ್ಪುದೆಂದಂತಃಪುರದಂತಮನೆಯ್ದಿಸಿ ತಾನುಂ ನಿಜನಿಳಯಕೇಳ್ತಂದ ತೀವಭಕ್ತಿಯಿಂದೇಕಾಂತಭವನದೊಳು ಮಾಳಾಂತನಂ ಪೂಜಿಸುತನಂತರಂ—

ಕಂ|| ನಿತ್ಯಂ ನಿಜೇಶ್ವರಪ್ರಿಯ |
ಕೃತ್ಯಂ ಶಿವಭೃತ್ಯ ನಧಿಕಸತ್ಯಂ ಘನಸಾ ||
ಹಿತ್ಯಂ ಜನನುತ್ಯಂ ಸದ |
ಮಾತ್ಯಂ ಕರತಳದೊಳಲಗ ನಳವಡಿಸುತ್ತುಂ || ೨೭

ವೃ|| ಒಡೆಯನಗ್ಗದ ಪುತ್ರನನೀಗಳಾಂ|
ಮಡಿಪುತಕ್ಕಟ ಬೆಂದಶರೀರಮಂ ||
ಪಿಡಿದು ಬಾಳ್ವನೆ ಧಾತ್ರಿಯೊಳೆಂದು ತ |
ನ್ನೊಡಲನೀ ಗಲೊಡರ್ಚ್ಚುವ ನಾಕ್ಷಣಂ || ೨೮

ವಚನ|| ಅಂತೊಡರ್ಚ್ಚಿ ಶಿವಾಂಘ್ರಿಯುಗಳಮನೆರ್ದೆಯೊಳನುಗೊಳಿಸಿ ನಮಿಸಿ—

ಕಂ|| ಕಡುಗಲಿ ಚಂಡಿಕೆಯಂ ತೆ |
ನ್ನೆಡಗಯ್ಯಿಂದಡಸಿ ಪಿಡಿದು ಸಾರ್ಚ್ಚಿ ಕೊರಲ್ಗಾ ||
ಕಡುಗಮನೆ ಘುರಿಘುರಿಲನೆಡೆ |
ಯುಡುಗದೆ ಕೊರೆದರರೆ ಮಡಗಿದಂ ನಿಜಶಿರಮಂ || ೨೯

ಪತಿಯಾಣತಿಯಂ ವಿಾರದೆ |
ಪತಿಯಣುಗನನೆಯ್ದೆ ಮಡಿಪಲಾರದೆ ಮಡಿದಂ ||
ಪತಿಮೋಹಿ ಸಚಿವಸಂಕುಳ |
ಪತಿ ಪರಿಕಿಪೊಡೀತನೊರೆಗೆ ಬರ್ಪ್ಪವರೊಳರೇ || ೩೦

ವಚನ|| ಎಂದರಿದಖಿಳಪುರಜನಂ ಕೀರ್ತಿಸುತ್ತುಮಿರ್ಪ್ಪಿನಮಿತ್ತಲ್ರಾಜಶೇಖರ ರಾಜಂ ರಾಜಶೇಖರಪೂಜಾಗೃಹಮನೋಜೆಯಿಂ ಪೊಕ್ಕು ಮಿಕ್ಕು ನಿರ್ಮಳೀಕೃತಕರಚರಣನುಮಸಮಭಸಿತತ್ರಿಪುಂಡ್ರಲಸಿತಲಲಾಟತಟನುಮಭಿನವರುದ್ರಾಕ್ಷ ಮಾಲಾಕಲಿತಕಂಧರನುಮಾಗಿ—

ವೃ|| ವರಪಂಚಾಮೃತಪಂಚಗವ್ಯಮೃಗಭೂಕಾಶ್ಮೀರಸಮ್ಮಿಶ್ರಭಾ |
ಸುರವಾರಿಸ್ನಪನಂಗಳಂ ರಚಿಸಿ ಬಿಲ್ವೇಂದೀವರಾಬ್ಜಾದಿಯಂ ||
ಧರಿಸುತ್ತರ್ಪಿಸಿ ಧೂಪದೀಪವಿಳಸನ್ನೈವೇದ್ಯತಾಂಬೂಲಮಂ |
ನರನಾಥಾಗ್ರಣಿ ಪೂಜೆಗೆಯ್ದನೊಲವಿಂ ಶ್ರೀಶೈಲಜಾಕಾಂತನಂ || ೩೧

ವಚನ|| ಅಂತು ನಿರತಿಶಯಭಕ್ತಿಯಿಂದರ್ಚಿಸಿ ಕಣ್ದೆರೆವಿನೋಡಿ ಬಗೆಗೊಂಡುಭಾವಿಸಿ—

ವೃ|| ಕಾಮಾರಾತೇ ತ್ರಿಭುವನಪತೇ ಶರ್ವ ಭಕ್ತಾನುಕಂಪಿ |
ನ್ಸೋಮಾರ್ಧಾಂಕ ತ್ರಿಪುರಹರ ಕಾಲಾಂತಕ ತ್ರ್ಯಕ್ಷ ಶೂಲಿನ್ ||
ವ್ಯೋಮಾತೀತ ಪ್ರಣವಗ ಫಣಾಭೃದ್ಧರ ಸ್ವರ್ಗಮೋಕ್ಷ |
ಸ್ವಾಮಿನ್ದೇವ ಪ್ರಮಥಪರಿಷನ್ನಾಥ ತುಭ್ಯಂ ನಮೋಽಸ್ತು || ೩೨

ವಚನ|| ಎಂದಮಂದಾನಂದದಿಂದಿಂದುಧರನಂ ನುತಿಸುತೆರಗಿ ತತ್ಪ್ರಸಾದಂ ಬಡೆದನಂತರ ಮಖಿಳಮಾಹೇಶ್ವರರಂ ಬರಿಸಿ—

ವೃ|| ಘನತರಭಕ್ತಿ ಕೈಮಿಗೆ ಪದಾಬ್ಜಮನರ್ಚಿಸಿ ಪೂರ್ಣರಾಗದಿಂ |
ಧನಕನಕಾಂಬರಪ್ರಸರಸನ್ಮಣಿಭೂಷಣವೃಂದಮಂ ಮಹಾ ||
ವಿನಯದಿನಿತ್ತು ಕೈಮುಗಿದು ಕಿಂಕರಭಾವಮನಾಳ್ದು ಪೇಳ್ದು ಮು |
ನ್ನಿನ ನಿಜವೃತ್ತಮಂ ಪಡೆದವಂ ನಿರಸತ್ಕೃಪೆಯಂ ಕುಮಾರಕಂ || ೩೩

ಕಂ|| ತೊಡವೆಳಗುವೊಳೆಯೆ ವದನಮು |
ದುಡುಪತಿಯಂ ಪಳಿಯೆ ನೇತ್ರರುಚಿ ಚಂದ್ರಿಕೆಯಂ ||
ಜಡಿಯೆ ನಡೆತಂದನೊಲವಿಂ |
ಮೃಡನಂ ಜಾನಿಸುತೆ ಜನನಿಯಠಮನೆಗಾಗಳ್ || ೩೪

ವಚನ|| ಅಂತು ಬಂದು ಮಣಿಪೀಠಮನಳಂಕರಿಸಿ ವಿನಿಯೋಗದಮಡದಿಯರನಡುವೆ ಕುಳ್ಳಿರ್ದಮೃತಮತಿದೇವಿಯರಡಿದಾವರೆಗೆರಗಲೊಡನೆ—

ವೃ|| ಕಡೆಗಂ ಗಲ್ಕೆನೆ ತೋಳ್ಗಳಿಂ ನೆಗಪಿದಳ್ತಳ್ಕೈಸಿದಳ್ತನ್ನಕ |
ಣ್ಗಡೆಯಿಂ ತುಳ್ಕಿಮುದಶ್ರು ನೋಡಿ ನಲಿದಳ್ಮುಂಡಾಡಿದಳ್ಮುದ್ದಿಸು |
ತ್ತೊಡನರ್ಧಾಸನದಲ್ಲಿ ಕುಳ್ಳಿರಿಸಿದಳ್ಪೊತ್ತರ್ಪ್ಪಿದಳ್ಮತ್ತಮೆ |
ಲ್ಲಡಿಗೊಟ್ಟಳ್ಮದವಾಂತಳಾಜನನಿ ಪುತ್ರಸ್ನೇಹಮೆಂತಪ್ಪುದೋ || ೩೫

ವಚನ|| ಅನಂತರಂ—

ಕಂ|| ಮಗನೆ ಪೊಸತೊಂದು ಕಜ್ಜಂ |
ನೆಗಳ್ದ*ದೆನಗೆ ಮೊಗದೊಳರಿಪದೇನೆಂಬುದ ನೆಂ ||
ದೊಗುಮಿಗೆಯಿಂ ಮುದ್ದಿಸಿ ಮಿಗೆ |
ಮೃಗಶಾಬೇಕ್ಷಣೆ ಕುಮಾರನಂ ಬೆಸಗೊಂಡಳ್ || ೩೬

ವೃ|| ಜನನಿ ತುರಂಗಮೇರಿ ಬಲಗೂಡಿ ಬರುತ್ತಿರೆ ಮೆಟ್ಟಿತೊರ್ವ್ವಭ |
ಕ್ತನ ಶಿಶುವಂ ಕೊರಲ್ಪರಿಯೆ ಮಂತ್ರಿಕುಮಾರಕ ನಶ್ವಮಾತನ ||
ಲ್ತೆನೆ ನಿನಗಾದತಪ್ಪೆನಗೆನುತ್ತುಸಿರ್ದ*ಂಮೊದಲಂತದಕ್ಕೆ ಮ |
ಜ್ಜನಕನರೇಂದ್ರನೆನ್ನ ಶಿರಮಂ ಪಳಿಗಿತ್ತ ಪನಿಂದು ಸಿಕ್ಷೆಯಂ || ೩೭

ಕಂ|| ಅಂಬಿಕೆ ನಿಮ್ಮಡಿಗೆರಗುತೊ |
ಡಂಬಡೆ ಬೀಳ್ಕೊಂಡುಪೋಗಲೈದಿದೆನೆನ್ನಂ ||
ಪಂಬಲಿಸದೆ ಮಿತವಚನನ |
ನಿಂಬರಿದೆನ್ನಂತೆ ಕಾಣ್ಬುದಿಂತಿದೆ ಕಜ್ಜಂ || ೩೮

ವಚನ|| ಎಂದು ಮಗುಳ್ದಿಂತೆಂದಂ—

ವೃ|| ಮೊದಲೆಳೆಯರ್ಕಳಿಲ್ಲದುರೆ ದೂರಿಸಿ ಮದ್ಗುರುವಿತ್ತಮಂತ್ರದಿಂ |
ಪದಪಿನೊಳೀತನಂ ಪಡೆದು ಬಾಲ್ಯದ ಲೀಲೆಯನೊಲ್ದು ನೋಡಿ ಪೆಂ ||
ಪೊದವಿದಯೌವನೋದಯವಿಳಾಸಮನೀಕ್ಷಿಪಕಾಲಕಿಂತು ಬಂ |
ದುದೆ ಮೃತಿಯೆಂದು ಚಿಂತಿಸದಿರಿಂತಿದನಾಂ ಸೆರಗೊಡ್ಡಿ ಬೇಡಿದೆಂ || ೩೯

ವಚನ|| ಎಂದಾಯುವರಾಜರಾಜಶೇಖರಂ ಬಿನ್ನವಿಸೆ ತಾನತ್ಯಂತ ಶಿವನಿಷ್ಠೆಯಪ್ಪುದರಿಂ ತಲೆದೋರ್ಪ್ಪ ಮನಃಕ್ಷತಾಂಕುರಮಂ ಧೃತಿನಖಾಗ್ರದಿಂ ಚಿವುಂಟಿ ಮಗುಳ್ದು ಬರೆಸೆಳೆದು ಮೊಲೆತೊರೆಯೆ ಬಿಗಿದಪ್ಪಿ ಮೊಗಮಂ ನೋಡಿ ಮುದ್ದುಗೆಯ್ದು—

ಕಂ|| ಎನ್ನಾಳ್ದನ ಸತ್ಯಂ ಗೆಲೆ |
ನಿನ್ನಸುವಂ ಭಕ್ತಶಿಶುಗೆ ಕುಡು ಚಿಂತಯದೇ ||
ಕೆನ್ನಸುವೆ ಪಾರ್ವತೀಪತಿ |
ಪನ್ನಳಿನಭ್ರಮರಲೀಲೆದಳೆ ತಳಕೆಂದಳ್ || ೪೦

ಈಸತ್ಯವಚನ ಮೀನಯ |
ಮೀಸದ್ಗುಣ ಮೀವಿವೇಕಮೀ ಸಕಳಕಳೋ ||
ದ್ಭಾಸತೆ ಯೀಘನಧೃತಿ ಮಿ |
ನ್ಯಾಸಂ ಮತ್ತೂಸುಗಲ್ಲದನ್ಯರೊಳೊಳವೇ || ೪೧

ವಚನ|| ಎಂದು ಕೆಲದೊಳಿರ್ದ್ದ ಕೆಳದಿಯರೊಳ್ಪೊಗಳುತ್ತಿರ್ಪ್ಪಿನಮಲ್ಲಿಂ ಬೀಳ್ಕೊಂಡು ಧೃತಿಧರಾಧರಂ ರಾಜವೀಧಿಗೇಳ್ತಂದು ಸಚಿವವೃತ್ತಮಂ ದೂತವಚನದಿನರಿದು ಜನಕನಿಪ್ಪೆಡೆಗೇಳ್ತಂದೀವೃತ್ತಾಂತಮೆಲ್ಲಮಂ ಪೇಳ್ವಲೊಡನೆ ಕೇಳ್ದು ಸಕೌತುಕಾಂತರಂಗಂ ಸಂದಾಯಿಯೆಂಬ ಹಡಪವಳನಾನನಮಂ ಪಿಂತಿರಿಗಿ ನಿರೀಕ್ಷಿಸಿ—

ಕಂ|| ಹರಚರಣಭಕ್ತಿರಸಭಾ |
ಸುರಹೃದಯಾಂಬುರುಹ ನಾನರೇಶ್ವರನವನಂ ||
ಕರೆದೆಲವೊ ಪೋಗು ಕುವರನ |
ಶಿರಮಂ ಮಿಗೆ ತರ್ಪ್ಪುದೆಂದು ಬೆಸಸಿದನಾಗಳ್ || ೪೨

ವೃ|| ಜೀಯ ಮಹಾಪ್ರಸಾದ ಮೆನುತಂದೊಡನೆಳ್ತರೆ ಖಡ್ಗಮಾಂತುಸಂ |
ದಣಯಿಯೆನಿಪ್ಪ ಭೃತ್ಯನವನೀಶ ಸಭಾಂತರದತ್ತಣಿಂ ಸರೋ ||
ಜಾಯತನೇತ್ರನೊಲ್ದು ಪೊರಮಟ್ಟದಟಿಂ ನಡೆಗೊಂಡನಲ್ಲಿ ಭೂ |
ಪ್ಪಾಯುಧ ವೈರಿಯಂಘ್ರಿಗಳ ನಾಂತೆರ್ದೆಯೊಳ್ಮಿಗೆ ರಾಜಶೇಖರಂ || ೪೩

ವಚನ|| ಅಂತು ರಾಜವೀಧಿಯೊಳೈತಪ್ಪಿನ ಮಾಪೌರಜನಂ ನಿರೀಕ್ಷಿಸಿ—

ವೃ|| ಚತುರಂಭೋನಿಧಿ ಮುಟ್ಟಿದುರ್ವರೆಗಧೀಶತ್ವಂಗಡಾ ವಿಶ್ವವಿ |
ಶ್ರುತಸಾಮಂತ ನರೇಂದ್ರಮೌಳಿಘಟಿತಾಂಘ್ರಿತ್ವಂಗಡಾ ಯೌವನಾ ||
ನ್ವಿತಸೌಂದರ್ಯತನುತ್ವ ಮುಂಗಡ ಬಳಿಕ್ಕಂತಾದೊಡಂ ತನ್ನ |
ಜೀವಿತಮಿಾವಂಗಡ ನನ್ನಿಗೀಕುವರನಂ ಪೋಲ್ಪನ್ನರಾ ಧಾತ್ರಿಯೊಳ್ ||೪೪

ಕಂ|| ಅಕ್ಕಟಸತ್ಯೇಂದ್ರಂಗಿದು |
ತಕ್ಕದೆ ನುಡಿದಂಡವೊಳವೆ ಸಚಿವಸುತಾಶ್ವಂ ||
ಚೆಕ್ಕನೆ ಮಗುವಂ ಮುಡಿಪಿದೊ |
ಡಿಕ್ಕಿದಪಂ ಗಡ ಕುಮಾರಕುಸುಮಾಯುಧನಂ || ೪೫

ವಚನ|| ಎನುತ್ತಿರೆಯಿರೆ ಮತ್ತ ಕೆಲಂಬರಬಲೆಯನ್ನೆರೆದು—

ವೃ|| ಬಿಸುಸುಯ್ದಂಬಕದಂಬುವಂ ಮಿಡಿದು ಹಾಯೆಂದಳ್ತು ಕೈನೀಡಿ ತೆ |
ಳ್ವಸಿರಂ ಮೇಣ್ಪೊಸೆದೆಲ್ಲಿಬಂದುದೊ ತುರಂಗಂ ಕೇಳಿಯೇಕಾದುದೀ ||
ಶಿಶುವಿಂತೇಕಳಿದತ್ತೊ ದೂರಿದಳದೇಶಕ್ಕೀಕೆ ವೋ ವೋ ವೊ ಕೋ |
ಪಿಸಿ ಚೊಳಾಧಿಪನೇಕೆ ಕೊಲ್ವನೊ ಧರಿತ್ರೀಮಿತ್ರನಂ ಪುತ್ರನಂ || ೪೬

ವಚನ|| ಎಂದೆಂದಳಲ್ದು ಬಳಲ್ದು ಮರುಗುತ್ತಿರ್ಪನ್ನೆಗಂ—

ವೃ|| ನಡೆತಂದಂ ಧೃತಿಮೇರು ಸತ್ಯನಿಧಿ ಸಾಹಿತ್ಯಾಬ್ಜಸೂರ್ಯಂ ಮಹಾ |
ಮೃಡಭಕ್ತಿಪ್ರಮದಾಮನೋರಮಣನಾ ಶ್ರೀಮಂತ್ರ ಲಕ್ಷ್ಮಾಂಕನೊ ||
ಳ್ಪಡರ್ದ್ಯಾನಧರಿತ್ರಿಯಲ್ಲಿಗಧಟಿಂ ಪದ್ಮಾಸನಂ ಗೊಂಡು ನೇ |
ರ್ಪಡೆ ಕುಳ್ಳಿರ್ದಗಜೇಶನಂ ನಿಜಮನಃಪಂಕೇಜದೊಳ್ತಾಳ್ದಿದಂ || ೪೭

ವಚನ|| ಅಂತು ತಾಳ್ದಿಖರ್ವ ಭಕ್ತಿಯಿಂದೆರಗಿ—

ವೃ|| ಪ್ರಮಥಗಣಾನ್ವಿತಂ ವಿಧಿವಿಧುಪ್ರಮುಖಾಮರಸಂಕುಳಾವೃತಂ |
ಹಿಮಗಿರಿಕನ್ಯಕಾಸಹಿತನಂ ಗಜಮರ್ದನನಂಬರಪ್ರದೇ ||
ಶಮ ನಡರ್ದ*ಲ್ಲಿ ನೋಡುತಿರೆ ರಾಜಕುಮಾರಕ ನೋಜೆಯಿಂದೆ ಖ |
ಡ್ಗಮ ನಿರದೆತ್ತಿ ಮೇಣ್ಜಡಿದು ಕಂಠಕಮುಚ್ಚ್ರಲೊಡಚ್ಚುರ್ತಿಪ್ಪಿನಂ || ೪೮

ಕಂ|| ಕರಪೊಸತು ಜೀಯಪಂಚಾ |
ಕ್ಷರಮಂ ನೀಂ ಮರೆದು ಮಡಿಯಲುಜ್ಜುಗಿಪುದಿದೆಂ ||
ದಿರದನುಚರನೆನೆ ಮೊಗದೊ |
ಳ್ದರಹಸನಂ ಮೊಳೆಯೆ ಮಂತ್ರಲಕ್ಷ್ಮಂ ನುಡಿದಂ || ೪೯

ಎನಗಾಪ್ತನಲ್ತೆ ಮರೆದಿರೆ |
ನೆನೆಯಿಸಿದ್ಪೈ ಭಾಪು ನಿನಗದಾರ್ಸ್ಸರಿ ಪೇಳೆಂ ||
ದೆನೆ ಕೌತುಕ ಮೊಗೆತರೆ ನೃಪ |
ತನಯನನಾಕಿಂಕರಂ ಕರಂ ಬೆಸಗೊಂಡಂ || ೫೦

ವೃ|| ಸರಸಮೆ ದೇವ ಕಿಂಕರನೊಳಿಂತಿದ ರೊಂದಿರವಿಂತುಟೆಂದು ಬಿ |
ತ್ತರಿಪುದು ಜೀವನಿಷ್ಕ್ರಮಣದೊಳ್ಮಿವಮಂತ್ರಜಪಂ ಪ್ರಶಸ್ತಮೆಂ ||
ದೊರೆವಹಿತೋಕ್ತಿಯೇ ಪುಸಿಯೊ ಪೇಳೆನೆ ನಿನ್ನಯಭೃತ್ಯವೃತ್ತಿ ಭೂ |
ವರನ ನಿಜಾಜ್ಞೆ ಕೆಟ್ಟಪುದೆನುತ್ತುಳಿದೆಂಗಡ ದಿವ್ಯಮಂತ್ರಮಂ || ೫೧

ವಚನ|| ಎಂದಾರಾಜಕುಮಾರನ ಗಂಭೀರೋಕ್ತಿಯನಾ ಕಿಂಕರನಾಕರ್ಣಿಸಿ—

ಕಂ|| ಇದುಚಿತ್ರಂ ನೀಂ ಜಪಿಸಿದೊ |
ಡಿದರಿಂದೆನ್ನಾಳ್ತನಂ ಜನಾಧಿಪನಾಜ್ಞಾ ||
ಪದಮಳಿಗು ಮೆಂಬಬಗೆ ಬಗೆ |
ಗೊದವಿದ ಸಂದೆಗಮ ನಿಳಿಪಿಳಾಧಿಪತಿಳಕಾ || ೫೨

ವೃ||ಇಂತೆಂದೋರಂತೆ ಲೆಂಕಂಬೆಸಗೊಳೆ ಕಮಳಾಕಾಂತನುಂಬೊಮ್ಮನುಂತಾ|
ಮೆಂತುಂ ಭೇದಂಗಳುಂ ಕಾಣದಪರಶಿವನಂ ತೋರ್ಪ್ಪಸಾಮರ್ಥ್ಯಮಂ ತಾ||
ಳ್ದಂತಿಂತೆಂಬೂಹೆಯಂ ಮೀರಿದನಿರುಪಮ ಸನ್ಮಂತ್ರಮಂ ಪೇಳಲಾಂ ಖ |
ಡ್ಗಂ ತಾಂ ಪೂಮಾಲೆಯಾದಪ್ಪುದು ಪರಿಯದೆ ಪೋದಪ್ಪುದೆಂದಂ ಕುಮಾರಂ||

ವಚನ|| ಅದರಿನರಸಾಜ್ಞೆಯುಂ ನಿನ್ನಭೃತ್ಯತೆಯುಂ ಮೊದನೆ ಕೆಡುಗುಮೆನಲಡಂಕೇಳ್ದು ಕೌತುಕಂದಾಳ್ದು—

ಕಂ|| ಆದೊಡಮೆನ್ನಯ ಭೃತ್ಯತೆ |
ಪೋದೊಡ ಮೆನ್ನರಸನಾಜ್ಞೆಯಳಿದೊಡದೇಂ ನೀ ||
ನೋದದೆ ಮಂತ್ರಮನಳಿದೊಡೆ |
ಮಾದೇವನೊಳೈಕ್ಯವೃತ್ತಿಯೇಂ ಸಮನಿಸುಮೇ || ೫೪

ವಚನ|| ಎನೆ ಮುಗುಳ್ನಗೆನಕ್ಕು—

ಕಂ|| ಒಂದಿನಿತುಪೊಳ್ತು ಸೈರಿಸಿ |
ಸಂದಾಯಿ ನಿರೀಕ್ಷಿಸುತ್ತು ಮಿರು ತ್ತೋರ್ದಪನೆ ||
ಸ್ನಂದವು ಸೆನುತ್ತೆ ಪೂಣ್ದಿಸಿ |
ರ್ದ*ಂದರಸಂ ಖಡ್ಗಮಂ ಕೊರಲ್ಗೊಂದಿಸಿದಂ || ೫೫

ವೃ|| ಎಲೆಎಲೆ ದೇವದೇವ ಕುವರಂ ಕೊರಲಂ ಕೊರೆದಪ್ಪನಯ್ಯೊ ನಿ |
ಶ್ಚಲಕರುಣಾಸಮುದ್ರ, ಶಶಿಶೇಖರ ಶಂಕರ ಕಾವುದೀವುದು ||
ಜ್ಜ್ವಲಸುಖಮಂ ಸಮಂತೆನೆ ಕೃಪಾಕರೆ ಶಾಂಕರಿ ಮುಂದೆ ಕಜ್ಜಮುಂ |
ಟೆಲೆಗಿರಿಜಾತೆ ಸೈರಿಪುದಭೀಕ್ಷಿಪುದದ್ಭುತಭಕ್ತಿಯುಕ್ತರಂ || ೫೬

ವಚನ|| ಎಂದಂಬರದೊಳ್ತ್ರ್ಯಂಬಕ ನಂಬಿಕೆಯ ನೊಡಂಬಡಿಸುತ್ತು ಮಿರೆಯಿರೆ—

ವೃ|| ನಡೆನೋಡುತ್ತಿರೆ ಕಿಂಕರಂ ಮುಗಿದಕಯ್ಯಂ ಪೊತ್ತು ಚಿತ್ತಾಂತದೊ |
ಳ್ಮೃಡನಂ ಜಾನಿಸಿ ಖಡ್ಗಮಂ ಜಡಿದು ಸಾರ್ಚ್ಚತ್ತಾತ್ಮ ಕಂಠಕ್ಕೆ ಕೈ ||
ಗುಡೆ ಸಾಸಂ ಘರಿಲೆಂಬಿನಂ ಕೊರೆದಿಳಾಧೀಶಂ ಮಹಾಮಂತ್ರಮಂ |
ಬಿಡದೋರಂತೊದರುತ್ತು ಮಿರ್ಪಶಿರಮಂ ತಾಳ್ದಂ ಕರಾಂಭೋಜದಿಂ || ೫೭

ಕಂ|| ಪೊಸತೊಂದು ತೇಜಮದು ರಂ |
ಜಿಸೆ ಥಳಥಳಿಸುತ್ತೆ ನೋಡಲಣ್ಮದೆ ಭೃತ್ಯಂ ||
ಕುಸಿದೆರಗಿ ನಿಂದು ಮಿಗೆ ಕೀ |
ರ್ತಿಸುತಿರೆ ತತ್ಕರಕೆ ನೀಡಿದಂ ನಿಜಶಿರಮಂ || ೫೮

ವೃ|| ಅರಮುಗನೆಂದವೋಲ್ನೆಗಳ್ದ ಕಜ್ಜಮ ನೀಕ್ಷಿಸಿ ಚೋದ್ಯವಟ್ಟು ಕಿಂ |
ಕರನೆರಗುತ್ತೆ ಮತ್ತವನ ನಲ್ನುಡಿ ತಾನುಪದೇಶಮಾಗೆ ತ ||
ತ್ಸುರುಚಿರಮೂರ್ತಿ ತನ್ನ ಒಗೆಯೊಳ್ನೆಲೆಗೊಂಡಿರೆ ಕೀಟಭೃಂಗದಂ |
ತಿರೆ ಶಿವಮಂತ್ರಸಿದ್ಧನೆನಿಸಿರ್ದನದೆಂತೊ ಮಹಾತ್ಮಸಂಗಮಂ || ೫೯

ವಿಲಸತ್ಪಂಚಾಕ್ಷರೀಸಲ್ಲಲಿತ ತರುಲತಾ ಕಂದವೋ ಭಕ್ತಿವಲ್ಲೀ |
ಫಲಮೋ ನಿರ್ವಾಣಲಕ್ಷ್ಮೀಕಲಿತಕಮಲಮೋ ಸತ್ಯದುಗ್ಧಾಬ್ಧಿಪೂರ್ಣಾ ||
ಮಲಿನಪ್ರಾಲೇಯರುಜ್ಮಂಡಳವೋಮಹಿತಚಿದ್ವ್ಯೋಮದಾದರ್ಶವೋ ಮಂ |
ಜುಲ ತೇಜಃಪಿಂಡವೋ ಪೇಳೆನೆ ಮೆರೆದುದು ತದ್ರಾಜಪುತ್ರೋತ್ತಮಾಂಗಂ ||

ವಚನ|| ಅಂತುಮಲ್ಲದೆಯುಂ—

ವೃ|| ಅದುಗಗನಂಬೊಲಬ್ಜಮಧುರಂ ಮಧುರಂಜಿತ ನಂದನಂಬೊಲ |
ಭ್ಯುದಿತರಸಾಲ ಸಸ್ಮಿತ ಸಮುದ್ಗಮದಂತೆ ಸದ್ರಮಾ ||

ಸ್ಪದಮಮೃತಾಬ್ಧಿಯಂತೆ ಸರದಚ್ಛವಿರಾಜಿ ವಿರಾಜಿವೋಲ್ಪಿದಾ ॥
ಘುದ ನವವಿದ್ರುಮಾಧರದಳಾಶ್ರಿತ ಮಾಶ್ರುತದಂತೆ ಸಂಭೃತಂ ॥ ೬೧

ವಚನ॥ ಅಂತೆಸೆವ ಶಿರೋಬ್ಜಮಂ ಕರಾಬ್ಜದೊಳ್ಪಿಡಿಯಲ್ಕೆ ಕೊಂಡು ಸೂರ್ಯವೀಧಿಯೊಳವಂ ತಳ್ವದೈತರುತ್ತು ಮಿರೆಯಿರೆ—

ಕಂ॥ ಅಮರ್ದಿನೊಳಳ್ದಿದಕಮಳವೊ ।
ವಿಮಳಸುಧಾಬ್ಧಿಯೊಳೆ ಪುಟ್ಟಿದಮೃತದ್ಯುತಿ ಬಿಂ ॥
ಬಮೊಪೇಳೆನೆ ಮೆರೆದುದು ಹಸ ।
ನಮುಖಾಮೃತಮುಖಂ ನರೇಂದ್ರಾತ್ಮಜನಾ ॥ ೬೨

ವೃ॥ ಪುರನಾರೀಜನ ವೀಕ್ಷಿಸುತ್ತೆ ಮರುಗುತ್ತಿರ್ಪನ್ನೆಗಂ ಕಾಣುತ |
ಚ್ಚರಿಯೆಂದಲ್ಲಿ ಬುಧರ್ಕಳೊಲ್ದು ಪೊಗಳುತ್ತಿರ್ಪನ್ನೆಗಂ ಶೈವಭ |
ಕ್ತರದೆತ್ತಂ ನೆರೆದಾರ್ದುಘೋಜಯ ಯೆನುತ್ತಿರ್ಪನ್ನೆಗಂ ತಂದು ಕಿಂ |
ಕರನಾಮಸ್ತಕಮಂ ಕರಾಂಬುಜದೊಳಿತ್ತಂ ಚೋಳಭೂಪಾಲನಾ ॥ ೬೩

ವಚನ॥ ಆಗಳ್—

ವೃ॥ ಕಮಳದಳಾಯತೇಕ್ಷಣರುಚಿಪ್ರಸರಂ ಭಸಿತತ್ರಿಪುಂಡ್ರಮಂ |
ಜಿಮಯುತಫಾಲಮಾಲಲಿತ ಕುಂಡಲಮಂಡಿತಗಂಡಮಂಡಳಂ ॥
ವಿಮಳರದದ್ಯುತಿಸ್ಫುಟರದಚ್ಛದ ಮುದ್ಗತಮಂದಹಾಸವಿ |
ಭ್ರಮಮುರುಮಂತ್ರನಾದಮಹಿತಂ ಶಿರಮೊಪ್ಪಿದುದಾ ಕುಮಾರನಾ ॥ ೬೪

ವ॥ ಅಂತೊಪ್ಪುತ್ತು ಮಿರ್ಪ ನಿಜತನಯನುತ್ತಮಾಂಗಮನುದಾತ್ತಚಿತ್ತಂ ನಿರೀಕ್ಷಿಸುತ್ತುಂ-

ಕಂ॥ ಮೃಡಪಂಚವರ್ಣಮಂತ್ರಮ |
ನಡಿಗಡಿಗೆಡೆವಿಡದೆ ನುಡಿವಬಗೆ ಗಂಡರಸಂ ॥
ಪಡೆದಚ್ಚರಿಯಂ ಶಿವಶಿವ |
ಕಡುಪೊಸತಿಳೆಗಿಂತಿದೆಂದು ವಿಸ್ಮಿತನಾದಂ ॥ ೬೫

ನುತಸೌರಭಾಸ್ಪದಶ್ರೀ |
ಯುತ ಮುದಿತಗುಣಾಂಕಮಖಿಳಸಾರಂ ಭುವನೋ ॥
ನ್ನತ ಮೆನಿಪ ಸುತ ಶಿರೋಬ್ಜದೊ |
ಳತಿರತಿವಡೆದತ್ತು ಪಂಚವರ್ಣಭ್ರಮರಂ ॥ ೬೬

ವಚನ॥ ಎಂದು ಕೆಲದೊಳಿರ್ದ ವೃದ್ಧರಾಜನ್ಯಕದೊಳೊಪ್ಪಗಲ್ದ ನಿಜಾನುಚರನ ವದನಾರವಿಂದಮಂ ನೀಡುಂ ನೋಡಿ—

ಕಂ|| ಎಂತು ಪರಿದಿತ್ತನೀಕುವ |
ರಂ ತಡೆಯದೆ ಮಂತ್ರಸಹಿತಮೀಶಿರಮನದೆಂ ||
ತೆಂತು ಸಿರ್ದ*ನೆಲವೊ ಮುಂ ಪೇ |
ಳ್ನೀಂ ತಳ್ವದೆನುತ್ತೆ ಭೂವರಂ ಬೆಸಗೊಂಡಂ || ೬೭

ವಚನ|| ಅಗಳಾತನಾ ಯುವರಾಜ ನೆಂದುದುಮಂ ತಾನೆಂದುದು ಮನಿ ನಿಸುಳಿಯು ದೆಲ್ಲಮಂ ಪೇಳ್ದನಂತರಂ—

ವೃ|| ಅದನೇವೇಳ್ವುದೊ ಭೃತ್ಯಮುಖ್ಯನಳವಂ ತನ್ಮೂರ್ತಿಯಂ ಜಾನಿಸು |
ತ್ತದರಿಂ ಯೋಗಿ ಮಹೇಶನಂನೆನೆದು ತಾನಾದಂತಿರಾವೇಶಮುಂ ||
ಗದೊಳಿತ್ತಂ ಬಿಡೆತೀವೆ ನಿಷ್ಠೆ ಮಿಗೆ ನೋಡಿಂತೆಂದು ಖಡ್ಗಾಗ್ರದಿಂ |
ದದಟಿಂ ಮೋಣ್ಕೊರೆದಿತ್ತನಾತ್ಮಶಿರಮಂ ಸನ್ಮಂತ್ರಸಂಯುಕ್ತಮಂ || ೬೮

ವಚನ|| ಅಂತಿತ್ತಾಗಳಾಶಿರಮ ನಾನರೇಂದ್ರಂ ನಡೆನೋಡಿ ವಾಮಕರದೊಳ್ಪಿಡಿದು-

ಕಂ|| ಸುಲಿಪಲ್ನೆರೆ ಮಿರುಗುತ್ತಿರೆ |
ಎಲಸನ್ಮಂತ್ರಮನೆ ಜಪಿಸತನ್ಮಸ್ತಕಮಂ ||
ನಲಿಸಲಿದು ನೋಡಿ ನರಪತಿ |
ತಿಲಕಂ ನಿಜಭೃತ್ಯಕೃತ್ಯಮಿದು ಪೊಸತೆಂದಂ || ೬೯

ವಚನ|| ಅಗಳ್—

ಕಂ|| ಹರಶರಣಸಂಗಮೇನಂ |
ದೊರಕೊಳಿಸದೊ ವಿಪುಳಮಹಿಮೆಯಂ ಶಿವಶಿವ ಭೂ ||
ವರನಣುಗನ ಸಂಗತಿಯಿಂ |
ದೊರೆದುದಿವಂಗೆವನವೋ ಲ್ಮಹಾಮಂತ್ರಜಪಂ || ೭೦

ಮೊದಲಳಿದಮಂತ್ರಿಪಂಗೇ |
ನಿದು ದೊರೆದುದೆ ಪರಮಮಂತ್ರ ಮಿಾಭೃತ್ಯಂಗಾ ||
ದುದು ಬಳಿಯಿನಳಿದವಂಗಂ |
ತದರಿಂ ಘನಮಂತ್ರಿ ಬಗೆವೊಡೀಭಟನಲ್ತೆ || ೭೧

ವಚನ|| ಎಂದನೇಕಸುಜನಜನಂ ನುತಿಸುತ್ತುಮಿರೆಯಿರೆ—

ಕಂ|| ತಿರುಕೊಳವಿನಾಚಿನಿನ್ನಯ |
ವರಸುತಶಿರವೊಂದಕೆರಡು ಶಿರಮಿದೆ ನೋಡೆಂ ||
ದಿರಿಸಿದ ನವನಿಪ ಕುಲಶೇ |
ಖರನುರೆ ಶಂಕರನ ಶಿರದ ಕೆಲದೊಳ್ಬಲದೊಳ್ || ೭೨

ತಳಿವಸುಧೆ ಪೊಳೆವಸುಳಿಪ |
ಲ್ಕೆಳಗದು ಸಂಜೀವನಾಖ್ಯಮಂತ್ರಂ ಜಪಿಪ ||
ಗ್ಗಳಮಂತ್ರಮಾಗೆ ಶಿಶುಶಿರ |
ದೊಳೆ ಜೀವಂ ಬಡೆದುದಾ ಶಿರೋದ್ವಯಮಾಗಳ್ || ೭೩

ಎರಡುಂ ಕಿವಿಗಳೊಳಿರದು |
ಚ್ಚರಿಪ ಮಹಾಮಂತ್ರಮಾಸ್ಯವಿವರದೆ ಪೊರಪಾ ||
ಯ್ವಿರವನನುಕರಿಸಿ ತನ್ಮಂ |
ತ್ರರವಂ ಬಡೆದಿದ್ದುದಾಶಿರಂ ಶಂಕರನಾ || ೭೪

ವಚನ|| ಆಗಳಾ ತತ್ಪ್ರಭಾವಮಂ ನಖಿಳರುಂ ಪೊಗಳುತ್ತುಮಿರ್ಪಿನಂ ತಿರುಕೊಳವಿನಾಚಿ ಸಂದಾಯಿಯು ಕಬಂಧದ ಕರತಳದಖಡ್ಗಮಂ ಕಳೆದುಕೊಂಡು—

ವೃ|| ಕೇಳೆಲೆ ಚೋಳಭೂಪತಿ ಮದೀಯತನೂಜನ ಮಸ್ತಕಕ್ಕೆ ಲೋ |
ಕಾಳಿಯುನೊಲ್ದು ಪಾಲಿಪ ಕುಮಾರನ ಮಸ್ತಕಮಿತ್ತೆಯಲ್ಕೆ ನಿ ||
ನ್ನಾಳೆನಿಸಿರ್ದನೀಶಿರಕೆ ಮುಬ್ಬಿರಮೇ ಪಳಿ ನೋಳ್ಪುದೆಂದವ |
ಳ್ಬಾಳನಮುರ್ಚಿಗೋಣ್ಗೊರೆದು ಸಾರ್ಚಿದಳಾತ್ಮಸಮಂತ್ರಶೀರ್ಷಮಂ||೭೫

ವಚನ|| ಆಗಳ್—

ಕಂ|| ತಿರುಕೊಳವಿನಾಚಿಯೆಸಗಿದ |
ಪರಿಗಚ್ಚರಿವಟ್ಟು ನೃಪತಿ ಸಚಿವನ ಶಿರಮಂ ||
ತರಿಸಿ ಬಳಿಯಿರಿಸಿ ನೋಳ್ಪಿನ |
ಮಿರದದು ಮಭವಾಂಕ ಮಂತ್ರಮಾಂತುದು ಪದಪಿಂ || ೭೬

ಪಂಚತ್ವಮ ನಾನದೆಯುಂ |
ಪಂಚತ್ವಮ ನಾಂತು ಪರಮ ಪಂಚಾಕ್ಷರಮಂ ||
ಪಂಚಮೆನೆ ಜಪಿಪ ತಲೆಗಳ |
ಪಂಚಮುಖಧ್ಯಾನಿ ಚೋಳನೃಪನೀಕ್ಷಿಸಿದಂ || ೭೭

ವಚನ|| ಅಂತೀಕ್ಷಿಸುತ್ತುಮಾಪಂಚಶಿರಃಪಂಚವರ್ಣಂಗಳ್ಗಿನ್ನ ಶಿರಃಪ್ರಣವದಿ ನಳಂಕರಿಪೆನೆಂದು ತ್ವಾಹಿಸಿ ಶಿತಾಸಿಯಂ ಕೊರಳ್ಗಮರ್ಚಿಕೊರೆದು—

ಕಂ|| ನರನಾಥಂ ಮಸ್ತಕಮಂ |
ಶಿರೋಧಿಯಿಂದಿಳಿಸಿ ವಾಮಕರದೊಳ್ಯಮಸಂ ||
ಹರನ ಪೆಸರೆನಿಪಪಂಚಾ |
ಕ್ಷರಮಂ ಜಪಿಪಂತೆ ಮಾಡಿ ಮಡಗಿದನಾಗಳ್ || ೭೮

ವೃ|| ಮರಕತಕುಂಡಳದ್ಯುತಿ ಸುವರ್ಣಕಿರೀಟಮಯೂಖಮು ಕ್ತಿಭಾ |
ಸುರತರತಾರಕಾಂಶು ರದನಚ್ಛದದೀಧಿತಿ ಮಂದಹಾಸಬಂ ||
ಧುರರುಚಿ ತಳ್ತು ರಂಜಿಸೆ ತದೀಯಶಿರಂ ವರಪಂಚವರ್ಣಪಂ |
ಜರಮೆನೆ ಪಂಚವರ್ಣಶುಕ ಮೊಪ್ಪಿದುದಲ್ಲಿ ಚಿದಂಗನಾಪ್ರಿಯಂ || ೭೯

ವಚನ|| ಅನಂತರಮಾ ಮಿತವಚನನಾಠಾಣಕ್ಕೆಳ್ತಂದಮಂದಿರ ಶಿರಂಗಳಿರಮಂನೋಡಿ—

ವೃ|| ಶಂಕರನಂ ಕರಂ ತಳೆದು ದೆನ್ನ ತುರಂಗಮಿಳೇಶಪುತ್ರನಂ |
ಸೋಂಕಿದುದಲ್ತೆನೆನ್ನರನೆ ಮಾತಿನಮಾಲೆಯು ದೂರಿದಕ್ಕಟಾ ||
ಶಂಕಿಸದೆಲ್ಲರಿಂತಳಿದರಾಸಿವರಿಂ ಮೊದಲೈದದಾದೆನೆ |
ನ್ನಿಂ ಕಡುಗಾಂಪನಾವನೊ ಧರಿತ್ರಿಯೊಳೆಂದು ಕರಾಳಖಡ್ಗಮಂ || ೮೦

ಕಂ|| ಸೆಳೆದಭವನಂಘ್ರಿಗೆರಗು |
ತ್ತೊಳಗೆ ಕೊರಲ್ಗೆಯ್ದೆ ಸಾರ್ಚಿ ಘರಿಲೆನೆ ಕೊರೆದು ||
ಜ್ಜ್ವಳಪಂಚಾಕ್ಷರಜಪಮಂ |
ತಳೆವಂತಿರೆ ಮಾಡಿ ಮಡಗಿದಂ ನಿಜಶಿರಮಂ || ೮೧

ವೃ|| ಅರಸಿ ನಿಜೇಶ್ವರಾತ್ಮಜಮುಖತ್ತಲೆಗೊಟ್ಟರೆನಿಪ್ಪವಾರ್ತೆಯಂ |
ತರುಣಿಯರಿಂದೆ ಕೇಳ್ದು ತರುಣೇಂದುಧರಾಂಘ್ರಿಪಯೋಜಪೂಜೆಯಂ ||
ವಿರಚಿಸಿ ರತ್ನಭೂಷಣರುಚಿಪ್ರಸರಂ ವದನೇಂದುಕಾಂತಿ ಸೈ |
ವರಿಯೆ ಕುಮಾರಕಾಂತೆಯೊಡನೇಳ್ತರೆ ಬಂದಳುದಗ್ರವೃತ್ತಿಯಿಂ || ೮೨

ವಚನ|| ಆಗಳ್ಸಚಿವಸತಿಯುಂ ಮಿತವಚನಕಾಂತೆಯುಮೊಡನೇಳ್ತರೆ ಸಭಾಸ್ಥಳಕ್ಕೇಳ್ತಂದು ನಿಂದು ನೀಡುಂನೋಳ್ಪನ್ನೆಗಂ—

ವೃ|| ಹರಿನೀಲಸ್ಫುಟಕಟ್ಟಿಮಸ್ಥಳಸರಸ್ಸ್ಥಾನಸ್ಥಿತಂಗಳ್ಮಹೇ |
ಶ್ವರನಿಷ್ಠಾಮಿಹಿರಪ್ರಭಾವಿಕಸಿತಂಗಳ್ಕೈವಷಡ್ವರ್ಣಷ ||
ಟ್ಚರಣಧ್ಯಾನಮನೋಹರಂಗಳಮಳಶ್ರೀಮಂಜುಳಂಗಳ್ಮಹೇ |
ಶ್ವರಮುಖ್ಯಸ್ಫುರದುತ್ತಮಾಂಗಕಮಳಂಗಳ್ಕಣ್ಗದೇಂತೋರ್ದುವೋ || ೮೩

ವಚನ|| ಅಂತೆಸೆವಾಶಿರಂಗಳಂ ನಿರೀಕ್ಷಿಸಿ—

ವೃ|| ಮೃದುರವವೊಂದೆ ಶಂಕರಶಿರಂ ಸಚಿವಾಸ್ಯಮಮಳ್ಸರೋಜಕಿಂ |
ತಿದು ಸುತಮಸ್ತಕಂ ಗುಣಯುತಂ ಚತುರಂ ಚರಶೀರ್ಷಮಾನನಂ ||
ಸುದತಿಯಪಂಚಮುಖಿಪಮುಖಂ ನಿಗಮಾಂಗವಿಭಾಸಿ ಮಾತೃಕಾ |
ಸ್ಪದಮಿದು ಮಂತ್ರಿಪುತ್ರವದನಂ ಮೆರೆದಪ್ಪುದುದಾತ್ತವೃತ್ತಿಯಿಂ || ೮೪

ವಚನ|| ಎಂದಮೃತಮತಿ ಮಹಾದೇವಿ ಕೆಲದೊಳಿರ್ದ ಲಲನೆಯರೊಳುಸಿರ್ದು ವೀರಾವೇಶಮಂ ಕೈಕೊಂಡು ಕರಾಳಕರವಾಳಮಂ ಕರತಲದಿಂದಡಸಿ ಪಿಡಿದಾಗಳಾ ಸರ್ವಮಂಗಳಾದೇವಿಯುಂ ಸಚಿವಪತ್ನಿಯುಂ ಮಿತವಚನನಂಗನೆಯುಮರಸಿ ಯಡಿದಳಿಗೆರಗಿತಾಮುಂ ಮತಿನಿಶಿತಮಾದಖಡ್ಗಂಗಳಂ ಕರಾಗ್ರದೊಳ್ಪಿಡಿದು ತಮ್ಮ ತಮ್ಮಿನಿಯರ ಶಿರಂಗಳದಿರೊಳ್ಕಿಂದು ಕಳೆಯೇರಿ ಮೀರಿ—

ವೃ|| ಹರಹರ ಬಣ್ಣಿಪಂಗರಿದು ತತ್ಪ್ರತಿಯಕ್ಕರ್ಗಳ ವೀರವೃತ್ತಿಯಂ |
ಕರತಳಖಡ್ಗಮಂ ಜಡಿದು ಜಾನಿಸಿ ಶೈಲಜೆಯಾಣ್ಮನಂ ನಿಜೇ ||
ಶ್ವರಶಿರಮೆಂಬ ಲಿಂಗಕೆ ಮುಖಾಂಬುಜದರ್ಶನೆಗೆಯ್ಯಲೆಂದು ಬಿ |
ತ್ತರಿಪವೊಲಾತ್ಮಕಂಧರಕಮುಚ್ಚರ್ತೆ ಖಂಡಿಪತತ್ಕ್ಷಣಾರ್ಧದೊಳ್ || ೮೫

ಇಂದುಖಂಡಮಹಿಕುಂಡಳಮುದ್ಯತ್ಸ್ವರ್ಣದಿ ಭಾಳವಿಲೋಚನಂ |
ದಂದಶೂಕಪತಿಹಾರಮುದಾರಸ್ಮೇರಮುಖಂ ದ್ವಿರದಾಜಿನಂ ||
ಸುಂದರಾಂಗಮಸಿತದ್ಯುತಿ ಕಂಠಂ ಕಣ್ಗೆರದೀಯೆ ಬೆಡಂಗನಾ |
ನಂದಿವಾಹನನಘಂ ನಿಜರೂಪಂ ತೋರಿದನದ್ರಿಸುತಾಧವಂ || ೮೬

ವಚನ|| ಆಗಳ್—

ವೃ|| ಮೊಳಗುವದೇವದುಂದುಭಿರವಂ ಮೊಳಗಲ್ಲಿಳಿತಪ್ಪ ದೇವಸಂ |
ಕುಳದ ಕಿರೀಟರತ್ನರುಚಿ ಶಕ್ರಶರಾಸನಮಪ್ಸರೋವಧೂವಿಳಸಿತ |
ಲೋಚನಾಂಶು ಸೆಳೆಮಿಂಚು ನಭಸ್ಥಳಮಭ್ರಮಾಗೆ ಕಾ |
ರ್ಮೞೆ ಸುರಿವಂತೆ ಸೂಸಿದುದು ಪೆರ್ಮೞೆ ದಿವ್ಯತರುಪ್ರಸೂನದಾ || ೮೭

ವೃತ್ತ|| ಮಾರಜನಕಂ ವಿಪುಳಸಾರಸಭವಂ ದಿವಿಜವಾರವರನುಂ ದಹನನಾರವಿತನೂಜಂ |
ಧೀರದಿತಿಜಂ ವಿನುತನೀರನಿಲಯಂ ಪೃಥುಸಮೀರನನಘಂ ಘನಕುಬೇರನನಲಾಕ್ಷಂ ||
ವೀರಗಣಮುಂ ಪ್ರಮಥಸಾರನಿವಹಂ ಸಮದವಾರಣಮುಖಂ ನವಮಯೂರಪತಿವಾಹಂ |
ಸಾರಿ ನೆರೆದೊಪ್ಪಿರೆ ಕೃಪಾರಸಸಮುದ್ರನಗಜಾರಮಣನುಜ್ಜ್ವಳಪುರಾರಿ ಮೆರೆದಿರ್ದಂ || ೮೮

ವಚನ|| ಅಂತು ಮೆರೆದು ನಿಜಕರಾಗ್ರದಿಂ ತತ್ಕರತಳಕರಾಳ ಖಡ್ಗಮಂ ಕಳೆದುಬಿಸುಟು—

ಕಂ|| ದರಹಾಸಪ್ರಭೆ ಸೂಸು |
ತ್ತಿರೆ ಕರುಣಾಮೃತದ ತೆರೆಯಿಂದೆಸೆ ಮೊಗದೊಳ್ತಂ ||
ಕರಸೆರಗಿ ನಿಂದತನ್ನೃಪ |
ಸರಸಿಗೆ ನಿನ್ನಿಷ್ಟಮಾವುದದ ನೆರೆಯೆಂದಂ || ೮೯

ಎನಲೊಡನೆ ದೇವ ಪಂಚಾ |
ನನ ಮುನ್ನಳಿದಂಗೆ ಹರಣಮಂ ಕರುಣಿಪುದೆಂ ||
ದೆನೆ ಮುಗುಳ್ದ*ಮುಚ್ಚಿದೆಂ ಬೇ |
ಡೆನುತಿರ್ದ್ದಂ ಭಕ್ತವತ್ಸಲಂ ಕೃಪೆಯಿಂದಂ || ೯೦

ವಚನ|| ಎಂದಭವನವಿಘವಚನವಂ ಕೇಳ್ದು—

ಕಂ|| ತಿರುಕೊಳವಿನಾಚಿಗಂ ಶಂ |
ಕರ ಕರುಣಿಪುದಸುವನಾದೊಡೆನೆ ಮುಚ್ಚಿ ಮಹೇ ||
ಶ್ವರನಬಳಿ ನೀನೆಣಿಪುದೀ |
ಶಿರಂಗಳಂ ಕ್ರಮದಿನೆಂದು ಬೆಸಸಿದನಾಗಳ್ || ೯೧

ವಚನ|| ಎನೆ ಮಹಾಪ್ರಸಾದಮೆಂದದಂ ಮನದೆಗೊಂಡಾಶಿರಂಗಳಂ ಪದೆದುನೋಡಿ—

ಕಂ|| ಅರಸಿ ನಿಜಾಂಗುಲಿಯಿಂದೊಂ |
ದೆರಡುಂ ಮೂರೈದೆ ನಾಲ್ಕುಮೈದಾರೇಳೆಂ ||
ದಿರದೆಣಿಪುದುಮಾಗಳೆ ನಿಜ |
ಶಿರಂಗಳೇಳ್ದಂಗದೊಂದು ಗೂಡಿದುವಾಗಳ್ || ೯೨

ಜಯರವಮುಂ ಸುರವರಭೇ |
ರಿಯುರವಮುಂ ಶರಣಜನದುಃಘೋರವಮುಂ ವಿ ||
ಸ್ಮಯಕರಸುರಕುಜಸುಮವೃ |
ಷ್ಟಿಯರವಮುಂ ದೆಸೆಯನಳುರ್ದ*ದೇಂ ಮುಸುಕಿದುದೋ ||

ವೃ|| ಬಲವರಲಾಟಿಸುತ್ತಿರೆ ಪದಂ ಪದಪಿಂ ನಡೆನೋಡಲೆಂದು ಕ |
ಣ್ಮಲರೆಳಸುತ್ತೆ ಬಿಚ್ಚಿರೆ ಕರಂ ಕರಮುಚ್ಚಿಸಲೆಂದು ನಾಟಕಂ ||
ನಲಿಯೆ ರಸಜ್ಞೆ ಕೀರ್ತಿಸಲೊಡರ್ಚಿರೆ ಚಚ್ಚರಮುಚ್ಚಿಗಂ ಪೊದ |
ಳ್ದಲರೆ ಸಮಾನಮಾನಸರದೇನೆಸೆದಿರ್ದ್ದರೊ ಭೂಧವಾದಿಗಳ್ || ೯೪

ವಚನ|| ಅಂತೆಸೆಯುತ್ತುಮಿರ್ದ್ದ ಕಟ್ಟಿದಿರೊಳೆಸೆವಿಷ್ಟಪ್ರದನೆನಿಪಷ್ಟಮೂರ್ತಿಯ ವಿಮ
ಳಮೂರ್ತಿಯನಾನಂದಬಾಷ್ಪಬಿಂದುಮಂಜರೀಮಂಜುಳಾಕ್ಷಿಗಳಿ ನವರಭೀಕ್ಷಿಪಾಗಳ್—

ವೃ|| ಜಡೆಮುಡಿ ತಾಳ್ದಗಂಗೆ ಪಣೆಗಣ್ಪಣಿಕುಂಡಳ ಮಿಂದುಲೇಖೆ ಚೆ |
ಲ್ವಿಡಿದೆಸೆವೈಮೊಗಂ ಕರಗೊರಲ್ಕರಿಕೃತ್ತಿ ಮೃಗಾರಿಚರ್ಮದೊ ||
ಳ್ಪುಡೆ ತಿಸುಳಂ ಕರೋಟಿ ದಶಬಾಹು ಮುರಾಂತಕನಕ್ಷಿತಳ್ತಮೆ |
ಲ್ಲಡಿಯೊಡಲರ್ದದಿದ್ದಿಜೆ ವಿರಾಜಿಸೆ ರಂಜಿಸಿದಂ ಮಹೇಶ್ವರಂ || ೯೫

ವಚನ|| ಅಂತಿದಿರೊಳೆಸೆವ ಮದನ ಮದರದನಿ ಬಿದು ವಿದಳನ ವಿಳಾಸಪಂಚಾಸ್ಯನ ನವಂಚಿತ ಪಂಚಾಕ್ಷರೀಪ್ರಭಾವ ಪ್ರರ್ಭಾವಲ್ಲಭ ಪ್ರಭರ್ಭಾವಂ ಬೆರಸು ಮಾಮಹಾನುಭಾವ ಭರ್ಕ್ತಿರಸ ವಿಸರವಿಲುಳಿತಲಲಿತಹೃದಯಾರವಿಂದರಾಗಿ ದಂಡಪ್ರಣಾಮಂಗೆಯ್ದು ನುತಿಸುತ್ತು ವಿಪ್ರರ್ಗಳ್

ವೃ|| ಜನತಾಪಾಪಹಪಾದಸೂರ್ಜಿತಕಳಾಪೂರ್ಣಂ ಮನೋಜಾತಿರಂ |
ಜನದಿವ್ಯಾಂಗನ ನಂತಕಾಂತ ನಿದಿರೊಳ್ತಾನೊಪ್ಪೆ ಸೋಮಂ ನರೇಂ ||
ದ್ರನ ಕಣ್ಣೈದಿಲರಲ್ವುದುಂ ಮುಗಿವುದುಂ ಹಸ್ತಾಬ್ಜಮೇಂ ಚಿತ್ರಮಾ |
ತನ ಹೃದ್ವಕ್ತ್ರಸರೋಜವೊಲ್ದಲರ್ದುದಾಶ್ಚರ್ಯಾವಹಂ ಭಾವಿಸಲ್ || ೯೭

ವಚನ|| ಎಂದಲ್ಲಿ ನೆರೆದವಿಬುಧನ್ನುರ್ತಿಸುತ್ತು ವಿಪ್ರರ್ನ್ನಗಂ—

ವೃ|| ಪಿರಿದುತ್ಸಾಹದೆ ನೋಡಿಯುಂಗಿರಿಶನಂಕೊಂಡಾಡಿಯುಂಪಾಡಿಯುಂ|
ಚರಣಾಂಭೋಜಕೆ ಮತ್ತೆಮತ್ತೆರಗಿಯುಂ ರಾಗಾಕುಳಂ ಚಿತ್ತವೊಂ ||
ದಿರೆ ಪೂರ್ಣೋರ್ತ್ಸವಮೈದಿಯುಂ ತಣಿದುದಿಲ್ಲೇನೆಂಬೆನು ದ್ವೃತ್ತಕಳೇ |
ವರವಿಸ್ಫೂರ್ಜಿತಸಾತ್ವಿಕಂ ಗುಣನಿಧಿ ಶ್ರೀಚೋಳಭೂಪಾಲಕಂ || ೯೭

ಕಂ|| ಶ್ರೀರಾಜಶೇಖರಾಖ್ಯಕು |
ಮಾರಂ ನಿಜಮೌಳಿಮಣಿರುಚಿಪ್ರಸವದಿನಂ ||
ದಾರಾಜಶೇಖರಾಂಘ್ರಿಸ |
ರೋರಹಮಂ ಪೂಜೆಗೆಯ್ದು ನುತಿಸಿದನೊಲವಿಂ || ೯೮

ವಚನ|| ಅದೆಂತೆನೆ—

ವೃ|| ಪುರಹರ ಪೂರ್ಣರೂಪಪುರುಷೋತ್ತಮವಂದ್ಯಪುರಂದರಾರ್ಚ್ಯಪು
ಷ್ಕರಸರಿದುತ್ತಮಾಂಗ ಪರಮೇಶ್ವರ ಪನ್ನಗಭೂಷ ಪಾರ್ವತೀ ||
ವರ ಶರಣಾಗತಪ್ರಕರರಕ್ಷಕ ಶಂಕರ ಶರ್ವರೀಶಶೇ |
ಖರ ಜಯದೇವದೇವ ಜಗತೀಧರಮಂದಿರ ಮಂಗಳೋದಯಾ || ೯೯

ವಚನ|| ಎಂದು ಪೊಗಳ್ದು ಮುಗುಳ್ದರಗಿ ನಿಂದು—

ಕಂ|| ಚರಣನಖಮಣಿಮುಕುರದೊ |
ಳ್ಪರಪತಿ ಮಾರ್ಪೊಳೆದು ತೋರಿದಂ ಕೈಲಾಸ ||
ಸ್ಥಿರತೆಗಿದಗ್ಗಳಮೆನುತಂ |
ತುರಿಪಂ ಮಿಗೆ ನೆಲಸಿದಂತಿರಾಶಶಿಧರನಾ || ೧೦೦

ವಚನ|| ಆಗಳ್—

ದೃ|| ವಿಳಸನ್ನೇತ್ರಂಗಳಿಂದೀಕ್ಷಿಸಿದನಮುಮಸತ್ಪ್ರೇಮಮಂ ಬೀರಿದಂ ಮಂ
ಜುಳಬಾಹಾಮಂಡಳಂ ತಳ್ತಿರೆ ಮಿಗೆ ಬಿಗಿದೊಳ್ದಪ್ಪಿದಂ ಕಂದ ಬಾರೆಂ ||
ದೆಳಸುತ್ತುಂ ಮತ್ತೆ ಮನ್ಮಂತ್ರದಮಹಿಮೆಯನಿಂತಾವನ್ಕೈ ತೋರ್ದ್ದನುರ್ವೀ |
ತಳದೊಳ್ಪೇಳೆಂದು ಸಂದೀಶನೊಳೆ ಪೊಗಳ್ದ*ನಾನಂದದಿಂದದ್ರಿಜೇಶಂ || ೧೦೧

ವಚನ|| ಎಂದು ಮತ್ತಮಿರದೆ—

ಕಂ|| ಸ್ಕಂದನುಪಮನ್ಯುಮುನಿ ಸಾ |
ನಂದಶತಾನಂದ ಮುರುಘರೀ ಧರಣೀಭೃ ||
ನ್ನಂದನನಿವರರು ವಸ್ಸ್ವರ್ಗ |
ಪೊಂದಿದ ಪರತೆರಷಡಕ್ಷರಾತ್ಮಕರಲ್ತೇ || ೧೦೨

ವಚನ|| ಅಂತು ಮಲ್ಲದೆಯುಂ—

ವೃ|| ಇವನೇ ಸತ್ಯೇಂದ್ರನಪ್ಪಂಬಗೆವೊಡಮುಮಸತ್ಯೇಂದ್ರಚೋಳೋರ್ವಿಪಂ ಮ
ತ್ತಿವನೇ ಸನ್ಮಂತ್ರಲಕ್ಷ್ಮಂ ನಿಜದಿನದರೆ ಸನ್ಮಂತ್ರಲಕ್ಷ್ಮಂ ಬಳಿಕ್ಕಿಂ ||
ತಿವನೇ ನೋಳ್ಪಾಗಳಾಹಾ ಮಿತವಚನನಿವಂ ತಪ್ಪದೆಂತಪ್ಪೊಡಂ ಕೇ |
ಳಿವನೇ ಸನ್ಮಂತ್ರಿನಾಥಂ ಗತಿಹಿತನೆಸುತುಂ ಶಂಕರಂ ನಂದಿಗೆಂದಂ || ೧೦೩

ವಚನ|| ಮತ್ತಮಲ್ಲಿ—

ವೃ|| ಅಂಬಿಕೆ ಸಂಭ್ರಮಂ ಮಿಗೆ ಪದಕ್ಕೆರಗಿರ್ದ್ದನರೇಂದ್ರಕಾಂತೆಯಂ |
ತಾಂ ಬಿಗಿದಪ್ಪಿ ತತ್ಸುತಸತೀಮುಖರಂ ಕೃಪೆಯಿಂದೆ ನೋಡಿ ಹ ||
ಸ್ತಾಂಬುಜದಿಂದೆ ಮೆಯ್ದ*ಡವಿ ಮೇಣ್ಪರಸುತ್ತಿವರಂತೆ ಶಂಭುವಂ |
ನಂಬಿದರಾರೆನುತ್ತೆ ಪೊಗಳ್ದ*ಳ್ಕಮಳಾಮುಖಶಕ್ತಿಬೃಂದದೊಳ್ || ೧೦೪

ಕಂ|| ಕರಿಮುಖನಿದು ಪೊಸತೆಂದಂ |
ಶರಜನ್ಮಂ ಚಿತ್ರಮೆಂದನ ಮರರ್ಪ್ಪಿರಿದ ||
ಚ್ಚರಿಯೆಂದರ್ಸುರಮುನಿಗ |
ಳ್ಕರಮರಿದರಿದೆಂದರವರಚರಿತಮನಾಗಳ್ || ೧೦೫

ವಚನ|| ಅಂತು ಸಮಸ್ತಪ್ರಶಸ್ತಪ್ರಮಥರುದ್ರಭಕ್ತಮಹಾಗಣಮಗಣಿತೋತೋತ್ಸವಂ ಮಿಗೆಪೊಗಳುತ್ತುಮಿರೆ ಯಿರೆ—

ವೃ|| ಜವದಿಂದೇಳ್ಪಂದು ವೀಶಂ ಬೆಸಸಲೊಡನೆ ಬಾನತ್ತಣಿಂ ಭಾನುಭಾಸು
ಪ್ರಪರಾಜದ್ಭರ್ಮಚಂಚತ್ಕಳಶವಿಳಸಿತಂಗಳ್ಮಣಿಶ್ರೇಣಿಮಾಲಾ ||
ನಿವಹಂಗಳ್ಮಂಗಳಾಲಂಕರಣಶತಯುತಂಗಳ್ಪತಾಕಾನ್ವಿತಂಗ |
ಳ್ದಿವಿಜಕ್ಷ್ಮಾಜಪ್ರಸೂನಪ್ರಸರಸರಯುತಂಗಳ್ಮಹಾಪುಷ್ಪಕಂಗಳ್ || ೧೦೬

ವಚನ|| ಅಂತಿಳ್ತಂದ ಪುಷ್ಪಕಂಗಳೊಳವಂದಿರಂ ಕೂರ್ಮೆಯಿಂ ಕುಳ್ಳಿರಿಸಿ ಪುಷ್ಪೇಷು ದರ್ಪಪ್ರಭಂಜನಂ ಪ್ರಭಂಜನಾಪ್ತೇಕ್ಷಣಾಕ್ಷಣಂ ಸಕ್ಷಣಂ ಸಕಲಗಣಂ ಬೆರಸು ಶೈಲಜಾಸಹಿತಂ ಕೈಲಾಸಾಭಿಮುಖನಾಗಿ ಗಗನಮಂಡಳದೊಳಗಣಿತೋತ್ಸವಂ ಮಿಗೆ ಬರುತ್ತುಮಿರೆಯಿರೆ—

ಮಂದಾನಿಲರಗಳೆ|| ಆಸಮಯದೊಳಮರರ್ಜಯಜಯವೆಸೆ | ಭಾಸುರಸುರಕುಜದಲರ್ವಳೆ ಭೋರೆನೆ | ಸುರಿಯುತ್ತಿರೆ ಸುತ್ತಿರೆ ಗಣನಿಚಯಂ | ಪಿರಿದೊತ್ತರಿಸುತ್ತಿರೆ ಖಚರಚಯಂ | ಎಡವಕ್ಕದೆ ರಕ್ಕಸವಗೆಯಂ ಬರೆ | ಜಡಜಭವಂಬಲವಕ್ಕದೊಳೈತರೆ | ಪಿಂದೆಸೆ ಸುಮನೋರಮಣಾದಿಗಳಿರೆ | ಮುಂದೆಸೆ ರಂಭಾವಧು ನರ್ತಿಸುತಿರೆ | ಮುತ್ತಿನಸತ್ತಿಗೆ ತೊಳತೊಳಗುತ್ತಿರೆ | ಸುತ್ತಿ ಕನದ್ದ್ಯುತಿ ಥಳಥಳಸುತ್ತಿರೆ | ಕರೆದುವು ಬಿರದಿನಕಹಳೆಗಳಾಗಳ್ | ಪರೆದುದು ದುಂದುಭಿರವಮೆಣ್ದೆಸೆಯೊಳ್ | ಪೊಸರನ್ನದ ಚೆನ್ನದ ಸಡೆತೋರಣ | ಮೆಸೆದಿದ್ದುದು ಗಮನೋತ್ಸವಕಾರಣ | ಮಿಂದಿರೆ ಶಾರದೆಯುಚಾರ್ಮರಮಂ | ಮುಂದೆಸೆ ಡಾಳಿಸುತಿರೆ ಸಾಮರವಂ | ಗುಡುತುಂ ನುತಿಸುತ್ತಿರೆ ಸುರಮುನಿಗಳ್ | ಮೃಡಜಯಜಯಯೆಂದನೆ ಘನಮುನುಗಳ್ | ಸುರಸದಿ ತೆರೆಮಸೆಗದ ತೆರದಿಂದಂ | ಭರದಿಂ ಸಂದಿಯನೇರುತ್ತಂಡಂ | ಮಿಗೆ ಬಂದಾಸ್ಥಾನದೊಳಗಜೇಶಂ | ಸೊಗಯಿಸಿದಂ ಕೈಲಾಸದೊಳೀಶಂ

ವಚನ|| ಮತ್ತಮದು ಸಂತತ ಸಮಧಿಗತ ಧರ್ಮಕೂರ್ಮಸಶರ್ಮಪರಿಚಳತ್ಪೃಥುಳತರ ಶಫರಸಲಿಲಕರಿನಿಕರ ಮಕರಸುಕರ ಹಿಮಕರಧವಳಮರಾಳಮಂಜುಳಮದಮಧುಕರ ಪ್ರಕರಮಧುರರವ ಪರಿಗತ ನಿಜರಜಃಪುಂಜ ಪಿಂಜರಿತ ಜಳಕನಕ ಕಮಳ ಕುಮುದಕಲ್ಹಾರ ವಿಸರ ಸರಳತರ ತರಂಗರಂಗದ ಭಂಗ ಶೈವಲಲತಾವಿತಾನ ವಿಳಸಿತ ವಿತತ ಸ್ವಕೀಯ ಮಹನೀಯ ಗಾಂಭೀರ್ಯ ಪರಿಹಸಿತ ಸುಧಾಶರಧಿಪುರ ಶ್ರೀಮುಖಲಾಕಲಿತ ಪರಿಖಾವಲಯವಲಿತ ಪುರೋಪವನ ಪವನಕಂಪಿತ ಸರಸ ರಸಾಲತರು ಸಲ್ಲಲಿತ ಸಮುಲ್ಲಸಿತ ಪಲ್ಲವಪ್ರತಾನ ಪ್ರತಿಬಿಂಬಕದಂಬ ಪದ್ಮರಾಗಾಯಿತಸ್ಫಟಿಕ ಮಣಿಮಯ ವಿಶಾಲಸಾಲಾಟ್ಟಾಲ ಜಾಲಚಾರುತರ ಚತುರ್ದ್ವಾರ ಸಾರಸುಗಮ ನಿಗಮ ಮಯ ನಭಃಕಟಾಹಚುಂಬಿ ಜೃಂಭಿತ ಮಹಾಗೋಪುರಾಗ್ರ ಕಮನೀಯ ತಪನೀಯ ದಂಡಮಂಡಿತಸಮುತ್ತುಂಗಪುಂಗವ ಧ್ವಜರುಚಿರ ಮಣಿಮುಕುರ ಮುಖ ಮುಕುರಾವಲೋಕನ ಚಿರಸ್ತಿಮಿತ ಹಿಮಕರವಧೂನಿಕರ ಕೇಕರಪ್ರಸಾದ ಪರಿವಿಲೀನಪರಿಸರಸ್ಥಿತ ಲಸಿತ ವಿಶದಶಶಿಮಣಿಪ್ರಾಸಾದ ಪರಿಗಳಿತ ಸದಮಳಜಳಪ್ರವಾಹ ನಿಷ್ಪ್ರಯಾಸ ಪರಿವರ್ಧಿತಾನಲ್ಪ ಕಲ್ಪತರುಪಙ್ಕ್ತಿ ಸಂತತ ದರದಳಿತ ಪರಿಮಳ ಭರಿತ ಕುಸುಮ ವಿಸರ ವಿಸರದ ಮಂದಮರಂದರಸ ಕದಂಬ ಕರ್ದಮಿತ ವಿಧುರವಿ ವೀಧೀಸನಾಥಮುಂ ಮಹೋಜ್ಜ್ವಳ ಮಹೇಂದ್ರಮಣಿಖಚಿತರುಚಿನಿಚಿತ ಧರ್ಮನಿರ್ಮಿತ ನಿಶಾಂತ ಸಂತಾನ ಪುರೋಭಾಗ ಭಾಸುರ ವ್ಯಕ್ತಮುಕ್ತಾಫಳಪ್ರಕರ

ಪರಿಖಚಿತ ವಿಳಾಸ ಸೌಧಾಗ್ರ ಪ್ರತ್ಯಗ್ರರತ್ನ ಪಂಜರಮಂಜುಳ ಶುಕಶಾರಿಕಾನಿಕುರುಂಬ ಪರಿಪಠಿತ ನಿಟಿಲನಯನ ಲೀಲಾಕಥಾಕಲಾಕರ್ಣನ ಕರ್ಣಕೌತುಕಾಂತರಂಗ ಸಂಗತಪ್ರಮಥ ಪ್ರಮೋದಭರ ಭರಿತ ಸಸಾತ್ವಿಕಾಗಣ್ಯಗಣಾಗ್ರಗಣ್ಯಸಮುದಯಸಮಂಚಿತಮುಂ, ಮತ್ತಂ ಕಾಂಚನೋದಂಚಿತ ಪಾಂಚಾಲಿಕಾಪುಂಜರಂಜಿತ ವಜ್ರಮಯಸ್ತಂಭ ಸಂಭೃತಪ್ರವಾಲದಂಡಮಂಡಿತ ಹರಿನ್ಮಣಿವಿತರ್ದಿವೇದಿಕಾ ಹರಿಮಣಿಪ್ರತೋಳಿಕಾ ದ್ವಾರನವಮಣಿಗ್ರಥಿತ ಚಾರುತೋರಣಾಂಚಿತವೈಡೂರ್ಯಮಣಿಸೋಪಾನ ವಿಳಸಿತವಿಳಾಸಮಂಟಪ ಸರಂಪರಾ ಪರಿಶೋಭಿತ ಪದ್ಮರಾಗ ಮಣಿಮಯಕನತ್ಕಳಶ ಪ್ರಭಾಭಿಭಾಸುರ ತರುಣಭಾಸ್ಕರ ಕಿರಣಪಲ್ಲವಿತಘನಗಗನಗಹನಮುಂ. ನಿರುಪಮಾನನಿತ್ಯೈಶ್ವರ್ಯಲಕ್ಷ್ಮೀಲಾಸ್ಯರಂಗಸ್ಥಳಮುಂ, ಷಡ್ವರ್ಗದುರ್ಗಮಧ್ವಾಂತವಿಧ್ವಂಸನ ವಿಧಿಮಾರ್ತಾಂಡ ಮಂಡಲಮುಂ, ನಿರತಿಶಯಸುಖಫಲೋದಯ ಕಲ್ಪಪಾದಪಮುಂ, ಸಮಂಜಸ ಮುಕ್ತಿರಮಣೀರಮಣೀಯಮುಖಮುಕುರಮುಂ, ನಿಜಸ್ಮರಣಪರಿಣತಜನವಿಪುಳವಿಪತ್ಕದಂಬಜಳದಪಟಳ ಜಂಝಾಪ್ರಭಂಜನಮುಂ, ಶ್ರುತಿತತಿಕೃತಸ್ತುತಿ ತರಂಗಿಣೀ ಸಂಗತಪಾರಾವಾರಮುಂ ಶರಣಾಗತಜನ ವ್ರಜವಜ್ರ ಪಂಜರಮುಂ, ಸಕಲಮಂಗಳ ಕಳಾಕೇಳೀನಿವಾಸಮುಮೆನಿಸಿ ಪೊಗಳ್ತೆವೆತ್ತು ಪೆಂಪುವಡೆದ ಕೈಲಾಸಾಖ್ಯ ಮಹಾಪುರದಂತರ್ವಳಯ ವಿಳಸಿತ ಶಶಧರಶತಕರಸಹಸ್ರರುಚಿನಿಚಯ ರುಚಿರತರ ಸದಲಂಕಾರ ಸಾರಸರ್ವಸ್ವಸದನ ಮಹಾಸಭಾಮಂಟಪ ಮಧ್ಯಮಂಜುಳ ದಿವ್ಯಸಿಂಹಾಸನ ಸವ್ಯಪಾರ್ಶ್ವಸಮುಪಸ್ಥಿತ ಸರ್ವಮಂಗಳಾಚರಣಾರವಿಂದ ಸೇವಾವಸರ ಸಾವಧಾನ ಮಾನಸ ಮಾನಸಂಯುತ ನಿರತಿಶಯ ಸೌಂದರ್ಯ ಮಾಧುರ್ಯ ಸಮಾರೂಢ ಪ್ರೌಢತಾರುಣ್ಯ ಲಾವಣ್ಯಪರಿಣಾಳಿತಘನಜಘನ ಕನಕಘಟಸಮಸಮಸ್ತನಯುಗಳ ಕೇಶ ಭರಭಾರಭಾಸುರಭಾರತೀಭಾರ್ಗವೀ ಪ್ರಮುಖಲೇಖನಾಯಕ ನಿಕಾಯ ಕಾಮಿನೀಪ್ರಬಲಬಲಕಲಿತ ಸುಲಲಿತ ಕಳೇವರಸಮುಜ್ಜ್ವಳ ವಿಳಾಸವಿಧಿತ ಕುಸುಮವಿಸರ ವಿಭೂಷಣಭೂಷಿತಾವಯವ ನವವಯಸ್ಸಮುದಿತ ವಿಪುಳವಿಭವ ವಿಭ್ರಮವಿರಾಜಿತಸರತಿಸಾಂಜಲಿಪುಟ ನಿಟಿಲಕುಟಿಲಕೃಷ್ಣೀಕೃಷ್ಣಕೋದಂಡಮಂಡಿತ ಬಂಧುರ ಕಂಧರ ಕಂದರ್ಪ ನಿನುದಾರಸಾರ ಶೃಂಗಾರರಸಮುಮಂ, ಮತ್ತಮತಿ ವಿಕೃತವೇಷಮುಮುರ್ದಿರೆ ನೆತ್ತಿಯೊಳೆತ್ತಿ ಕಟ್ಟಿದಚಂಡಿಕೆಯೊಳೊತ್ತಿದರ್ಚ್ಚಿದ ಬೆಳ್ಗವಡಿಕೆಯಮಾಲೆ ಚೂಳಿಕೆ ವಿಡಿದು ಜತಿಜತಿಗೊಲೆಯೆ ಸುಲಿದೊವಲಬಲ್ಗಾಸೆಯ ಮೇಲಳವಡಿಸಿ ಕಟ್ಟಿಬಿಟ್ಟ ಕಿರುಗಂಟೆಗಳ ತೊಂಗಲೊತ್ತಿನೆದು ಝುಣಝುಣಧ್ವನಿಗುಡೆ ಮೊಗಮನುರುಗಿಸಿ ಮೂಗುಮನಲರ್ಚ್ಚಿ ಪುರ್ಬ್ಬನೇರಿಸಿ ಕಣ್ಣಂಮೆಳ್ಳಿಸಿ ನಾಲಗೆಯಂ ನೀಡಿ ಪಲ್ಗಳಂ ತೆರೆದು ಬಸಿರನುಬ್ಬರ್ಸಿ ಕೊರಲಂ ಕೊಂಕಿಸಿ ನಡುವಂ ಬಂಕಿಸಿ ನೆರೆದಗಣಂಗಳ್ನಗೆ ಗಡಲೊಳೋಲಾಡೆ ಪಾದತ್ರಯದೊಳ್ನಲಿದು ನರ್ತಿಸುವ್ಯಡನ ಮೊಗದಾವರೆಗೆ ಮುಗುಳ್ನಗೆಯ ನೋಲಗಿಪ ಭೃಂಗಿರಿಟಿಯಿಂ ಹಾಸ್ಯರಸಮುಮಂ ಮತ್ತಂ ಚಿರಕಾಲಮುಗ್ರತಪಂಗೈದು ವನಜಭವನಿಂ ವರಂಬಡೆದು ಕಡುಗೊಬ್ಬಿದ ದನುಜಜನದಿ ನಾಡಬಾಧೆಗಳ್ಕೆ ಬಳ್ಕಿ ಕಂದಿ ನೊಂದೇಳ್ತಂದಿಂದುಧರ ನಂಘ್ರಿಗೆ ಬಿನ್ನವಿಸಲ್ಸಮಯಂ ಬಡೆಯದೆ ಕಡೆವಾಗಿಲೊಳ್ಪಿರಿದು ಕಾಲಂ ಕಾದು ನಿಂದೊಳಗಣ್ಗೆ ಸಲ್ಗೆ ಮಿಗೆ ಪೋಪಗರುಡ

ಧ್ವಜಾದಿದಿವಿಜ ವ್ರಜದಬೆಂಬಳಿಯೊಳೊಯ್ಯನಡಂಗಿ ಪೊಕ್ಕು ಪೋಪಾಗಳ್ತಡೆದು ಪಿಡಿದುನೂಂಕಿ ಝುಂಕಿಸಿಜಡಿದುಪೊಡೆವ ದೌವಾರಿಕಪ್ರಚಂಡಗಣೇಂದ್ರರ ದಂಡಘಾತದಿಂ ದಿಂಡುಗೆಡೆವಳಲ್ದು ಬಳಲ್ದು ಬಿಸುಸುಯ್ದು ಬಸವಳಿದು ಕಂಬನಿದುಂಬಿ ತಮ್ಮನಗಲ್ದು ಸೆರೆಸಿಕ್ಕಿದ ನಿಜಾಂಗನೆಯರಂ ನೆನೆನೆನೆದುಪಲುಂಬಿ ಪಳಯಿಸುವ ದಿವೌಕಸರಿಂ ಕರುಣರಸಮುಮಂ ಮತ್ತಮಾವಿಷಾದ ವಿಧುರಿತರ ಕಾರ್ಪಣ್ಯೋಕ್ತಿಗೇಳ್ದು ಕರುಣಂಗೆಯ್ದು ಶಿವನಂಘ್ರಿಯಂ ಕಾಣಿಸಿ ಬಿನ್ನಪಂಗೈಸಿ ತನ್ನಿರೂಪದಿಂ ನಂದೀಶ್ವರಂ ಕಳಿಪೆ ಕಡುಪಿಂ ಪರಿತಂದು ತದರಾತಿಖಲದನುಜಬಲಮಂ ಬೆಂಬತ್ತಿಮುತ್ತಿ ಪೊಡೆದು ಬಡಿದು ಕಡಿಖಂಡಂಗೈದು ಸೀಳ್ದುಪೋಯ್ದು ಸಂಹರಿಸಿ ಮಗುಳ್ದು ಭವನಲ್ಲಿಗೇಳ್ತಂದಾಗಳ್ಕನ್ನೆತ್ತರಿಂ ಸನೆದಕರುಳ ಮಾಲೆಯುಮಾಂತ್ರಪ್ರೋತ ಕಠಿನಾಸ್ಥಿವ್ರಾತಮುಮಂತೊಡರ್ದಕರಾಳತರ ಖರಖಡ್ಗಂ ಕರತಳದೊಳಿಂಬುವಡೆಯೆ ವಿಕಚಜಪಾ ಕುಸುಮ ರಕ್ತ ರಕ್ತಜಳಧಾರಾಸಿಕ್ತ ಶ್ಮಶ್ರುಮಾಂಸಳ ಕಂಠಾಕುಂಠಿತ ಭ್ರುಕುಟಿ ಭಯಂಕರಮುಖ ತದೀಯವಿಕಟ ಶಿರೋಮಾಲಿಕಂಠೋಪಕಂಠದೊಳ್ಮೆರೆಯೆ ಪೊಡಮಟ್ಟು ನಿಂದಭೀಕರಾಕಾರಭೈರವವ್ರಜದಿಂ ಬೀಭತ್ಸರಸಮುಮಂ ಮತ್ತಮನೇಕಮುಖಂಗಳ ನನಂತ ನೇತ್ರಂಗಳ ನಪರಿಮಿತಭುಜಂಗಳ ನಗಣಿತಪದಂಗಳ ನಸಂಖ್ಯಾತಕರ್ಣಂಗಳಂ ತಳೆದು ಶಶ್ವದ್ವಿಶ್ವರೂಪಮಂ ತೋರ್ಪ್ಪವಿಧಿಸೃಷ್ಟಿಯುಮಂ ನಳಿದು ಪೊಸತಂ ಮಾಳ್ಪ ನಿಜಾಭರಣಫಣಿಯಿಂ ಗರುಡನಂ ಬೆಂಕೊಳಿಪ ಮೌಳಿಚೂಳದೊಳ್ತಳೆದ ವಿಧು ಶಕಲದಿಂ ವಿಧುಂತುದನ ನದಿರ್ಚುವ ಪದನಖ ಮಯೂಖದಿಂ ಖದ್ಯೋತಮಂಡಳಮಂ ಖದ್ಯೋತಕಣೆಯೆನಿಪ ಲೀಲಾವೇಶವಶೇಪದುನ್ಮಿಷಿತನಿಟಿಲತಟನಯನಪಟುಸ್ಫುಟವಿನಿರ್ಗತಶಿಖಿಶಿಖಾವಿಸ್ಫುರದ್ವಿಸ್ಫುಲಿಂಗದಿನಂ ಭೂದಿಯೆಲ್ಲಮ ನಾಪೋಶನಂ ಗೊಳಿಪ ಹೂಂಕೃತಿಧ್ವಾನದಿನಜಾಂಡಭಾಂಡಮ ನಲ್ಲಾಡಿಪ ಭುಜಪರಿಘಭ್ರಾಂತಿಯಿಂ ಭಗಣಮನಿಳೆಗುದಿರ್ಚುವ ನಿಜಶ್ವಾಸ ಜಂಝಾಪ್ರಭಂಜನ ಪಾತದಿಂ ದಿವಿಜವಿಮಾನಕೋಟಿಯಂ ತರಗೆಲೆಯಂತೆ ಪಾಱಿಪ ಮಹಾದ್ಭುತ ವಿಚಿತ್ರಚರಿತ್ರ ಸನಾಥ ಶರಣಾಗತರಕ್ಷಕ ಖಲಶಿಕ್ಷಕ ನಿರುಪಮಾನಮಾನೋನ್ನತಾನೂನಸಾಮರ್ಥ್ಯಸಮನ್ವಿತಸಂಚಿತ ನಿರ್ಗಳನಿಸರ್ಗಪ್ರಭಾವ ಪ್ರಸಿದ್ಧರುದ್ರಗಣೇಂದ್ರರಿಂದದ್ಭುತರಸಮುಮಂ, ಮತ್ತಮಿದಿರ್ಚಿದೊಡೆ ಜವನಕೋಣನ ಕೋಡಂ ಕೀಳ್ವ ಮಿಳ್ತುವಿನ ದಾಡೆಯಂ ಮುಱಿವ ಮಾರಿಯನಾಲಿಗೆಯಂ ಪಱಿವ ಭೈರವನ ಮುಂದಲೆಗೊಯ್ವ ಬಾಸುಗಿಯ ನುಗಿದುಂಗುರಂಗೈದಂಗುಳಿಯೊಳ್ತೊಡರ್ಚುವ ಕುಳಗಿರಿಯಂನೆಗಪಿಚಿರಿಕಲ್ಲಾಡುವಾದಿಕಮಠನ ಕಠಿನಖರ್ಪರಂ ಕಗ್ಗನುಗ್ಗ ಮೆಟ್ಟಿನಾಟ್ಯಮನಾಡುವ ದಿಗ್ಗಜಂಗಳ ನಿಗ್ಗವಮಂ ಮುಱಿದು ಮುದ್ಗರಂಗೆಯ್ದು ಪಿಡಿವ ಮಹೀವಿಯತ್ತಳಮಂ ಕರತಳದಿಂ ತಳೆದುತಾಳಂಗುಟ್ಟುವ ಸಿಡಿಲಂ ಕಡಿದು ಕಡೆಯಂಗೈದೆಡಗಾಲೊಳಿಕ್ಕುವ ಕಾಲಾಗ್ನಿಯಂ ಪೊಸೆದು ಬೊಟ್ಟಿಟ್ಟುಕೊಳ್ವ ಪೊಡೆಯುರಲನಂಜರಿವ ಜಡಜಜನಪಣೆಯಕ್ಕರಮಂತೊಡೆವ ಕಡಲಂಕುಡಿವ ಬಡಬನಂ ಪಿಡಿವ ರವಿಶಶಿಗಳಂ ಮಿಡಿವ ಕುಳಿಕನಂತುಡುವ ಭಗಣಮಂ ಮುಡಿವ ಮೃಡನಸಾಸಮೆ ಪಲವುರೂಪಾಂತುದೆನಿಸಿ ನಿಂದತಿಬಳಪ್ರಥಿತಪ್ರತಾಪಸಮಗ್ರೋದಗ್ರ ವಿಗ್ರಹ ವಿಜಿತವಿಗ್ರಹವೀರವೀರಪ್ರಮಥವಾರದಿಂ ವಿಸ್ಫಾರವೀರರಸ

ಮುಮಂ ಮತ್ತಂ ಜಡಿವಫಣಿಕುಂಡಳದ ಕೆಂಬೆಳಗು ಥಳಥಳಿಸಿ ತಳ್ತಿರೆ ಕುಡಿಗೆಂಪಸಾಳ್ದು ಪೊಳೆದು ಬಿಂಕಂಬೆತ್ತು ಕೊಂಕಿನಿಂದಕೂದರ್ಗಡೆಗಳ ನಿಜನಿಟಿಲತಟದೊಳಳವಟ್ಟು ಬಿಸಿಯ ಬೆಳಗನೊಳಕೊಂಡೊಳಗೊಳಗೆ ಘುಳುಘುಳಿಪ ವಿಪುಳತರಸ್ಫುರದ್ವಿಸ್ಫುಲಿಂಗ ಸಂಘಾತಸಂಗತ ಸಂವರ್ತಶಿಖಿ ವಿಲೋಚನದಚಟುಲತಟಿಲ್ಲತಾಕುಟಿಲಜಟಾಪಟಲಮಕುಟಕಟಘಟಿತಪಟುದನುಜಕಪಾಲವಲಯದ ಧಗಧಗಿತನಿಸ್ತ್ರಿಂಶತ್ರಿಶೂಲಖಡ್ಗ ಚಾಪಮಾರ್ಗಣಕಲಿತಕರಚತುಷ್ಟಯದ ಕಂಠೋಪಕಂಠಸಂಘಟಿತಘನಘೋಷ ವಿಷವಿಷಮ ಭೀಷಣೋತ್ಫಣಿತಫಣೀಂದ್ರಗ್ರೈವೇಯಕದ, ನಿಜಭುಜಾಂತರಾಳದೊಳೊಬ್ಬೊಬ್ಬೆಗೊಟ್ಟಬ್ಬರಿಸಿ ಕೊಬ್ಬಿರ್ದಸುರರಿಪು ಶಿರೋಮಾಲೆಯ ವಿಕಟಾಟ್ಟಹಾಸಭಾಸುರಭ್ರುಕುಟಿಭಯಂಕರಮುಖಾಂಬುಜದ ಬಿಗಿದುಟ್ಟಚಿತ್ರಕಾಯ ಚರ್ಮಚಿತ್ರವಸನದ ಪೊದೆದಮದೇಭಚರ್ಮದುತ್ತರೀಯಕದ ವಾಮಾಂಘ್ರಿಯೊಳೊಲೆದುದ್ಘೋಷಿಪ ದನುಜಮದಭಂಜನನೆಂಬ ಬಿರುದಿನತೊಡರಸಜಳಜಳಧರವೃಂದಾಳಿಕುಳನೀಲರುಚಿಸಮಗ್ರೋಗ್ರವಿಗ್ರಹದಪೊಡರ್ಪು ವಿಜೃಂಭಿಸೆ ಅಸಮಪರಾಕ್ರಮಸಮನ್ವಿತಾಪ್ರಮಿತ ಪ್ರಮಥ ರುದ್ರಗಣಸಮಾವೃತದಕ್ಷಮಖಸಮಾಗತಸಕಳದಿವಿಜವಿದ್ರಾವಣವೀರಭದ್ರನಿಂ ರೌದ್ರರಸಮುಮಂ, ಮತ್ತ ಮತಿವಿತತವಿಶದರುಚಿಪರಿಹಸಿತಶಶಿರುಚಿಸ್ಫಟಿಕಮಣಿಕುಟ್ಟಿಮಪ್ರತಿಬಿಂಬಿತಮಹೇಂದ್ರಮಣಿನಿರ್ಮಿತತನ್ಮಂಡಪಾಗ್ರವಲಭಿಭಾಗಸಂಭೃತ ಪ್ರಚುರಮೇಚಕ ರುಚಿಪ್ರಚಯಮಂ ಮುನ್ನೀರೊಳ್ಮುನ್ನ ಮೊಗೆದು ಬೆನ್ನಟ್ಟಿಸುಟ್ಟುರಿಪಿ ವಿಲಯಂಗೆಯ್ಯಲುಜ್ಜುಗಿಸಿ ವಂದಘೋರತರಗರಳಂಗೆತ್ತಗಿದು ಸುಗಿದುಪೆಡಂಮೆಟ್ಟಿ ನಡನಡಂನಡುಗಿ ಸೆಡೆದಡಿಗಡಿಗೆ ತಲ್ಲಣಿಸಿ ಮೃಡಂಗೆ ಮೊರೆಯಿಡಲುಜ್ಜುಗಿಪ ಮುಗ್ಧಾಮರಪ್ರಕರದಿಂ ಭಯಾನಕರಸಮುಮಂ ಮತ್ತಂ ಪೊಳಲ್ವ ಕೆಂಜಡೆಯಪೊಳೆವಸುಲಿಪಲ್ಗಳನೊಸಲೊಳ್ಮಿಸುಪಭಸಿತತ್ರಿಪುಂಡ್ರದ ಹಸನರುಚಿಲಸಿತಸುಪ್ರಸನ್ನ ಮುಖಾಂಬುಜದ ಕೊರಲುರಂತೀವಿತಳೆದರುದ್ರಾಕ್ಷಮಾಲಿಕೆಗಳನೆಡವೆಗಲಿಂ ಬಲದಬರಿವರೆಗಮೊಳಲೆವಿಟ್ಟ ಜೋಗವಟ್ಟಗೆಯ ವಾಮಕಕ್ಷದೊಳಿರುಂಕಿದಭಸ್ಮಘುಂಟಿಕೆಯ ಬಲದಕರಾಗ್ರದೊಳಾಂತ ಪಳಿಕುಗುಂಡಿಗೆಯಪೊದೆದುಟ್ಟ ಮೃದು ವಲ್ಕಲದಕಡುಬೆಡಂಗಡರೆ ಹೃದಯಕಮಳಮಧ್ಯಮಂಡಿತಮಂಡಲತ್ರಯಾಗ್ರದೊಳ್ಬಿಡದೆಜಾನಿಪದಿವ್ಯಮೂರ್ತಿ ಜಲಕ್ಕನೆ ಸುರಸಭಾಮಧ್ಯಭಾಸಮಾನಸಿಂಹಾಸನ ಸಮಾಸೀನಮಾಗಿ ತೊಳತೊಳಗಿ ತೊಟ್ಟನೆ ದಿಟ್ಟಗಿನಿದುಗರೆದು ಮರೆಯೆ, ಕೀಲಿಸಿದಂತೆ ತಳ್ತೆವೆವಿಡುಕದನೋಟಮುಮಾನೋಟದೊಳ್ಸಿಲ್ಕಿ ಕಟ್ಟುವಡೆದಂತೆ ನೆಲೆಗೊಂಡ ಮನಮುಮಾಮನದ ಬೆಂಬಳಿವಿಡಿದು ಪಾರಳಿದಶೇಷಕರಣಂಗಳುಮಾಕರಣಂಗಳೊಡನಡಂಗಿ ನಿಷ್ಪಂದತೆಗೆ ಪಕ್ಕಾದಹರಣಮುಂ ಬಳಿವಿಡಿದು ನಿಶ್ಚಲತ್ವಂಬಡೆದಹಂಕೃತಿಯಳಿದು ಹರವಸಂ ಕಯ್ಮಿಕ್ಕು ಜಲಧಿಯೊಳಾಳ್ದ ಜಲೋಪಳಜಳದಂತೆ ಕಟ್ಟನೆಕರಗಿ ತೊಟ್ಟನೆರಸಮಯಮಾದ ಪರಮಾನಂದ ಸುಧಾಸಮುದ್ರದೊಳವಗಾಹಮಿರ್ದ ಶಿವಯೋಗೀಂದ್ರ ಸಂತಾನದಿಂ ಶಾಂತರಸಮುಮಂ ಕೈಕೊಂಡು ತಳೆದತ್ಯಂತಮನೋಹರಮಾಗಿ ರವಿಶಶಿಶಿಖಿಶತಕೋಟಿದಿವ್ಯರುಚಿಯಂ ಪಳಿದು ಪಜ್ಜಳಿಪನಿರುಪಮ ನಿರತಿಶಯನಿರವದ್ಯನಿರವಧಿವಿವಿಧವಿಭವಸಮಧಿಗತತನ್ಮಹಾಸಭಾಮಧ್ಯಮಂಡಿತ ಮಣಿಗಣಖಚಿತಮಹನೀಯ ಶಯನೀಯ ಮಧುಮುದಿತ

ಮಧುಕರರವಮಧುರಸರಸಪರಿಮಳಮಿಳಿತದರದಳಿತಸುರಕುಜ ಕುಸುಮವಿಸರಮಾಲಿಕಾಲಂಕೃತ ಮಹಾರಮಣೀಯ ವಿತಾನದ ಕೆಳಗಳವಟ್ಟವಿತತಪ್ರಭಾವಳಯವಿಳಸಿತಮಾದಮಹಾಮೃಗೇಂದ್ರಾಸನಮಧ್ಯದಲ್ಲಿ —

ಕಂ|| ಫಣಿಪತಿ ನಾಳಂ ದಳಕುಳ |
ಮಣಿಮಾದಿಗಳರ್ದ*ಶಕ್ತಿಕರ್ಣಿಕೆ ಭಾಸ್ವ ||
ದ್ಗುಣವಿದ್ಯೇಶಕ್ಕೆ ಕೇಸರ |
ಗಣಮಾಗಿರೆ ಮಿಸುಪಪದ್ಮ ಪೀಠಸ್ಥಳದೊಳ್ || ೧೦೭

ವೃ|| ವಿತತಾನಂದರಸಾಕರಂ ಪ್ರಣತವೃಂದಶ್ರೀಕರಂ ವಿಶ್ವವಿ |
ಶ್ರುತವಿದ್ಯಾಬ್ಜದಿವಾಕರಂ ಪ್ರಬಳಮಾಯಾಭೀಕರಂ ಭಕ್ತಸಂ ||
ತತಿದುಗ್ಧಾಬ್ಧಿಸುಧಾಕರಂ ಸುಕೃತಸದ್ರತ್ನಾಕರಂ ದೇವವಂ |
ದಿತನಿರ್ದ್ದಂ ಮಹಿಮಾಕರಂ ಶಶಿಕಳಾಶ್ರೀಶೇಖರಂ ಶಂಕರಂ || ೧೦೮

ವಚನ|| ಮತ್ತಂ —

ವೃ|| ಗಿರಿಜಾತಾದೀರ್ಘನೇತ್ರದ್ಯುತಿಧವಳಿತಚರ್ಮಾಂಬರಂ ಕೌಮುದಿವ್ಯಾಂ
ಬರಮುಂ ತನ್ಮಂಜುಮಂದಶ್ವಸಿತಸುರಭಿತಶ್ರೀರಸಂ ಕ ||
ತ್ತೂರಿಯುಂ ತತ್ಕಾಯಭಾಸ್ವದ್ರುಚಿನಿಚಯಪಿಶಂಗೀಕೃತಾಂಗಾಹಿ ಚಾಮೀ |
ಕರಚಂಚನ್ಮಾಲೆಯುಂ ಪೋಲ್ತಿರೆ ಕರಮೆಸೆದಂ ಬಾಲಚಂದ್ರಾವತಂಸಂ || ೧೦೯

ಕಂ|| ಕರೆಮರೆಯಿಲ್ಲದ ಬಲ್ಲವ |
ರರಿತಕ್ಕೊಳಗಾಗದಾಗಮದ ಬಗೆಪುಗದೆ ||
ಳ್ಚರಜತಿಗಳ ಜಾನಕ್ಕೆಡೆ |
ದೆರವಾಗದಚಿನ್ಮಯಪ್ರಭಂ ಮೆರೆದಿರ್ದ್ದಂ || ೧೧೦

ತತ್ವಾತೀತಂ ತತ್ವವಿ |
ಭುತ್ವಯುತಂ ತತ್ವಕಾರಣಂ ತತ್ವನಿಯಂ ||
ತೃತ್ವಪರತಂತ್ರರಹಿತಂ |
ತತ್ವಲಯಸ್ಥಾನನೆಸೆದ ನಾಸ್ಥಾಯಿಕೆಯೊಳ್ || ೧೧೧

ಎಲ್ಲಂ ತಾನಲ್ಲದ ಬಳಿ |
ಕೆಲ್ಲಂ ತಾನಾದ ಶೂನ್ಯನಲ್ಲದ ರೂಪೊಂ ||
ದಿಲ್ಲದೊಳಗಲ್ಲದುರೆ ಪೊರ |
ಗಲ್ಲದ ಪವಣಕ್ಕೆ ನಿಲ್ಲದನುಪಮನೆಸೆದಂ || ೧೧೨

ಕಂ|| ಪಳವಾತಿನ ಮಾತಿನ್ಗಳ |
ಬಳಮುಂ ಬಗೆಗೊಳದ ಬಚ್ಚ ಬರಿಯರಿವಿನ ತ ||
ಣ್ಬೆಳಗಿನ ಬಳಗಂ ಬಳೆದು |
ಜ್ಜ್ವಳಿಸಿದುದೆನಿಸಿದುದು ಮೃಡನ ಮೂರ್ತಿವಿಳಾಸಂ ||೧೧೩

ಅಮಿತಮಹಿಮಾಬ್ಧಿ ಶತಕೋ |
ಟಿಮನೋಭವರೂಪನೆನಿಪರುದ್ರನ ಸೌಂದ ||
ರ್ಯಮನಿಂತುಟೆಂದು ಬಣ್ಣಿಪ |
ಲಮರಾಚಾರ್ಯಾಹಿರಾಜರೇಂ ನೆರೆದಪರೇ || ೧೧೪

ಅದರಿಂ ಪೊಗಳಲ್ಕಾನ |
ಕ್ಕೈದೆನೀವಾಣೀವಧೂಟಿ ಶಿವಭಕ್ತಿರಸೋ ||
ನ್ಮದೆ ಮುಗುಳ್ದು ಪೊಗಳಲಾಟಿಪ |
ಳಿದಲಂಘ್ಯಂ ಪ್ರೇಮಕಾಮಿನೀಜನವೃತ್ತಂ || ೧೧೫

ವಚನ|| ಅದುಕಾರಣದಿಂ ಬಲ್ಲಂತೆ ಬಣ್ಣಿಪೆನದೆಂತೆನೆ—

ಕಂ|| ಪರಿವೃತಫಣಿವರನಮರ್ದೊ |
ಪ್ಪಿರೆ ಪರಿಗತಸಿಂಧುಬಂಧುರಂ ಮಂದರಭೂ ||
ಧರಮೆನಿಸಿ ಮೆರೆದುದಾಪುರ |
ಹರನುಜ್ಜ್ವಳಮಕುಟಮತುಳಮಣಿಗಣಮಹಿತಂ || ೧೧೬

ಜಡೆವಳ್ಳಿಯಾಂತಮುಗು*ಳ್ಗಳ |
ಗಡಣಂ ತಾನೆನಿಸಿ ಗಾಂಗಜಳಕಣತತಿ ಸಂ ||
ಗಡಿಸಿರೆ ಶಶಿಕಳೆ ಬಳಸಿ |
ರ್ದ್ದುಡುಗಳ ಮಧ್ಯದೊಳೆ ಮೆರೆವುದೆನೆ ಕಂಗೊಳಿಕುಂ ||೧೧೭

ಜಡೆದುರುಗಲೆಡೆಯ ಮಡದಿಯ |
ಮುಡಿಯಗ್ರದೊಳೈದೆ ತೊಳಪಮುತ್ತಿನಪೆರೆಯೆಂ ||
ಬೆಡೆಗೆಡೆಯಾದುದು ಪದಪಂ |
ಪಡೆದೆಳವೆರೆ ಮಕುಟದಗ್ರದೊಳ್ಪಶುಪತಿಯಾ || ೧೧೮

ಗಿರಿಧನುಗೇರಿಸುತುಂ ಗಣಿ |
ದಿರುವಂ ಜೇವೊಡೆಯೆ ಸಿಡಿದಫಣಿಮಣಿ ಪಣೆವ ||
ತ್ತಿರದೆಸೆವಂತೆಸೆದುದು ಭವ |
ಹರನನುಪಮ ನಿಟಿಲತಟಧನಂಜಯ ನಯನಂ || ೧೧೯

ಅಂಬಾನನಬಿಂಬಾಧರ |
ಚುಂಬನಸಂಕ್ರಾಂತಘುಸೃಣರಸತಿಲಕಂ ತಾ ||
ನೆಂಬಿನ ಮಂಬಕಮಳಿಕದೊ |
ಳಿಂಬಾದುದು ಶಂಬರಾರಿಮದಭಂಜನನಾ || ೧೨೦

ವಿಲಸದ್ದ್ವಿಜರಾಜದ್ಯುತಿ |
ಮಿಳಿತಾರುಣಬಿಂಬಸುಪ್ರಭಾಧರ ಮಧಿಕೋ ||
ಜ್ಜ್ವಲ ಘನರುಚಿ ವದನಂ ಕ |
ಣ್ಗೊಲವಿತ್ತುದನಂತಸಂಪದಂ ಪರಶಿವನಾ || ೧೨೧

ನಿಂದಿಸಿದುದಿಂದುಬಿಂಬಮ |
ನಿಂದು ಧರಾನನ ಮಮಂದರುಚಿಯುತಮನಿಶಂ ||
ಕಂದದ ಕುಂದದ ದೋಷಂ |
ಬೊಂದದ ಚೆಲ್ವಿಂದೆ ಸತ್ಕಳಾಪರಿಪೂರ್ಣಂ || ೧೨೨

ನಿಜಕೋಟಿ ಮಿಡುಕೆ ಮಿಡುಕಿಪು |
ದು ಜಗತ್ಕೋಟಿಯನೆನಿಪ್ಪಶರ್ವನ ಪುರ್ವ್ವಂ ||
ಗಜಧನುಗಸಾರಕೋಟಿಗೆ |
ವಿಜಿತಕ್ಕೆಣೆಯೆಂಬನಾಗನೇ ಕಡುಗಾಂಪಂ || ೧೨೩

ವಿದಿತಜಗತ್ಪ್ರಾಣಂ ಪು |
ಟ್ಟಿದಿತಾಣಂ ಘ್ರಾಣಮತುಳಮಂಜುಳಮದು ಗೆ ||
ಲ್ದುದು ಸಾರ್ದ್ವಳಿಶಿಶುವಸುವಂ |
ಸದೆದಿಕ್ಕುವ ಕನಕಚಂಪಕಮನಘಹರನಾ || ೧೨೪

ಶಿವಕರ್ಣಾಕಾರಶ್ರೀ |
ಭವಮಾಶ್ರೀಕಾರಮಪ್ಪುದಲ್ಲದೊಡುರುವ ||
ರ್ಣವಿಳಾಸತೆ ಶಾಸ್ತ್ರಾದಿ |
ಶ್ರವಣತೆ ಶುಭಕರಣಭಾವಮೇಂ ಸಮನಿಪುದೇ || ೧೨೫

ಹರಕರ್ಣಪೂರಕಮಳಂ |
ಶಿರದಿಂದುಮಸಯ್ದು ಪಿಡಿದು ಸೊದೆಗೊಂಬುದೆಸು ||
ತ್ತಿರರ ಪಿಸುಣಾಡುವಂತಿರೆ |
ಕರಮೆಸೆದುದು ಕರ್ಣದಹಿಯೊಳಳಿರವಮಿಷದಿಂ || ೧೨೬

ಕಂ॥ ಗೌರೀವಿಲೋಚನಾಸ್ಯಚ |
ಕೋರಾಂಬುಜಸಮ್ಮದ ಪ್ರದಪ್ರಭಮತುಳಂ ॥
ರಾರಾಜಿಸಿದುದು ಕುಮುದಸ |
ರೋರುಹಸಖಲೋಚನದ್ವಯಂ ಶಶಿಧರನಾ ॥ ೧೩೭

ಫಣಿಫಣಮಣಿಕಿರಣಗಣಾ |
ರುಣಿತಂ ಮಣಿದರ್ಪಣಪ್ರಭಂ ಕದಪದು ಪಾ ॥
ರ್ವಣಸಮುದಿತೇಂದುಬಿಂಬಮ |
ನಣಕಿಪುದಮಳಾಂಶು ಚಂದ್ರಚೂಡಾಮಣಿಯಾ ॥ ೧೩೮

ಹಾರೋರಗಫಣಮಣಿದೀ |
ಪ್ತೋರುಶಿಖಾಕಜ್ಜಳಾಯಿತಂ ಗಳಗರಳಂ ॥
ಗೌರೀನಯನಾಂಜನರೇ |
ಖಾರಸಮಮರ್ದಂತೆ ಮೆರೆದುದಹಿಭೂಷಣನಾ ॥ ೧೩೯

ಗಿರಿಜಾತಾಗುರುತರ ಕುಚ |
ಭರಕಾಶ್ಮೀರಾಂಗರಾಗರಾಗಾಂಕಪರಿ ॥
ಸ್ಫುರಿತಭುಜಮಜಿತವಿಳಸಿದು |
ದರುಣಾಬ್ಜರಜಃಪಿಶಂಗಿತೋರ್ವೀಯ ಚೆಲ್ವಂ ॥ ೧೪೦

ಹರಬಾಹುಕಲ್ಪತರುಭಾ |
ಸುರಶಾಖೆಯ ಪಲ್ಲವಂ ಕರಂ ಕರಮೆಸೆಯು ॥
ತ್ತಿರೆ ತತ್ಪ್ರಸೂನನವಮಂ |
ಜರಿಯೆನಿಸಿದುದಮಳ ನಖನಿಕಾಯಾಂಶುಚಯಂ ॥ ೧೪೧

ನಿಟಿಲಾಕ್ಷವಕ್ಷಮಗಜಾ |
ಘಟಕುಚಚಂದನರಸಾಂಕಮಮಳಿನಮತುಳ ॥
ಸ್ಫಟಿಕ ಕವಾಟದ ಸಿರಿ ಸಂ |
ಘಟಿಸಿರೆ ಮೆರೆದುದು ಚಿದಂಗನಾಮಣಿಗೃಹದಾ ॥ ೧೪೨

ಕುಂಜರಭಂಜನಶೌರ್ಯಸ |
ಮಂಜಸ ಕುಧರಾಗ್ರವಾಸಿ ಪಂಚಾಸ್ಯಂಗೇಂ ॥
ಮಂಜುಳತರ ಕೃಶಮಧ್ಯಂ |
ರಂಜಿಪುದಚ್ಚರಿಯೆ ನೋಳ್ಪೊಡೆಂಬವೊಲೆಸೆಗುಂ ॥ ೧೪೩

ಕಂ|| ಇಂಗಡಲೊಳೊಗೆದ ಸುಳಿಯಂ |
ಭಂಗಾನ್ವಿತ ಮೆನಿಪಭವನ ನಾಭೀವಲಯಂ ||
ತಾಂ ಗೆಲೆವಂದುದರಲ್ಡು ಬೆ |
ಡಂಗಾಂತೆಸೆವಚ್ಚ ದುಂಡುಮಲ್ಲಿಗೆಯರಲಂ || ೧೩೪

ಅಭ್ರಮುವಲ್ಲಭಕುಂಭದ |
ವಿಭ್ರಮಮಂ ಸೆಳೆದು ತಳೆದು ಮೆರೆದದು ಪೊರೆವಾ ||
ಶುಭ್ರರುಚಿ ಹೇಮಸೂತ್ರಪ |
ರಿಭ್ರಾಜಿತಮಧಿಕ ಮಂಥಕಧ್ವಂಸಕನಾ || ೧೩೫

ಮಾರಾರಿಯ ನುಣ್ದೊಡೆಯಾ |
ಕಾರಮನಾನಲ್ಕೆ ಬಯಸಿ ಬಾಳೆಗಳನಿಶಂ ||
ನೀರುಂಡು ನಾರನುಡುತಂ |
ಸಾರಿ ಸದಾತಪಮನಾಂತು ಮೆರೆಗುಂ ಬನದೊಳ್ || ೧೩೬

ಹರಚರಣದ ಸೌಂದರ್ಯಮ |
ನರವಿಂದಜನಿಂದಮಾಗದುದನರ್ಥಿಸಿ ಪಂ ||
ಕರುಹಮದು ಪಾದಪೀಠದ |
ಪರಿಜಂ ತಳೆದದನೆ ಪೊತ್ತು ಸೇವಿಪುದಿನ್ನುಂ || ೧೩೭

ಮಣಿವಹರಿಮುಖಸುರರ್ಕಳ ||
ಮಣಿಮಕುಟದಮೌಕ್ತಿಕಂಗಳುಡುಗಣಮೈತಂ ||
ದಣಿಯರದಿಂ ಪದನಖಪಾ |
ರ್ವಣಶಶಿಯಂ ಸೇವಿಪಂತಿರೇಸೊಪ್ಪಿದುದೋ || ೧೩೮

ಬಿಡುಗಣ್ಣರ್ಚಿಸಿದಸೊಂ |
ಪಡ*ರ್ದಸರೋಜದ ಪರಾಗತತಿ ಕಂಗೊಳಿಕುಂ ||
ಕಡುಜತಿಗಳ ಮನಮೆಲ್ಲಂ |
ಬಿಡದೋಲಗಿಪಂತೆ ಮೃಡನ ಮೆಲ್ಲಡಿದಳಿರೊಳ || ೧೩೯

ಸೊದೆಗೆತ್ತು ನಖರುಚಿಗೆ ಬಳ |
ಸಿದಫಣಿಪನ ಫಣೆಯ ಮಣಿಯ ಬೆಳಗೆಳವಿಸಿಲೆಂ ||
ದೊದವಿದಪೊಂಪಂ ತಳೆದಂ |
ದದೆ ಮೆರೆದುದು ಪಾದಪಂಕಜಂ ಪುರಹರನಾ || ೧೪೦

ಕಂ|| ಜನನಕುಜಮಮೂಲಮಂ ನೆ |
ಟ್ಟನೆ ಕಡಿಯಲ್ಕಿಡಿದನೆನಿಸಿದುದು ಪರಶು ಶಿವಾ ||
ನನಶಶಿಯಿಂ ತೆಗೆದಾಂತವೊ |
ಲೆನಸುಂ ಮಿಗಮಿರ್ದುದಾತಕಪರ್ದಿಯಕರದೊಳ್ || ೧೪೧

ವೃ|| ಪಳಿದುದ್ಯದ್ದುಗ್ಧವಾರ್ಧಿದ್ಯುತಿಯನೊದೆದು ದೇವಾಂಗನಾಪಾಂಗದೊಳ್ಪಿ |
ಳ್ಪೆಳಗಂ ತಳ್ಪೊಯ್ದು ಚಂದ್ರಾತಪಮನಲೆದು ವಾಣೀತನುದ್ಯೋತಿಯಂ ಪೆಂ ||
ಪಳಿವನ್ನಂಪೊಯ್ದು ತಾರಾಚಳರುಚಿಚಯಮಂ ತೂಳ್ದು ಮಂದಾಕಿನೀಮಂ |
ಜುಳಕಾಯಚ್ಚಾಯೆಯಂ ಪರ್ಬಿದುದು ಪರಶಿವಾಂಗಾವದಾತಪ್ರಕಾಶಂ ||

ಗಗನಂ ನಾಭಿ ನಿಭಂ ಶತಾಂಶು ನಿಜತೇಜೋಬಿಂದು ಬೀಜಂ ಮಹಾ |
ಗ್ನಿ ಗಳತ್ಪ್ರದರಜಂ ಧರಿತ್ರಿ ಶಶಿ ನಿರ್ಮಾಲ್ಯೋದ್ಗಮಂ ಶ್ವಾಸಮಾ ||
ಶುಗಮಾದ್ಯಂ ಜಲಮಂಗಘರ್ಮಜಲಮಾತ್ಮಾಂಭೋಧಿನಿರ್ಯತ್ಕಣಾ |
ಳಿಗಳಿಂದಾದ್ರಿಗಳೆಂದೊಡೇಂ ಪೊಗಳ್ವೆನೋ ಪೆಂಪಂ ಮಹಾದೇವನಾ || ೧೪೩

ಕನಕನಗೇಂದ್ರಧರ್ಮಕರನಾಗಿಯು ಮುನ್ನತಧರ್ಮಹಂತ್ಕ ನಂ |
ಜನಿತಪರಾರ್ಥನಾಗಿಯುಮುದಗ್ರಪರಾರ್ಥಹರಾಪ್ರದತ್ತಕಾ ||
ಮನುಮೆನಿಸಿರ್ದ ಕಾಮಮಥನಂ ಪರಮೋಕ್ಷದನಾಗಿಯುಂ ಸನಾ |
ತನ ಪರಮೋಕ್ಷ ಲುಬ್ಧಮತಿ ಯೆಂದೆನಿಸಿರ್ದ ನಹೀಂದ್ರಭೂಷಣಂ || ೧೪೪

ಚರಿತದೊಳುಂಟೆ ನೋಡೆ ಕರೆ ಕಂಠದೊಳಲ್ಲದೆ ರಾಗಮಾಜಟೋ |
ತ್ಕರದೊಳಮಲ್ಲದುಂಟೆ ಮನದೊಳ್ವಿಷಮಸ್ಥಿತಿ ನೈಜನೇತ್ರಭಾ ||
ಸುರತೆಯೊಳಲ್ಲದುಂಟೆ ಮತಿಯೊಳ್ಜಡಸಂಗತಿ ತನ್ನೊಳುಂಟೆ ಮೋ |
ಣ್ಯರದೊಳಗಲ್ಲದೆಂಬನುಡಿಗೊಲ್ದೆಡೆಗೊಟ್ಟನವಂ ಸದಾಶಿವಂ || ೧೪೫

ಸಿರಿಗಧಿದೇವಿಶಾರದೆಯ ಸಕ್ಕಳೆ ಸೈಪಿನ ಜನ್ಮಭೂಮಿ ಸ |
ಚ್ಚರಿತದ ಸೀಮೆ ಸತ್ಯದ ತವರ್ಮನೆ ಪೆರ್ಮೆಗಡರ್ಪು ಸಿದ್ಧಿಗಾ ||
ಗರಮುತುಳೋತ್ಸವಕ್ಕೆ ನೆಲೆ ಚೆಲ್ವಿನ ಕೋಶಮನೂನಮಂಗಳೋ |
ತ್ಕರನಿಧಿ ಗೌರಿ ರಂಜಿಸಿದಳಂಕದೊಳಿಂದುಕಳಾವತಂಸನಾ || ೧೪೬

ನಗೆಗಣ್ಣೈದಿಲನೈದೆ ನೀರ್ವುಗಿಸೆ ಚಂದ್ರಂಗೀಯೆ ಕುಂದಂ ಮೊಗಂ |
ನಗಮಂ ಪತ್ತಿಸೆ ನಾಸಿಕಂ ಸುಲಲಿತಂ ಚಂಪೇಯಮಂ ಪೊನ್ನಬಿಂ ||
ದಿಗೆಯಂ ಮೆಯ್ಗರೆವಂತೆ ಗೆಯ್ಯೆ ಕುಚಮಾವೇಣೀಭರಂ ಕಾಳಪ |
ನ್ನಗನಂ ಪುತ್ತಡರ್ವಂತೆ ಮಾಡೆ ಮೆರೆದಳ್ಶರ್ವಾಣಿ ಸೌಂದರ್ಯದಿಂ || ೧೪೭

ಅರುಣಂಪಾಣಿ ತಳಿರ್ಕರ್ಣಚಂ ಕುಸುಮಗುಚ್ಛಂಕುಂದದಂತಾಳಿ ಭಾ |
ಸುರಪುಷ್ಪಂ ಭ್ರಮರಾಳಿ ನೀಲಮಣಿಚಂಚನ್ಮಾಲೆ ಪಾದಾಬ್ಜಬಂ ||
ಧುರಪೀಠಂ ಕಲಿತಾಲವಾಲ ಮಮರೀನೇತ್ರಾಂಶು ಪೊಯ್ನೀರದಾ |
ಗಿರೆ ಸಂಶ್ಲಿಷ್ಟಶಿವಾಮರಾಗೆ ಶಿವೆಯೊಂತಳ್ವಲ್ಲರ್ತಾ ಶೋಭೆಯಂ || ೧೪೮

ಗಳದುದ್ಯದ್ದಾನಧಾರಾಸುರಭಿಮಿಳಿತಕರ್ಣಾನಿಳೋದ್ದಂಡಶುಂಡಾ |
ಗ್ರಳಸತ್ಫೂತ್ಕಾರ ನಿರ್ಯಜ್ಜಲಲವನಿವಹಕ್ಕಾಸೆವಟ್ಟೈದಿ ನಿಂದಂ ||
ತಿಳಿಯಂ ಪೊತ್ತಿರ್ದಹೀಂದ್ರಂ ಮಿಸುಗೆ ಪೊಡೆಯಹೀಂದ್ರಂ ಕರಂಕಣ್ಗೆವಂದಂ |
ಗಳಿತಾಶಂ ವಿಘ್ನನಾಶಂಪೃಥುಸಕಳಕಳಾಪೂರ್ಣಕೋಶಂ ಗಣೇಶಂ || ೧೪೯

ಬಾಲಾದಿತ್ಯಾಂಶುಭಾಸ್ವತ್ತನು ಮಣಿಗಣಭೂಷಾವಹಂ ಪೀನಮುಕ್ತಾ |
ಮಾಲಾಲಂಕಾರವಕ್ಷಸ್ಸ್ಥಳ ನುರುತರಕೋಟೀರಧೌರೇಯಸಸ್ಮೇ ||
ರಾಲಾಪಾಳಿಸ್ವನಾಸ್ಯಾಂಬುಜನಹಿಭುಗಿನಾರೂಢನೊಪ್ಪಿರ್ದನುದ್ಯ |
ಲ್ಲೀಲಾಯುಕ್ತಂ ಸಶಕ್ತಿಸ್ಫುರಿತ ಭುಜನುಮಾಸತ್ಕುಮಾರಂ ಕುಮಾರಂ || ೧೫೦

ಪದಪಾದಂ ವೇದಪಾದಸ್ಫಟಿಕಮಣಿಕಟಕಂ ಕಾಲವಾಲಂ ಕಳಾಕಾಂ |
ತಿ ದಯಾಸ್ಯಂ ಚಿತ್ರಭಾಕ್ಷಂ ಪ್ರಣವರವಣತ್ಕಾರನಾನಂದಸಾಸ್ನಾ ||
ಸ್ಪದನಾಮ್ನಾಯಾಂತಘಂಟಾಗಳನಮೃತಕಕುದ್ಬಂಧುರಂ ಚಿತ್ಕ್ರಿಯಾಹ್ಲಾ |
ದದಶೃಂಗಂ ಧರ್ಮರೂಪಂ ತೊಳಗಿದನಭವಾಂಭೋಧಿ ಚಂದ್ರಂ ವೃಷೇಂದ್ರಂ

ಸ್ಮಿತವಕ್ತ್ರಂ ರಕ್ತಕರ್ಣಾಭರಣಕಲಿತಮುದ್ದೀಪ್ತದೀರ್ಘಾಂಗನಾಲಂ |
ಬಿತಹಾರಂ ಭಸ್ಮರೇಖಾತ್ರಯ ವಿಳಸಿತ ಭಾಳಸ್ಥಳಂ ಚೀನಚೇಲಾ ||
ವೃತಮಧ್ಯಂ ಮೌಕ್ತಿಕಪ್ರಸ್ಫುಟಮುಕುಟನುದಂಚತ್ಸುವರ್ಣೋರುವೇತ್ರಂ |
ಚಿತಹಸ್ತಂ ನಿಂದು ಕಣ್ಗೊಪ್ಪಿದನಭವಸಭಾವಾಸದೊಳ್ನಂದಿಕೇಶಂ || ೧೫೨

ರುರುಘಂಟಾಕರ್ಣ ನಂಡಾಭರಣನಹಿಧರಂ ಶಂಕುಕರ್ಣಂ ಪ್ರಕುಂಡೋ |
ದರ ನಂಭೋದಸ್ವನಂ ಧೂರ್ಜಟಿ ಜಟಿಲಜಟಾಮಾಲಿ ಕಾಲಾಂತಕಂ ಶಂ ||
ಕರನೋಂಕಾರಂ ವೃಷೇಂದ್ರಧ್ವಜನಜಿನವಸಾನಂ ವಿಷಾದಂ ವಿಪದ್ಭೀ |
ಕರಸಂಗಾರಾಂಗ ಸಂಗೋದ್ಭವಹರನಸುರಧ್ವಂಸಕಂ ವೀರಭದ್ರಂ || ೧೫೩

ಹರಿವಕ್ತ್ರಂ ಕರಿವಕ್ತ್ರನಶ್ವವರವಕ್ತ್ರಂ ಮೇಷವಕ್ತ್ರಂ ಫಣೀ |
ಶ್ವರವಕ್ತ್ರಂ ನರವಕ್ತ್ರನುಷ್ಟ್ರಪತಿವಕ್ತ್ರಂ ಗೋಪವಕ್ತ್ರಂ ವನೇ ||
ಚರವಕ್ತ್ರಂ ಕಿರಿವಕ್ತ್ರ ನುಗ್ರಶಿಖಿವಕ್ತ್ರಂ ವ್ಯಾಘ್ರವಕ್ತ್ರಂ ಪಯ |
ಶ್ಚರವಕ್ತ್ರಂ ರುರುವಕ್ತ್ರರೆಂಬರೆಸೆದರ್ ವಿಶ್ವೇಶ್ವರಾಸ್ಥಾನದೊಳ್ || ೧೫೪

ವಟರುದ್ರಂ ವಂದ್ಯರುದ್ರಂ ಕಲವಿಕರಣರುದ್ರಂ ಕಳಾಮೋಯರುದ್ರಂ |
ವಿಟರುದ್ರಂ ವೀರರುದ್ರಂ ಬಲವಿಕರಣರುದ್ರಂ ಮಹಾಬಾಹುರುದ್ರಂ ||
ಪಟುರುದ್ರಂ ಪಾಶಿರುದ್ರಂ ಪರಮಮಹಿಮರುದ್ರಂ ಪರೇಶಾನರುದ್ರಂ |
ನಟರುದ್ರಂ ನೀಲರುದ್ರಂ ಜಗದಧಿಪತಿರುದ್ರಂ ಜನಾಧಾರರುದ್ರಂ || ೧೫೫

ತಿರುಮೂಲಂ ಚೇರಮಾಂಕಂ ಮುರುಘರಿರಿವದಾಂಡಾರಿವಾಗೀತ್ಸರಂ ಸೌಂ
ದರನಾ ನೈನಾರರೇಣಾಂಥಣರಣುತನು ವೆಳ್ಳಾತರೇಣಾಧಿನಾಥಂ ||
ಸಿರಿಯಾಳ್ವಂ ಸೇದಿರಾಜಂ ಮೊನೆಯಿಡುವನುಮಷ್ಪ್ರತಿಯೇಕಾಳಿ ಚಂಡೇ |
ಶ್ವರನಾ ಕಣ್ಣಪ್ಪದೇವರ್ಮೆರೆದರಭವಸದ್ಭಕ್ತಿಸಂಪತ್ತಿಯುಕ್ತರ್ || ೧೫೬

ಶುಕಕಣ್ವಾಗಸ್ತ್ಯಭೃಂಗ್ಯಂಗಿರಸ ಸನಕಸಾನಂದಸೂತಾತ್ರಿಗಳ್ಕ |
ಶಿಕಭಾರದ್ವಾಜಶಾತಾತಪ ಕಪಿಲಕಣಾದಾನಿಲಾದಾಕ್ಷಪಾದಾ ||
ಜಕಮಾರ್ಕಂಡೇಯಮಾಂಡವ್ಯರುರುವಿಮದಜಾಬಾಲ ಬೋಧಾಯನರ್ನಿ
ದಕಳಂಕಕೀರ್ತಿಸುತ್ತೊಪ್ಪಿದರಭವಸಭಾವಾಸದೊಳ್ಭಕ್ತಿಯಿಂದಂ || ೧೫೭

ವರುಣಂ ಪೊಂಗಿಂಡಿಯಂ ವಾಸವನೆ ಡವಕೆಯಂ ಪಾವಕಂ ದೀಪಮಂ ಭಾ
ಸ್ಕರಪುತ್ರಂ ಛತ್ರಮಂ ವೀಜನಮನನಿಲನಬ್ಜಾಕ್ಷನಾದರ್ಶಮಂ ಚಾ |
ಮರಮಂ ಶ್ರೀವಾಣಿ ಚಿತ್ರಪನಡಪವನೀಶಾನನಂಗಾಂಗರಾಗೋ ||
ತ್ಕರಮಂ ಖಡ್ಗಾದಿಯಂ ದಾನವಪತಿ ಪಿಡಿದೋಲೈಸಿ ನಿಂದಿರ್ದರಾಗಳ್ ||

ಯಮಕವಚನ || ಮತ್ತಮಾ ಮಹಾಸ್ಥಾನಂ ಸಾರಸ್ವತಸ್ಫುರಿತ ಮಾನಸ ಕಮಳವಿಕತಾಮೋದವಾಹಸುಧೀರಾಜಸಮನ್ವಿತಮುಂ | ಸಾರಸ್ವತಸ್ಫುರಿತಮಾನನ ಕಮಳವಿಕತಾಮೋದ ವಾಹಸುಧೀರಾಜ ಸಮನ್ವಿತಮುಂ | ಸಾನಂದಸನಂದನಸಮಾಗತಶತಕ್ರತುಸುಮನೋಮುನಿಸಮಂಚಿತಮುಂ | ವಿಕತಸಖರುಚಿರುಚಿರವನಮಾಲಾ ಸುಮನಸ್ಸುಗಂಧದೇಹಾನುಕಂಪಿತ ಸುಪರ್ಣಸಮುದ್ಧೃತಪರಾಗಸ್ತೋಮಮಧುಹರಪರಮಹಿಮಯುತಹರಿವಿರಾಜಿತಮುಂ | ಹುತಾಶನಚಂಡದಂಡಧರಪಾಶಹಸ್ತನಿಧೀಶವೃಷಾಂಕಶೂಲ ಧರರುಂಡಾಭರಣಮಹಾಭೈರವಗಣಕಲಿತಮುಂ | ಸದಾಲೋಕಹಿತಕರಸ್ಫುರಿತಪುಷ್ಕರವಿಬುಧ ಚಕ್ರಸಮೀಹಿತೋದಯರುಚಿರಸಿತಭಾನುರಂಜಿತ ಮಹೋತ್ಪಳಮಿತ್ರವಿಳಸಿತಮುಂ| ಸದಾಲೋಕಹಿತಕರಸ್ಫುರಿತಪುಷ್ಕರವಿಬುಧಚಕ್ರಸಮಾಹಿತೋದಯ ರುಚಿರಸಿತಭಾನುರಂಜಿತ ಮಹೋತ್ಪಳಮಿತ್ರವಿಳಸಿತಮುಮೆನಿದ್ದುದಂತುಮಲ್ಲದೆಯುಂ-

ವೃ|| ಮರುದಾಕೀರ್ಣಾಪ್ಸರಂ ಸತ್ತಿಲಕವಿಲಸಿತಂ ರಾಜಹಂಸಾನ್ವಿತಂಭಾ
ಸುರರಂಭಾಶೋಕಪೂಗಸ್ಥಿತಿ ಶಿಖಿಶುಕವಿಭ್ರಾಜಿತಂ ಗಂಧವಾಹಾ |
ಗುರುಗೋಜಸ್ಫಾರಪುನ್ನಾಗಕಮುರುಸುಮನೋವೃಂದಪದ್ಮಾಭಿರಾಮ |
ಸ್ವರಚಂಚದ್ಭೃಂಗ್ಯಲಂಕಾರಕಮಭವಸಭಾವಾಸಮುದ್ಯಾನಸಾಮ್ಯಂ|| ೧೫೯

ವೃ|| ಕರಮೆಸದಿರ್ದುದಭ್ರಚರದಿಂಚರದಿಂಚರದಿಂದಿರಾಮುಖಾ |
ಮರತರುಣೀಸುಲಾಸ್ಯರಸದಿಂ ರಸದಿಂ ರಸದಿಂ ಪೊದಳ್ದಶಂ ||
ಕರಕವಿವರ್ಗದಿಂದೆ ಸುರಭಾಸುರಭಾಸುರ ಭಾಗಭಂಗ ಮಾ |
ವರನುತಿಯಿಂ ಸಭಾಸ್ಥಳೀ ಕಳಾಪ ಕಳಾಪ ಕಳಾಪ ಮಾಳಿಯಾ || ೧೬೦

ವಚನ || ಇಂತನಂತ ಸಂಭ್ರಮುಮನಮಂದ ವಿಭ್ರಮುಮನನೂನಾಶ್ಚರ್ಯಮನತೀವಸಂ ಪದಮ ನತರ್ಕ್ಯವಿಸ್ತಾರಮನಖಂಡಮಹಿಮೆಯನೊಳಕೊಂಡು ನುತಿಪೊಡಸದಳವಾದ ನಿರುಪ ಮಾನಾನೂನ ಘನಪರಮಮಂಗಳ ಮಹಿತಮಹಾಸ್ಥಾನದಲ್ಲಿ —

ಕಂ|| ಸಮುದಮರಕನಕಮಾಳಿಗ |
ಳಮದೊರ್*ರಸಿದೊಡುದಿರ್ದ*ರೇಣು ಪುಗೆ ಬಾಯ್ಗಳೊಳಾ ||
ಗಮುಮಂ ಪದೆದೋದುವವಾ |
ಗ್ರಮಣಂ ತಳೆದಂ ಹಿರಣ್ಯಗರ್ಭಾಖ್ಯತೆಯಂ || ೧೬೧

ವೃ|| ಗಳಪದಿರಿಂದ್ರ, ನೂಂಕದಿರುಪೇಂದ್ರ, ತೊಲಂಗೆಲೆಚಂದ್ರ, ಮೆಲ್ಲನೊ |
ಲ್ದೊಳಪುಗು ಮಿತ್ರ, ಕಯ್ಮುಗಿ ವಿಧಾತ್ರ, ಶರಣ್ಬುಗು ವೀತಿಹೋತ್ರ, ಪಿಂ ||
ದುಳಿ ಧನಪಾಲ ಸಾರ್ಕ್ಕಡೆಗೆ ಲೋಲಸಮೀರಣ ಕಾಲನಿಲ್ಲುವೆಂ |
ದಳಘುರವಂ ಗುಡುತ್ತೆಜಡಿದಂ ಜವದಿಂದಮೆ ನಂದಿಕೇಶ್ವರಂ || ೧೬೨

ವೃ|| ಪೊಡೆಯುತ್ತುಂವೇತ್ರದಿಂದಿಟ್ಟಣಿಪದನುಜರಂಯಕ್ಷರಂನೂಂಕುತುಂಕ
ಣ್ಗಡೆಯಿಂದಂ ಝುಂಕಿಸುತ್ತಂ ಮುನಿನಿವಹಮನಾದಿರ್ದ್ದತ್ತುತುಂ ಸಿದ್ಧರಂಮೇ
ಣ್ಗಡಿಯುತ್ತುಂ ಸಾಧ್ಯರಂ ಹೊಯ್ಯೆನುತೆ ನಿಲಿಸುತಿಂದಾದ್ಯರಂಗೀಶನೃತ್ಯ |
ಕ್ಕೆಡೆಯಪ್ಪಂತಲ್ಲಿ ಕೋಲಾಹಲಮನುಡುಗಿಸುತ್ತುಂ ಮಹಾಕಾಳನಿರ್ದ್ದಂ ||

ಶ್ರುತಿಕೋಟಿಸ್ತೋತ್ರನಾದಂಮುನಿಪಜಯಜಯಧ್ವಾನಮಂಭೋಜಗರ್ಭೋ
ನ್ನತವಕ್ತ್ರೋದ್ಭೂತಸಾಮಧ್ವನಿ ಸುರವನಿತಾಗೀತರಾವಂ ಪ್ರಮೋದಾಂ ||
ಚಿತಗಂಧರ್ವಾಂಗನಾನರ್ತನ ಘನನಿನದಂ ಭೃಂಗಿನಾಟ್ಯಸ್ವನಂ ಪ್ರ |
ಸ್ತುತನಾನಾವಾದ್ಯಘೋಷಂ ಬೆರಸಿಬಳೆದುದೆತ್ತತ್ತಲುಂ ಪರ್ಬ್ಬಿತಾಗಳ್ ||

ಸುರಪಂ ಮಂದಾರದಿಂದ ಚ್ಯುತನರುಣಸರೋಜಾತದಿಂ ಚಂದ್ರನಿಂದೀ |
ವರದಿಂ ಬಾಲಾಬ್ಜಮಿತ್ರಂ ಧವಳಕಮಳದಿಂ ಪದ್ಮಜಂ ಹೇಮಪದ್ಮೋ ||
ತ್ಕರದಿಂ ವಿತ್ತೇಶನುದ್ಯತ್ಕನಕಕುಸುಮದಿಂ ಮಾರುತಂ ದಿವ್ಯಸೌಗಂ |
ಧಿರಜಃಸೌಗಂಧದಿಂದರ್ಚಿಸೆ ನಿಜಪದಮಂ ಭರ್ಗನೊಪ್ಪಿರ್ದ್ದನಾಗಳ್ ||೧೬೫

ಕರಮೆಸೆದಿರ್ದ್ದರೀಶ್ವರಸಮಕ್ಷದೊಳುದ್ಭಟ ಬಾಣ ಭಟ್ಟಭಾ |
ಸ್ಕರವರಪುಷ್ಪದತ್ತರುಮುದಗ್ರಹರೀಶ್ವರ ರಾಘವಾಂಕಶಂ ||
ಕರವಿಭುಗಳ್ಸುಕೇಶಿ ಮಲಯಾಧಿಪ ಮಲ್ಹಣ ಭೀಮ ಬಿಲ್ಹಣ |
ಸ್ಸುರುಚಿರಕಾಳಿದಾಸಕವಿ ಭೋಜಮುಖರ್ನ್ನುತಿಸುತ್ತೆ ಭಕ್ತಿಯಿಂ || ೧೬೬

ಮಣಿಮಣಿದೇಳ್ವ ನಿಲ್ವ ನಡೆಸೋಡುವ ಪಾಡುವ ಜೋಲ್ವ ತೇಲ್ವಸಂ |
ದಣಿಪ ಕುಕಿಲ್ವ ಕೂಗಿಡುವ ರಾಗಿಪ ರಂಜಿಪ ಸುತ್ತಿಬರ್ಪ್ಪರಂ ||
ಗಣಗುಣಿಪರ್ವ್ವ ಸಾರ್ವ್ವ ನಗುವಂಘ್ರಿಯುಸಪ್ಪುವ ಲಲ್ಲೆದೋರ್ಪಕ |
ಣ್ಬೊಣರ ಸುಖಾಶ್ರುವಿಂ ನನೆವ ನಚ್ಚಿನ ಮಚ್ಚಿನ ಭಕ್ತರೊಪ್ಪಿದರ್ || ೧೬೭

ತವಕದೆ ನೋಡಿನೋಡಿ ತಣಿವೈದವು ಕಣ್ಗಳನೂನಮೂರ್ತಿಯಂ |
ಸವಿಮಿಗೆಪಾಡಿಪಾಡಿ ತಣಿವೈದದು ಜಿಹ್ವೆತದೀಯಕೀರ್ತಿಯಂ ||
ಸವೆಯದೆ ಮಾಡಿಮಾಡಿ ತಣಿವೈದದು ಪಾಣಿ ತದಂಘ್ರಿಸೇವೆಯಂ |
ನವವಿಧಭಕ್ತಿಯುಕ್ತಶರಣಾವಳಿಗೆಂದೆನೆ ಸೈಪದೆಂತುಟೋ || ೧೬೮

ಇಂತತ್ಯಂತಪ್ರಭಾವಂಬಡೆದು ಮಿಸುಗುವಾಸ್ಥಾನದೊಳ್ಸತ್ಕೃಪಾರ್ದ್ರ |
ಸ್ವಾಂತಂ ಸತ್ಯೇಂದ್ರನಂ ತತ್ತನುಜಮುಖರನೊಲ್ದೀಕ್ಷಿಸುತ್ತಂ ಭವಾನೀ ||
ಕಾಂತಂ ಕೊಂಡಾಡಿ ಕೇಡಿಲ್ಲದಗಣಪದಸಾಂಮ್ರಾಜ್ಯಮಂ ಸಾರ್ಚಿ ತಾನ |
ಶ್ರಾಂತಂ ಕಣ್ಗೊಪ್ಪಿದಂ ಮಂಜುಳಗುಣಗಣಮಾಣಿಕ್ಯಕೋಶಂ ಮಹೇಶಂ ||

ವಚನ|| ಆಗಳ್ಮೆಯ್ಯಿಕ್ಕಿ ಕಯ್ಯೆತ್ತಿ ಸಮ್ಮುಖದೊಳ್ಕಂಡಕೀರ್ತಿಗಳ್ಕಳಕಳಮಂ ನಿವಾರಿಸಿ ಸಂಭ್ರಮಿಸಿ ನಿಂದು—

**ಸ್ತುತಿ**—ಲಲಿತರಗಳೆ || ಜಯಜಯ ಸುಧಾಕರಕಲಾಕಲಿತಕೋಟೀರ | ಜಯಜಯಶಿವಾಂಗಸಂಗತಮಂಗಳಾಕಾರ | ಜಯಜಯವಿತಂದ್ರವೃಷಭೇಂದ್ರಚತುರತುರಂಗ | ಜಯಜಯ ಮಹಾನಟನಚಲಕುಲಾಚಲಶೃಂಗ | ಜಯಜಯ ಮಹಾಮಹಿಮಹಿಮಗಿರಿಸುತಾಕಾಂತ | ಜಯಜಯಸುಭಿಕ್ಷಾಟನೇಕ್ಷಿತೇಂದ್ರನಿಶಾಂತ | ಜಯಜಯವಿಶೃಂಖಲಖಲಾಂಗಜಾಂಗವಿಭಂಗ | ಜಯಜಯಹೃತೋದ್ದಂಡದಂಡಧರಕುಧರಾಂಗ | ಜಯಜಯ ನಭೋನಗರಹರಣಪಟುನಿಟಿಲಾಕ್ಷ | ಜಯಜಯಜಲಂಧರಮದಾಂಧಗಜಹರ್ಯಕ್ಷ | ಜಯಜಯ ಪಿತಾಮಹ

ಮಹಾಕರಶೋಟಿಕರಾಗ್ರ | ಜಯಜಯಸಿಕೃತ್ತಸುರಪಕ್ಷದಕ್ಷಮಹೋಗ್ರ |ಜಯಜಯ ನೃಸಿಂಹ ಸಂಹರಣ ಪಟುಶರಭಾಂಗ | ಜಯಜಯ ನಿಂಜಾಂಗಾರ್ಧಸಂಗನಗಜಾರ್ಧಾಂಗ |ಜಯಜಯ ಸತಾಕಾಮವಿಧಿಹರಕಿರಾತೇಶ | ಜಯಜಯಜಿತತ್ರಿವಿಕ್ರಮವಿಕ್ರಮನಿವೇಶ |ಜಯಜಯ ಸಮಾದತ್ತಚಂಡವರವರದೇವ| ಜಯಜಯಜಗತ್ರಾಳಯಕರಗರಧರಗ್ರೀವ | ಜಯಜಯಾಚ್ಯುತದತ್ತಚಕ್ರರಕ್ಷಣಶೀಲ | ಜಯಜಯಗಜೇಂದ್ರಮುಖಮುಖವಿಲೋಕನಲೋಲ | ಜಯಜಯ ಕುಮಾರಮಾರಿತದಿವಿಜರಿಪುಜಾಲ | ಜಯಜಯ ವಿಳಾಸಕೃತವಿದಿತೈಕಪದಲೀಲ | ಜಯಜಯಶುಭಾವಹಸುಖಾವಹಸದಾಲಾಪ | ಜಯಜಯ ಸುದಕ್ಷಿಣಾಮೂರ್ತಿವಿಳಸಿತರೂಪ |ಜಯಜಯಹರಿಬ್ರಹ್ಮವ್ಯಗ್ಯಪರತರಲಿಂಗ| ಜಯಜಯಸದಾಮ್ನಾಯಗೇಯಮಹಿಮೋತ್ತುಂಗ|ಜಯದೇವದೇವಮಹಾದೇವನಮಸ್ತೇನಮಃ

ವಚನ|| ಎಂದಖಂಡವಿಭವಕೊರ್ಕೊಂಡಾಡುತ್ತುಮಿರೆಯಿರೆ—

ಕಂ|| ಹರಭಕ್ತಿಸುಖಸುಧಾಸಾ |
ಗರಮಗ್ನಂಗಣುತೃಣೋಪಮಂ ಹರಿಸುರಪಾ ||
ದ್ಯರ ಪದಪಲ್ಲವಮುಮದು*ರಂ |
ಡರಬಾಯ್ಗಂಬಿಲದ ರಸಮದೇಂ ಸೊಗಯಿಕುಮೋ || ೧೭೦

ವಚನ|| ಎನಿಸಿ—

ವೃ|| ಪರಮಾನಂದರಸಪ್ರಸನ್ನವದನಂ ಪಂಚಾಕ್ಷರಾವೋದವಿ |
ಸ್ಫುರಿತಸ್ವಾಂತಪಯೋರುಹಂ ಶಿವಪದಾಂಭೋಜಾತಭೃಂಗಂ ಗುಣಾ ||
ಕರಚೂಡಾಮಣಿ ರಾಜಶೇಖರಮಹೀಶಂ ತನ್ಮಹಾದೇವ ಭ |
ಕ್ತಿರಸಾನಂದತೃಣೀಕೃತಾನ್ಯಸುಖನೊಪ್ಪಿರ್ದ್ದಂ ತದಾಸ್ವಾದನದೊಳ್ || ೧೭೧

ಇಂತೀಕಾವ್ಯಮನೊಲ್ದುಕೇಳ್ದ ವಿಬುಧರ್ಮ್ಮೆಚ್ಚಿಕೊಂಡಾಡೆ ಪೇ |
ಳ್ದಂ ಶಾನೊರ್ವನೆ ಸಾಂಬಶಂಭುಕೃಪೆಯಿಂದೇಕಾಬ್ದದೊಳ್ಪೂರ್ಣಮ ||
ಪ್ಪಂತೋರಂತೆ ಷಡಕ್ಷರಾರ್ಯನಸಘಂ ಸಾಹಿತ್ಯಶಾಸ್ತ್ರಜ್ಞನ |
ಶ್ರಾಂತಶ್ರೀಶಿವಲಿಂಗಸಂಗತಮಹಾಮಾಹೇಶ್ವರಂ ಭಕ್ತಿಯಿಂ || ೧೭೨

ಸರಸಾರ್ಥಂ ಸವಿಪಾಕ ಜಾಣ್ಮೆಯೊಳವೆಂದಾಮ್ನಾಯಸಂಸ್ತುತ್ಯಶಂ |
ಕರನಾಮಾಂಕಿತ ಮಲ್ಲದಸ್ಯ ಕೃತಿಯೊಳ್ವಿದ್ವಜ್ಜನಂ ಮೋಹಿಪೊಂ ||
ದಿರವಲ್ತೆಂದಿದರೊಳ್ಸದಾರಮಿಸುಗೆಂದೋರಂತೆಪೇಳ್ದಂ ಷಡ ||
ಕ್ಷರದೇವಂ ರಸಮರ್ಥಮೊಳ್ಪುಮಿಸುಪೀಸತ್ಕಾವ್ಯಮಂ ಶ್ರಾವ್ಯಮಂ ||೧೭೩

ವೃ|| ತ್ರಿದಶಜನಗ್ಗರ್ದೀವುದೆರೆದರ್ಥಮನ್ನೈದುಸುರೋರ್ವಿಜಂ ಸಮಂ |
ತಿದು ಬಿಡದೊಂದೆ ಕಾವ್ಯನವಕಲ್ಪಕುಜಂ ಸಕಳಗ್ಗರ್ವಿಶಾವುದು ||
ವ್ರಿರ್ದಸುಪದಾರ್ಥವಂ ಸವಿಕಳಧ್ವನಿ ಪಲ್ಲವಸೂನಶೋಭಿ ತಾ |
ನದರಿನಿದಕ್ಕೆ ಸಧ್ವನಿಲಸತ್ಪದಪೂರ್ಣಕದಿಂ ಸಮಾನಮೇ || ೧೭೪

ಕಂ|| ಪದಪಾಳಿಕ್ರಮಯುಕ್ತಂ |
ಸದಮಳಮಂತ್ರಾರ್ಥವಾದಸಹಿತಂ ತಾನಾ ||
ದುದರಿಂದೀಕಾವ್ಯಂ ವೇ |
ದದವೋಲ್ಬುಧಜನಕೆ ಮಂಗಳಪ್ರದಮಲ್ತೇ || ೧೭೫

ಶ್ರುತಿಗತಿಹಿತಮತಿ ವಿಬುಧ |
ಪ್ರತತಿಗೆ ಶಿವಮಂತ್ರಮಹಿಮಯುತಮೀಕಾವ್ಯಂ ||
ಶ್ರುತಿಗತಿಹಿತಮತಿ ವಿಬುಧ |
ಪ್ರತತಿಗೆ ತಾನೆನಿಪುದರರೆ ವಿಶ್ವಂಭರೆಯೊಳ್ || ೧೭೬

ವೃ|| ಸರಸಾಲಂಕೃತಿ ಜಾತಿ ರೀತಿ ಗಮಕಂ ಸೊಂಪಿಂಪು ನುಣ್ಪೊಳ್ಪುಭಾ|
ಸುರಭಾವಂ ನೆಲೆಗೊಂಡು ತೋರೆ ರಸಗಾನಂಬೋಲ್ಮನಂ ಗೊಳ್ವವಿ ||
ಸ್ಫುರದಸ್ಮತ್ಕೃತಿಯಂ ಸದಾ ವಿಷಮದಾಟೋಪಂ ಜಗತ್ಪ್ರಾಣಸಂ |
ಹರವಕ್ರಕ್ರಮವಿಕ್ರಮಂ ಖಳಭುಜಂಗಂ ಕೇಳದೇಂ ಪೋಕುಮೇ || ೧೭೭

ಇದುಪೊಸತಿಂಪು ನೋಡಿದು ನವೀನನುನೂನಮೃದೂಕ್ತಿ ಭಾವಮಿಂ |
ತಿದು ಸಮಮಿಂತಿದಲ್ತೆ ಸದಲಂಕೃತಿ ನವ್ಯಮುದಾತ್ತವೃತ್ತಿ ತಾ ||
ನಿದು ಮಿಗೆ ನೂತ್ನ ಮೆಂದಖಿಳಕಾವ್ಯಕಳಾವಿದರೊಲ್ದು ಕೇಳ್ದು ಮ |
ಚ್ಚದೆ ನುತಿಗೆಯ್ಯುದಿರ್ಪರೆ ಷಡಕ್ಷರದೇವಕೃತಪ್ರಬಂಧಮಂ || ೧೭೮

ವಿತತಾಲಂಕಾರವಿಭ್ರಾಜಿತೆ ಗುಣಗಣಸಂಯುಕ್ತೆ ಶೃಂಗಾರಸಾರಾ |
ನ್ವಿತೆ ಸದ್ವೃತ್ತಿಪ್ರಕಾಶೋದಯೆ ಮೃದುಪದವಿನ್ಯಾಸೆ ಸದ್ಭಾವಶೋಭಾ ||
ವತಿ ಭಾಸ್ವದ್ರೀತಿರೇಖಾಲಸಿತೆ ಭೃತಸದಾಮೋದೆ ಭೂಚಕ್ರದೊಳ್ಮ |
ತ್ಕೃತಿಚಂಚತ್ಕಾಂತೆ ಮತ್ಕೀರ್ತಿಯಸಖಿಯೆನೆ ಸಂತೋಷದಿಂದಿರ್ಕೆ ನಿಚ್ಚಂ ||

ಅಕಳಂಕಂ ವಿಬುಧಪ್ರಣೀತಸುಮನಸ್ಸಂಯುಕ್ತಮಿಷ್ಟಾರ್ಥದಂ |
ಸುಕುಮಾರಸ್ಥಿತಿ ಸಾರಲಕ್ಷಣಯುತಂ ಸದಾಗಶೋಭಾಕರಂ ||
ಸಕಳಾಮ್ನಾಯಶಿರಸ್ಸ್ಥಳಸ್ಥಗಿತಮೆಂದುಂ ನಿಂದವೋಲ್ಶಂಕರಾ೦ |
ಘ್ರಿಕರಂ ನಿಲ್ಕೆಮದೀಯಕಾವ್ಯಮನಿಶಂ ವಿಶ್ವಂಭರಾಚಕ್ರದೊಳ್ || ೧೮೦

ಪರಮೈಶ್ವರ್ಯ ಮನೀಶ್ವರಂ ಪ್ರವಿಲಸತ್ಕಲ್ಯಾಣಿ ಕಲ್ಯಾಣಮಂ |
ಕರಿವಕ್ತ್ರಂ ಕರಣೀಯಸಿದ್ಧಿಯನಮಂದಾನಂದಮಂ ನಂದಿ ಬ ||
ರ್ಹಿರಥಂ ಪೂರ್ಣಮನೋರಥಂಗಳನತಂದ್ರಂ ಶ್ರೀವೃಷೇಂದ್ರಂ ವೃಷೋ |
ತ್ಕರಮಂ ಮತ್ಕೃತಿಗೇಳ್ವವರ್ಗ್ಗಳಿಯೊಳೆಂದುಂ ಮಾಳ್ಕೆ ಸಂಪ್ರೀತಿಯಿಂ|| ೧೮೧

ಅಮೃತಶ್ರೀವೃತೆ ಸತ್ಫಳಾನ್ವಿತೆ ಮರುತ್ಸಂಸೇವ್ಯೆ ಸಚ್ಛಾಯೆ ಸ |
ಪ್ರಮದಾನೂನ ವಿನಾಯಕೋತ್ಸವೆ ಸದಾಮೋದಪ್ರಸನ್ನಸ್ಫುರ ||
ತ್ಸುಮನಸ್ಸಂಯುತೆ ನಿರ್ಜರಾರ್ಯಹಿತೆ ಹೈಮಕ್ಷ್ಮಾಧ್ರಸಂಜಾತೆಯಾ |
ಕ್ರಮಿತಸ್ಥಾಣು ಮೃಡಾನಿ ಕಲ್ಪಲತೆಯಂತೀಗೆಮ್ಮಭೀಷ್ಟಾರ್ಥಮಂ || ೧೮೨

ಶ್ರೀಮನ್ನಂದನಭಾಸಿ ಸಂಗತಮಹಾಪರ್ಣಾಶ್ರಿತಾಂಗಂ ಸದಾ |
ಳ್ಯಾಮೋದಪ್ರದಸೌಮನಸ್ಯಮಧಿಕಚ್ಛಾಯಂ ಶುಕಾದಿದ್ವಿಜ ||
ಸ್ತೋಮಪ್ರೇಮಕರಂ ಕುವೃತ್ತಿರಹಿತಂ ಸರ್ವಾಗಮೌಘಸ್ತುತಂ |
ಸ್ವಾಮಿಶ್ರೀಶಿವಲಿಂಗಮೀಗೆಮಗಮರ್ತ್ಯೋರ್ವೀಜಮಿಷ್ಟಾರ್ಥಮಂ || ೧೮೩

ಸುರಚಿರಶಾಲಿವಾಹನಶಕಾನ್ವಿತರತ್ನಸಮುದ್ರಬಾಣಭೂ |
ಪರಿಗಣನಾಂಕಬಂಧುರಜಯಾಬ್ದದ ಮಾಘದ ಶುಕ್ಲಪಕ್ಷವಿ ||
ಸ್ಫುರಿತತೃತೀಯೆಯಲ್ಲಿ ಬುಧವಾರದೊಳೀಕೃತಿ ಪೂರ್ಣಮಾಯ್ತು ಶಂ |
ಕರಶಿವಲಿಂಗದಂಘ್ರಿಕೃಪೆಯಿಂದೆ ಷಡಕ್ಷರದೇವನಿರ್ಮಿತಂ || ೧೮೪

ಗದ್ಯ|| ಇದು ವಿನಮದಮರವರ ಮಕುಟ ತಟ ಘಟಿತ ಮಣಿಗಣ ಮಹಾಪ್ರಭಾ ಪಟಲ
ಪರಿವೃತ ಪರಶಿವ ಶ್ರೀಪಾದ ನಖ ಚಂದ್ರ ಸಾಂದ್ರ ರುಚಿರುಂದ್ರ ಚಂದ್ರಿಕಾ ಚಂ
ಚಚ್ಚಕೋರಾಯಮಾನ ಸರಸಜನ ಮಾನಿತೋಭಯ ಕವಿತಾ ವಿಶಾರದ ಶ್ರೀ
ಷಡಕ್ಷರದೇವ ವಿರಚಿತಮಪ್ಪ ರಾಜಶೇಖರವಿಳಾಸ ವಿಪುಳ ಪ್ರಬಂಧದೊ
ಳ್ಪರಮೇಶ್ವರಪ್ರಸನ್ನತಾ ತದಾಸ್ಥಾನ, ಮುಕ್ತಿಪ್ರಾಪ್ತಿ,
ಕೈಲಾಸ ಶಿವಸಭಾವರ್ಣನಂ ಚತುರ್ದಶಾಶ್ವಾಸಂ

ಸಂಪೂರ್ಣಂ



ಅಂತು ಆಶ್ವಾಸ ೧೪ ಕ್ಕಂ ಪದ್ಯಗಣನೆ ೧೫೬೯ ಕ್ಕಂ ಮಂಗಳಮಸ್ತು.

ರಾಜಶೇಖರವಿಳಾಸಂ ಸಂಪೂರ್ಣಂ.

ಜಿಹ್ವಾಂತರ್ನಟದಂಬುಜಾಸ ನವಧೂ ಪಾದಪ್ರವಾಳಸ್ಫುರ |
ನ್ಮಂಜೀರದ್ವಯ ಮಂಜುನಾದವಿಭವಶ್ರೀ ಗರ್ವಸರ್ವಂಕಷಾಃ ||
ಜಿಯಾಸು ರ್ಭಗವತ ಷ್ಷಡಕ್ಷರವಿಭೋಃ ಕುಂದಾರವಿಂದಾವಳೀ |
ಮಂದಾರದ್ರುಮಮಂಜರೀ ಮಧುಝರೀ ಮಾಧುರ್ಯಧುರ್ಯಾಗಿರಃ || ೧



ಬಾಲಸುಧಾಂಶುಪತ್ರನ ಷಡಕ್ಷರಸತ್ಕವಿನಿರ್ಮಿತಂ ಸುಧೀ |
ಲಾಲಿತರಾಜಶೇಖರವಿಳಾಸ ಸಮಾಹ್ವಯ ಸುಪ್ರಬಂಧಮಾ ||
ಮೀಲಿತ ಬುದ್ಧಿಪಾಠಕ ವಿಲೇಖಕ ಸಂಗತಿಯಿಂದ ಬದ್ಧಮಾ |
ಲಾಲಯಮಾಗಿ ನಂಜುಮೆರಸಿರ್ದ್ದನಿವಾಲವೊಲಿರ್ದ್ದುದಕ್ಕಟಾ || ೨

ಪಂಡಿತರುದ್ರದೇವತನಯಂ ಗಿರಿಜಾಪತಿಪಾದಪೂಜನೋ |
ದ್ದಂಡತರ ಪ್ರಭಾವಪರಲಬ್ಧ ಲಸತ್ಕವಿತಾ ವಿಲಾಸನಾ ||
ಖಂಡಲ ಸಾಮ್ಯ ಕೃಷ್ಣವಸುಧಾಪತಿ ದಿವ್ಯಸಭಾಮನೀಷಿ ಕೈ |
ಕೊಂಡು ಸಮಂತಿದಂ ಕರಿವೃಷಾಂಕನೆ ತಿರ್ದ್ದುತೆ ಮುದ್ರೆಗೈಸಿದಂ || ೩

## ವೇದೋಕ್ತ ಶಿವಪೂಜಾವಿಧಿಃ

ವೀರಶೈವಾಚಾರ ಕೌಸ್ತುಭಾಂತರ್ಗತವಾದ ಶಿವಪೂಜಾವಿಧಿಯನ್ನು ಮೊದಲು ಮೈಸೂರು ಮಹಾರಾಜಾ ಕಾಲೇಜ್‌ನಲ್ಲಿ ಕರ್ಣಾಟಪಂಡಿತರಾಗಿದ್ದು, ಈಗ ಆಸ್ಥಾನಮಹಾವಿದ್ವಾನ್ ಕರ್ಣಾಟಕ ಭಾಷಾರತ್ನಂ ಎಂಬ ಬಿರುದಾಂಕಿತರಾಗಿರುವ ಪಿ. ಆರ್. ಕರಿಬಸವಶಾಸ್ತ್ರಿಗಳು ದ್ವಿವೇದಿಗಳಿಂದ ಪರಿಶೋಧನಗೊಳಿಸಿ, ಶಂಕರವಿಲಾಸ ಮುದ್ರಾಶಾಲೆಯಲ್ಲಿ ಎರಡಾವರ್ತಿ ಮುದ್ರಣಮಾಡಿಸಿದರು. ಆ ಶಿವಪೂಜಾವಿಧಿಯ ಹಕ್ಕುಬಾಧ್ಯತೆಯನ್ನೇ ನಾನು ಸದರಿಯವರಿಂದ ಪಡೆದು ನನ್ನ ಪ್ರಿಂಟಿಗ್ ಆಫೀಸಿನಲ್ಲಿ ಮೂರನೇಸಾರಿ ಮುದ್ರಣಮಾಡಿಸಿದ್ದೇನೆ. ಇದರಲ್ಲಿ ಶ್ರೀರುದ್ರ, ನಮಕಚಮಕ, ಪುರುಷಸೂಕ್ತ, ಪಂಚಾಕ್ಷರೀಸ್ತುತಿ, ಶಿವಸಹಸ್ರನಾಮಾವಳಿ, ಶಿವಾಷ್ಟೋತ್ತರ ನವಲಿಂಗ ಸ್ತೋತ್ರ, ಗಣಸಹಸ್ರನಾಮ, ಬಸವೇಶ್ವರಸಹಸ್ರನಾಮಾವಳಿ, ಶಿವಕವಚ, ಶಿವಾಷ್ಟಕ, ಲಿಂಗಾಷ್ಟಕ, ನವರತ್ನಮಾಲಿಕಾಸ್ತೋತ್ರ, ನಕ್ಷತ್ರಮಾಲಿಕಾ ಸ್ತೋತ್ರ, ಮಾರ್ಕಂಡೇಯಸ್ತೋತ್ರ, ಅನಾದಿಜಂಗಮಾಷ್ಟೋತ್ತರ, ನಮಸ್ಕೃತಿಪ್ರಶಂಸೆ, ಶ್ರೀಕಂಠತ್ರಿಶತಿ, ಶ್ರೀಚಾಮುಂಡೇಶ್ವರ್ಯಷ್ಟೋತ್ತರ, ಚಾಮುಂಡಾತ್ರಿಶತಿ, ಚಂದ್ರಶೇಖರಾಷ್ಟಕ, ಅಪರಾಧಸ್ತೋತ್ರ ಇಷ್ಟು ವಿಷಯಗಳೊಡನೆ ಪುಸ್ತಕವನ್ನು ತಯಾರ್ಮಾಡಿಸಿದ್ದೇನೆ.

ಬೆಲೆ ಪುಸ್ತಕ ೧ಕ್ಕೆ ೧೨ ಆಣೆ. ಗ್ಲೇಜ್‌ಕಾಗದದ ಪುಸ್ತಕ ೧ಕ್ಕೆ ೧ ರೂ.

**ಕೋದಂಡರಾಮ್ ಬುಕ್‌ಡಿಪೋ, ಸಂತೇಪೇಟೆ, ಮೈಸೂರು.**

# ಜ್ಯೋತಿಷ್ಯ ಸರ್ವವಿಷಯಾಮೃತ

ಆಸ್ತಿಕರಾದ ಆಬಾಲವೃದ್ಧರಿಗೂ ಜ್ಯೋತಿಷ್ಯಶಾಸ್ತ್ರವು ಅತ್ಯವಶ್ಯಕವಾದುದಷ್ಟೆ! ಮೇಲ್ಕಂಡ ಪುಸ್ತಕವು ಕನ್ನಡಿಗರ ಉಪಯೋಗಾರ್ಥವಾಗಿಯೇ ಸಂಗ್ರಹಿಸಿ ಸುಲಭವಾದ ಕನ್ನಡ ಭಾಷೆಯಲ್ಲಿ ಬರೆಯಲ್ಪಟ್ಟಿದೆ. ಇದರಲ್ಲಿ ಪ್ರಶ್ನೆಭಾಗಗಳೂ, ವಿವಾಹಾದಿಗಳಲ್ಲಿ ನಕ್ಷತ್ರಾನುಕೂಲ್ಯವನ್ನು ನೋಡಿಕೊಳ್ಳುವ ಪಟ್ಟಿಯೂ, ಬಾಲಗ್ರಹನಿವಾರಣೋಪಾಯವೂ, ಅನೇಕ ರೋಗಗಳಿಗೂ, ಭೂತಗಳಿಗೂ ಉಚ್ಚಾಟನಕರವಾದ ಯಂತ್ರಗಳೂ, ಮಂತ್ರಗಳೂ, ಶಕುನಗಳ ಫಲಾಫಲಗಳೂ, ಸ್ತ್ರೀವಶ್ಯ, ಶತೃವಶ್ಯ, ಮೊದಲಾದ ವಶ್ಯಗಳಿಗೆ ಯಂತ್ರಗಳೂ ಅವುಗಳ ಕ್ರಮಗಳೂ, ಭೀತಿಶಂಕೆ, ಲಾಭಾಲಾಭ ಇವುಗಳ ಯಂತ್ರಗಳೂ, ಸಾಮುದ್ರಿಕಶಾಸ್ತ್ರವೂ, ಅಶ್ವಾದಿಗಳ ಪರೀಕ್ಷಾಕ್ರಮವೂ, ಪುರುಷಲಕ್ಷಣಗಳೂ, ಸುಮಂಗಲಿ, ವಿಧವೆ, ಪತಿವ್ರತೆ, ಜಾರಿಣಿ, ಇವರ ಲಕ್ಷಣಗಳೂ, ವಾರಶಾಂತಿ, ತಿಥಿಶಾಂತಿ, ನಕ್ಷತ್ರಶಾಂತಿ ಇವುಗಳ ಫಲಾಫಲಗಳೂ, ಕ್ಷೌರ, ಉಪನಯನ, ಗರ್ಭಾದಾನಾದಿ ಸತ್ಕರ್ಮಗಳಿಗೆ ದಿನಶುದ್ಧಿಯನ್ನು ನೋಡುವ ಕ್ರಮವೂ, ಗೌರೀಪಂಚಾಂಗವೂ, ನೆರಳಿನಿಂದಲೇ ಕಾಲವನ್ನು ತಿಳಿಯುವ ಕ್ರಮವೂ, ಇವೇ ಮೊದಲಾದ ಉಪಯುಕ್ತ ವಿಷಯಗಳು ಅಡಕವಾಗಿವೆ. ಈ ಪುಸ್ತಕವೊಂದಿದ್ದರೆ ಜ್ಯೋತಿಷ್ಯರನ್ನೂ, ವೈದ್ಯರನ್ನೂ ಅಪೇಕ್ಷಿಸುವ ಆವಶ್ಯಕವಿರುವುದಿಲ್ಲ. **ಒಂದೂವರೆ ರೂಪಾಯನ್ನು ಕೊಟ್ಟು ಇದನ್ನು ಕೊಂಡರೆ ಖಂಡಿತವಾಗಿಯೂ ಒಂದೂವರೆ ಸಾವಿರ ರೂಪಾಯಿನ ಫಲವನ್ನು ಹೊಂದಬಹುದು!** ಧರ್ಮಶಾಸ್ತ್ರ, ಸ್ವರಶಾಸ್ತ್ರ, ಶಿಲ್ಪಶಾಸ್ತ್ರ, ವಾಸ್ತುಶಾಸ್ತ್ರ, ಸಾಮುದ್ರಿಕಶಾಸ್ತ್ರ, ದೇಶಾಚಾರ, ಪೂರ್ವಾಚಾರ, ಇವುಗಳೆಲ್ಲಾ ಇದರಲ್ಲಿ ಗರ್ಭಿತವಾಗಿವೆ, ೨೮೮ ಪುಟಗಳುಳ್ಳ ಈ ಮಹದ್ಗ್ರಂಥದ ಬೆಲೆ ೧—೮—೦ ಮಾತ್ರ. ಜಾಗ್ರತೆಯಾಗಿ ಬರೆದು ತರಿಸಿಕೊಳ್ಳಿರಿ, ಟಪಾಲು ಹಾಸಲು ಪ್ರತ್ಯೇಕ.

ನಿಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಿರಿ.

ನಮ್ಮ ವಿಳಾಸ—**ಬಿ. ಎ. ಕೋದಂಡರಾಮ ಶೆಟ್ಟಿ,**

ಪ್ರಿಂಟರ್ಸ್, ಬುಕ್‌ಸೆಲರ್ಸ್, ಸಂತೇಪೇಟೆ, ಮೈಸೂರು.

ಪಿ. ಆರ್. ಕರಿಬಸವಶಾಸ್ತ್ರಿಗಳಿಂದ ಪರಿಶೋಧಿಸಲ್ಪಟ್ಟು
ಬಿಕರಿಗೆ ಸಿದ್ಧವಾಗಿರುವ ಪುಸ್ತಕಗಳು.

| | | | | |
|---|---|---|---|---|
| ಬಸವೇಶವಿಜಯ .... | .... | 1 | 8 | 0 |
| ಕರ್ಣಾಟಕ ಜೈಮಿನಿಭಾರತ | .... | 1 | 8 | 0 |
| ಪ್ರಹ್ಲಾದಚರಿತ್ರೆ .... | .... | 0 | 12 | 0 |
| ಸಚಿತ್ರ ಪದ್ಯ ನಳಚರಿತ್ರೆ | .... | 0 | 5 | 0 |
| ಶುದ್ಧವಾದ ತ್ರಿಕಾಂಡ ಅಮರ | .... | 0 | 6 | 0 |
| ದ್ವಿತೀಯಕಾಂಡ ಟೀಕಾ ಅಮರ | .... | 0 | 8 | 0 |
| ಶಬ್ದರೂಪಾವಳಿ .... | .... | 0 | 5 | 0 |
| ಟೀಕಾ ತಾತ್ಪರ್ಯ ಶಿವಭಕ್ತಿಸಾರ | .... | 0 | 4 | 0 |
| ಹದಿನಾರು ವರ್ಷದ ಬಾಲಗ್ರಹ ಚಿಕಿತ್ಸೆ | .... | 0 | 1 | 0 |
| ಅರ್ಜುನನ ಜೋಗಿಹಾಡು | .... | 0 | 6 | 0 |
| ಟೀಕಾ ಭಗವದ್ಗೀತೆ .... | .... | 0 | 12 | 0 |
| ಜೋತಿಷ್ಯ ಸರ್ವವಿಷಯಾಮೃತ | .... | 0 | 1 | 8 |
| ಗೀತಾಪಂಚರತ್ನ, ಪಾರಾಯಣಮಾಡತಕ್ಕದ್ದು | | 0 | 10 | 0 |
| ಗಣಸಹಸ್ರನಾಮಾವಳಿ | .... | 0 | 2 | 0 |
| ಶ್ರೀ ರುದ್ರನಮಕಚಮಕ | .... | 0 | 2 | 0 |
| ಸಂಕ್ಷೇಪಶಿವಪೂಜಾವಿಧಿಃ | .... | 0 | 3 | 0 |
| ಶಿವಸಹಸ್ರನಾಮ | .... | 0 | 3 | 0 |
| ವೃಷಭೇಂದ್ರ ವಿಜಯ | .... | 2 | 8 | 0 |
| ನರಕಯಾತನಾ ರಹಸ್ಯ ದರ್ಪಣ | .... | 0 | 8 | 0 |

ಇವುಗಳಲ್ಲದೆ ನಮ್ಮಲ್ಲಿ ಇನ್ನೂ ಅನೇಕ ತರಹ ಪುಸ್ತಕಗಳು ದೊರೆಯುತ್ತವೆ. ನಿಮಗೆ ಶುದ್ಧವಾದ ಪ್ರತಿಗಳು ಬೇಕಾದಲ್ಲಿ ಈ ಕೆಳಗೆ ಕಂಡ ನಮ್ಮ ವಿಳಾಸವನ್ನು ನೆನಪಿನಲ್ಲಿಟ್ಟು ಬರೆದು ತರಿಸಿಕೊಳ್ಳಿರಿ.

ನಮ್ಮ ವಿಳಾಸ— **ಬಿ. ಎ ಕೋದಂಡರಾಮಶೆಟ್ಟಿ,**
ಪ್ರಿಂಟರ್ಸ್, ಬುಕ್‌ಸೆಲರ್ಸ್, ಸಂತೇಪೇಟೆ, ಮೈಸೂರು,

